# ಕರ್ನಾಟಕದ ಗಾಜಿನ ಮೇಲಿನ ಚಿತ್ರಕಲೆ

## ಒಂದು ಅಧ್ಯಯನ

ಪಿಹೆಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ

೨೦೧೦







ಲಲಿತಕಲಾ ನಿಕಾಯ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩ ೨೭೬

# ಕರ್ನಾಟಕದ ಗಾಜಿನ ಮೇಲಿನ ಚಿತ್ರಕಲೆ

## ಒಂದು ಅಧ್ಯಯನ

ಪಿಹೆಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ

೨೦೧೦



ಸಂ. ಅಂಗಡಿ ನಿಂಗಪ್ಪ ಮಹಾದೇವಪ್ಪ
ಮಾ. S.C ಪಾಟೀಲ.



ಲಲಿತಕಲಾ ನಿಕಾಯ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

## ಪರಿವಿಡಿ



## ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

ಕನ್ನಡನಾಡು ಶಿಲ್ಪ, ಚಿತ್ರ, ನಾಟಕ, ನೃತ್ಯ ಮುಂತಾದ ಲಲಿತಕಲೆಗಳ ಮಹತ್ವದ ತಾಣವಾಗಿದೆ. ಕರ್ನಾಟಕದಲ್ಲಿ ಮೌರ್ಯರು, ಶಾತವಾಹನರು, ಕದಂಬರಿಂದ ಆರಂಭಿಸಿ ಮೈಸೂರು ಅರಸರ ಕಾಲದವರೆಗೂ ಚಿತ್ರಕಲೆ, ಶಿಲ್ಪಕಲೆ ಮತ್ತು ವಾಸ್ತುಕಲೆಗಳನ್ನೊಳಗೊಂಡ ಲಲಿತಕಲೆಗಳು ಸಮೃದ್ಧವಾಗಿ ಬೆಳೆದುಬಂದಿವೆಯಲ್ಲದೆ ತಮ್ಮ ವೈಶಿಷ್ಟ್ಯತೆಯಿಂದಾಗಿ ಕಲಾಕ್ಷೇತ್ರದಲ್ಲಿ ಈ ಪ್ರದೇಶದ ಗಮನ ಸೆಳೆದಿವೆ. ಈ ಕಲೆಗಳನ್ನು ನಮ್ಮ ಪ್ರಾಚೀನರು ಹಲವು ಉದ್ದೇಶಗಳಿಗಾಗಿ ಬಳಸಿಕೊಂಡಿದ್ದು ಪುಣ್ಯವೂ, ಪವಿತ್ರವೂ ಆದ ಧಾರ್ಮಿಕ ಕಾರ್ಯಗಳಿಗೂ ಬಳಸುತ್ತಾ ಬಂದಿದ್ದಾರೆ. ಅಲ್ಲದೆ ಕಲೆ ದೈವಸ್ವರೂಪವೆಂದೂ, ಕಲೆಯ ಮೂಲಕ ಆತ್ಮ ಸಾಕ್ಷಾತ್ಕಾರ ಸಾಧ್ಯವೆಂತಲೂ, ಅದರಿಂದ ಮೋಕ್ಷ ಸಾಧಿಸಬಹುದೆಂದು ಹೇಳಲಾಗಿದೆ.[೧] ಕಲೆಯೆಂಬುದು ಮಾನವನ ಬಾಹ್ಯ ಬದುಕಿನ ರೀತಿಯನ್ನು ಸೌಂದರ್ಯಗೊಳಿಸುವ ಪ್ರತೀಕವೂ ಹೌದು.

ಕಲೆ ಪ್ರತಿಯೊಬ್ಬ ಮನುಷ್ಯನ ಅಭಿರುಚಿಗನುಗುಣವಾಗಿ ರೂಪತಾಳುತ್ತದೆ. ದೃಗ್ಗೋಚರ ಘಟನಾವಳಿ ಮತ್ತು ಅನುಭವಗಮ್ಯ ಭಾವನೆಗಳನ್ನು ವಿವಿಧ ಮಾಧ್ಯಮಗಳ ಮೂಲಕ ವಿಶಿಷ್ಟವಾಗಿ ಅಭಿವ್ಯಕ್ತ ಪಡಿಸುವುದೇ ಕಲೆಯಾಗಿದೆ. ಕಲೆಗಳಲ್ಲಿ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರ, ಶಿಲ್ಪಕಲೆಗಳಂತಹ ಪ್ರಕಾರಗಳನ್ನು ಲಲಿತಕಲೆಗಳೆಂದು, ಇನ್ನುಳಿದವುಗಳನ್ನು ಕುಶಲಕಲೆಗಳೆಂದು ವರ್ಗೀಕರಿಸಲಾಗಿದೆ. ಲಲಿತಕಲೆಗಳು ಆನಂದಾನುಭವದ ಹಿನ್ನೆಲೆಯಲ್ಲಿ ಶುದ್ಧಕಲೆಗಳೆಸಿದರೆ, ಕುಶಲಕಲೆಗಳು ಉಪಯೋಗಿ ಹಿನ್ನೆಲೆಯ ದೃಷ್ಟಿಯಿಂದ ಔದ್ಯೋಗಿಕ ಮಹತ್ವ ಪಡೆದು ಕೊಂಡಿವೆ.[೨]

೧. ಪ್ರಿಯಬಾಲಾ ಶಹಾ (ಸಂ) ವಿಷ್ಣು ಧರ್ಮೋತ್ತರ ಪುರಾಣ. ಅಧ್ಯಾಯ ೪, ಶ್ಲೋಕ ೧೧೪, ಪುಟ ೧೭೫
೨. ಹಡ್ಸನ್ : ಹಿಸ್ಟರಿ ಆಫ್ ಆರ್ಟ್, ಪುಟ ೪೫೭

ಕೆಲವು ಕಲಾಪ್ರಕಾರಗಳು ಈ ಎರಡೂ ಅಂಶಗಳನ್ನು ಒಳಗೊಂಡು ವಿಶಿಷ್ಟವಾದ ಸ್ವರೂಪದಿಂದ ಕಲಾಕ್ಷೇತ್ರದಲ್ಲಿ ತಮ್ಮದೆ ಆದ ಪ್ರತ್ಯೇಕ ಸ್ಥಾನಗಳಿಸಿಕೊಂಡಿದ್ದು ಅಂತಹ ಕಲಾಪ್ರಕಾರಗಳಲ್ಲಿ ಗಾಜಿನ ಚಿತ್ರಕಲೆಯು ಮಹತ್ವದ್ದಾಗಿದೆ.

**ಅಧ್ಯಯನದ ಉದ್ದೇಶ**

ಚಿತ್ರಕಲೆ ಅತ್ಯಂತ ಪ್ರಾಚೀನ ಕಲಾ ಪ್ರಕಾರವಾಗಿದೆ. ಆದಿಮಾನವನ ಕಾಲದಲ್ಲಿ ಪ್ರಮುಖವಾಗಿ ಶಿಲಾ ಮಾಧ್ಯಮದ ಮೇಲೆ ರಚನೆಯಾಗುತ್ತಿದ್ದ ಈ ಕಲಾ ಪ್ರಕಾರ ನಂತರದ ದಿನಗಳಲ್ಲಿ ಶಿಲೆಯನ್ನೊಳಗೊಂಡು ಗಾರೆ, ಮರ, ಲೋಹ, ತಾಳೆಗರಿ, ಬಟ್ಟೆ, ಕಾಗದ, ರಟ್ಟು ಹೀಗೆ ವಿವಿಧ ಮಾಧ್ಯಮಗಳ ಮೇಲೆ ರಚನೆಯಾಗತೊಡಗಿತು. ಭಾರತೀಯ ಪ್ರಾಚೀನ ಶಾಸ್ತ್ರಗ್ರಂಥಗಳಲ್ಲಿ ವೈವಿಧ್ಯ ಮಾಧ್ಯಮಗಳ ಮೇಲೆ ಚಿತ್ರ ರಚಿಸುವ ಉಲ್ಲೇಖಗಳು ಕಂಡುಬಂದರೂ, ಗಾಜಿನ ಮಾಧ್ಯಮದ ಮೇಲೆ ಚಿತ್ರ ರಚಿಸುವ ವಿವರಗಳು ವಿಷ್ಣುಧರ್ಮೋತ್ತರ, ಮಾನಸೋಲ್ಲಾಸ, ಸಮರಾಂಗಣ ಸೂತ್ರಧಾರಗಳಂತಹ ಚಿತ್ರಕಲಾ ಪ್ರಮುಖ ಗ್ರಂಥಗಳಲ್ಲಿ ದೊರೆಯುವುದಿಲ್ಲ.[೧] ಪಾಶ್ಚಾತ್ಯ ದೇಶಗಳಿಂದ ಸುಮಾರು ಕ್ರಿ.ಶ. ೧೫ನೆಯ ಶತಮಾನದ ಸುಮಾರಿಗೆ ಭಾರತವನ್ನು ಪ್ರವೇಶಿಸಿದ ಗಾಜಿನ ಚಿತ್ರಕಲೆ ಕುತೂಹಲಕರವಾಗಿರುವ ಅಂಶಗಳನ್ನು ಒಳಗೊಂಡಿದ್ದು ಅದರ ಬಗ್ಗೆ ಅಧ್ಯಯನ ಮಡುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ಇತಿಹಾಸ ಪೂರ್ವಕಾಲದಿಂದಲೆ ಬಳಕೆಗೆ ಬಂದ ಗಾಜು ಕಾಸ್ಟಿಕಸೋಡಾ, ಲೈಮ್ ಮತ್ತು ಉಸುಕುಗಳಿಂದ ಕೂಡಿದ ಒಂದು ವಿಶಿಷ್ಟ ವಸ್ತುವಾಗಿದ್ದು, ಇದರ ಮೇಲೆ ಚಿತ್ರಕಲೆ ರೂಪಗೊಳ್ಳಲು ಆರಂಭಿಸಿದ್ದು ಅಲಂಕಾರಿಕ ಹಿನ್ನೆಲೆಯಿಂದ. ಅದರೆ ಮುಂದೆ ಧಾರ್ಮಿಕ, ಸಾಮಾಜಿಕ, ವಾಣಿಜ್ಯಕ ಹೀಗೆ ಹಲವಾರು ಉದ್ದೇಶಗಳ ಹಿನ್ನೆಲೆಯಲ್ಲಿ ಗಾಜಿನ ಚಿತ್ರಕಲೆಯ ಹೊಸ ಹೊಸ ಆಯಾಮಗಳನ್ನು ಪಡೆದುಕೊಳ್ಳ ತೊಡಗಿತು. ಪ್ರಾರಂಭದಲ್ಲಿ ಗಾಜಿನ ಮೇಲೆ ವಿವಿದ ರೀತಿಯ ಬಣ್ಣಗಳನ್ನು ಲೇಪಿಸಿ ಅವುಗಳನ್ನು ಅಂದಗೊಳಿಸುತ್ತಿದ್ದ ಪುರಾತನ ಮಾನವರು ನಂತರದಲ್ಲಿ ರೇಖೆ, ಆಕಾರ ಹಾಗೂ ಬಣ್ಣಗಳಿಂದೊಡಗೂಡಿದ ಸುಂದರ ಚಿತ್ರಗಳನ್ನು ರಚಿಸತೊಡಗಿದರು.[೨] ಇಂತಹ ಹತ್ತು ಹಲವಾರು ಸಂಗತಿಗಳನ್ನು ಅಧ್ಯಯನಕ್ಕೊಳಪಡಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ಭಾರತದಲ್ಲಿ ಗಾಜಿನ ಚಿತ್ರಕಲೆಯ ಪ್ರಾಚೀನ ಅಲಂಕಾರಿಕ ವಿನ್ಯಾಸಗಳನ್ನು ಪಾಶ್ಚಾತ್ಯರು ಇಲ್ಲಿ ನಿರ್ಮಿಸಿದ ಚರ್ಚು, ಇಗರ್ಜಿ, ಪ್ರಾರ್ಥನಾ ಮಂದಿರಗಳಂತಹ ಸ್ಥಳಗಳಲ್ಲಿ ನೋಡಬಹುದು. ಪ್ರಾರಂಭಿಕ ಹಂತದಲ್ಲಿ ಗಾತಿಕ್ ಬರೋಕ್, ರೋಕೋಕೊ ಶೈಲಿಯ ಅಲಂಕಾರಿಕ ವಿನ್ಯಾಸಗಳನ್ನು ಈ ಚರ್ಚುಗಳಲ್ಲಿ ಗಾಜಿನ ಮೇಲೆ ರಚಿಸಿದ್ದರೆ, ನಂತರದ ಕಾಲದಲ್ಲಿ ಕ್ರೈಸ್ತಧರ್ಮದ ಘಟನಾವಳಿಗಳನ್ನು ರೂಪಿಸಲಾಗಿದೆ.[೩] ಭಾರತೀಯ ಅರಸರು ಸಹಿತ ಇದರಿಂದ ಪ್ರಭಾವಿತರಾಗಿ ತಮ್ಮ ಅರಮನೆಗಳಲ್ಲಿ ವಿಹಾರತಾಣಗಳಲ್ಲಿ ಗಾಜಿನ ಚಿತ್ರಕಲೆಯನ್ನು ಬಳಸಿರುವುದು ಕಂಡು ಬರುತ್ತದೆ.

---

೧. ಡಾ. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ (ಅಪ್ರಕಟಿತ ಪ್ರಬಂಧ), ಪುಟ ೫೯

೨. ಡಾ. ಆನಂದ ಕುಮಾರಸ್ವಾಮಿ : ಆರ್ಟ್ ಆಫ್ ಇಂಡಿಯನ್ ಆ್ಯಂಡ್ ಇಂಡೋನೇಷಿಯನ್, ಪುಟ ೭೫

೩. ಡಾ. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ (ಅಪ್ರಕಟಿತ ಪ್ರಬಂಧ), ಪುಟ ೩೭೦

ಈ ಬಗೆಯ ಗಾಜಿನ ಚಿತ್ರಕಲೆಯ ಐತಿಹಾಸಿಕ ಕಾಲಘಟ್ಟವನ್ನು ಅನುಕ್ರಮವಾಗಿ ಕಟ್ಟಿಕೊಡುವ ಮಹತ್ವದ ಉದ್ದೇಶ ಈ ಅಧ್ಯಯನದಲ್ಲಿದೆ.

ಕರ್ನಾಟಕದಲ್ಲಿ ಕ್ರೈಸ್ತಮತದ ಪ್ರವೇಶದೊಂದಿಗೆ ಗಾಜಿನ ಚಿತ್ರಕಲೆಯ ನಂಟು ತಳಕುಹಾಕಿಕೊಂಡಿದೆ. ಕ್ರಿ.ಶ.೧೭ನೆಯ ಶತಮಾನದ ಹೊತ್ತಿಗೆ ಕರ್ನಾಟಕದಲ್ಲಿ ಕ್ರೈಸ್ತಧರ್ಮ ಇದ್ದ ಬಗ್ಗೆ ದಾಖಲೆಗಳು ದೊರೆಯುತ್ತವೆಯಾದರೂ ಚರ್ಚುಗಳಲ್ಲಿ ಗಾಜಿನ ಚಿತ್ರಕಲೆಯ ಕುರುಹುಗಳು ಕ್ರಿ.ಶ. ೧೮ನೆಯ ಶತಮಾನದ ಹೊತ್ತಿಗೆ ಅಧಿಕೃತವಾಗಿ ಕಂಡುಬರುತ್ತವೆ. ಈ ಸಂದರ್ಭದಲ್ಲಿ ಶ್ರೀರಂಗಪಟ್ಟಣ, ಮೈಸೂರು, ಬೆಂಗಳೂರು, ಮಂಗಳೂರು, ಬಳ್ಳಾರಿ, ಬೆಳಗಾಂವಿ ಮುಂತಾದ ಪ್ರದೇಶಗಳಲ್ಲಿ ಕಾಲಾಂತರದಲ್ಲಿ ರಚನೆಗೊಂಡ ಚರ್ಚು ಮತ್ತು ಸಮಾಧಿ ಭವನಗಳಲ್ಲಿ ಗಾಜಿನ ಚಿತ್ರಕಲೆಯ ಅಲಂಕರಣ ಕಂಡುಬರುತ್ತವೆ. ಮುಂದೆ ಸ್ಥಳೀಯ ಸಂಸ್ಥಾನಿಕರು, ಶ್ರೀಮಂತರು, ಅಧಿಕಾರಿಗಳು, ಗಣ್ಯವ್ಯಕ್ತಿಗಳು ಸಹಿತ ಇದರಿಂದ ಪ್ರಭಾವಿತಗೊಂಡು ತಮ್ಮ ಅರಮನೆ, ಮಹಲು, ವಾಡೆ, ವಿಹಾರಧಾಮಗಳಂತಹ ಕಟ್ಟಡಗಳನ್ನು ಗಾಜಿನ ಚಿತ್ರಕಲೆಯಿಂದ ಅಲಂಕರಿಸಿರುವುದು ಕಂಡುಬರುತ್ತದೆ.[೬] ಹೀಗೆ ಕರ್ನಾಟಕದಲ್ಲಿ ಗಾಜಿನ ಚಿತ್ರಕಲೆ ಬೆಳೆದುಬಂದ ಇತಿಹಾಸವನ್ನು ಕಾಲಾನುಕ್ರಮದಲ್ಲಿ ಕಟ್ಟಿಕೊಡುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ಗಾಜು ದ್ರವರೂಪದ ವಸ್ತುವಾಗಿರುವುದರಿಂದ ಅದನ್ನು ನಮಗೆ ಬೇಕಾದಂತೆ ಪರಿವರ್ತಿಸಲು ಸಾಧ್ಯ. ಹಾಳೆಯಂತೆ, ದಾರದಂತೆ, ಗೋಲಾಕಾರ, ಚೌಕಾಕಾರ ಹೀಗೆ ಇನ್ನಾವುದೇ ರೂಪದಲ್ಲಿ ಸಿದ್ಧಪಡಿಸಿಕೊಳ್ಳಬಹುದು. ಸೌಂದರ್ಯದ ಪ್ರತೀಕವಾಗಿ ವಿವಿಧ ವರ್ಣಗಳನ್ನು ಬೆರಕೆ ಮಾಡಿ ಬಣ್ಣದ ಗಾಜುಗಳನ್ನು ನಿರ್ಮಾಣ ಮಾಡಬಹುದು. ಗಾಜು ಪಾರದರ್ಶಕವಾದ ಹಾಗೂ ನುಣುಪಾದ ಹಾಳೆಯಾದುದರಿಂದ ಅದರ ಎರಡು ಮೈಪಾತಳಿಗಳನ್ನು ಚಿತ್ರ ರಚನೆಗೆ ಬಳಸಿಕೊಳ್ಳಬಹುದಾಗಿದೆ. ಗಾಜಿನ ಚಿತ್ರ ರಚನೆಯಲ್ಲಿ ಗಾಜಿನ ಆಯ್ಕೆ, ಆಕಾರ, ಗಾತ್ರ ಮತ್ತು ಅದರ ಮೇಲೆ ಚಿತ್ರ ರಚನೆಗೆ ಬಳಸಲ್ಪಡುವ, ಬಣ್ಣ, ಕುಂಚ, ಅಂಟುದ್ರಾವಕ, ಪೆನ್ಸಿಲ್ ನಂತಹ ಪರಿಕರಗಳು ಅದರ ಮೇಲೆ ಅಂಟಿಸುವ ಅಲಂಕಾರಿಕ ವಸ್ತುಗಳು ಹಾಗೂ ಅವುಗಳನ್ನು ಉಪಯೋಗಿಸುವ ವಿಧಾನಗಳು ವಿಶಿಷ್ಟವಾಗಿದ್ದು ಅವುಗಳನ್ನು ಅಧ್ಯಯನಕ್ಕೊಳಪಡಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ಗಾಜಿನ ಮೇಲೆ ರಚನೆಗೊಂಡ ವರ್ಣಚಿತ್ರಗಳ ರಚನಾವಿಧಾನ ವೈಶಿಷ್ಟ್ಯ ಪೂರ್ಣವಾಗಿದೆ. ಗಾಜಿನ ಹಿಮ್ಮುಖದಲ್ಲಿ ಚಿತ್ರಿಸಿ, ಮುಮ್ಮುಖವಾದ ಪ್ರತಿಫಲಿತ ಕ್ರಮದಲ್ಲಿ ಅವುಗಳನ್ನು ವೀಕ್ಷಿಸುವುದು ಒಂದು ರೀತಿಯಾದರೆ, ಇನ್ನುಳಿದ ಮಾಧ್ಯಮಗಳಂತೆ ಮೇಲ್ಭಾಗದಲ್ಲಿ ಚಿತ್ರಿಸುವುದು ಮತ್ತೊಂದು ಬಗೆಯಾಗಿದೆ. ಈ ಎರಡೂ ರಚನಾ ವಿಧಾನಗಳು ಭಿನ್ನವಾಗಿದ್ದು ಅವುಗಳನ್ನು ವಿಶ್ಲೇಷಿಸುವ ಪ್ರಯತ್ನ ಈ ಅಧ್ಯಯನದಲ್ಲಿದೆ.

ಗಾಜಿನ ಚಿತ್ರಕಲೆಯಲ್ಲಿ ವೈವಿಧ್ಯಮಯ ವಸ್ತು ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳಿವೆ. ಧಾರ್ಮಿಕ, ಸಾಮಾಜಿಕ, ರಾಜಕೀಯ, ಪ್ರಾಕೃತಿಕ, ಅಲಂಕಾರಿಕ ಚಿತ್ರಗಳಲ್ಲದೆ ಪ್ರಾಣಿ

---

೬. ವೆಂಕಟ ರಂಗೋಕಟ್ಟಿ : ಕರ್ನಾಟಕ ಗೆಜೆಟೀಯರ್, ಪುಟ ೪೧೦

ಪಕ್ಷಿಗಳು, ಜಾಮಿತಿಕ ವಿನ್ಯಾಸಗಳು, ಗಾಜಿನ ಚಿತ್ರಕಲೆಯಲ್ಲಿ ರಚನೆಗೊಂಡಿವೆ. ಧಾರ್ಮಿಕ ಚಿತ್ರಗಳಲ್ಲಿ ಕ್ರೈಸ್ತ, ಶೈವ, ವೈಷ್ಣವ, ಶಾಕ್ತ, ಬೌದ್ಧ, ಜೈನ, ಇಸ್ಲಾಂ ಧರ್ಮಗಳಿಗೆ ಸಂಬಂಧಿಸಿದ ಕಲಾಕೃತಿಗಳಿವೆ. ಶೈವ ಧರ್ಮಕ್ಕೆ ಸಂಬಂಧಿಸಿದ ಚಿತ್ರಗಳಲ್ಲಿ ಶಿವನ ಪಾರಮ್ಯವನ್ನು ಸಾರುವ ಚಿತ್ರಗಳಿದ್ದರೆ, ವೈಷ್ಣವ ಪರವಾಗಿರುವ ಚಿತ್ರಗಳಲ್ಲಿ ವಿಷ್ಣುವಿನ ದಶಾವತಾರಗಳು, ಕೃಷ್ಣಕಥೆಗಳಿಗೆ ಸಂಬಂಧಿಸಿದ ಚಿತ್ರಗಳು, ರಾಮಾಯಣ, ಮಹಾಭಾರತಗಳನ್ನು ಆಧರಿಸಿದ ಚಿತ್ರಗಳನ್ನು ರಚಿಸಲಾಗಿದೆ. ಶಾಕ್ತ ಧರ್ಮದ ಚಿತ್ರಗಳಲ್ಲಿ ದೇವಿಯ ವಿವಿಧ ಅವತಾರಗಳನ್ನು ಅಲಂಕಾರಿಕವಾಗಿ ನಿರೂಪಿಸಲಾಗಿದೆ. ಅದರಂತೆ ಬೌದ್ಧ, ಜೈನ, ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಗಾಜಿನ ಚಿತ್ರಗಳಲ್ಲಿ ಅನುಕ್ರಮವಾಗಿ ಬೌದ್ಧ, ಜೈನ ಹಾಗೂ ಮುಸ್ಲಿಂ ಧರ್ಮಸ್ಥಾಪಕರು, ಪ್ರಸಾರಕರು, ಸಂತರು ಹಾಗೂ ಆಯಾ ಧರ್ಮದ ಬೋಧನೆಗಳನ್ನು ಆಧರಿಸಿದ ಚಿತ್ರಗಳನ್ನು ರಚಿಸಲಾಗಿದೆ. ಇಂತಹ ಧಾರ್ಮಿಕ ಪ್ರಧಾನ ಗಾಜಿನ ಚಿತ್ರಗಳ ಮಹತ್ವ ಅವುಗಳ ತಾತ್ವಿಕ ಹಿನ್ನೆಲೆಗಳನ್ನು ವಿಶ್ಲೇಷಿಸುವ ಉದ್ದೇಶವನ್ನು ಹೊಂದಲಾಗಿದೆ.

ಸಾಮಾಜಿಕ ಚಿತ್ರಗಳಲ್ಲಿ ಹೆಚ್ಚಿನ ವೈವಿಧ್ಯತೆ ಇದೆ. ಅಧಿಕಾರಿ ವರ್ಗದವರು, ಶ್ರೀಮಂತರು ಹಾಗೂ ಇನ್ನಿತರ ಪ್ರತಿಷ್ಠಿತ ವ್ಯಕ್ತಿಗಳು ತಮ್ಮ ಮತ್ತು ಕುಟುಂಬ ಸದಸ್ಯರ ವಿವಿಧ ಭಂಗಿಯ ಚಿತ್ರಗಳನ್ನು ರಚಿಸಿಕೊಂಡಿರುವುದು ಗಾಜಿನ ಚಿತ್ರಕಲೆಯ ವಿಶೇಷತೆಯಾಗಿದೆ. ಇದರಂತೆ ರಾಜಮಹಾರಾರು ಸಹಿತ ತಮ್ಮ ಹಾಗೂ ಪರಿವಾರದವರ ಕಲಾತ್ಮಕ ಚಿತ್ರಗಳನ್ನು ಗಾಜಿನ ಮೇಲೆ ಬರೆಸಿಕೊಂಡಿದ್ದಾರೆ. ಜೊತೆಗೆ ತಮ್ಮ ಆಡಳಿತಾವಧಿಯಲ್ಲಿ ನಡೆದ ಪ್ರಮುಖ ಘಟನಾವಳಿಗಳು, ಯುದ್ಧ, ಉತ್ಸವಗಳಂತಹ ಸಂದರ್ಭಗಳನ್ನು ಗಾಜಿನ ಮೇಲೆ ಚಿತ್ರಿಸಿರುವುದು ಕಂಡುಬರುತ್ತದೆ. ಇವು ಐತಿಹಾಸಿಕ ಮಹತ್ವದ ಚಿತ್ರಗಳಾಗಿದ್ದು ಅವುಗಳನ್ನು ಸಹಿತ ಇಲ್ಲಿ ಅಧ್ಯಯನಕ್ಕೊಳಪಡಿಸುವ ಉದ್ದೇಶ ಹೊಂದಲಾಗಿದೆ.

ಪ್ರಾಕೃತಿಕ ಚಿತ್ರಗಳಲ್ಲಿ ವಿವಿಧ ಬಗೆಯ ಗಿಡಮರಗಳು, ಹೂಬಳ್ಳಿಗಳು, ಗುಡ್ಡಬೆಟ್ಟಗಳು, ನದಿಕೊಳ್ಳಗಳು, ಅಲಂಕಾರಿಕ ಚಿತ್ರಗಳಲ್ಲಿ ನಕ್ಷೆಯ ನೈಜ ವಿನ್ಯಾಸಗಳು ಜ್ಯಾಮಿತಿಕ ಸ್ವರೂಪದ ಆಕಾರಗಳು ವಿವಿಧ ರೀತಿಯ ಸುಳುವುಗಳು, ಚಪ್ಪಟೆ ಬಣ್ಣದ ಲೇಪನ, ಬಣ್ಣದ ಗಾಜಿನ ತುಂಡುಗಳನ್ನು ಅಂಟಿಸಿರುವ ಮಾದರಿಗಳು ಪ್ರಮುಖವಾಗಿ ಕಂಡು ಬರುತ್ತವೆ. ಇವುಗಳನ್ನು ಸಹಿತ ಪ್ರತ್ಯೇಕವಾಗಿ ವಿಶ್ಲೇಷಿಸುವ ಉದ್ದೇಶ ಇಲ್ಲಿದೆ. ಒಟ್ಟಾರೆ ಕರ್ನಾಟಕದಲ್ಲಿ ಕಂಡುಬರುವ ಗಾಜಿನ ಮೇಲಿನ ಚಿತ್ರಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ವಿಶ್ಲೇಷಿಸುವ ಮಹತ್ವದ ಉದ್ದೇಶವನ್ನು ಇಲ್ಲಿ ಕೊಡಲಾಗಿದೆ.

ಯಾವುದೆ ಕಲಾ ಪ್ರಕಾರ ಪ್ರಭಾವ ಮತ್ತು ಪ್ರೇರಣೆಗಳಿಂದ ಹೊರತಾಗಿಲ್ಲ. ಕರ್ನಾಟಕದ ಗಾಜಿನ ಚಿತ್ರಕಲೆಯೂ ವಿವಿಧ ರೀತಿಯ ಪ್ರಭಾವ, ಪ್ರೇರಣೆಗಳಿಂದ ಸಮೃದ್ಧವಾಗಿ ಬೆಳೆದಿದೆ. ಪ್ರಾರಂಭಿಕ ದಿನಗಳಲ್ಲಿ ಕ್ರೈಸ್ತ ಧಾರ್ಮಿಕ ವಿಷಯಗಳನ್ನು ಪ್ರಮುಖವಾಗಿ ಹೊಂದಿದ್ದು ನಂತರದಲ್ಲಿ ಹಿಂದೂ, ಜೈನ, ಇಸ್ಲಾಂ ಧರ್ಮಗಳ ಹಿನ್ನೆಲೆಯಲ್ಲಿಯೂ ಬೆಳೆದು ಬಂದಿರುವುದು ಕರ್ನಾಟಕದ ಗಾಜಿನ ಚಿತ್ರಕಲೆಯ ವಿಶೇಷತೆಯಾಗಿದೆ. ಈ ರೀತಿಯ ಬೆಳವಣಿಗೆಯಲ್ಲಿ ಪಾಶ್ಚಾತ್ಯ ಮತ್ತು ಇಸ್ಲಾಂ ಕಲಾ ಪ್ರಭಾವಗಳ ಜೊತೆಗೆ ಭಾರತದ ಹಿಂದೂ, ಜೈನ ಚಿತ್ರಕಲೆಗಳ ಪ್ರಭಾವ ಮತ್ತು

ಪ್ರೇರಣೆಗಳು ಕರ್ನಾಟಕದ ಗಾಜಿನ ಚಿತ್ರಕಲೆಯ ಮೇಲಾಗಿರುವುದು ಕಂಡುಬರುತ್ತದೆ. ಅಲ್ಲದೆ ಕರ್ನಾಟಕದ ಚಿತ್ರಕಲಾ ಕ್ಷೇತ್ರದಲ್ಲಿ ಪ್ರಮುಖವಾಗಿರುವ ವಿಜಯನಗರ, ಮೈಸೂರು, ಸುರಪುರ, ತಮಿಳುನಾಡಿನ ತಂಜಾವೂರು ಹಾಗೂ ಮರಾಠಾ ಪ್ರಭಾವಗಳು ಕರ್ನಾಟಕದ ಗಾಜಿನ ಚಿತ್ರಕಲೆಯಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಇವುಗಳ ಜೊತೆಗೆ ಸ್ಥಳೀಯ ಪ್ರಾದೇಶಿಕ ಶೈಲಿಗಳು, ಜನಪದ ಶೈಲಿಗಳು ಇಲ್ಲಿನ ಗಾಜಿನ ಚಿತ್ರಕಲೆಯಲ್ಲಿ ಗೋಚರಿಸುತ್ತವೆ. ಇವೆಲ್ಲವುಗಳನ್ನು ಪ್ರತ್ಯೇಕವಾಗಿ ವಿವೇಚಿಸುವ ಉದ್ದೇಶವು ಈ ಅಧ್ಯಯನದಲ್ಲಿದೆ.

ಕರ್ನಾಟಕದ ಗಾಜಿನ ಚಿತ್ರಕಲೆಯನ್ನು ಪೋಷಿಸಿ, ಉಳಿಸಿ ಬೆಳೆಸಿದ ಕೀರ್ತಿ ಕೆಲವು ವರ್ಗದ ಜನರಿಗೆ ಸೀಮಿತವಾಗಿದೆ. ಪ್ರಾರಂಭದಲ್ಲಿ ಈ ಪ್ರದೇಶದಲ್ಲಿ ಚರ್ಚು, ಸಮಾಧಿ ಭವನಗಳನ್ನು ನಿರ್ಮಿಸಿ ಅವುಗಳ ಮೂಲಕ ಈ ಕಲಾ ಪ್ರಕಾರವನ್ನು ಬೆಳೆಸಿದವರು ಪಾಶ್ಚಾತ್ಯ ನಾಡಿನಿಂದ ಬಂದ ಕ್ರೈಸ್ತ ಧರ್ಮಿಯರು. ನಂತರದಲ್ಲಿ ಈ ಭಾಗದ ರಾಜಮಹಾರಾಜರು, ಮಾಂಡಲೀಕರು, ಸಂಸ್ಥಾನಿಕರು, ಶ್ರೀಮಂತರು, ಅಧಿಕಾರಿವರ್ಗದವರು, ಪ್ರತಿಷ್ಠಿತ ವ್ಯಕ್ತಿಗಳು, ಸೌಂದರ್ಯಾನುಭವ ಇಲ್ಲವೆ ಪ್ರತಿಷ್ಠೆಗಾಗಿ ಗಾಜಿನ ಚಿತ್ರಕಲೆಯನ್ನು ಪೋಷಿಸಿಕೊಂಡು ಬಂದರು. ಆ ಮೇಲಿನ ದಿನಗಳಲ್ಲಿ ಕರ್ನಾಟಕದ ಹೊರಗೆ ವ್ಯಾಪಾರ ಸಂಪರ್ಕ ಹೊಂದಿದ್ದ ಸ್ಥಳೀಯರು ಅಲ್ಲಿಂದ ಬರುವಾಗ ಕಲಾತ್ಮಕ ಗಾಜಿನ ಚಿತ್ರಗಳನ್ನು ತಂದು ಮನೆಯಲ್ಲಿ ಸಂಗ್ರಹಿಸಿರುವುದು ಮಹತ್ವದ್ದಾಗಿದೆ.

ಇವುಗಳ ಜೊತೆಗೆ ಕೆಲವು ಮಠಮಾನ್ಯಗಳು, ದೇವಾಲಯಗಳು, ಗಾಜಿನ ಚಿತ್ರಕಲೆಯ ಪೋಷಣೆಯಲ್ಲಿ ಅಲ್ಪ ಪಾತ್ರವಹಿಸಿವೆ. ಆ ಮೇಲಿನ ದಿನಗಳಲ್ಲಿ ನಿರ್ಮಾಣಗೊಂಡ ಕೆಲವು ವಸ್ತುಸಂಗ್ರಹಾಲಯಗಳಲ್ಲಿ ಪ್ರಾಚೀನ ಕಾಲದ ಗಾಜಿನ ಚಿತ್ರಗಳನ್ನು ಸಂಗ್ರಹಿಸಲಾಗಿದೆ. ಇದರಲ್ಲಿ ಸರಕಾರ, ಸಂಘ ಸಂಸ್ಥೆಗಳು, ಖಾಸಗಿ ಸಂಗ್ರಹಾಲಯಗಳೂ ಸೇರಿವೆ. ಹೀಗೆ ಗಾಜಿನ ಚಿತ್ರಕಲೆಯ ಅಮೂಲ್ಯ ಪರಂಪರೆಗೆ ದೊರಕಿದ ಪ್ರತ್ಯಕ್ಷ ಹಾಗೂ ಪರೋಕ್ಷ ಪ್ರೋತ್ಸಾಹದ ಹಿನ್ನೆಲೆಯನ್ನು ವಿವೇಚಿಸುವ ಪ್ರಯತ್ನವನ್ನು ಹೊಂದಲಾಗಿದೆ.

ಕರ್ನಾಟಕದ ಪ್ರಾಚೀನ ಅಮೂಲ್ಯ ಚಿತ್ರಕಲಾ ಪ್ರಕಾರಗಳಲ್ಲಿ ಒಂದಾದ ಗಾಜಿನ ಚಿತ್ರಕಲಾ ಪರಂಪರೆ ಇಂದು ಅಳಿವಿನ ಅಂಚಿನಲ್ಲಿದೆ. ಕೆಲವು ಪ್ರಮುಖ ಸಂಗ್ರಹಾಲಯಗಳಲ್ಲಿ ಉತ್ತಮವಾಗಿ ಸಂರಕ್ಷಿಸಲ್ಪಟ್ಟ ಚಿತ್ರಗಳನ್ನು ಹೊರತುಪಡಿಸಿದರೆ ಹೆಚ್ಚಿನ ಚಿತ್ರಗಳು ಖಾಸಗಿ ಒಡೆತನದಲ್ಲಿವೆ. ಚಿತ್ರಗಳನ್ನು ಹೊಂದಿದ ವ್ಯಕ್ತಿಗಳಿಗೆ ಅವುಗಳ ಮಹತ್ವ ತಿಳಿಯದೇ ನಿರ್ಲಕ್ಷಿಸಲ್ಪಟ್ಟಿವೆ. ಮತ್ತೆ ಕೆಲವು ಚಿತ್ರಗಳಿಗೆ ವಿವಿಧ ರೀತಿಯಿಂದ ಹಾನಿಯುಂಟಾಗಿದೆ. ಹೀಗೆ ಕರ್ನಾಟಕದ ಗಾಜಿನ ಚಿತ್ರಗಳ ಸದ್ಯದ ಸ್ಥಿತಿಗತಿ ಹಾಗೂ ಅವುಗಳ ಸಂರಕ್ಷಣೆಯಲ್ಲಿ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ವಿವೇಚಿಸುವ ಉದ್ದೇಶವು ಈ ಅಧ್ಯಯನದಲ್ಲಿದೆ.

ಕರ್ನಾಟಕದಲ್ಲಿ ಕಲಾ ಪ್ರಕಾರಗಳ ಬಗ್ಗೆ ಅಧ್ಯಯನಗಳು ಗಂಭೀರ ಸ್ವರೂಪದಲ್ಲಿ ಆರಂಭಗೊಂಡಿರುವುದು ಇತ್ತೀಚಿನ ದಿನಗಳಲ್ಲಿ ಮಾತ್ರ. ಇದರಲ್ಲಿ ಗಾಜಿನ ಚಿತ್ರಕಲೆಯಂತಹ ವಿಶೇಷ ಕಲಾಪ್ರಕಾರಗಳ ಬಗ್ಗೆ ಸಂಶೋಧನಾತ್ಮಕ ಹಿನ್ನೆಲೆಯ ಬರಹಗಳು ಕನ್ನಡದಲ್ಲಿ ತೀರಾ

ಅಪರೂಪವೆಂದು ಹೇಳಬಹುದು. ಉಳಿದ ಕಲಾಪ್ರಕಾರಗಳಿಗೆ ಹೋಲಿಸಿದರೆ ವಿವರ ಪೂರ್ಣ ಲೇಖನಗಳು ಸಹಿತ ಗಾಜಿನ ಚಿತ್ರಕಲೆಯ ಕುರಿತು ಇಲ್ಲವೆನ್ನಬಹುದು. ಪ್ರಮುಖ ಕಲಾಪ್ರಕಾರಗಳಲ್ಲಿ ಒಂದಾದ ಗಾಜಿನ ಚಿತ್ರಕಲೆ ಅಲಂಕಾರಿಕ ದೃಷ್ಟಿಯಿಂದ ಮಾತ್ರವಲ್ಲದೆ ಸೌಂದರ್ಯಾನುಭವದ ಹಿನ್ನೆಲೆಯಿಂದಲೂ ಪ್ರಾಮುಖ್ಯತೆ ಹೊಂದಿದೆ. ಇದರ ಬಗ್ಗೆ ಗಂಭೀರ ಸ್ವರೂಪದ ಅಧ್ಯಯನಗಳು ನಡೆಯಬೇಕಾದ ಅವಶ್ಯಕತೆ ಇದೆ. ಅಂತಹ ಒಂದು ಕೊರತೆಯನ್ನು ಸಾಧ್ಯವಾದ ಮಟ್ಟಿಗೆ ನೀಗಿಸುವ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವನ್ನು ರೂಪಿಸುವ ಉದ್ದೇಶ ಹೊಂದಲಾಗಿದ್ದು ಇದುವರೆಗೆ ನಡೆದ ಅಧ್ಯಯನಗಳನ್ನು ಕೆಳಗಿನಂತೆ ಸಮೀಕ್ಷಿಸಬಹುದಾಗಿದೆ.

## ದೃಶ್ಯಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು

ಕರ್ನಾಟಕದಲ್ಲಿ ೧೯೮೦ ರ ನಂತರದಲ್ಲಿ ವಿಶ್ವವಿದ್ಯಾಲಯ ಮಟ್ಟದಲ್ಲಿ ದೃಶ್ಯಕಲೆಯ ಕುರಿತು ಸಂಶೋಧನೆಗಳು ಪ್ರಾರಂಭಗೊಂಡಿರುವುದನ್ನು ನೋಡಬಹುದು. ೧೯೮೩ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ **'ಮಾಧ್ಯಮಿಕ ಶಾಲಾ ಹಂತದಲ್ಲಿ ಚಿತ್ರಕಲಾ ಶಿಕ್ಷಣ' ಒಂದು ಅಧ್ಯಯನ**[೭] ಎಂಬ ಕಿರು ಪ್ರಬಂಧವನ್ನು ಡಾ. ಎಸ್. ಸಿ. ಪಾಟೀಲರು ಸಲ್ಲಿಸಿದರು. ಈ ಕಿರು ಪ್ರಬಂಧವೇ ಚಿತ್ರಕಲಾ ಕ್ಷೇತ್ರದಲ್ಲಿ ಸಂಶೋಧನಾತ್ಮಕವಾಗಿ ರಚಿಸಿದ ಪ್ರಥಮ ಅಧ್ಯಯನವೆನ್ನಬಹುದು. ಅನಂತರ ೧೯೮೭ ರಲ್ಲಿ **'ಕನ್ನಡ ಹಸ್ತ ಪ್ರತಿಗಳು ಒಂದು ಅಧ್ಯಯನ'**[೮] ಎಂಬ ಶೀರ್ಷಿಕೆ ಅಡಿಯಲ್ಲಿ ಡಾ. ಬಿ. ಕೆ. ಹಿರೇಮಠರವರು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಮಂಡಿಸಿದ ಪಿಹೆಚ್.ಡಿ ಮಹಾಪ್ರಬಂಧವು ಚಿತ್ರಕಲಾ ಕ್ಷೇತ್ರದಲ್ಲಿ ಬಂದ ಮತ್ತೊಂದು ಹೊಸ ಪ್ರಯತ್ನ ಎನ್ನಬಹುದು. ಹಸ್ತ ಪ್ರತಿಯಲ್ಲಿ ರಚಿಸಲ್ಪಟ್ಟಿರುವ ಚಿತ್ರಕಲೆಯನ್ನು ಕುರಿತು ಒಂದು ಪ್ರತ್ಯೇಕ ಅಧ್ಯಾಯವನ್ನು ಇದರಲ್ಲಿ ಮೀಸಲಾಗಿಡಲಾಗಿದೆ. ಆದ್ದರಿಂದ ಇದನ್ನು ದೃಶ್ಯಕಲಾ ಸಂಶೋಧನೆಯ ಪೂರಕ ಅಧ್ಯಯನವೆಂದು ಪರಿಗಣಿಸಲಾಗುತ್ತದೆ.

ಡಾ. ಎಸ್. ಸಿ. ಪಾಟೀಲರು ೧೯೯೧ ರಲ್ಲಿ **'ಕರ್ನಾಟಕ ಜನಪದ ಚಿತ್ರಕಲೆ'**[೯] ಎಂಬ ಪಿಹೆಚ್.ಡಿ ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದು, ಇದು ಕರ್ನಾಟಕದ ಚಿತ್ರಕಲಾ ಕ್ಷೇತ್ರದ ಪ್ರಥಮ ಮಹಾಪ್ರಬಂಧವಾಗಿದೆ. **'ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು'**[೧೦] ಎಂಬ ವಿಷಯದ ಕುರಿತು ಡಾ. ಅ.ಲ.ನರಸಿಂಹನ್‌ರವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ೧೯೯೫ ರಲ್ಲಿ ಸಾದರಪಡಿಸಿದ ಮಹಾಪ್ರಬಂಧವು ಚಿತ್ರಕಲೆಯಲ್ಲಿ ಮತ್ತೊಂದು ಪಿಎಚ್.ಡಿ. ಅಧ್ಯಯನವಾಗಿದೆ. ಈ ಮಹಾ ಪ್ರಬಂಧವು ಚಿತ್ರಕಲೆಯಲ್ಲಿ ಅಭಿವ್ಯಕ್ತಿಗೊಂಡಿರುವ ಸಾಂಸ್ಕೃತಿಕ ಅಂಶಗಳನ್ನು ಕುರಿತು ತಿಳಿಸುತ್ತದೆ. ಡಾ. ಸಂಪದಾ ಭಟ್‌ರು **'ಹಿಂದುಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು'**[೧೧] ಎಂಬ ವಿಷಯ ಕುರಿತು ೧೯೯೮ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಮಹಾಪ್ರಬಂಧ ಸಲ್ಲಿಸಿ ಪಿಎಚ್.ಡಿ. ಪಡೆದುಕೊಂಡಿದ್ದಾರೆ.

---

೭. ಡಾ. ಎಸ್. ಸಿ. ಪಾಟೀಲ : ಮಾಧ್ಯಮಿಕ ಶಾಲಾ ಹಂತದಲ್ಲಿ ಚಿತ್ರಕಲಾ ಶಿಕ್ಷಣ, ಕ.ವಿ.ವಿ. ಧಾರವಾಡ ೧೯೮೩

೮. ಡಾ. ಬಿ. ಕೆ. ಹಿರೇಮಠ : ಕನ್ನಡ ಹಸ್ತ ಪ್ರತಿಗಳು ಒಂದು ಅಧ್ಯಯನ, ಕ.ವಿ.ವಿ. ಧಾರವಾಡ ೧೯೮೭

೯. ಡಾ. ಎಸ್. ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಕ.ವಿ.ವಿ. ಧಾರವಾಡ ೧೯೯೧

೧೦. ಡಾ. ಅ. ಲ. ನರಸಿಂಹನ್ : ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಬೆಂಗಳೂರು ವಿ.ವಿ. ೧೯೯೫

೧೧. ಡಾ. ಸಂಪದಾ ಭಟ್ : ಹಿಂದೂಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು, ಕ.ವಿ.ವಿ. ಹಂಪಿ ೧೯೯೫

೧೯೯೮ ರಲ್ಲಿ ಅನಿವಾಸಿ ಭಾರತೀಯ ಕಲಾವಿದ **'ನಿಕೋಲಸ್ ರೋರಿಚ್ ಜೀವನ ಮತ್ತು ಕಲಾಕೃತಿಗಳು'**[೧೨] ಎಂಬ ಸಂಶೋಧನಾ ಮಹಾ ಪ್ರಬಂಧವನ್ನು ಡಾ. ಪುಷ್ಪಾ ದ್ರಾವಿಡರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ್ದಾರೆ. ೨೦೦೦ ರಲ್ಲಿ ಡಾ. ಯಾದಪ್ಪ ಪರದೇಶಿಯವರು **'ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ– ಒಂದು ಅಧ್ಯಯನ'**[೧೩] ಎಂಬ ಮಹಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿ ಪಿಎಚ್.ಡಿ ಪಡೆದುಕೊಂಡಿದ್ದಾರೆ. ೨೦೦೨ ರಲ್ಲಿ ಡಾ. ಶಿವಾನಂದ. ಬಂಟನೂರರವರು **'ಕರ್ನಾಟಕದ ಜನಪದ ಶಿಲ್ಪಕಲೆ'**[೧೪] ಹಾಗೂ ಡಾ. ಗಿರೀಶ ಎಂಬುವರು **'ಬುಡಕಟ್ಟು ಚಿತ್ರಕಲೆ'**[೧೫] ಎಂಬ ಸಂಶೋಧನಾ ಮಹಾ ಪ್ರಬಂಧಗಳು ೨೦೦೨ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಲ್ಪಟ್ಟಿವೆ. ಅಲ್ಲದೆ ಮಲ್ಲಿಕಾರ್ಜುನ ಬಾಗೋಡಿಯವರು **'ಚಿತ್ರಕಲಾವಿದ ಜೆ. ಎಸ್. ಖಂಡೇರಾವ್'**[೧೬] ಕುರಿತು ಎಂ.ಫಿಲ್ ಪ್ರಬಂಧ ರಚಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ.

೨೦೦೩ ರಲ್ಲಿ ಡಾ. ಲಕ್ಷ್ಮೀದೇವಿ ಗವಾಯಿಯವರು **'ಕಲಾವಿದ ಎಂ. ಎ. ಚಟ್ಟಿಯವರ ಜೀವನ ಕಲಾಕೃತಿಗಳು'**[೧೭] ಡಾ. ಶರಣಪ್ಪ ಕೋಲ್ಕಾರ ರವರು **'ಕೊಪ್ಪಳ ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ'**[೧೮] ಎಂಬ ಮಹಾಪ್ರಬಂಧಗಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ್ದಾರೆ. ಡಾ. ಸೌಮ್ಯರವರು **'ಯಂತ್ರಾ ದಿ ವಿಜುಯಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಂಟೆಂಪರರಿ ತಾಂತ್ರಿಕ್ ಆರ್ಟಿಸ್ಟ್'**[೧೯] ಡಾ. ಪ್ರಮೀಳಾ ಲೋಚನ್ ರವರು **'ಮೈಂಡ್ ಮ್ಯೂಸಿಕ್ ಅಂಡ್ ಕಲರ್ ಎಕ್ಸ್ಪ್ರೆಸಸ್ ಆ್ಯಂಡ್ ಡೆವಲಪಮೆಂಟ್ ಆಫ್ ರಾಗಮಾಲಾ ಆ್ಯಂಡ್ ಕಂಟೆಂಪರರಿ ಪೈಂಟಿಂಗ್'**[೨೦] ಡಾ. ವೀಣಾ ಶೇಖರರವರು **'ಎ ಸ್ಟಡ್ ಆಫ್ ಹಿಸ್ಟಾರಿಕಲ್ ಪೈಂಟಿಂಗ್ ಆಫ್ ಕರ್ನಾಟಕ'**[೨೧] ಎಂಬ ಮಹಾ ಪ್ರಬಂಧಗಳನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ. ಇವೆಲ್ಲ ಪಿಎಚ್.ಡಿ ಅಧ್ಯಯನಗಳಾಗಿವೆ. ಇದೆ ಶೈಕ್ಷಣಿಕ ಅವಧಿಯಲ್ಲಿ ಎ. ಎಸ್. ವಿಶ್ವನಾಥ ಅವರು **'ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ'**[೨೨] ಎಂಬ ವಿಷಯದ ಬಗ್ಗೆ ಎಂ.ಫಿಲ್ ಪ್ರಬಂಧವನ್ನು ಹಾಗೂ ಡಾ. ಸಿದ್ದಲಿಂಗಸ್ವಾಮಿ ಹಿರೇಮಠ ರವರು **'ಕಲಾವಿದ ಆರ್.ಎಂ. ಹಡಪದ್ ಒಂದು ಅಧ್ಯಯನ'**[೨೩] ಎಂಬ ಪಿಎಚ್.ಡಿ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ.

---

೧೨. ಡಾ. ಪುಷ್ಪಾ. ದ್ರಾವಿಡ : ನಿಕೋಲಸ್ ರೋರಿಚ್ ಜೀವನ ಮತ್ತು ಕಲಾಕೃತಿಗಳು, ಬೆಂಗಳೂರು.ವಿ.ವಿ. ೧೯೯೮
೧೩. ಡಾ. ಯಾದಪ್ಪ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಕ.ವಿ.ವಿ. ಹಂಪಿ ೨೦೦೦
೧೪. ಡಾ. ಶಿವಾನಂದ. ಬಂಟನೂರು : ಕರ್ನಾಟಕದ ಜನಪದ ಶಿಲ್ಪಕಲೆ, ಕ.ವಿ.ವಿ. ಹಂಪಿ ೨೦೦೨
೧೫. ಡಾ. ಗೀರಿಶ : ಬುಡಕಟ್ಟು ಚಿತ್ರಕಲೆ, ಕ.ವಿ.ವಿ. ಹಂಪಿ ೨೦೦೨
೧೬. ಮಲ್ಲಿಕಾರ್ಜುನ ಬಾಗೋಡಿ : ಚಿತ್ರ ಕಲಾವಿದ ಜೆ. ಎಸ್. ಖಂಡೇರಾವ್, ಕ.ವಿ.ವಿ. ಹಂಪಿ ೨೦೦೨
೧೭. ಡಾ. ಲಕ್ಷ್ಮೀದೇವಿ ಗವಾಯಿ : ಕಲಾವಿದ ಎಂ. ಎ. ಚಟ್ಟಿಯವರ ಜೀವನ ಮತ್ತು ಕಲಾಕೃತಿಗಳು, ಕ.ವಿ.ವಿ. ಹಂಪಿ ೨೦೦೩
೧೮. ಡಾ. ಶರಣಪ್ಪ. ಕೋಲ್ಕಾರ : ಕೊಪ್ಪಳ ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ, ಕ.ವಿ.ವಿ. ಹಂಪಿ ೨೦೦೩
೧೯. ಡಾ. ಸೌಮ್ಯ : ಯಂತ್ರಾ ದಿ ವಿಜುಯಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಂಟೆಂಪರರಿ ತಾಂತ್ರಿಕ್ ಆರ್ಟಿಸ್ಟ್, ಬೆಂ.ವಿ.ವಿ. ೨೦೦೩
೨೦. ಡಾ. ಪ್ರಮೀಳಾ ಲೋಚನ್ : ಮೈಂಡ್ ಮ್ಯೂಜಿಕ್ ಆ್ಯಂಡ್ ಕಲರ ಎಕ್ಸ್ಪ್ರೆಸಸ್ ಆ್ಯಂಡ್ ಡೆವಲಪಮೆಂಟ್ ಆಫ್ ರಾಗಮಾಲ ಆ್ಯಂಡ ಕಂಟೆಂಪರರಿ ಪೇಂಟಿಂಗ್ಸ್, ಬೆಂಗಳೂರು.ವಿ.ವಿ. ೨೦೦೩
೨೧. ಡಾ. ವೀಣಾ ಶೇಖರ : ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ಸ್ ಆಫ್ ಕರ್ನಾಟಕ, ಬೆಂಗಳೂರು ವಿ.ವಿ. ೨೦೦೩
೨೨. ಎ. ಎಸ್. ವಿಶ್ವನಾಥ : ಯಕ್ಷಗಾನ ದೃಶ್ಯಕಲೆಯ ಮುಖ್ಯವರ್ಣಿಕೆ, ಕ.ವಿ.ವಿ. ಹಂಪಿ ೨೦೦೩
೨೩. ಡಾ. ಸಿದ್ದಲಿಂಗಸ್ವಾಮಿ : ಕಲಾವಿದ ಆರ್.ಎಂ. ಹಡಪದ ಒಂದು ಅಧ್ಯಯನ, ಕ.ವಿ.ವಿ. ಹಂಪಿ ೨೦೦೩

೨೦೦೪ ರಲ್ಲಿ ಡಾ. ಎಸ್. ಸಿ. ಪಾಟೀಲರು **'ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ್ ಎಜ್ಯುಕೇಷನ್ ಸ್ಕೂಲ್ ಲೆವೆಲ್ ಇನ್ ಕರ್ನಾಟಕ ಸ್ಟೇಟ್, ವಿತ್ ರೆಫೆರೆನ್ಸ್ ಟು ಡ್ರಾಯಿಂಗ್ ಅಂಡ್ ಪೈಂಟಿಂಗ್'**[೨೪] ಎಂಬ ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿ ಪಿಎಚ್.ಡಿ ಪಡೆದುಕೊಂಡಿದ್ದಾರೆ. ಅಲ್ಲದೆ ಡಾ. ವ್ಹಿ. ಎಂ. ಬಾಗಾಯತ್‌ರವರು **'ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ'**[೨೫] ಎಂಬ ವಿಷಯದ ಕನ್ನಡ ವಿಶ್ವ ವಿದ್ಯಾಲಯಕ್ಕೆ, ಡಾ. ಶಿವಕುಮಾರ ಎ. ಓ. ಅವರು **'ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯಮೇಳಗಳ ವಿವಿಧ ಆಯಾಮಗಳು'**[೨೬] ಎಂಬ ವಿಷಯದ ಬಗ್ಗೆ ಮಹಾಪ್ರಬಂಧಗಳನ್ನು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ೨೦೦೫ ರಲ್ಲಿ ಶಂಕ್ರಪ್ಪ ಎಂ. ಕುಂದಗೋಳರವರು **'ಕಲಾವಿದ ಡಿ. ವಿ. ಹಾಲಭಾವಿಯವರ ಕಲೆ ಮತ್ತು ಜೀವನ'**[೨೭] ಹಾಗೂ ಸಿ. ಡಿ. ಜೆಟ್ಟೆಣ್ಣವರ **'ಕಲಾವಿದ ಎಂ. ವ್ಹಿ. ಮಿಣಜಗಿಯವರ ಕಲೆ ಮತ್ತು ಬದುಕು'**[೨೮] ಎಂಬ ಕಿರು ಪ್ರಬಂಧಗಳನ್ನು ಎಂ.ಫಿಲ್ ಪದವಿಗಾಗಿ, ಡಾ. ಡಿ. ಎ. ಉಪಾಧ್ಯಾಯರವರು **'ದೃಶ್ಯಕಲೆಯಲ್ಲಿ ತೌಲನಿಕ ಅಧ್ಯಯನ'**[೨೯] ಹಾಗೂ ಡಾ. ಆನಂದ. ಕೆ. ಪೂಜಾರರವರು **'ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ'**[೩೦] ಎಂಬ ಮಹಾಪ್ರಬಂಧಗಳನ್ನು ಡಿ.ಲಿಟ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ.

೨೦೦೫ ರಲ್ಲಿ ಡಾ. ಶಿವಪ್ರಕಾಶ ಎಲ್. ತುಕ್ಕಣ್ಣವರ **'ಕರ್ನಾಟಕ ರಥ ಶಿಲ್ಪಕಲೆ'**[೩೧] ಎಂಬ ಮಹಾ ಪ್ರಬಂಧವನ್ನು, ಡಾ. ಶಶಿಕಲಾ ಹೂಗಾರರವರು **'ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ'**[೩೨], ಡಾ. ಎ. ಎಸ್. ವಿಶ್ವನಾಥ ಇವರು **'ಯಕ್ಷಗಾನ ದೃಶ್ಯಕಲೆಯ ವೈವಿಧ್ಯತೆ'**[೩೩] ಡಾ. ಹೆಚ್. ಎನ್. ಚಿತ್ರಗಾರರವರು **'ಕರ್ನಾಟಕ ಹಸ್ತ ಪ್ರತಿ ಚಿತ್ರಕಲೆ'**[೩೪] ಎಂಬ ವಿಷಯದ ಕುರಿತು ಪಿಹೆಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಮಹಾಪ್ರಬಂಧಗಳನ್ನು ಮಂಡಿಸಿದ್ದಾರೆ. ೨೦೦೬ ರಲ್ಲಿ ಡಾ. ವಿಶ್ವೇಶ್ವರಿ ತಿವಾರಿಯವರು **'ರಂಗೋಲಿ ಕಲೆ'**[೩೫] ಎಂಬ ಮಹಾಪ್ರಬಂಧವನ್ನು ಪಿಹೆಚ್.ಡಿ ಪದವಿಗಾಗಿ ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಸುಚಿತ್ರಾ ಲಿಂಗದಳ್ಳಿ **'ವಿಜಯನಗರ ಚಿತ್ರಕಲೆ'**[೩೬] ರವಿ ನಾಯಕರವರು **'ಕಿನ್ನಾಳ ಕಲೆ'**[೩೭] ಎಂಬ ಕಿರು ಪ್ರಬಂಧಗಳನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿ. ವಿ. ಗೆ ಸಲ್ಲಿಸಿದ್ದಾರೆ.

---

೨೪. ಡಾ. ಎಸ್. ಸಿ. ಪಾಟೀಲ : ಎ ಕ್ರಿಟಿಕಲ್ ಅನಾಲಸಿಸ್ ಆಫ್ ಆರ್ಟ ಅಜ್ಯುಕೇಶನ್ ಸ್ಕೂಲ್ ಲೆವಲ್ ಇನ್ ಕರ್ನಾಟಕ ಸ್ಟೇಟ್ ವಿಳ್ ರೆಫೆರೆನ್ಸ್ ಟು ಡ್ರಾಯಿಂಗ್ ಆ್ಯಂಡ್ ಪೇಂಟಿಂಗ್, ಕ.ವಿ.ವಿ. ಧಾರವಾಡ ೨೦೦೪

೨೫. ಡಾ. ವಿ. ಎಂ. ಬಾಗಾಯತ್ : ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಕನ್ನಡ ವಿ.ವಿ. ಹಂಪಿ ೨೦೦೪

೨೬. ಡಾ. ಶಿವಕುಮಾರ. ಎ. ಓ. : ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ಗುಲ್ಬರ್ಗಾ ವಿ.ವಿ ೨೦೦೪

೨೭. ಶಂಕ್ರಪ್ಪ ಕುಂದಗೋಳ : ಕಲಾವಿದ ಡಿ. ವ್ಹಿ. ಹಾಲಭಾವಿಯವರ ಕಲೆ ಮತ್ತು ಜೀವನ, ಕನ್ನಡ ವಿ.ವಿ. ಹಂಪಿ. ೨೦೦೫

೨೮. ಸಿ. ಡಿ. ಜೆಟ್ಟೆಣ್ಣನವರ : ಕಲಾವಿದ ಎಂ. ವ್ಹಿ. ಮಿಣಜಗಿಯವರ ಕಲೆ ಮತ್ತು ಜೀವನ, ಕನ್ನಡ ವಿ.ವಿ ಹಂಪಿ. ೨೦೦೫

೨೯. ಡಾ. ಡಿ. ಎ ಉಪಾಧ್ಯಾಯ : ದೃಶ್ಯಕಲೆಯಲ್ಲಿ ತೌಲನಿಕ ಅಧ್ಯಯನ, ಕನ್ನಡ ವಿ.ವಿ. ಹಂಪಿ. ೨೦೦೫

೩೦.. ಡಾ. ಆನಂದ. ಕೆ. ಪೂಜಾರ : ಕರಾವಳಿ ಕರ್ನಾಟಕದ ಚಿತ್ರಕಲೆ, ಕನ್ನಡ ವಿ.ವಿ. ಹಂಪಿ. ೨೦೦೫

೩೧ ಡಾ. ಶಿವಪ್ರಕಾಶ. ಎಲ್. ತುಕ್ಕಣ್ಣವರ : ಕರ್ನಾಟಕದ ರಥ ಶಿಲ್ಪಕಲೆ, ಕನ್ನಡ ವಿ.ವಿ. ಹಂಪಿ. ೨೦೦೫

೩೨ ಡಾ. ಶಶಿಕಲಾ. ಹೂಗಾರ : ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಕನ್ನಡ ವಿ.ವಿ. ಹಂಪಿ. ೨೦೦೫

೩೩. ಡಾ ಎ ಎಸ್ ವಿಶ್ವನಾಥ . ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ, ಕನ್ನಡ ವಿ.ವಿ. ಹಂಪಿ ೨೦೦೫

೩೪ ಡಾ ಹೆಚ್. ಚಿತ್ರಗಾರ : ಕರ್ನಾಟಕದ ಹಸ್ತ ಪ್ರತಿ ಚಿತ್ರಕಲೆ, ಕನ್ನಡ ವಿ.ವಿ. ಹಂಪಿ. ೨೦೦೫

೩೫ ಡಾ. ವಿಶ್ವೇಶ್ವರ ತಿವಾರಿ : ರಂಗೋಲಿ ಕಲೆ, ಗುಲ್ಬರ್ಗ ವಿಶ್ವವಿದ್ಯಾಲಯ. ೨೦೦೬

೩೬. ಸುಚಿತ್ರಾ ಲಿಂಗದಳ್ಳಿ · ವಿಜಯ ನಗರ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೬

೩೭. ರವಿ ನಾಯಕ : ಕಿನ್ನಾಳ ಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೬

ಗೀತಾಂಜಲಿ ಎಂಬವರು **'ಕರ್ನಾಟಕದ ದೀಪಸ್ಥಂಭಗಳು'**[೩೮] ಎಂಬ ವಿಷಯದ ಕುರಿತು ಪಿಎಚ್.ಡಿ ಪ್ರಬಂಧವನ್ನು ಕನ್ನಡ ವಿ. ವಿ. ಗೆ ಸಲ್ಲಿಸಿದ್ದಾರೆ. ಹೀಗೆ ಈ ಅವಧಿಯಲ್ಲಿ ವಿವಿಧ ರೀತಿಯಲ್ಲಿ ಚಿತ್ರಕಲೆ, ಶಿಲ್ಪಕಲೆ ಮತ್ತು ಜನಪದ ಕಲಾ ಪ್ರಕಾರಗಳ ಬಗ್ಗೆ ಅಧ್ಯಯನಗಳು ನಡೆದಿವೆ. ೨೦೦೭ ರಲ್ಲಿ ಎಂ.ಫಿಲ್ ಪದವಿಗಾಗಿ ಶ್ರೀಮತಿ ಶೈಲಾ. ಬಂಡೋಲರು **'ಸಂತ ಶುಭರಾಯ ಕಲೆ ಮತ್ತು ಬದುಕು'**,[೩೯] ಉಮೇಶ ಅವರು **'ಜೈನ ಚಿತ್ರಕಲೆ'**[೪೦], ಶಶಿಕಾಂತ. ಬಸರಿಕಟ್ಟಿಯವರು **'ಕಲಘಟಗಿ ಕಲೆ'**[೪೧], ಬಿ. ಎಂ. ಪಾಟೀಲರವರು **'ನಿಪ್ಪಾಣಿವಾಡೆಯ ಭಿತ್ತಿಚಿತ್ರಕಲೆ'**[೪೨] ಎಂಬ ವಿಷಯದ ಬಗ್ಗೆ ಕಿರು ಪ್ರಬಂಧಗಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ೨೦೦೭ ರಲ್ಲಿ ಡಾ. ಮಲ್ಲಿಕಾರ್ಜುನ ಬಾಗೋಡಿಯವರು **'ಸುರಪುರ ಚಿತ್ರಕಲೆ'**[೪೩] ಎಂಬ ಮಹಾಪ್ರಬಂಧವನ್ನು ಪಿಹೆಚ್.ಡಿ ಪದವಿಗಾಗಿ ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದರೆ, ಪಿ. ಟಿ. ಲಕ್ಕಣ್ಣನವರ ಅವರು **'ಕರ್ನಾಟಕದ ಚಿತ್ರಕಲಾ ಸಾಹಿತ್ಯ ವೈಚಾರಿಕ ಅಧ್ಯಯನ'**[೪೪] ಎಂಬ ವಿಷಯದ ಬಗ್ಗೆ ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ ಪ್ರಬಂಧವನ್ನು ಸಲ್ಲಿಸಿದ್ದಾರೆ.

೨೦೦೮ ರಲ್ಲಿ ಎಂ.ಫಿಲ್ ಪದವಿಗಾಗಿ ಮಹೇಶ. ಉಮತಾರರವರು **'ಕಲಾವಿದ ಬಿ. ಪಿ. ಬಾಯಿರಿ ಕಲೆ ಮತ್ತು ಸಾಹಿತ್ಯ'**[೪೫], ಕುಮಾರಿ ಗಿರಿಜಾ ಬಿರಾದಾರ **'ಬಿಜಾಪೂರ ಜಿಲ್ಲೆಯ ಚಿತ್ರಕಲೆ'**[೪೬], ಮಹಾಕೂಟೇಶ್ವರಗೌಡ ಪಾಟೀಲ **'ಬೆಳಗಾಂವಿ ಜಿಲ್ಲೆಯ ಚಿತ್ರಕಲೆ'**[೪೭] , ಮಹಾಂತೇಶ ಪಲದಿನ್ನಿಯವರು **'ಲಜ್ಜಾಗೌರಿ ಶಿಲ್ಪಕಲೆ'**[೪೮], ಕೃಷ್ಣವೇಣಿಯವರು **'ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸ ಚಿತ್ರಕಲೆ'**[೪೯], ಬಸವರಾಜ. ಗವಿಮಠರು **'ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ'**[೫೦], ಕೃಷ್ಣೆಗೌಡ ಇವರು **'ಟಿಬೆಟಿಯನ್ ಚಿತ್ರಕಲೆ'**[೫೧], ಜಯರಾಜ ಚಿಕ್ಕಪಾಟೀಲ ರವರು **'ಕರ್ನಾಟಕದ ಜಾಹಿರಾತುಗಳಲ್ಲಿ ಸಾಂಸ್ಕೃತಿಕ ನೋಟ'**[೫೨], ಸಂತೋಷ ಕುಲಕರ್ಣಿಯವರು **'ದಾವಣಗೇರೆ ಜಿಲ್ಲೆಯ ಚಿತ್ರಕಲೆ'**[೫೩], ಯೋಗೀಶರವರು **'ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ'**[೫೪] ಎಂಬ ಕಿರು ಪ್ರಬಂಧಗಳನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದಲ್ಲದೆ ಜಿ. ಲಕ್ಷ್ಮೀಪತಿಯವರು **'ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ'**[೫೫] ಎಂಬ ವಿಷಯದ ಬಗ್ಗೆ ಪಿಎಚ್.ಡಿ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ.

---

೩೮. ಡಾ. ಗೀತಾಂಜಲಿ. ಬಿ. ಆರ್ : ಕರ್ನಾಟಕದ ದೀಪಸ್ತಂಭಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೬
೩೯. ಶ್ರೀಮತಿ ಶೈಲಾ. ಬರಡೋಲ : ಸಂತ ಶುಭರಾಯ ಕಲೆ ಮತ್ತು ಬದುಕು, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೭
೪೦. ಉಮೇಶ. ಎಸ್ : ಕರ್ನಾಟಕದಲ್ಲಿ ಜೈನ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೭
೪೧. ಶಶಿಕಾಂತ ಬಸರಿಕಟ್ಟಿ : ಕಲಘಟಗಿ ಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೭
೪೨. ಬಿ. ಎಂ. ಪಾಟೀಲ : ನಿಪ್ಪಾಣಿ ವಾಡೆಯ ಭಿತ್ತಿ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೭
೪೩. ಡಾ. ಮಲ್ಲಿಕಾರ್ಜುನ ಬಾಗೋಡಿ : ಸುರಪುರ ಚಿತ್ರಕಲೆ, ಗುಲ್ಬರ್ಗ ವಿಶ್ವವಿದ್ಯಾಲಯ. ೨೦೦೭
೪೪. ಪಿ. ಟಿ. ಲಕ್ಕಣ್ಣನವರ : ಕರ್ನಾಟಕದ ಚಿತ್ರಕಲಾ ಸಾಹಿತ್ಯ ವೈಚಾರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೭
೪೫. ಮಹೇಶ ಉಮತಾರ : ಕಲಾವಿದ ಬಿ. ಪಿ. ಬಾಯಿರಿ ಕಲೆ ಮತ್ತು ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೮
೪೬. ಗಿರಿಜಾ ಬಿರಾದಾರ : ಬಿಜಾಪೂರ ಜಿಲ್ಲೆಯ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೮
೪೭. ಮಹಾಕೂಟೇಶ್ವರಗೌಡ. ಪಾಟೀಲ : ಬೆಳಗಾಂವಿ ಜಿಲ್ಲೆಯ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೮
೪೮. ಮಹಾಂತೇಶ ಫಲದಿನ್ನಿ: ಲಜ್ಜಾಗೌರಿ ಶಿಲ್ಪಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೮
೪೯. ಕೃಷ್ಣವೇಣಿ : ಬಳ್ಳಾರಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೮
೫೦. ಬಸವರಾಜ ಗವಿಮಠ : ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೮
೫೧. ಕೃಷ್ಣೇಗೌಡ : ಟಿಬೆಟಿಯನ್ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೮
೫೨. ಜಯರಾಜ ಚಿಕ್ಕಪಾಟೀಲ : ಕರ್ನಾಟಕದ ಜಾಹಿರಾತುಗಳಲ್ಲಿ ಸಾಂಸ್ಕೃತಿಕ ನೋಟ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೮
೫೩. ಸಂತೋಷ ಕುಲಕರ್ಣಿ : ದಾವಣಗೇರೆ ಜಿಲ್ಲೆಯ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೮
೫೪. ಯೋಗೀಶ್ : ಚಿತ್ರದುರ್ಗ ಜಿಲ್ಲೆಯ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೮
೫೫. ಡಾ. ಜಿ. ಲಕ್ಷ್ಮೀಪತಿ : ದಕ್ಷಿಣ ಕರ್ನಾಟಕದ ಜನಪದ ಶಿಲ್ಪಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೮

ರವಿಂದ್ರ. ಕಮ್ಮಾರ ಅವರು **'ವ್ಹಿ. ಬಿ. ಹಿರೇಗೌಡರ ಕಲೆ ಮತ್ತು ಬದುಕು'**[೫೬] ಎಂಬ ವಿಷಯದ ಬಗ್ಗೆ ಇದೇ ವರ್ಷದಲ್ಲಿ ಪಿಎಚ್.ಡಿ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ೨೦೦೯ ರಲ್ಲಿ ಸೂರ್ಯಕಾಂತ ಮಂಟಗಿ ಯವರು **'ಕಲಾವಿದ ಧನಂಜಯ ಶಿಲ್ಪಿಯವರ ಜೀವನ ಮತ್ತು ಕಲೆ'**[೫೭] ಒಂದು ಅಧ್ಯಯನ, ರೆಹಮಾನ ಪಟೇಲ ಇವರು **'ಕರ್ನಾಟಕದ ಬಿದರಿ ಕಲೆ'**[೫೮] ಒಂದು ಅಧ್ಯಯನ ಎಂಬ ಪಿಹೆಚ್.ಡಿ ಮಹಾಪ್ರಬಂಧಗಳನ್ನು ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ. ಶಾಮ ಜಮಾದಾರ ಅವರು **'ಕಲಾವಿದ ಸಿ. ಎಲ್. ಪಾಟೀಲ ಕಲೆ ಮತ್ತು ಬದುಕು'**[೫೯] ,ಕಾಂತರಾಜ ಇವರು **'ತುಮಕೂರು ಜಿಲ್ಲೆಯ ಭಿತ್ತಿ ಚಿತ್ರಕಲೆ'**[೬೦], ರಂಗಸ್ವಾಮಿ ಇವರು **'ಸಿ.ಬಿ. ಚಿತ್ರಕಲೆ'**[೬೧] ಎಂಬ ಮಹಾಪ್ರಬಂಧಗಳನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ.

ಅಲ್ಲದೇ ಇನ್ನೂ ಹಲವಾರು ಸಂಶೋಧಕರು ಕನ್ನಡ ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯ, ಗುಲ್ಬರ್ಗಾ ವಿಶ್ವವಿದ್ಯಾಲಯ, ಮೈಸೂರು ವಿಶ್ವವಿದ್ಯಾಲಯಗಳಲ್ಲಿ ಎಂ.ಫಿಲ್, ಪಿಹೆಚ್.ಡಿ ಹಾಗೂ ಡಿ.ಲಿಟ್ ಪದವಿಯಲ್ಲಿ ಅಧ್ಯಯನ ನಿರತರಾಗಿದ್ದಾರೆ. ಅದು ಅಲ್ಲದೆ ಸ್ನಾತಕ ಹಾಗೂ ಸ್ನಾತಕೋತ್ತರ ತರಗತಿಗಳಲ್ಲಿ ಅಧ್ಯಯನದ ಒಂದು ಭಾಗವಾಗಿ ನೂರಾರು ಕಿರು ಪ್ರಬಂಧಗಳು ಹೊರಬರುತ್ತಲಿವೆ. ಹಿಂದಿನ ದಿನಮಾನಗಳಿಗೆ ಹೋಲಿಸಿದರೆ ಇಂದು ಈ ಕ್ಷೇತ್ರದಲ್ಲಿ ಸಂಶೋಧನೆಗಳು ಹೆಚ್ಚಿನ ಸಂಖ್ಯೆಯಲ್ಲಿ ನಡೆದಿವೆ ಎನ್ನಬಹುದು.

**ಗಾಜಿನ ಮೇಲಿನ ಚಿತ್ರಕಲೆಯಲ್ಲಿ ಈವರೆಗೆ ನಡೆದ ಅಧ್ಯಯನಗಳು**

ಕರ್ನಾಟಕದ ಗಾಜಿನ ಮೇಲಿನ ಚಿತ್ರಕಲೆಯ ಕುರಿತಾಗಿ ಇಲ್ಲಿಯವರೆಗೆ ಯಾವುದೇ ರೀತಿಯ ಗಂಭೀರ ಅಧ್ಯಯನ ನಡೆದಿಲ್ಲ. ಕರ್ನಾಟಕ ಹಾಗೂ ಕನ್ನಡದ ಮಟ್ಟಿಗೆ ಈ ವಿಷಯದ ಬರವಣಿಗೆಯ ಕೊರತೆ ಎದ್ದು ಕಾಣುತ್ತದೆ. ಗಾಜಿನ ಮೇಲಿನ ಚಿತ್ರ ಕುರಿತಾಗಿ ಕೆಲವು ಸ್ಥೂಲನೋಟ ಕೊಡುವ ಪರಿಚಯಾತ್ಮಕ ಲೇಖನಗಳನ್ನು ಹೊರತು ಪಡಿಸಿದರೆ ಗಂಭೀರ ಸ್ವರೂಪದ ಸಂಶೋಧನ ಹಿನ್ನೆಲೆಯ ಅಧ್ಯಯನಗಳು ನಡೆಯಬೇಕಾದ ಅನಿವಾರ್ಯತೆ ಇದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಗಾಜಿನ ಚಿತ್ರಕಲೆಯ ಕುರಿತು ಇದುವರೆಗೆ ಬಂದ ಬರಹಗಳನ್ನು ಈ ಕೆಳಗಿನಂತೆ ಸಮೀಕ್ಷಿಸಬಹುದು.

ಇದೇ ವಿಶ್ವಕೋಶದಲ್ಲಿ ಗಾತಿಕ ಆರ್ಟ ಅಧ್ಯಾಯದಲ್ಲಿ ಗಾಜಿನ ಚಿತ್ರಕಲೆಯ ಕುರಿತು ಪ್ರಸ್ತಾಪಿಸಿದ್ದಾರೆ.[೬೨] ಕನ್ನಡ ವಿಶ್ವಕೋಶ ಸಂಪುಟ ಆರು. ಇಲ್ಲಿ ಗಾಜಿನ ತಯಾರಿಕೆಯಿಂದ ಹಿಡಿದು ಅದರ ಬೆಳವಣಿಗೆಯ ವಿವಿಧ ಹಂತಗಳನ್ನು ಚರ್ಚಿಸಿದ್ದಾರೆ. ಪ್ರಾಚೀನ ಕಾಲದಲ್ಲಿನ ಗಾಜಿನ ಉಗಮ, ಅದರ ಬಳಕೆ, ಅದರ ತಯಾರಿಕೆಯ ಹಂತ, ಗಾಜಿನ ಕುಲುಮೆ, ಗಾಜಿನ ಕಾರ್ಖಾನೆಗಳ ವಿವರಗಳನ್ನು ಇಲ್ಲಿ ಕೊಡಲಾಗಿದೆ.

---

೫೬. ಡಾ. ರವೀಂದ್ರ, ಕಮ್ಮಾರ : ವ್ಹಿ. ಬಿ. ಹಿರೇಗೌಡರ ಕಲೆ ಮತ್ತು ಬದುಕು, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೮
೫೭. ಡಾ. ಸೂರ್ಯಕಾಂತ ಮಂಟಗಿ : ಕಲಾವಿದ ಧನಂಜಯ ಶಿಲ್ಪಿಯವರ ಜೀವನ ಮತ್ತು ಕಲೆ, ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ. ೨೦೦೯
೫೮. ಡಾ. ರೆಹಮಾನ ಪಟೇಲ : ಕರ್ನಾಟಕದ ಬಿದರಿ ಕಲೆ, ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ. ೨೦೦೯
೫೯. ಶಾಮ ಜಮಾದಾರ : ಕಲಾವಿದ ಸಿ. ಎನ್. ಪಾಟೀಲ ಕಲೆ ಮತ್ತು ಬದುಕು, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೯
೬೦. ಕಾಂತರಾಜ : ತುಮಕೂರು ಜಿಲ್ಲೆಯ ಭಿತ್ತಿಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೯
೬೧. ರಂಗಸ್ವಾಮಿ : ಸಿಬಿ ಚಿತ್ರಕಲೆ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೯
೬೨. ಕನ್ನಡ ವಿಶ್ವಕೋಶ ಸಂಪುಟ ಆರು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ ೧೯೭೩

ಜಯಾ ಅಪ್ಪಾಸ್ವಾಮಿಯವರು **ಇಂಡಿಯನ್ ಪೈಂಟಿಂಗ್ಸ್ ಆನ್ ಗ್ಲಾಸ್** ಎಂಬ ಪುಸ್ತಕದಲ್ಲಿ ಗಾಜಿನ ಮೇಲಿನ ಚಿತ್ರಕಲೆಯ ಕುರಿತು ಅದರ ನೆಲೆ-ಹಿನ್ನೆಲೆ, ಐತಿಹಾಸಿಕ ಹಿನ್ನೆಲೆ, ಧಾರ್ಮಿಕ ಹಿನ್ನೆಲೆ ಹಾಗೂ ಪ್ರಾದೇಶಿಕ ವೈವಿಧ್ಯತೆಯ ಕುರಿತು ಚರ್ಚಿಸಿದ್ದಾರೆ. ಈ ಚಿತ್ರಕಲೆಯ ಬೆಳವಣಿಗೆಯ ವಿವಿಧ ಹಂತಗಳನ್ನು ಪರಿಚಯಿಸಿದ್ದಾರೆ. ಗಾಜಿನ ಚಿತ್ರಗಳ ರಚನೆಗೆ ಬೇಕಾಗುವ ಬಣ್ಣಗಳು, ಕಲಾವಿದರು ಆಯ್ಕೆ ಮಾಡಿಕೊಂಡ ವಸ್ತು ವಿಷಯಗಳು, ಪರಿಕರಗಳು ಹಾಗೂ ರಚನಾ ವಿಧಾನಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಹಲವಾರು ವರ್ಣಮಯ ಗಾಜಿನ ಚಿತ್ರಗಳನ್ನು ಈ ಪುಸ್ತಕದಲ್ಲಿ ಕಾಣಬಹುದು.[೬೩] ಬಿ. ಕೋಟಯ್ಯ ಅವರು ಎ. ಹ್ಯಾಂಡ್ ಬುಕ್ ಆಫ್ ವೆಸ್ಟರ್ನ್ ಆರ್ಟ್ಸ್ ಸಾಲಾರಜಂಗ್ ಮ್ಯೂಜಿಯಂ ಪುಸ್ತಕದಲ್ಲಿ ಯುರೋಪಿಯನ್ ರಾಷ್ಟ್ರಗಳ ಗ್ಲಾಸ್ ಆರ್ಟ ಕುರಿತು ಪ್ರಸ್ತಾಪಿಸಿದ್ದಾರೆ.[೬೪] ಡಾ. ಚೂಡಾಮಣಿ ನಂದಗೋಪಾಲರು **ಮಂಜುಷಾ ಕ್ಯಾಟಲಾಗ್**ದಲ್ಲಿ ಗಾಜಿನ ಚಿತ್ರಕಲೆಯ ಕುರಿತು ಪ್ರಸ್ತಾಪಿಸಿದ್ದಾರೆ. ಗಾಜಿನ ಚಿತ್ರಗಳ ರಚನೆ, ವಸ್ತು ವಿಷಯವನ್ನು ಸೂಚಿಸಿದ್ದಾರೆ.[೬೫]

ಡಾ. ಎಸ್. ಕೆ. ಅರುಣಿಯರು ಕರ್ನಾಟಕ ಲಲಿತಕಲಾ ಆಕಾಡೆಮಿಯವರು ಪ್ರಕಟಪಡಿಸಿದ **ದಖ್ಖನಿ ಚಿತ್ರಕಲೆ** ಎಂಬ ಪುಸ್ತಕದಲ್ಲಿ ಗಾಜಿನ ಚಿತ್ರಕಲೆ ಎಂಬ ಅಧ್ಯಾಯದಲ್ಲಿ ಈ ಚಿತ್ರಕಲೆಯ ಉಗಮ, ಬೆಳೆದು ಬಂದ ಬಗೆ ಹಾಗೂ ಗಾಜಿನ ಕಲಾ ಕೇಂದ್ರಗಳ ಕುರಿತು ಚರ್ಚಿಸಿದ್ದಾರೆ. ಅದೇ ಪುಸ್ತಕದಲ್ಲಿ **ಮರಾಠ ಚಿತ್ರಕಲೆ** ಎಂಬ ಅಧ್ಯಾಯದಲ್ಲಿ ಈ ಕಲೆಯ ಕುರಿತು ಪರಿಚಯಿಸಿದ್ದಾರೆ. ಮರಾಠ ಚಿತ್ರಕಲೆಯಲ್ಲಿ ಮೂರು ವಿಧಾನಗಳನ್ನು ಕಾಣಬಹುದು. ಅದರಲ್ಲಿ ಗಾಜಿನ ಚಿತ್ರ ಕಲೆಯು ಒಂದಾಗಿದೆ ಎಂದು ಹೇಳುತ್ತಾರೆ. ಮರಾಠ ಚಿತ್ರಕಲೆಯ ಶೈಲಿ, ರಚನೆ ಹಾಗೂ ವಸ್ತು ವಿಷಯದ ಕುರಿತು ವಿವರಿಸಿದ್ದಾರೆ.[೬೬]

ಅನ್ನಪೂರ್ಣ ಗರಿಮೆಲ್ಲಾರವರು 'Images on Glass' ಎಂಬ ಚೈನಾ ಹಾಗೂ ಭಾರತೀಯ ಕಲಾವಿದರು ರಚಿಸಿದ ಗಾಜಿನ ಚಿತ್ರಗಳ ಸಂಗ್ರಹದ ಡೈರಿಯಲ್ಲಿ (2003 Illustrated Desk Diary)ಈ ಕಲೆಯ ಕುರಿತು ಪ್ರಸ್ತಾಪಿಸಿದ್ದಾರೆ.[೬೭] ಗಾಜಿನ ಮೇಲಿನ ಚಿತ್ರಕಲೆಯು ೧೮ನೆಯ ಶತಮಾನದಲ್ಲಿ ಪರಿಚಿತಗೊಂಡು ವಾಣಿಜ್ಯ ಕಲೆಯಾಗಿ ಸಾಮಾಜಿಕ ಹಾಗೂ ರಾಜಕೀಯ ಒತ್ತಾಶಯದ ಮೇರೆಗೆ ಬೆಳೆಯಿತು. ಈ ಕಲೆಯು ಒಂದು ಬಾಜಾರ ಕಲೆಯಾಗಿ ರೂಪಗೊಂಡಿತು. ಯುರೋಪ ರಾಷ್ಟ್ರಗಳಲ್ಲಿ ಪ್ರಚಲಿತದಲ್ಲಿದ್ದ ಈ ಕಲೆಯು ಏಷ್ಯಾ ರಾಷ್ಟ್ರಗಳ ಮೂಲಕ ಚೀನಾಕ್ಕೆ ಪ್ರವೇಶ ಪಡೆಯಿತು. ಮುಂದೆ ಈ ಕಲೆಯನ್ನು ಚೈನಾ ಕಲಾವಿದರು ಸಮರ್ಪಕವಾಗಿ ಬಳಸಿಕೊಂಡು ನಿಸರ್ಗಚಿತ್ರಗಳು, ಸ್ಥಬ್ದಚಿತ್ರಗಳು (Still life), ಹೂವು-ಹಣ್ಣುಗಳ ಚಿತ್ರಗಳನ್ನು ಗಾಜಿನ ಮೇಲೆ ಬರೆದು ಏಷ್ಯಾದ ಕರಾವಳಿ ರಾಷ್ಟ್ರಗಳ ಮೂಲಕ ಪ್ರಚಾರ ಮಾಡಿದರು. ಆ ಮೂಲಕ ಭಾರತಕ್ಕೂ ಪ್ರವೇಶವಾಯಿತು.

---

63. Jay Appaswamy : Indian paintings on glass. 1980
೬೪. B. Kotaiah : A hand book of western Arts. In the salarjung museum Hydrabad 1999
೬೫. ಡಾ. ಚೂಡಾಮಣಿ ನಂದಗೋಪಾಲ, ಮಂಜುಷಾ ೨೦೦೦
೬೬. ಡಾ. ಎಸ್. ಕೆ. ಅರುಣಿ, ದಖ್ಖನಿ ಚಿತ್ರಕಲೆ, ೨೦೦೧
67. Annapurna Garimella, Images on glass, 2003

ಗಾಜಿನ ಚಿತ್ರಕಲೆಯನ್ನು ಚೀನಾ ಕಲಾವಿದರು ವ್ಯಾಪಾರದ ಮೂಲಕ ಭಾರತದಲ್ಲಿ ಮೈಸೂರು, ಸಾತಾರಾ, ಮುಂಬೈ ಮತ್ತು ಕಚ್ಚ ಪ್ರದೇಶಗಳಿಗೆ ಪರಿಚಯಿಸಿದರು. ಇಲ್ಲಿ ಈ ಕಲೆಗೆ ಪ್ರೋತ್ಸಾಹವೂ ದೊರೆಯಿತು. ನಂತರ ಭಾರತದ ಲಖನೌ, ಕಲ್ಕತ್ತಾ, ಗುಜರಾತ, ಇತರ ಪ್ರದೇಶಗಳಲ್ಲಿ ವ್ಯಾಪಿಸಿತು. ಮುಖ್ಯವಾಗಿ ತಂಜಾವೂರು, ಮೈಸೂರು, ಹೈದರಾಬಾದ ಹಾಗೂ ಮುಂಬೈ ಗಾಜಿನ ಚಿತ್ರಗಳ ಕೇಂದ್ರಗಳು ಆಗಿದ್ದವು. ಈ ಚಿತ್ರಗಳ ರಚನೆಗೆ 'ಟೆಂಪ್ರಾ' ವರ್ಣಗಳನ್ನು ಅಪಾರದರ್ಶಕವಾಗಿ ಬಳಸಿದ್ದಾರೆ. ರೇಖಾ ಪ್ರಧಾನವಾದ ಬೆಳಕು ನೆರಳುಗಳ ವಿವರಣೆಯನ್ನು ನೀಡಿದ್ದಾರೆ. ಲಖನೌ ಆಶ್ರಯದಲ್ಲಿ ಬೆಳೆದ ಕಲೆಯ ವಿವರ, ಮೈಸೂರು ಹಾಗೂ ತಂಜಾವೂರು ಚಿತ್ರಗಳ ವಿವರ, ರಾಜಸ್ಥಾನ, ಕಲ್ಕತ್ತ ಪ್ರದೇಶಗಳಲ್ಲಿ ರಚನೆಗೊಂಡ ಚಿತ್ರಗಳ ಪ್ರಾದೇಶಿಕ ವೈವಿಧ್ಯತೆಯನ್ನು ಲೇಖನದಲ್ಲಿ ವಿವರಿಸಿದ್ದಾರೆ. ಸಾಮಾನ್ಯವಾಗಿ ಗಾಜಿನ ಮೇಲೆ ರಚನೆಗೊಂಡ ಚಿತ್ರಗಳು ದೇವಾನುದೇವತೆಗಳು, ಭಾವಚಿತ್ರಗಳು, ನಿಸರ್ಗಚಿತ್ರಗಳು, ಸ್ಥಿರಚಿತ್ರಗಳು ಕಂಡು ಬರುತ್ತವೆ. ಈ ಕಲೆಗೆ ಪ್ರೋತ್ಸಾಹಿಸಿದ ರಾಜ ಮನೆತನಗಳನ್ನು ಉಲ್ಲೇಖಿಸಿದ್ದಾರೆ. ಈ ಪುಸ್ತಕದಲ್ಲಿ ಸುಮಾರು ೫೨ ಬೇರೆ ಬೇರೆ ಪ್ರದೇಶದ ಭಾರತೀಯ ಹಾಗೂ ಚೀನಾ ಕಲಾವಿದರು ರಚಿಸಿದ ಚಿತ್ರಗಳಿವೆ.

ಡಾ. ಬಿ. ಕೆ. ಹಿರೇಮಠ, ಅಭಿನಂದನಾ ಗ್ರಂಥವಾದ 'ನಿಜದ ನೆಲೆ' ಯಲ್ಲಿ ಶ್ರೀ ಮಹಾದೇವ ಜಗತಾಪ ಅವರು **ಗಾಜಿನ ಚಿತ್ರಕಲೆ** ಎಂಬ ಲೇಖನದಲ್ಲಿ ಗುಳೇದಗುಡ್ಡದಲ್ಲಿರುವ ಗಾಜಿನ ಚಿತ್ರಗಳನ್ನು ಕುರಿತು ಪರಿಚಯ ಮಾಡಿಕೊಡಲು ಪ್ರಯತ್ನಿಸಿದ್ದಾರೆ ಹಾಗೂ ಅವುಗಳ ವಸ್ತು, ವಿಷಯಗಳ ವಿವರಣೆಯನ್ನು ನೀಡಿದ್ದಾರೆ.[೧೮] ಶಕೀಲಅಹ್ಮದ ಪಿಂಜಾರರವರು ಬಿ.ವಿ.ಎ. ತರಗತಿಯ ಪದವಿಗಾಗಿ ಸಲ್ಲಿಸಿದ **ಗುಳೇದಗುಡ್ಡದ ಗಾಜಿನ ಚಿತ್ರಕಲೆ** ಎಂಬ ಯೋಜನಾ ವರದಿಯಲ್ಲಿ ಆ ಊರಿನಲ್ಲಿ ಕಂಡು ಬರುವ ಗಾಜಿನ ಚಿತ್ರಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಸಾಂಸ್ಕೃತಿಕ ಪರಿಸರ, ರಚನಾ ವಿಧಾನ, ವಿಷಯ ವಸ್ತುಗಳು ಹಾಗೂ ಪೋಷಕರನ್ನು ಕುರಿತು ಬರೆದಿದ್ದಾರೆ.[೧೯]

೧೦/೦೧/೨೦೦೮ ರ 'ಪ್ರಜಾವಾಣಿ' ಪತ್ರಿಕೆಯ 'ಕರ್ನಾಟಕ ದರ್ಶನ'ದಲ್ಲಿ ಪ್ರವೀಣರಾಜು ಸೊನ್ನದ ಅವರು ಬರೆದ **'ಗಾಜಿನ ಮೇಲಿನ ನಾಜೂಕು ಕಲೆ'** ಎಂಬ ಶೀರ್ಷಿಕೆಯ ಲೇಖನದಲ್ಲಿ ಗುಳೇದಗುಡ್ಡದಲ್ಲಿ ಕಂಡು ಬರುವ ಗಾಜಿನ ಮೇಲಿನ ಚಿತ್ರಗಳ ಕುರಿತು ಪ್ರಸ್ತಾಪಿಸಿದ್ದಾರೆ. ಗುಳೇದಗುಡ್ಡದಲ್ಲಿ ಕೆಲವು ಮನೆತನಗಳಲ್ಲಿ ಸುಮಾರು ಒಂದುವರೆ ಶತಮಾನಗಳ ಹಿಂದೆ ಆ ಮನೆತನಗಳ ಪೂರ್ವಜರು ಸಂಗ್ರಹಿಸಿದ ವಿವರಣೆಯನ್ನು ನೀಡಿದ್ದಾರೆ. ಈ ಚಿತ್ರಗಳು ೧೮ನೇ ಶತಮಾನದಲ್ಲಿ ಮುಸ್ಲಿಂ ಅರಸರ ಪ್ರೋತ್ಸಾಹದಿಂದ ಬಳಕೆಗೆ ಬಂದವು ಮುಂದೆ ಮೈಸೂರು, ತಂಜಾವೂರು ಹಾಗೂ ಮರಾಠ ಅರಸರ ಪ್ರೋತ್ಸಾಹದಿಂದ ಈ ಕಲೆ ವ್ಯಾಪಕ ಪ್ರಚಾರ ಪಡೆದುಕೊಂಡಿತು ಎಂದು ವಿವರಿಸಿದ್ದಾರೆ ಹಾಗೂ ಈ ಊರಿನಲ್ಲಿರುವ ಚಿತ್ರಗಳ ಅಂಕಿಸಂಖ್ಯೆಗಳನ್ನು ಹಾಗೂ ಮನೆತನಗಳನ್ನು ಪರಿಚಯಿಸಿದ್ದಾರೆ. ಜೊತೆಗೆ ಸಂರಕ್ಷಣೆಯ ಅಗತ್ಯತೆಯನ್ನು ಕೊಡಲು ಪ್ರಯತ್ನಿಸಿದ್ದಾರೆ.[೨೦]

---

೧೮ ಮಹಾದೇವ ಜಗತಾಪ : (ಸಂ) ಗಾಜಿನ ಚಿತ್ರಕಲೆ. ನಿಜದ ನೆಲೆ-ಡಾ.ಬಿ.ಕೆ. ಹಿರೇಮಠ ಅಭಿನಂದನಾ ಗ್ರಂಥ ೨೦೦೩

೧೯ ಶಕೀಲ ಅಹ್ಮದ ಪಿಂಜಾರ : (ಅ.ಪ್ರ.ಯೋ.ವ) ಗುಳೇದಗುಡ್ಡದ ಗಾಜಿನ ಚಿತ್ರಕಲೆ ೨೦೦೫

೨೦ ಪ್ರವೀಣರಾಜು ಸೊನ್ನದ ; ಲೇಖನ, ಗಾಜಿನ ಮೇಲೆ ನಾಜೂಕು ಕಲೆ, ಕರ್ನಾಟಕ ದರ್ಶನ ಪ್ರಜಾವಾಣಿ ದಿನಪತ್ರಿಕೆ ೧೦/೦೧/೨೦೦೮

ಪ್ರವೀಣರಾಜು ಸೊನ್ನದ ಅವರು ಇದೇ ಲೇಖನವನ್ನು **ಶತಮಾನ ಕಂಡ ಗಾಜಿನ ಚಿತ್ರಕಲೆ** ಎಂಬ ಶೀರ್ಷಿಕೆಯಲ್ಲಿ ಫೆಬ್ರುವರಿ ೧೧, ೨೦೦೮ ರ 'ಜನಪದ' ವಾರಪತ್ರಿಕೆಯ ಲ್ಲಿ ಪ್ರಕಟಿಸಿದ್ದಾರೆ.[೭೧] ಬಸವರಾಜ ಗವಿಮಠರು **ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ** ಎಂಬ ಎಂ.ಫಿಲ್ ಪ್ರಬಂಧದಲ್ಲಿ ಗುಳೇದಗುಡ್ಡ ಹಾಗೂ ಅಮೀನಗಡದ ಗಾಜಿನ ಚಿತ್ರಗಳನ್ನು ಕುರಿತು ಪ್ರಸ್ತಾಪಿಸಿದ್ದಾರೆ. ಇಲ್ಲಿ ಇವರ ಈ ಚಿತ್ರಗಳ ವಿವರಣೆ ಹಾಗೂ ಸ್ಥಿತಿ ಗತಿಯನ್ನು ಚರ್ಚಿಸಿದ್ದಾರೆ.[೭೨] ಮಹಾಕೂಟೇಶ್ವರ ಪಾಟೀಲರು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ **ಬೆಳಗಾಂವಿ ಜಿಲ್ಲೆಯ ಚಿತ್ರಕಲೆ** ಎಂಬ ಸಂಪ್ರಬಂಧದಲ್ಲಿ ಬೆಳಗಾಂವಿಯ ಚರ್ಚು ಒಂದರ ಸ್ಟೇಯನ್ಡ್ ಗ್ಲಾಸ್ ಚಿತ್ರಗಳ ಕುರಿತು ಪ್ರಸ್ತಾಪಿಸಿದ್ದಾರೆ.[೭೩]

ಶಾಂತಿ ಸ್ವರೂಪರವರು **ಮೊಘಲ ಆರ್ಟ ಎ, ಸ್ಟಡಿ ಇನ್ ಹ್ಯಾಂಡಿ ಕ್ರಾಫ್ಟ್** ಎಂಬ ಪುಸ್ತಕದಲ್ಲಿ 'ಮೊಗಲ್ ಅವಧಿಯಲ್ಲಿರುವ ಗಾಜಿನ ಕಲೆ ಹಾಗೂ ಗಾಜಿನ ವಸ್ತುಗಳನ್ನು ಕುರಿತು ಚರ್ಚಿಸಿದ್ದಾರೆ.[೭೪] **ದಿ ಎನ್ ಸೈಕ್ಲೊಪಿಡಿಯಾ ಆಫ್ ವಿಷುಯಲ್ ಆರ್ಟ ವ್ಯಾಲ್ಯೂಮ್ ೪** ರ ರೋಮನೆಸ್ಕ್ ಕಲೆಯಲ್ಲಿ ಗ್ಲಾಸ್, ಪೇಯಿಂಟಿಂಗ್ಸ್ (Stained glass) ಕುರಿತು ಪ್ರಸ್ತಾಪಿಸಿದ್ದಾರೆ. ಇದೆ ವಿಶ್ವಕೋಶದಲ್ಲಿ ಗೋಥಿಕ್ ಆರ್ಟ ಅಧ್ಯಾಯದಲ್ಲಿ ಗಾಜಿನ ಚಿತ್ರಕಲೆಯ ಕುರಿತು ಪ್ರಸ್ತಾಪಿಸಿದ್ದಾರೆ.[೭೫] ಕುಲುಮೆ, ಗಾಜಿನ ಕಾರ್ಖಾನೆಗಳ ವಿವರಗಳನ್ನು ಇಲ್ಲಿ ಕೊಡಲಾಗಿದೆ. ಎಂ. ಎಸ್. ನಂಜುಂಡರಾವ್ ರವರು ಕರ್ನಾಟಕ ಲಲಿತಕಲಾ ಅಕಾಡೆಮಿಯವರು ಪ್ರಕಟಿಸಿದ **ಕಲಾಕೋಶ** ಎಂಬ ಗ್ರಂಥದಲ್ಲಿ ಮೈಸೂರು ಸಾಂಪ್ರದಾಯಿಕ ಚಿತ್ರಕಲೆ ಎಂಬ ಲೇಖನದಲ್ಲಿ ಗಾಜಿನ ಚಿತ್ರಕಲೆಯ ಕುರಿತು ಪ್ರಸ್ತಾಪ ಮಾಡಿದ್ದಾರೆ.[೭೬] ಕೆ. ವಿ. ಕಾಳೆಯವರು ಕನ್ನಡ ವಿಶ್ವವಿದ್ಯಾಲಯದ ಪ್ರಕಾಶನದ **ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ** ಪುಸ್ತಕದಲ್ಲಿ ಸ್ಟೇಯನ್ಡ್ ಗ್ಲಾಸ್ ಚಿತ್ರಕಲೆಯ ಬಣ್ಣಗಳ ಬಳಕೆಯ ಕುರಿತು ಪ್ರಸ್ತಾಪಿಸಿದ್ದಾರೆ.[೭೭]

ಗಾಜಿನ ಮೇಲಿನ ಚಿತ್ರಕಲೆಯ ಕುರಿತಾದ ಅಲ್ಪಸ್ವಲ್ಪ ಬರಹಗಳನ್ನು ನೋಡ ಬಹುದಾದರೂ ಒಂದು ವ್ಯವಸ್ಥಿತ ಅಧ್ಯಯನವಾಗಿಲ್ಲವೆನ್ನಬಹುದು. ಆ ದೃಷ್ಟಿಕೋನವನ್ನು ಇಟ್ಟುಕೊಂಡು ಸಮಗ್ರವಾಗಿ ಒಂದು ವ್ಯವಸ್ಥಿತ ರೂಪದಲ್ಲಿ ಪ್ರಸ್ತುತ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

---

೭೧. ಪ್ರವೀಣರಾಜು ಸೊನ್ನದ ; ಲೇಖನ, ಶತಮಾನ ಕಂಡ ಗಾಜಿನ ಚಿತ್ರಕಲೆ, ಜನಪದ ಫೆಬ್ರುವರಿ. ೨೦೦೮

೭೨ ಬಸವರಾಜ ಗವಿಮಠ ; 'ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ' ಎಂ.ಫಿಲ್. ಪ್ರಬಂಧ ಅಪ್ರಕಟಿತ, ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೮

೭೩. ಮಹಾಕೂಟೇಶ್ವರಗೌಡ ಪಾಟೀಲ ; ಬೆಳಗಾಂವಿ ಜಿಲ್ಲೆಯ ಚಿತ್ರಕಲೆ, ಎಂ.ಫಿಲ್, ಸಂಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ ೨೦೦೮

೭೪. Shantiswarup : Glass Mughal Art, A study in handictrafts.

೭೫. The Encylopedia of 'VISUAL ART'valuam 4.

೭೬. ಎಂ. ಎಸ್. ನಂಜುಂಡರಾವ್ ; ಲೇಖನ : ಮೈಸೂರು ಸಾಂಪ್ರದಾಯಕ ಚಿತ್ರಕಲೆ, ಕಲಾಕೋಶ

೭೭. ಕೆ. ವಿ. ಕಾಳೆ ; 'ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ' ಕನ್ನಡ ವಿ.ವಿ.ಹಂಪಿ

## ಅಧ್ಯಯನದ ಸ್ವರೂಪ

ಪ್ರಸ್ತುತ ಕರ್ನಾಟಕಜ ಗಾಜಿನ ಮೇಲಿನ ಚಿತ್ರಕಲೆ ಎಂಬ ಅಧ್ಯಯನವನ್ನು ಮುಖ್ಯವಾಗಿ ಏಳು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿತಗೊಂಡ ವಿಷಯಗಳ ಸಂಕ್ಷಿಪ್ತ ಸ್ವರೂಪವನ್ನು ಕೆಳಗೆ ಕೊಡಲಾಗಿದೆ.

**ಅಧ್ಯಾಯ – ಒಂದು**

ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ ಕುರಿತು ವಿವರಗಳನ್ನು ನೀಡಲಾಗಿದೆ.

**ಅಧ್ಯಾಯ – ಎರಡು**

ಗಾಜಿನ ಅವಿಸ್ಕಾರ, ಅದರ ಪ್ರಾಚೀನತೆ, ಗಾಜಿನ ಮೇಲೆ ಚಿತ್ರಕಲೆ ರೂಪುಗೊಂಡ ಸಂದರ್ಭ, ಗಾಜಿನ ಚಿತ್ರಕಲೆ ಬೆಳೆದು ಬಂದ ಚಾರಿತ್ರಿಕ ನೆಲೆ, ಹಿನ್ನೆಲೆಗಳನ್ನು ಎರಡನೆಯ ಅಧ್ಯಾಯದಲ್ಲಿ ಗುರುತಿಸಲಾಗಿದೆ.

**ಅಧ್ಯಾಯ – ಮೂರು**

ಗಾಜಿನ ಚಿತ್ರಕಲೆಯ ರಚನೆಗೆ ಬೇಕಾಗುವ ಪರಿಕರಗಳು ಹಾಗೂ ಗಾಜಿನ ಮೇಲೆ ಚಿತ್ರ ರಚಿಸುವ ವಿಧಿವಿಧಾನಗಳನ್ನು ಮೂರನೆಯ ಅಧ್ಯಾಯದಲ್ಲಿ ಚರ್ಚೆ ಮಾಡಲಾಗಿದೆ.

**ಅಧ್ಯಾಯ – ನಾಲ್ಕು**

ಗಾಜಿನ ಮೇಲೆ ರಚನೆಗೊಂಡ ಚಿತ್ರಕಲೆಯ ವಸ್ತು ವಿಷಯಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ನಾಲ್ಕನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

**ಅಧ್ಯಾಯ – ಐದು**

ಗಾಜಿನ ಚಿತ್ರಕಲೆ ಶೈಲಿ, ಅದರ ಮೇಲಾದ ಪ್ರಭಾವ, ಪ್ರೇರಣೆ, ತಂತ್ರಗಾರಿಕೆಗಳನ್ನು ಐದನೆಯ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

**ಅಧ್ಯಾಯ – ಆರು**

ಕರ್ನಾಟಕದ ಗಾಜಿನ ಚಿತ್ರಗಳ ಪೋಷಕರು, ಸ್ಥಿತಿಗತಿ ಮತ್ತು ಸಂರಕ್ಷಣೆಯ ಕ್ರಮಗಳ ಬಗ್ಗೆ ಆರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ – ಏಳು**

ಮೇಲಿನ ಆರು ಅಧ್ಯಾಯಗಳಲ್ಲಿ ವಿಶ್ಲೇಷಿಸಲ್ಪಟ್ಟ ಒಟ್ಟು ಫಲಿತಗಳನ್ನು ಏಳನೆಯ ಅಧ್ಯಾಯವಾದ ಸಮಾರೋಪದಲ್ಲಿ ಸಮೀಕರಿಸಲಾಗಿದೆ.

## ಅಧ್ಯಯನದ ವ್ಯಾಪ್ತಿ

ಕರ್ನಾಟಕದ ಗಾಜಿನ ಚಿತ್ರಕಲೆಯ ಹರವು ಅತ್ಯಂತ ವಿಶಾಲವಾಗಿದೆ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಕರ್ನಾಟಕದ ಕೆಲವು ಜಿಲ್ಲೆಗಳಿಗೆ ಸೀಮಿತವಾಗಿರುವಂತೆ ಅಧ್ಯಯನ ಕ್ಷೇತ್ರವ್ಯಾಪ್ತಿಯನ್ನು ಗುರುತಿಸಿಕೊಳ್ಳಲಾಗಿದೆ.

ಕರ್ನಾಟಕದಲ್ಲಿ ಆಡಳಿತಾತ್ಮಕವಾಗಿ ವಿಂಗಡಿಸಲಾದ ನಾಲ್ಕು ವಿಭಾಗಗಳಾದ ಬೆಳಗಾಂವಿ, ಗುಲ್ಬರ್ಗ, ಮೈಸೂರು ಹಾಗೂ ಬೆಂಗಳೂರು ವಿಭಾಗಗಳಲ್ಲಿನ ಕೆಲವು ಜಿಲ್ಲೆಗಳನ್ನು ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

ಬೆಳಗಾಂವಿ ವಿಭಾಗದಲ್ಲಿ ಬೆಳಗಾಂವಿ, ಧಾರವಾಡ, ಗದಗ, ಹಾವೇರಿ, ಉತ್ತರ ಕನ್ನಡ, ಬಾಗಲಕೋಟೆ ಜಿಲ್ಲೆಗಳು, ಗುಲ್ಬರ್ಗ ವಿಭಾಗದಲ್ಲಿ ಗುಲ್ಬರ್ಗ, ಬೀದರ, ಬಳ್ಳಾರಿ ಜಿಲ್ಲೆಗಳು, ಮೈಸೂರು ವಿಭಾಗದಲ್ಲಿ ಮೈಸೂರು, ಮಂಡ್ಯ, ಮಂಗಳೂರು, ಉಡುಪಿ, ಕೊಡಗು ಜಿಲ್ಲೆಗಳು, ಬೆಂಗಳೂರು ವಿಭಾಗದಲ್ಲಿ ಬೆಂಗಳೂರು ನಗರ, ತುಮಕೂರು, ಚಿತ್ರದುರ್ಗ ಜಿಲ್ಲೆಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ವಿಶೇಷವಾಗಿ ಈ ಜಿಲ್ಲೆಗಳಲ್ಲಿ ಲಭ್ಯವಿರುವ ಗಾಜಿನ ಚಿತ್ರಗಳನ್ನು ಮಾತ್ರ ಅಧ್ಯಯನಕ್ಕೆ ಪರಿಗಣಿಸಲಾಗಿದೆ.

ಕರ್ನಾಟಕದ ಗಾಜಿನ ಚಿತ್ರಗಳಲ್ಲಿ ಬಿಡಿ ಚಿತ್ರಗಳು ಹಾಗೂ ವಾಸ್ತು ರಚನೆಯ ವಿವಿಧ ಭಾಗಗಳಲ್ಲಿ ಶಾಶ್ವತವಾಗಿ ಅಳವಡಿಸಿದ ಗಾಜಿನ ಚಿತ್ರಗಳೆಂದು ಎರಡು ರೀತಿಯಲ್ಲಿ ವಿಂಗಡಿಸಬಹುದು. ಇಲ್ಲಿ ಮೇಲೆ ಹೇಳಲಾದ ಜಿಲ್ಲೆಗಳ ವ್ಯಾಪ್ತಿಯಲ್ಲಿ ಕಟ್ಟಲ್ಪಟ್ಟ ಚರ್ಚು, ಮಸೀದಿ, ದೇವಾಲಯ, ಸಮಾಧಿ ಭವನ, ಅರಮನೆ, ಮಠಮಾನ್ಯಗಳು, ಸಾರ್ವಜನಿಕ ಕಟ್ಟಡಗಳು, ಮನೆಗಳು, ಅಲಂಕಾರಿಕ ಮಂಟಪಗಳು ಮುಂತಾದ ಹಲವು ರೀತಿಯ ಕಟ್ಟಡಗಳ ಗೋಡೆ, ಮೇಲ್ಚಾವಣಿ, ಕಿಟಕಿ, ಬಾಗಿಲು, ಕಂಬ ಹೀಗೆ ವಿವಿಧ ಭಾಗಗಳಲ್ಲಿ ಅಳವಡಿಸಿದ ಗಾಜಿನ ಚಿತ್ರಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿದೆ. ಅದರಂತೆ ಈ ಜಿಲ್ಲೆಗಳ ಮನೆ, ಮಠ, ಮಂದಿರ, ಚರ್ಚು, ಮಸೀದಿ, ವಸ್ತುಸಂಗ್ರಹಾಲಗಳಲ್ಲಿ ಸಂಗ್ರಹಗೊಂಡ ಬಿಡಿ ಚಿತ್ರಗಳನ್ನು ಸಹಿತ ಅಧ್ಯಯನದ ವ್ಯಾಪ್ತಿಯಲ್ಲಿ ಅಳವಡಿಸಿಕೊಳ್ಳಲಾಗಿದೆ.

## ಅಧ್ಯಯನದ ವಿಧಾನ

ಕರ್ನಾಟಕದ ಗಾಜಿನ ಮೇಲಿನ ಚಿತ್ರಕಲೆ ಎಂಬ ಈ ಮಹಾಪ್ರಬಂಧದ ರಚನೆಯಲ್ಲಿ ಎರಡು ರೀತಿಯ ಆಕರ ಸಾಮಗ್ರಿಗಳಿಂದ ವಿಷಯ ಸಂಗ್ರಹ ಮಾಡಿಕೊಂಡು ಬರವಣಿಗೆಗೆ ಅಳವಡಿಸುವ ವಿಧಾನವನ್ನು ಅನುಸರಿಸಲಾಗಿದ್ದು ಅವು ಈ ಕೆಳಗಿನಂತಿವೆ.

೦೧. ಮೂಲ ಆಕರ ಸಾಮಗ್ರಿ

೦೨. ಆನುಷಂಗಿಕ ಆಕರ ಸಾಮಗ್ರಿ

## ೦೧. ಮೂಲ ಆಕರ ಸಾಮಗ್ರಿ

ಮೂಲ ಆಕರ ಸಾಮಗ್ರಿಯಿಂದ ವಿಷಯ ಸಂಗ್ರಹಿಸುವಲ್ಲಿ ಪ್ರಮುಖವಾದುದು ಕ್ಷೇತ್ರಕಾರ್ಯ. ಪ್ರಸ್ತುತ ಅಧ್ಯಯನದಲ್ಲಿ ಗಾಜಿನ ಮೇಲಿನ ಬಿಡಿ ಚಿತ್ರಗಳು ಹಾಗೂ ಅಧ್ಯಯನ ವ್ಯಾಪ್ತಿಯಲ್ಲಿರುವ ವಿವಿಧ ವಾಸ್ತು ರಚನೆಗಳಲ್ಲಿ ಅಳವಡಿಸಿರುವ ಕಲಾತ್ಮಕ ಗಾಜಿನ ಚಿತ್ರಗಳನ್ನು ಮೂಲ ಆಕರ ಸಾಮಗ್ರಿಯಾಗಿ ಪರಿಗಣಿಸಿ ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಕೈಗೊಳ್ಳಲಾದ ಕ್ಷೇತ್ರಕಾರ್ಯ ಕೆಳಗಿನಂತೆ ವಿವಿಧ ಬಗೆಯಲ್ಲಿತ್ತು.

**ಅ. ಸಂದರ್ಶನ** **ಬ. ಧ್ವನಿಗ್ರಹಣ**

**ಕ. ಛಾಯಾ ಚಿತ್ರಣ** **ಡ. ಸಂಗ್ರಹಿಸಿದ ವಿಷಯಗಳನ್ನು ಪಟ್ಟಿ ಮಾಡಿಕೊಳ್ಳುವುದು.**

### ಅ. ಸಂದರ್ಶನ

ಅಧ್ಯಯನದ ವ್ಯಾಪ್ತಿಗೆ ಒಳಪಡುವ ಕ್ಷೇತ್ರಗಳಿಗೆ ಭೇಟಿಕೊಟ್ಟು ಅಲ್ಲಿ ಲಭ್ಯವಾದ ಗಾಜಿನ ಚಿತ್ರಗಳ ಕುರಿತು ಸಂದರ್ಶನ ಮಾಡಲಾಯಿತು. ಈ ಚಿತ್ರಗಳು ಬೇರೆ ಬೇರೆ ಮನೆತನಗಳು, ದೇವಾಲಯಗಳು, ಚರ್ಚುಗಳು, ಮಸಿದಿಗಳು, ಬಸದಿಗಳು, ಅರಮನೆಗಳು, ವಸ್ತು ಸಂಗ್ರಹಾಲಯಗಳಲ್ಲಿ ಲಭ್ಯವಾದವು. ಇವುಗಳಿಗೆ ಸಂಬಂಧಪಟ್ಟವರನ್ನು ಸಂದರ್ಶಿಸಿ ವಿಷಯವನ್ನು ಸಂಗ್ರಹಿಸಲಾಯಿತು. ಇದೇ ಸಂದರ್ಭದಲ್ಲಿ ಹಿರಿ ಕಿರಿಯ ಸಾಂಪ್ರದಾಯಿಕ ಕಲಾವಿದರ, ಕಲಾ ಇತಿಹಾಸಕಾರರನ್ನು ಸಂದರ್ಶನ ಮಾಡಲಾಯಿತು. ಪ್ರಸ್ತುತ ಸಮಕಾಲೀನ ಗಾಜಿನ ಮೇಲಿನ ಚಿತ್ರಕಲಾವಿದರ ಕಾರ್ಯಾಗಾರಕ್ಕೆ (ವರ್ಕಷಾಪ್) ಭೇಟಿಮಾಡಿ ಅವರ ಅಭಿಪ್ರಾಯಗಳನ್ನು ತಿಳಿದುಕೊಳ್ಳಲಾಯಿತು.

### ಬ. ಧ್ವನಿಮುದ್ರಣ

ಪ್ರಸ್ತುತ ಅಧ್ಯಯನದಲ್ಲಿ ಕೆಲವು ಪ್ರಮುಖ ಸಾಂಪ್ರದಾಯಿಕ ಹಾಗೂ ಸಮಕಾಲೀನ ಗಾಜಿನ ಚಿತ್ರಗಳ ಕಲಾವಿದರ ಜೊತೆಗೆ ಚರ್ಚೆ ಮಾಡಲಾಗಿದೆ. ಈ ಮಹತ್ವದ ಚರ್ಚೆಯನ್ನು ಧ್ವನಿಮುದ್ರಣ ಮಾಡಿಕೊಳ್ಳಲಾಯಿತು. ಇದಲ್ಲದೆ ಗಾಜಿನ ಮೇಲಿನ ಚಿತ್ರಗಳನ್ನು ಸಂಗ್ರಹಿಸಿರುವ ಪೋಷಕರ ಅಭಿಪ್ರಾಯಗಳನ್ನು ಸಹಿತ ಧ್ವನಿಮುದ್ರಿಸಿಕೊಂಡು ಬರವಣಿಗೆಗೆ ಅಳವಡಿಸಿಕೊಳ್ಳಲಾಗಿದೆ.

### ಕ. ಛಾಯಾ ಚಿತ್ರಣ

ಅಧ್ಯಯನಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದ ಸಂದರ್ಭಗಳಲ್ಲಿ ಲಭ್ಯವಾದ ಗಾಜಿನ ಮೇಲಿನ ಚಿತ್ರಗಳನ್ನು ಛಾಯಾಚಿತ್ರ ಮಾಡಿಕೊಳ್ಳಲಾಯಿತು. ವಿವಿಧ ಮನೆತನಗಳಲ್ಲಿ ತೂಗುಹಾಕಿರುವ ಚಿತ್ರಗಳು, ಕಾಯ್ದಿಟ್ಟಿರುವ ಚಿತ್ರಗಳು ವಸ್ತು ಸಂಗ್ರಹಾಲಯಗಳಲ್ಲಿ ಸಂಗ್ರಹಿಸಲಾದ ಗಾಜಿನ ಚಿತ್ರಗಳು ವಿವಿಧ ವಾಸ್ತುಗಳಲ್ಲಿ ಅಳವಡಿಸಲಾದ ಚಿತ್ರಗಳನ್ನು ಈ ಸಂದರ್ಭದಲ್ಲಿ ಛಾಯಾ ಚಿತ್ರ ಮಾಡಲಾಯಿತು.

### ಡ. ಸಂಗ್ರಹಿಸಿದ ವಿಷಯಗಳನ್ನು ಪಟ್ಟಿ ಮಾಡಿಕೊಳ್ಳುವುದು

ಈ ಅಧ್ಯಯನದ ಕ್ಷೇತ್ರಕಾರ್ಯದಲ್ಲಿ ಕೈಕೊಂಡ ಸಂದರ್ಶನ, ಧ್ವನಿ ಮುದ್ರಣ ಹಾಗೂ ಛಾಯಾ ಚಿತ್ರಗಳಿಂದ ದೊರೆತ ಮಾಹಿತಿಗಳನ್ನು ವಿಷಯಕ್ಕನುಗುಣವಾಗಿ ವಿಂಗಡಿಸಿಕೊಂಡು ಪಟ್ಟಿಕೆಗಳಲ್ಲಿ ನಮೂದಿಸಿಕೊಂಡು ಪ್ರಬಂಧ ರಚನೆ ಮಾಡುವ ವಿಧಾನ ಅನುಸರಿಸಲಾಗಿದೆ.

## ೨. ಅನುಷಂಗಿಕ ಆಕರ ಸಾಮಗ್ರಿ

ಪ್ರಸ್ತುತ ಅಧ್ಯಯನದಲ್ಲಿ ಗಾಜಿನ ಚಿತ್ರಕಲೆಯ ಬಗ್ಗೆ ಇದುವರೆಗೆ ಬಂದ ವಿವಿಧ ರೀತಿಯ ಬರಹಗಳು ಪ್ರಕಟಿತ, ಅಪ್ರಕಟಿತ ಸಾಹಿತ್ಯ ಕೃತಿಗಳು, ಸಂಶೋಧನಾ ಪ್ರಬಂಧಗಳು, ವಿಶ್ವಕೋಶಗಳು, ಗೆಜೆಟೀಯರ್‌ಗಳು, ಪುರಾಣ ಪುಣ್ಯಕಥೆಗಳನ್ನು ಒಳಗೊಂಡ ಗ್ರಂಥಗಳು ನಿಘಂಟುಗಳು, ಲೇಖನಗಳು, ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಗಳನ್ನು ಅನುಷಂಗಿಕ ಆಕರ ಸಾಮಗ್ರಿಯಾಗಿ ಪರಿಗಣಿಸಲಾಗಿದೆ. ಅಲ್ಲದೇ ಬೇರೆ ಬೇರೆ ಸ್ಥಳಗಳಲ್ಲಿನ ಗ್ರಂಥಾಲಯಗಳು, ವಸ್ತು ಸಂಗ್ರಹಾಲಯಗಳು, ಕಲಾ ಶಾಲೆಗಳು ಮತ್ತು ಕಲಾಕಮ್ಮಟಗಳಿಂದ ಸಹಿತ ಅನುಷಂಗಿಕವಾದ ಪೂರಕ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಮೂಲ ಆಕರ ಸಾಮಗ್ರಿಯಿಂದ ವಿಷಯ ಸಂಗ್ರಹಿಸುವಾಗ ಪಟ್ಟಿಕೆಗಳನ್ನು ಮಾಡಿಕೊಂಡು ವಿಂಗಡಿಸಿಕೊಂಡಂತೆ ಇಲ್ಲಿಯೂ ವಿಷಯಾನುಸಾರ ಪ್ರತ್ಯೇಕ ಪಟ್ಟಿಕೆಗಳಲ್ಲಿ ವಿಷಯ ನಮೂದಿಸಿಕೊಂಡು ನಂತರ ವಿಶ್ಲೇಷಣೆ ಮಾಡಿ ಬರವಣಿಗೆಗೆ ಅಲವಡಿಸಿಕೊಳ್ಳುವ ವಿಧಾನ ಅನುಸರಿಸಲಾಗಿದೆ.

■■■

**ಗಾ**ಜಿನ ಚಿತ್ರಕಲೆಯ ಹುಟ್ಟು ಬೆಳವಣಿಗೆಗಿಂತ ಗಾಜಿನ ಆವಿಷ್ಕಾರದ ವಿಧಾನಗಳು ಪುರಾತನವಾಗಿದ್ದು ಕುತೂಹಲಕರವಾಗಿದೆ. ಗಾಜು ತಯಾರಿಸುವ ರೀತಿಯನ್ನು ಕಂಡು ಕೊಂಡುದುದೇ ಒಂದು ಆಕಸ್ಮಿಕ ಘಟನೆಯಿಂದ. ಫೀನೀಸಿಯುನ್ನರು ಈಜಿಪ್ತದಿಂದ ವಾಷಿಂಗಸೋಡ ಕೊಂಡುಕೊಳ್ಳುತ್ತಿದ್ದರು. ಒಂದು ಸಲ ಬೇಲೂಸ್ ನದಿಯ ತೀರದಲ್ಲಿ ವಾಷಿಂಗ್ ಸೋಡವನ್ನು ಸಾಗಿಸುತ್ತಿರುವ ಹಡಗೊಂದು ಬಂದಿತು. ನಾವಿಕರು ನದಿಯ ದಂಡೆಯ ಮರಳಿನ ಮೇಲೆ ಅಡುಗೆ ಮಾಡಲು ತೊಡಗಿದರು. ಒಲೆ ಹೂಡಲು ಕಲ್ಲು ದೊರೆಯದಿದ್ದಾಗ ವಾಷಿಂಗ್ ಸೋಡದ ಹೆಂಟೆಗಳನ್ನೇ ಕಲ್ಲುಗಳಂತೆ ಬಳಸಿದರು. ಒಲೆ ಹೊತ್ತಿಸಿದ ಸ್ವಲ್ಪ ಸಮಯದಲ್ಲಿಯೇ ಪಾರದರ್ಶಕ ದ್ರವದ ಪ್ರವಾಹ ಹರಿಯುವುದು ಅವರಿಗೆ ಕಾಣಿಸಿತು. ಸೋಡ ಮತ್ತು ಮರಳಿಗೆ ಬೆಂಕಿಯ ಶಾಖ ಬಡಿದಾಗ ಈ ರೀತಿಯ ದ್ರವ ಹರಿಯುವುದನ್ನು ತಿಳಿದುಕೊಂಡರು. ಈ ಹರಿಯುವ ಪ್ರವಾಹವೇ ದ್ರವರೂಪದ ಗಾಜು ಎಂದು ಗುರುತಿಸಲ್ಪಟ್ಟಿತು. ಹೀಗೆ ಆಕಸ್ಮಿಕವಾಗಿ ಕಂಡುಕೊಂಡ ಗಾಜಿನ ತಯಾರಿಕೆಯ ಈ ವಿಧಾನವನ್ನು ಫೀನೀಸಿಯನ್ನರು ಅಭಿವೃದ್ಧಿ ಪಡಿಸಿ ಗಾಜಿನ ಸಾಮಾನುಗಳನ್ನು ತಯಾರಿಸಲು ಪ್ರಾರಂಭಿಸಿದರು.[೧]

ಗಾಜಿನ ಸಂಶೋಧನೆಯ ಕುರಿತು ಇನ್ನೊಂದು ಕಥೆಯಿದೆ.[೨] ಇಸ್ರೇಲಿನ ಹುಡುಗರು ಆಕಸ್ಮಿಕವಾಗಿ ಒಂದು ಕಾಡಿಗೆ ಬೆಂಕಿ ಹಚ್ಚಿದರು. ಬೆಂಕಿಯ ಕಾಪಿಗೆ ಕಾಡಿನಲ್ಲಿದ್ದ ಮರಳು ಮತ್ತು ಪೆಟ್ಲುಪ್ಪು ಕರಗಿ ಬೆಟ್ಟಗಳಿಂದ ದ್ರವರೂಪದ ಪ್ರವಾಹ ಹರಿಯಿತು. ಇದುವೇ ಗಾಜಿನ ಪ್ರಥಮಾಪಿಷ್ಕರ

---

೧. ಹೆಚ್.ಜಿ.ಎಂ ; ಕನ್ನಡ ವಿಶ್ವಕೋಶ, (ಸಂಪುಟ ಆರು) ಪುಟ ೧೯೧

೨. ಅದೇ–

ಎಂದು ಈ ಕಥೆಯಲ್ಲಿ ಹೇಳಲಾಗಿದೆ. ಆದರೆ ಇವರಿಗಿಂತ ಮೊದಲೇ ಪುರಾತನ ಈಜಿಪ್ತಿಯನ್ನರು ಗಾಜಿನ ಕಲಾತ್ಮಕ ಆಭರಣ ಮತ್ತು ವಸ್ತುಗಳನ್ನು ಬಳಸುತ್ತಿದ್ದ ಬಗ್ಗೆ ದಾಖಲೆಗಳಿವೆ.

ಈಜಿಪ್ತಿಯನ್ನರು ಲೋಹಕಡ್ಡಿಗೆ ಸಿಲಿಕದ ಅಂಟು, ಹಿಟ್ಟನ್ನು ಬೆರೆಸಿ ಬೇರೆ ಬೇರೆ ಆಕಾರ ಮಾಡಿಕೊಂಡು ಗಾಜಿನ ದ್ರವದಲ್ಲಿ ಅದ್ದಿ ವೈವಿಧ್ಯಮಯ ಗಾಜಿನ ವಸ್ತುಗಳನ್ನು ತಯಾರಿಸುತ್ತಿದ್ದರು. ಎರಡನೆಯ ಅಮೆನ್ ಹೊಟೆಪ ಈಜಿಪ್ತ ದೇಶವನ್ನು ಆಳುತ್ತಿದ್ದ ಸಂದರ್ಭದಲ್ಲಿ ಗಾಜಿನ ಸುಂದರ ಪಾತ್ರೆಗಳನ್ನು ಹೆಚ್ಚಾಗಿ ತಯಾರಿಸಲಾಗುತ್ತಿತ್ತೆಂದು ತಿಳಿದು ಬರುತ್ತದೆ.[೩] ಇಜಿಪ್ತಿಯನ್ನರು ಕ್ರಿಪೂ. ೩೦೦೦ ಹೊತ್ತಿಗೆ ಗಾಜಿನ ಕಲಾತ್ಮಕ ವಸ್ತುಗಳನ್ನು ತಯಾರಿಸುವಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿದರು. ಚಿಮುಟದಿಂದ ಗಾಜುಗಳ ಮೇಲೆ ಮುದ್ರೆ ಒತ್ತುವುದು, ಕರಗಿದ ಗಾಜನ್ನು ಸಾಚೆಯಲ್ಲಿ (Mold) ಹಾಕಿ ನಾಣ್ಯದಂತಹ ವಸ್ತುಗಳನ್ನು ತಯಾರಿಸುವುದು. ಹೊಳಪುಳ್ಳ ಹಾಗೂ ಮಿರುಗುವ ಬಣ್ಣಗಳನ್ನು ಗಾಜುಗಳಿಗೆ ಲೇಪಿಸುವುದು. ಬಂಗಾರ ಮತ್ತು ಬೆಳ್ಳಿಯ ಬಣ್ಣವನ್ನು ಗಾಜಿಗೆ ಹಚ್ಚಿ ಅನಂತರ ಅಮ್ಲಜನಕವಿಲ್ಲದ ಆವರಣದಲ್ಲಿ ಕಾಯಿಸಿ ಆ ಬಣ್ಣ ತಿಳಿ ಹಳದಿ ಮತ್ತು ಬೂದು ಬಣ್ಣಕ್ಕೆ ತಿರುಗಿಸುವ ಮೂಲಕ ಗಾಜಿನ ಬಣ್ಣದ ಬೊಗುಣಿ ಹಾಗೂ ಸೀಸೆಗಳನ್ನು ರಚಿಸುತ್ತಿದ್ದರು.[೪]

ಕ್ರಿ.ಪೂ. ೮ನೆಯ ಶತಮಾನದಿಂದ ೬ನೆಯ ಶತಮಾನದಲ್ಲಿ ಬಳಕೆಯಲ್ಲಿದ್ದ ಗಾಜಿನ ವಸ್ತುಗಳು ಮೆಸೊಪೋಟೆಮಿಯಾದಲ್ಲಿ ದೊರೆತಿವೆ. ಕ್ರಿ.ಪೂ. ೬ನೆಯ ಶತಮಾನದಲ್ಲಿ ಸಿರಿಯಾ ದೇಶದಲ್ಲಿ ಗಾಜಿನ ಕುಶಲಕರ್ಮಿಗಳು ಗಾಜಿನ ಕೆಲಸವನ್ನು ಅಭಿವೃದ್ಧಿ ಪಡಿಸಿದರು. ಇವರು ತಯಾರಿಸಿದ ವೈವಿಧ್ಯಮಯವಾದ ಗಾಜಿನ ಲೋಟಗಳ ಮೇಲೆ ಸುಂದರವಾದ ಚಿತ್ತಾರಗಳನ್ನು ಬರೆಯುತ್ತಿದ್ದರು. ಈ ರೀತಿ ತಯಾರಿಸಿದ ಕಲಾತ್ಮಕ ಗಾಜಿನ ವಸ್ತುಗಳು ಆ ಸಂದರ್ಭದಲ್ಲಿ ತುಂಬಾ ಪ್ರಸಿದ್ಧಿ ಪಡೆದುಕೊಂಡಿದ್ದವು.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕ್ರಿ.ಶ. ಆರಂಭದ ಹೊತ್ತಿಗೆ ಗಾಜಿನ ಕಲಾತ್ಮಕ ಬಳಕೆ ಹಾಗೂ ವಿವಿಧ ವಸ್ತುಗಳ ತಯಾರಿಕೆ ನಡೆಯುತ್ತಿದ್ದರೂ ಮಧ್ಯಕಾಲದಲ್ಲಿ ಬೆಳೆದ ವಾಸ್ತುಕಲೆಗಳಲ್ಲಿ ಗಾಜಿನ ಕಲೆ ವಿಫುಲವಾಗಿ ಬೆಳೆದದ್ದನ್ನು ಕಾಣುತ್ತೇವೆ. ಈ ಕಾಲದಲ್ಲಿ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಹುಟ್ಟಿಕೊಂಡ ರೋಮನೆಸ್ಕ್, ಗಾತಿಕ್, ಬಾರೊಕ್, ರೊಕೋಕೊ ಕಲೆ ಹಾಗೂ ನಂತರದ ಪುನರುಜ್ಜೀವನ ಕಾಲದ ಕಲೆಗಳಲ್ಲಿ ಗಾಜಿನ ಕಲಾತ್ಮಕ ಬಳಕೆ ಹಾಗೂ ಗಾಜಿನ ಚಿತ್ರಕಲೆಯನ್ನು ವೈವಿಧ್ಯಮಯವಾಗಿ ಬಳಸಿಕೊಳ್ಳಲಾಗಿದೆ.

ರೋಮನೆಸ್ಕ್ ಕಲೆಯು ೧೧ನೆಯ ಶತಮಾನದಿಂದ ೧೩ನೆಯ ಶತಮಾನದ ತನಕ ಸುಸ್ಥಿತಿಯಲ್ಲಿತ್ತು. ಈ ಕಾಲಾವಧಿಯಲ್ಲಿ ನಿರ್ಮಾಣಗೊಂಡ ಕೆಥೀಡ್ರಲ್‌ಗಳಲ್ಲಿ ಭಿತ್ತಿ ಚಿತ್ರಗಳು, ಉಬ್ಬು ಶಿಲ್ಪಗಳ ಜೊತೆಗೆ ಗಾಜಿನ ಚಿತ್ರಗಳು ಹೇರಳವಾಗಿ ರಚನೆಗೊಂಡದ್ದನ್ನು ನೋಡುತ್ತೇವೆ. ೧೧ನೆಯ ಶತಮಾನದಲ್ಲಿ ಅಗಸ್ತಬರ್ಗ ಕೆಥೀಡ್ರಲ್, chalons-sur-marne ಕೆಥಿಡ್ರಲ್ ಕ್ರಿ.ಶ ೧೧೪೫ ರಲ್ಲಿ ನಿರ್ಮಾಣಗೊಂಡ 'Lemans' ಕೆಥೀಡ್ರಲ್, ೧೦೯೫–೧೧೩೦ ರ ಕಾಲಾವಧಿಯಲ್ಲಿ

---

೩. ಹೆಚ್.ಜಿ.ಎಂ ; ಕನ್ನಡ ವಿಶ್ವಕೋಶ, (ಸಂಪುಟ ಆರು) ಪುಟ ೧೯೧
೪. ಅದೇ–

ನಿರ್ಮಿಸಲಾದ 'Durham' Cathedral' ೧೦೬೩ ರ ಕೆಥಿಡ್ರಲ್ ೧೦೯೩-೧೨೩೦ ರ ಕಾಲದಲ್ಲಿ ನಿರ್ಮಿಸಲಾದ ಜರ್ಮನಿಯ Maria Laach. ಎಂಬ ರೋಮನೆಸ್ಕ್ ಶೈಲಿಯ ಚರ್ಚುಗಳಲ್ಲಿ ಗಾಜಿನ ಚಿತ್ರಗಳಿವೆ. ಧರ್ಮಗುರುಗಳ ಕ್ರಿಸ್ತಕಥೆಗಳು, ಅಲಂಕಾರಿಕ ನಕ್ಷೆಗಳು ಹಾಗೂ ಕಟ್ಟಡಗಳಿಗೆ ಧನಸಹಾಯ ನೀಡಿದವರ ಚಿತ್ರಗಳನ್ನು ಗಾಜಿನ ಮೇಲೆ ಬರೆಯಲಾಗಿದೆ.

ಗಾತಿಕ್ ಕಲೆ ಕ್ರಿ. ಶ. ೧೨ನೆಯ ಶತಮಾನದಿಂದ ೧೫ ನೆಯ ಶತಮಾನದ ವರೆಗೆ ಯುರೋಪಿನ ವಿವಿಧ ಭಾಗಗಳಲ್ಲಿ ಪ್ರಸಿದ್ಧವಾಗಿದ್ದ ಕಲಾ ಸಂಪ್ರದಾಯ. ಗಾತಿಕ್ ಕಲೆಯಲ್ಲಿ ಗಾಜಿನ ಚಿತ್ರಕಲೆಯ ಬಳಕೆ ಪ್ರಮುಖವಾದುದು. ಈ ಶೈಲಿಯ ಕಟ್ಟಡಗಳ ಕಿಟಕಿ, ಬಾಗಿಲು, ಮೇಲ್ಛಾವಣಿಗಳಿಗೆ ವರ್ಣಮಯ ಗಾಜನ್ನು ಅಳವಡಿಸಿ ಅದರ ಮೇಲೆ ಚಿತ್ರಗಳನ್ನು ರಚಿಸಿರುವುದು ಕಂಡು ಬರುತ್ತದೆ. ಇವುಗಳಿಂದಾಗಿ ಕಟ್ಟಡಗಳ ಒಳಾವರಣ ವರ್ಣಮಯ ಗಾಜಿನ ಬೆಳಕಿನಿಂದ ಕಂಗೊಳಿಸ ತೊಡಗಿದವು. ಇದು ಮಾಯಾ ಜಾಲವನ್ನೇ ನಿರ್ಮಾಣ ಮಾಡಿತೆನ್ನಬಹುದು. ಕ್ರಿ.ಶ. ೧೧೨೨ ರಲ್ಲಿ ನಿರ್ಮಿಸಿದ 'ಸೇಂಟ್ ಡೆನಿಸ್' ಚರ್ಚ ಕ್ರಿ.ಶ. ೧೧೪೫ ರಲ್ಲಿ ನಿರ್ಮಿಸಲಾದ ನೊಯೇನ್ ಕೆಥೀಡ್ರಲ್ ಕ್ರಿ.ಶ. ೧೧೬೦-೧೨೦೫ ರಲ್ಲಿನ ನೋಟರ್ ಡೇಮ್ ಕೆಥೀಡ್ರಲ್, ಕ್ರಿ.ಶ. ೧೧೪೫-೫೦ ನಿರ್ಮಿಸಲಾದ 'ಷಾರ್ಟ್ರ' ಕೆಥೀಡ್ರಲ್, ಕ್ರಿ.ಶ. ೧೨೧೦-೧೨೩೦ ರ ಕಾಲದಲ್ಲಿ ನಿರ್ಮಾಣಗೊಂಡ ರೀಮ್ಸ್ ಮತ್ತು ಆ್ಯಮನ್ಸ್ ಕೆಥೀಡ್ರಲ್ ಕ್ರಿ.ಶ. ೧೨೪೮ ರಲ್ಲಿ ಕಟ್ಟಲಾದ 'ಸೇಂಟ್ ಚಾಪೆಲ್ ಎಂಬ ಗಾತಿಕ್ ಶೈಲಿಯ ಚರ್ಚುಗಳಲಿ ಗಾಜಿನ ಚಿತ್ರಕಲೆಯ ವೈಭವ ಕಾಣಬಹುದು.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಗಾತಿಕ ಕಲೆಯ ನಂತರ ಕಾಣಿಸಿಕೊಂಡ ಕಲೆಯೇ ಬಾರೋಕ ಕಲೆಯಾಗಿದೆ. ಈ ಕಲಾ ಪ್ರಕಾರವೂ ಯುರೋಪ್ ರಾಷ್ಟ್ರಗಳಲ್ಲಿ ಪ್ರಚಾರಪಡೆದುಕೊಂಡು ಪ್ರಪಂಚದ ಇತರ ರಾಷ್ಟ್ರಗಳಲ್ಲಿ ವ್ಯಾಪಕವಾಗಿ ಹರಡಿಕೊಂಡಿತು. ಇಲ್ಲಿ ಗಾಜಿನ ಚಿತ್ರಕಲೆ ಗಣನೀಯವಾಗಿ ಬೆಳವಣಿಗೆಯಾಗಿದ್ದರೂ ಗಾತಿಕ ಕಲೆಯ ಗಾಜಿನ ಚಿತ್ರಕಲೆಯಷ್ಟು ಪ್ರಚಾರ ಸಿಗಲಿಲ್ಲವೆಂದೇ ಹೇಳಬಹುದು. ಯಾಕೆಂದರೆ ಈ ಕಲೆಯಲ್ಲಿ ಮೂರ್ತಿಶಿಲ್ಪ, ವಾಸ್ತುಶಿಲ್ಪ ಹಾಗೂ ಭಿತ್ತಿಚಿತ್ರಗಳ ಅಗಾಧತೆ, ರಮ್ಯತೆ ಹಾಗೂ ಭಾವನಾತ್ಮಕತೆಗಳ ಮುಂದೆ ಇಲ್ಲಿನ ಗಾಜಿನ ಚಿತ್ರಗಳು ಸಪ್ಪೆಯಾಗಿ ಗೋಚರಿಸಿದವು.

ಯುರೋಪಿನ ಇಟಲಿ, ಅಸ್ಟ್ರಿಯಾ, ಜರ್ಮನಿ ಮುಂತಾದ ರಾಷ್ಟ್ರಗಳಲ್ಲಿ ಹಲವಾರು ಬಾರೋಕ್ ಶೈಲಿಯ ಕಟ್ಟಡಗಳಿದ್ದು ಅಲ್ಲಿ ವಿವಿಧ ರೀತಿಯ ಗಾಜಿನ ಚಿತ್ರಕಲೆ ಕಂಡುಬರುತ್ತದೆ. ಬಾರೋಕ ಕಲೆಯ ನಂತರದ ಕಲೆಯೇ ರೊಕೋಕೊ ಕಲೆ. ಈ ಕಲೆಯು ೧೯ನೆಯ ಶತಮಾನದ ಸುಮಾರಿಗೆ ಇಟಲಿ, ಫ್ರಾನ್ಸ್, ಜರ್ಮನ್, ಸ್ಪೇನ್, ಅಮೇರಿಕಾ, ಬ್ರಾಝಿಲ್, ಇಂಗ್ಲೆಂಡ್ ಮುಂತಾದ ರಾಷ್ಟ್ರಗಳಲ್ಲಿ ಬೆಳವಣಿಗೆ ಕಂಡಿತು. ಈ ಕಾಲದ ಹೊತ್ತಿಗೆ ಕಲಾವಿದರು ಕಟ್ಟಲ್ಪಟ್ಟ ಚರ್ಚುಗಳಲ್ಲಿ ವೈವಿಧ್ಯಮಯವಾದ ಗಾಜಿನ ಚಿತ್ರಕಲೆ ಬಳಕೆ ಮಾಡಿದ್ದು ಕಂಡುಬರುತ್ತದೆ. ಈ ಸಂದರ್ಭದ ಗಾಜಿನ ಚಿತ್ರಗಳ ರಚನೆಯಲ್ಲಿ ನೈಜತೆ ಮರೆಮಾಚಿ ಸಾಂಕೇತಿಕ ಆಕಾರಗಳಿಂದ ವಿಷಯ ನಿರೂಪಿಸುವ ಆಧುನಿಕ ಪದ್ಧತಿ ಆರಂಭಗೊಂಡಿತು. ಅಲ್ಲದೆ ವಾಸ್ತು ವಿನ್ಯಾಸದ ಜೊತೆಗೆ ಬಿಡಿಯಾದ ಪ್ರತ್ಯೇಕ ಗಾಜಿನ ಫಲಕಗಳ ಮೇಲೆ ವರ್ಣಚಿತ್ರ ರಚಿಸುವ ಆಶಯ ಹೆಚ್ಚಾಗಿ ಕಾಣಿಸಿಕೊಳ್ಳ ತೊಡಗಿತು.

ಭಾರತದಲ್ಲಿ ಸಹಿತ ಗಾಜಿನ ಪ್ರಾಚೀನತೆಯ ಬಗ್ಗೆ ಅನೇಕ ಆಧಾರಗಳು ದೊರಕುತ್ತವೆ. ರಾಮಾಯಣ, ಮಹಾಭಾರತ ಮಹಾಕಾವ್ಯಗಳಲ್ಲಿ ಗಾಜಿನ ಕಲಾತ್ಮಕ ವಸ್ತುಗಳು, ಗಾಜಿನ ಕನ್ನಡಿ, ಗಾಜಿನ ಮೇಲೆ ಚಿತ್ರಿಸಿರುವ ಕಲಾಕೃತಿಗಳ ಬಗ್ಗೆ ಹಲವಾರು ಉಲ್ಲೇಖಗಳಿವೆ. ರಾಮಾಯಣದಲ್ಲಿ ದಶರಥನ ಅರಮನೆಯಲ್ಲಿ ವರ್ಣಿಸುವಾಗ ಅಲ್ಲಿನ ಸುಂದರವಾದ ಗಾಜಿನ ಕನ್ನಡಿಗಳು, ಗಾಜಿನ ಮೇಲೆ ಚಿತ್ರಿಸಿದ ವಿವಿಧ ಬಣ್ಣದ ನಕ್ಷೆಗಳು, ಗಾಜಿನ ಜಾಲರಿ, ಮಣಿಗಳು, ಅಲಂಕಾರಿಕ ತೂಗುದೀಪಗಳ ಬಗ್ಗೆ ವಿವರವಿದೆ. ಅಲ್ಲದೆ ರಾಮಾಯಣದ ಸುಂದರಕಾಂಡದಲ್ಲಿ ರಾವಣನ ರಾಜಧಾನಿ ಲಂಕೆಯಲ್ಲಿನ ಅರಮನೆಯಗಳ ಸೌಂದರ್ಯ ಕುರಿತು ಹೇಳುವಾಗ ಗಾಜಿನ ಕನ್ನಡಿ, ಅಲಂಕಾರಿಕ ವಸ್ತುಗಳು, ಆಭರಣಗಳು ಮತ್ತು ಅದರ ಮೇಲಿನ ಚಿತ್ರಗಳ ಬಗ್ಗೆ ಹೇಳಲಾಗಿದೆ. ರಾವಣ, ವಿಭೀಷಣ, ಇಂದ್ರಜಿತ್, ಕುಂಭಕರ್ಣ, ಅಕ್ಷಯಕುಮಾರ ಮುಂತಾದವರ ಅರಮನೆಗಳನ್ನು ವರ್ಣಿಸುವಾಗ ಭಿನ್ನ ಭಿನ್ನ ರೀತಿಯ ಗಾಜಿನ ಕಲಾಕೃತಿಗಳ ವರ್ಣನೆಗಳಿವೆ.

ಮಹಾಭಾರತದಲ್ಲಿ ಗಾಜಿನ ಕಲಾತ್ಮಕ ವಿನ್ಯಾಸಗಳ ವೈಭವವೇ ಕಂಡು ಬರುತ್ತದೆ. ಪಾಂಡವರು ಇಂದ್ರಪ್ರಸ್ಥದಲ್ಲಿ ದೇವಶಿಲ್ಪಿ ಮಯನಿಂದ ನಿರ್ಮಿಸಿಕೊಂಡಿದ್ದ ಅರಮನೆಯಲ್ಲಿ ವಿವಿಧ ಬಗೆಯ ಸುಂದರವಾದ ಗಾಜಿನ ಕಲಾಕೃತಿಗಳಿದ್ದ ಬಗ್ಗೆ ವಿವರಗಳಿವೆ. ಈ ಅರಮನೆಯ ಒಂದೊಂದು ಕೊಠಡಿ ಒಂದೊಂದು ರೀತಿಯ ಕಲಾತ್ಮಕ ಕನ್ನಡಿ ಹಾಗೂ ಗಾಜಿನ ಕಲಾಕೃತಿಗಳಿಂದ ಅಲಂಕೃತ ಗೊಂಡ ಬಗ್ಗೆ ವಿವರಿಸಲಾಗಿದೆ. ದುರ್ಯೋಧನ ನೀರಿದೆ ಎಂದು ಭ್ರಮಿಸಿ ದೂರಸರಿದದ್ದು, ರಂಗವಲ್ಲಿಯ ನೆಲವೆಂದು ನೀರಿನ ಕೊಳದಲ್ಲಿ ಬಿದ್ದು ದ್ರೌಪದಿಯಿಂದ ಅಪಹಾಸ್ಯಕ್ಕೆ ಒಳಗಾಗಿದ್ದು ಅಲ್ಲಿನ ಗಾಜಿನ ಕಲಾತ್ಮಕ ವಸ್ತುಗಳು ಹಾಗೂ ಪ್ರತಿಫಲಿತ ಕನ್ನಡಿಗಳ ಚಮತ್ಕಾರದಿಂದಾಗಿ ಎಂಬುದು ಗಮನಾರ್ಹ ಅಂಶವಾಗಿದೆ. ಅಲ್ಲದೆ ಶತಪಥ ಬ್ರಾಹ್ಮಣದಲ್ಲಿ ಗಾಜಿನ ವಿವಿಧ ಉಪಯೋಗಗಳ ಬಗ್ಗೆ ಉಲ್ಲೇಖಗಳಿವೆ.

ಐತಿಹಾಸಿಕವಾಗಿ ಭಾರತದಲ್ಲಿ ಗಾಜಿನ ಕಲಾಕೃತಿಗಳು ಅಧಿಕೃತವಾಗಿ ಲಭ್ಯವಾಗಿದ್ದು ತಕ್ಷಶಿಲೆ ಎಂಬ ಪ್ರದೇಶದಲ್ಲಿ ಇಲ್ಲಿನ ದಿಬ್ಬಗಳ ಉತ್ಖನನದಲ್ಲಿ ಗಾಜಿನ ಕಲಾತ್ಮಕ ವಸ್ತುಗಳು ದೊರಕಿದ್ದು ಇವು ಕ್ರಿ.ಪೂ. ೫ನೇ ಶತಮಾನಕ್ಕೆ ಸಂಬಂಧಪಟ್ಟಿವೆ. ಭಾರತದಲ್ಲಿ ಕ್ರಿ.ಪೂ. ಶತಮಾನಗಳಲ್ಲಿ ಆಳ್ವಿಕೆ ಮಾಡಿದ ಮೌರ್ಯರು ನಂತರದ ಶಾತವಾಹನರು, ಗುಪ್ತರು, ಕುಶಾನರು ಮುಂತಾದ ಅರಸು ಮನೆತನಗಳ ಕಾಲದಲ್ಲಿ ಗಾಜಿನ ಚಿತ್ರಕಲೆಯ ಬಗ್ಗೆ ಪ್ರತ್ಯೇಕ ಉಲ್ಲೇಖಗಳು ದೊರಕದೆ ಹೋದರೂ ಅವರ ಜನಜೀವನದ ಭಾಗವಾಗಿ ಗಾಜಿನ ಕಲಾತ್ಮಕ ವಸ್ತುಗಳು ಬಳಸಲ್ಪಡುತ್ತಿದ್ದ ಬಗ್ಗೆ ಪರೋಕ್ಷವಾಗಿ ತಿಳಿದು ಬರುತ್ತದೆ. ಈ ಕಾಲದ ಶಿಲ್ಪ ಚಿತ್ರಗಳಲ್ಲಿ ರಚನೆಗೊಂಡಿರುವ ಆಭರಣ ಹಾಗೂ ವಸ್ತುಗಳಲ್ಲಿ ಕೆಲವು ಗಾಜಿನಿಂದ ರಚನೆಯಾಗಿರುವುದನ್ನು ಊಹಿಸಬಹುದು.

ಭಾರತದಲ್ಲಿ ಮೊಗಲರ ಕಾಲಕ್ಕೆ ಗಾಜಿನ ಕಲಾತ್ಮಕ ವಸ್ತುಗಳ ಬಳಕೆ ಅಧಿಕವಾಯಿತಲ್ಲದೆ ಗಾಜಿನ ಚಿತ್ರಕಲೆಯೂ ಹೆಚ್ಚು ಅಭಿವೃದ್ಧಿ ಹೊಂದಿತು. ಈ ಕಾಲದಲ್ಲಿ ಗಾಜಿನ ಮೇಲೆ ನಕ್ಷಾವಿನ್ಯಾಸಗಳು ಹಾಗೂ ಕುರಾನಿನ ವಾಕ್ಯಗಳನ್ನು ಬರೆದು ಅಲಂಕರಿಸಲಾಗುತ್ತಿತ್ತು. ಆ ಮೇಲಿನ ದಿನಗಳಲ್ಲಿ ರಜಪೂತ ಅರಸರು ಗಾಜಿನ ಕಲಾತ್ಮಕತೆಯನ್ನು ವೈವಿಧ್ಯಮಯವಾಗಿ

ಬಳಸಿಕೊಂಡರಲ್ಲದೆ ಗಾಜಿನ ಮೇಲೆ ಚಿತ್ರಗಳನ್ನು ರಚಿಸಿರುವುದು ಕಂಡುಬರುತ್ತದೆ. ರಾಜಸ್ಥಾನ ಮತ್ತು ಗುಜರಾತ್ ಪ್ರದೇಶಗಳಲ್ಲಿ ಕಂಡುಬರುವ ರಜಪೂತರ ಅರಮನೆ ಮತ್ತು ವಾಡೆಗಳಲ್ಲಿ ಇಂದಿಗೂ ವೈಭವದ ಗಾಜಿನ ಕಲಾತ್ಮಕತೆ ಕಂಡುಬರುತ್ತವೆ. ಮುಂದೆ ಪಾಶ್ಚಾತ್ಯರಿಂದ ಇದು ಹೊಸರೂಪ ಪಡೆದುಕೊಂಡಿತು.

ಕನ್ನಡಿಯ ಪರಿಚಯ ಹೊಸದೇನಲ್ಲ ನಮ್ಮ ಪುರಾಣ ಶಾಸ್ತ್ರಗಳ ಕಥೆಗಳಲ್ಲಿ, ದೇವಾಲಯಗಳ ಶಿಲ್ಪಗಳಲ್ಲಿ ಉಲ್ಲೇಖವಿರುವುದನ್ನು ಕಾಣುತ್ತೇವೆ. ಮಹಾಭಾರತದಲ್ಲಿ ಸುಯೋಧನನು ಪಾಂಡವರು ಕಟ್ಟಿಸಿದ ಇಂದ್ರಪ್ರಸ್ಥದ ಹೊಸ ಅರಮನೆಗೆ ಹೋದಾಗ ಅನೇಕ ರೀತಿಯಲ್ಲಿ ಅಪಹಾಸ್ಯಕ್ಕೆ ಗುರಿಯಾಗಿರುವುದು ಈ ಹೊಳಪು ಕನ್ನಡಿಗಳ ಚಮತ್ಕಾರಗಳಿಂದಾಗಿಯೆ. ದೈವಿ ಶಿಲ್ಪಿಯಾದ ವಿಶ್ವಕರ್ಮನು ರಚಿಸಿದ ಈ ಅರಮನೆಯು ಅತ್ಯಂತ ವೈಭವವೂ ಅದ್ಭುತವೂ ಹಾಗೂ ವೈಶಿಷ್ಟಪೂರ್ಣವಾಗಿತ್ತು. ಸುಯೋಧನನು ಈ ಅರಮನೆಗೆ ಹೋದಾಗ ಕನ್ನಡಿಗಳ ಪ್ರತಿಬಿಂಬಗಳಿಂದ ವಿಚಲಿತಗೊಳ್ಳುತ್ತಾನೆ. ಬಾಗಿಲು ಇದೆ ಎಂದು ಆ ಕಡೆಗೆ ಹೋದಾಗ ಅಲ್ಲಿ ಬಾಗಿಲು ಇರುವುದಿಲ್ಲ. ಅಲ್ಲಿ ಕನ್ನಡಿ ಇರುತ್ತದೆ. ಈ ಕನ್ನಡಿಗೆ ಹಾಯ್ದು ತಲೆಗೆ ಪೆಟ್ಟಾಗುತ್ತದೆ. ಮತ್ತೊಂದು ಕಡೆಗೆ ನೀರಿದೆ ಎಂದು ತಿಳಿದು ಪಂಜೆಯನ್ನು ಎತ್ತಿ ಕಾಲು ಇಟ್ಟಾಗ ಅಲ್ಲಿ ನೀರಿರದೇ ಅದು ಹಾಸುಗನ್ನಡಿಯಾಗಿರುತ್ತದೆ. ಮತ್ತೊಂದು ಕಡೆಗೆ ಹಾಸುಗನ್ನಡಿಯಂದು ತಿಳಿದು ಕಾಲಿಟ್ಟಾಗ ಅಲ್ಲಿ ನಿಜವಾಗಿಯೂ ನೀರಿರುತ್ತದೆ. ಇದನ್ನು ನೋಡಿ ದ್ರೌಪದಿಯು ನಗುತ್ತಿರುತ್ತಾಳೆ. ಈ ಕುರುವಂಶದ ದೊರೆಗೆ ಅರಮನೆಯ ರಚನೆಯ ತಂತ್ರಗಾರಿಕೆಯಲ್ಲಿ ಬಳಸಿದ ವೀವಿಧ್ಯ ಕನ್ನಡಿಗಳಿಂದಾಗಿಯೇ ದ್ರೌಪದಿಯಿಂದ ಅಪಮಾನವಾಗುತ್ತದೆ. ಇಲ್ಲಿಂದಲೇ ಕುರುಕ್ಷೇತ್ರ ಪ್ರಾರಂಭವಾಗುತ್ತದೆ ಎನ್ನಬಹುದು.

ಇನ್ನೊಂದು ಕನ್ನಡಿಯ ಉಲ್ಲೇಖದ ಕಥೆಯನ್ನು ಕೇರಳದ ಆರುನ್ಮಳ ಕನ್ನಡಿಯ ದಂತಕಥೆಯಿಂದ ತಿಳಿದುಬರುತ್ತದೆ. ತಮಿಳುನಾಡಿನಿಂದ ಬಂದ ಕಂಚುಗಾರ ಕುಟುಂಬದ ವ್ಯಕ್ತಿಯೊಬ್ಬ ಆರುನ್ಮಳ ಊರಿನ ದೇವಸ್ಥಾನದ ಶ್ರೀಕೃಷ್ಣನ ವಿಗ್ರಹದ ಪ್ರತಿರೂಪವೊಂದನ್ನು ಮಾಡಲು ಪ್ರಾರಂಭಿಸಿದ, ಇವನ ಸುತ್ತಲು ಭಕ್ತಿಪರವಶವಾಗಿ ನಿಂತಿದ್ದ ಸ್ತ್ರೀಯರು ಬೆಳ್ಳಿಯ ಆಭರಣಗಳನ್ನು ಉರಿಯುತ್ತಿದ್ದ ಕುಲುಮೆಗೆ ಎಸೆದರು. ಕೆಲಹೊತ್ತಿನ ನಂತರ ಆಶ್ಚರ್ಯವೆಂಬಂತೆ ಕುಲುಮೆಯಿಂದ ಅವನ್ನು ಹೊರತೆಗೆದಾಗ ಪ್ರತಿಬಿಂಬ ಕಾಣುವಂತಹ ಒಂದು ಲೋಹ ಕನ್ನಡಿಯು ಹೊರಬಂದಿತು. ಇದು ಆರುನ್ಮಳ ಕನ್ನಡಿಯ ಕಥೆ. ಆರುನ್ಮಳ ಕನ್ನಡಿಯನ್ನು ನೋಡುತ್ತಿರುವ ದೇವತಾ ಸ್ತ್ರೀಯನ್ನು ಕೇರಳದ ಪದ್ಮನಾಭಸ್ವಾಮಿ ದೇವಸ್ಥಾನದ ೧೮ನೇ ಶತಮಾನದ ಒಂದು ಭಿತ್ತಿ ಚಿತ್ರದಲ್ಲಿ ಕಾಣಬಹುದು. ಆರುನ್ಮಳ ಕೇರಳದ ಒಂದು ಊರಿನ ಹೆಸರು. ತಮಿಳುನಾಡಿನಿಂದ ವಲಸೆಬಂದ ಕಂಚುಗಾರರ ಕುಟುಂಬವೊಂದು ಯಾದೃಚ್ಛಿಕವಾಗಿ ಕಂಡುಕೊಂಡ ವೃತ್ತಿರಹಸ್ಯವನ್ನು ಆಧರಿಸಿ ವಿಕಾಸಗೊಳಿಸಿದ ಒಂದು ಕಲಾ ಕೌಶಲವೇ ಆರುನ್ಮಳ ಕನ್ನಡಿಯ ಉಗಮ. ಆರುನ್ಮಳ ಕನ್ನಡಿಯನ್ನು ತಯಾರಿಸಲು ಕಂಚು ಮತ್ತು ತವರವನ್ನು ೧೦:೫:೫ ರ ಅನುಪಾತದಲ್ಲಿ ಬೆರೆಸಿ ೬ x ೬ ಇಂಚು ಅಳತೆಯ ಅಂಡಾಕಾರದಲ್ಲಿರುವ ಭಾರವಾದ ಈ ಲೋಹದ ಕನ್ನಡಿಯನ್ನು ತಯಾರಿಸಲಾಗುತ್ತದೆ.[೫] ಇದಕ್ಕೆ

೫. ಡಾ. ಮೋಹನ ಕುಂಟಾರ ; ಕೇರಳ ಕಥನ, ಪುಟ ೧೬೭

ಬಾಲದಂತೆ ಒಂದು ಹಿಡಿಕೆಯೂ ಇರುತ್ತದೆ.

ಕರ್ನಾಟಕದ ಗಾಜಿನ ಚಿತ್ರಕಲೆಯ ಪ್ರಾಚೀನತೆಯ ಬಗ್ಗೆ ನಿಖರವಾದ ದಾಖಲೆಗಳು ದೊರಕುವುದು ಪಾಶ್ಚಾತ್ಯರ ಆಗಮನದ ನಂತರವೇ ಆದರೂ ಅದಕ್ಕಿಂತ ಪೂರ್ವದಲ್ಲಿ ಈ ಪ್ರದೇಶದಲ್ಲಿ ಗಾಜಿನ ತಯಾರಿಕೆ ಹಾಗೂ ಗಾಜಿನ ಕಲಾತ್ಮಕತೆ ಬಳಕೆಯಲ್ಲಿದ್ದ ಬಗ್ಗೆ ಉಲ್ಲೇಖಗಳು ಕಂಡುಬರುತ್ತವೆ. ಯಾದಗಿರಿ ತಾಲೂಕಿನ ಹಲವು ಪ್ರದೇಶಗಳು, ಸುರಪುರ ತಾಲೂಕಿನ ಜಮಾಲಪುರಗಳಲ್ಲಿ ಗಾಜು ತಯಾರಿಸುವ ಕೇಂದ್ರಗಳಿದ್ದ ಬಗ್ಗೆ ಕುರುಹುಗಳು ಲಭ್ಯವಾಗಿವೆ. ಅಲ್ಲಿ ಗಾಜು ತಯಾರಿಸುತ್ತಿದ್ದ ಕುಲುಮೆಯ ಅವಶೇಷ ಹಾಗೂ ಉಥೇಚ್ಛ ಪ್ರಮಾಣದ ಗಾಜಿನ ತುಂಡುಗಳು ಕಂಡುಬಂದಿವೆ. ಇವು ಕ್ರಿ.ಪೂ. ಇಲ್ಲವೆ ಕ್ರಿ.ಶ. ಆರಂಭದ ಕಾಲದವುಗಳಾಗಿರಬೇಕೆಂದು ಊಹಿಸಲಾಗಿದೆ.[೬]

ಕನ್ನಡಿಯ ಐತಿಹ್ಯವನ್ನು ನಮ್ಮ ಪ್ರಾಚೀನ ದೇವಾಲಯಗಳ ಶಿಲ್ಪಕಲೆಗಳಲ್ಲಿ ರಚನೆಗೊಂಡಿರುವುದನ್ನು ನೋಡಬಹುದು. ಹೊಯ್ಸಳ ಅರಸರ ಬೇಲೂರಿನ ದೇವಸ್ಥಾನದಲ್ಲಿ 'ದರ್ಪಣ ಸುಂದರಿ' ಯ ಶಿಲ್ಪವನ್ನು ಕ್ರಿ.ಶ.೧೧೧೭ ರಲ್ಲಿ ರಚನೆ ಮಾಡಲಾಗಿದೆ. ಕಲ್ಕತ್ತಾದ ಇಂಡಿಯನ್ ಮ್ಯೂಜಿಯಂದಲ್ಲಿ ೧೧ನೇ ಶತಮಾನದ 'ದರ್ಪಣ ಸುಂದರಿಯ' ಶಿಲ್ಪವಿದೆ. ಇದೇ ರೀತಿ ಬೇರೆ ಅರಸರ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯದ ಶಿಲ್ಪಗಳಲ್ಲಿ ಕನ್ನಡಿಯ' ಉಲ್ಲೇಖವಿರುವ ಶಿಲಾಶಿಲ್ಪಗಳು ಕಾಣಬರುತ್ತವೆ.

ಕರ್ನಾಟಕವನ್ನಾಳಿದ ಪ್ರಮುಖ ಮನೆತನಗಳಾದ ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು ಮುಂತಾದ ಅರಸರ ಕಾಲದಲ್ಲಿ ಗಾಜಿನ ಬಳಕೆ ಹಾಗೂ ಅದರ ಕಲಾತ್ಮಕ ವಿನ್ಯಾಸಗಳು ಇದ್ದಿರಬಹುದಾದರೂ ಅಧಿಕೃತವಾದ ಆಧಾರಗಳು ಲಭ್ಯವಾಗಿಲ್ಲ. ಆದರೆ ಆ ಕಾಲದ ಚಿತ್ರ, ಶಿಲ್ಪಕಲಾಕೃತಿಗಳಲ್ಲಿ ರೂಪಿಸಿರುವ ಆಭರಣ, ವಸ್ತು ವಡವೆಗಳನ್ನು ನೋಡಿದಾಗ ಅದರ ಖಚಿತತೆ ಕಂಡುಬರುತ್ತದೆ. ಮುಂದೆ ವಿಜಯನಗರ ಸಾಮ್ರಾಟರ ಕಾಲದಲ್ಲಿ ಗಾಜಿನ ಕಲಾತ್ಮಕ ವಸ್ತುಗಳು, ಗಾಜಿನ ಚಿತ್ರಕಲೆ ವಿಫುಲವಾಗಿ ಬಳಕೆಯಲ್ಲಿದ್ದ ಬಗ್ಗೆ ಆ ಸಂದರ್ಭದಲ್ಲಿ ಭೇಟಿ ನೀಡಿದ ವಿದೇಶಿ ಪ್ರವಾಸಿಗರ ಬರವಣಿಗೆಗಳಿಂದ ತಿಳಿದುಬರುತ್ತದೆ. ಕರ್ನಾಟಕದಲ್ಲಿಯೂ ಸಹಿತ ಗಾಜಿನ ಕೃತಿಗಳನ್ನು ಒಂದು ಕಲಾ ಪ್ರಕಾರವಾಗಿ ಪರಿಭಾವಿಸುವ ಪರಂಪರೆ ಪಾಶ್ಚಾತ್ಯರ ಆಗಮನದೊಂದಿಗೆ ಆರಂಭವಾಯಿತೆಂದು ಹೇಳಬಹುದು. ಪಾಶ್ಚಾತ್ಯರು ಕಟ್ಟಿದ ಇಲ್ಲಿನ ಪ್ರಾಚೀನ ಚರ್ಚುಗಳಿಂದ ಗಾಜಿನ ಚಿತ್ರಕಲೆಯ ಸೃಜನಶೀಲ ಸ್ವರೂಪ ಪ್ರಾರಂಭಗೊಂಡಿತು.

ಕರ್ನಾಟಕದ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹನ್ನೆರಡನೆಯ ಶತಮಾನದ ಸುಮಾರಿಗೇ ಚರ್ಚುಗಳಿದ್ದವೆಂದು ತಿಳಿದು ಬರುತ್ತದೆ. ಫ್ರ ಜೋರ್ಡನ್ ಕಟಲನಸ್ ದಿ ಸೆವೆರೋ ಎಂಬ ಪಾದ್ರಿಯ ನೇತೃತ್ವದಲ್ಲಿ ಡಾಮಿನಿಕನ್ ಕ್ರೈಸ್ತರು ೧೩೨೫ ರಲ್ಲಿ ಮೈಸೂರು ರಾಜ್ಯದಲ್ಲಿ ತಮ್ಮ ಮತ ಪ್ರಸಾರದ ಪ್ರಯತ್ನವನ್ನು ಮೊಟ್ಟ ಮೊದಲಿಗೆ ಮಾಡಿದರು. ೧೪೪೫ ರಲ್ಲಿ ವಿಜಯನಗರದ ಕ್ರೈಸ್ತನೊಬ್ಬ ದಿವಾನನಾಗಿದ್ದನೆಂಬ ಉಲ್ಲೇಖವಿದೆ. ೧೩೩೫ ರಷ್ಟು ಹಿಂದೆಯೇ ಬೈಬಲ್‌ನ್ನು

---

೬. ಪರ್ವಿನ್ ಸುಲ್ತಾನ್ : ಕರ್ನಾಟಕ ಚರಿತ್ರೆ (ಸಂಪುಟ ಆರು), ಪುಟ ೧೭೭

ಕನ್ನಡದಲ್ಲಿ ತರುವ ಪ್ರಯತ್ನ ನಡೆಯಿತು. ೧೫೪೨ ರಲ್ಲಿ ಲೋಯೋಲಾದ ಸಂತ ಇನ್ನೇಶಿಯಸ್‌ನ ಶಿಷ್ಯ ಸಂತ ಫ್ರಾನ್ಸಿಸ್ ಕ್ಸೇವಿಯರ್ ಕನ್ನಡ ನಾಡಿನಲ್ಲೆಲ್ಲ ಸಂಚರಿಸಿ ಕ್ರೈಸ್ತಮತವನ್ನು ಪ್ರಚಾರ ಮಾಡಲು ಪ್ರಯತ್ನಪಟ್ಟನೆಂದು ತಿಳಿದು ಬರುತ್ತದೆ. ೧೫೮೭ ರ ಸುಮಾರಿಗೆ ಗೋವೆಯ ಕ್ರೈಸ್ತರು 'ಕನ್ನಡ ಮಿಶನ್' ಎಂಬ ಧಾರ್ಮಿಕ ಸಂಸ್ಥೆಯನ್ನು ಸ್ಥಾಪಿಸಿದರು. ಇದು ಮುಂದೆ ೧೭೦೪ ರ ಸಂದರ್ಭಗಳಲ್ಲಿ ಪ್ರಬಲವಾದ ಸಂಸ್ಥೆಯಾಗಿ ಶ್ರೀರಂಗಪಟ್ಟಣ 'ರೋಂ ಸನ್ಯಾಸಿ'ಗಳ ಕೇಂದ್ರವಾಯಿತು. ಮೈಸೂರು ಕಡೆ 'ಕನ್ನಡ ಮಿಶನ್' (ಪೋರ್ಚುಗೀಸರದ್ದು) ಕೆಲಸ ಮಾಡುತ್ತಿದ್ದಾಗ ಬೆಂಗಳೂರು, ಕೋಲಾರಗಳಲ್ಲಿ ತೆಲಗು ಮಿಶನ್ (ಫ್ರೆಂಚರದ್ದು) ಸಕ್ರೀಯವಾಗಿದ್ದಿತು.

ಫ್ರೆಂಚ್ ರಕ್ತಕ್ರಾಂತಿಯು ತೊಡಗಿಕೊಳ್ಳುವ ಮೊದಲು ೧೭೮೨ ರಲ್ಲಿ ಪ್ಯಾರಿಸ್ ನಗರದಿಂದ ಹೊರಟ ಅಬೆ ಡ್ಯೂಬಾಯ್ ಎಂಬ ಸುಪ್ರಸಿದ್ದ ಪಾದ್ರಿ ಕನ್ನಡ ನಾಡಿಗೆ ಬಂದು ಶ್ರೀರಂಗಪಟ್ಟಣವನ್ನು ತನ್ನ ಕಾರ್ಯಕ್ಷೇತ್ರವನ್ನಾಗಿ ಆರಿಸಿಕೊಂಡು, ಇಲ್ಲಿಯೇ ಇಪ್ಪತ್ತೆರಡು ವರ್ಷಗಳ ಕಾಲ ನೆಲೆಸಿ ಮೈಸೂರು ನಗರದಲ್ಲಿ ಚರ್ಚಒಂದನ್ನು ಕಟ್ಟಿಸಿದನು. ಈ ಧರ್ಮಿಯರಲ್ಲಿ ರೋಮನ್ ಕೇಥೋಲಿಕ್ ಹಾಗೂ 'ಪ್ರೋಟೆಸ್ಟಂಟ್' ಎಂಬ ಎರಡು ಪಂಗಡಗಳಿವೆ. ಪ್ರೋಟೆಸ್ಟಂಟ್ ಪಂಗಡದ ಕ್ರೈಸ್ತರು ಬಳ್ಳಾರಿಯಲ್ಲಿ ೧೮೨೦ ರ ಸುಮಾರಿಗೆ 'ಲಂಡನ ಮಿಶನ್' ಎಂಬ ಸಂಸ್ಥೆಯನ್ನು ಆರಂಭಿಸಿ ಬೆಂಗಳೂರು, ಮೈಸೂರು ನಗರಗಳ ತನಕ ಪ್ರಸರಿಸಿದರು. ಕರಾವಳಿಯ ಮಂಗಳೂರಿನಲ್ಲಿ ಬಾಸೆಲ್ ಮಿಶನ್ ಸಂಸ್ಥೆಗಳು ಮತ ಪ್ರಚಾರದಲ್ಲಿ ತೊಡಗಿಸಿಕೊಂಡವು.[೭] ಮತ ಪ್ರಚಾರಕ್ಕಾಗಿ ಎಲ್ಲೆಲ್ಲಿ ಕ್ರೈಸ್ತ ದೇಗುಲಗಳನ್ನು ನಿರ್ಮಿಸಿದ್ದರೋ ಅದರ ಜೊತೆಗೆ ವಾಸ್ತು ಶಿಲ್ಪದ ರಚನೆಯ ಭಾಗವಾಗಿ ಗಾಜಿನ ಚಿತ್ರಕಲೆಯನ್ನು ಅಭಿವೃದ್ಧಿ ಪಡಿಸಿದರು.

೧೯ನೆಯ ಶತಮಾನದ ಆರಂಭ ಕಾಲಕ್ಕೆ ಸಂಬಂಧಿಸಿದ ಚರ್ಚುಗಳು, ಆರಾಧನಾ ಮಂದಿರಗಳು ಬೆಂಗಳೂರು ನಗರದಲ್ಲಿ ವಿವಿಧ ಭಾಗಗಳಲ್ಲಿ ಕಂಡು ಬರುತ್ತವೆ. 'ಸಂತ ಮೇರಿ ಬೆಸಲಿಕಾ' ಚರ್ಚು ಅತ್ಯತ ಹಳೆಯದು. ಮತ್ತು ಸುಂದರ ವಾಸ್ತುಶಿಲ್ಪಗಳಲ್ಲಿ ಒಂದಾಗಿದೆ. ೧೯ನೆಯ ಶತಮಾನದಲ್ಲಿ ಮೊದಲಲ್ಲಿ ನಿರ್ಮಿತಗೊಂಡ ಇದನ್ನು ೧೮೭೫ ರಲ್ಲಿ ಈಗಿರುವಂತೆ 'ಗಾತಿಕ್' ಮಾದರಿಯಲ್ಲಿ ಪುನರ್ ನಿರ್ಮಿಸಲಾಯಿತು. ಇದರ ಪ್ರವೇಶ ದ್ವಾರದಲ್ಲಿ ಒಂದು 'ಗಾತಿಕ ಗೋಪುರವಿದೆ. ಬಾಗಿಲು ಮೇಲೆ ಚೂಪಾದ ಕಮಾನು ಇದೆ.

ಬಾಗಿಲು ಕಿಟಕಿಗಳೂ ಅದೇ ವಿನ್ಯಾಸವನ್ನು ಹೊಂದಿವೆ. ಗಾತೀಕ ಗೋಪುರದ ಒಳಗೋಡೆಗೆ ಅಳವಡಿಸಿದ ಕಿಟಕಿಗಳಲ್ಲಿ ಬಣ್ಣದ ಗಾಜುಗಳ ಚಿತ್ರಗಳಿವೆ. ಇವು ಹೊರಗಿನ ಬೆಳಕಿನಿಂದ ಮನೋಹರವಾಗಿ ಕಾಣುತ್ತವೆ. ಚರ್ಚದ ಪೀಠದ ಎಡಗೋಡೆ ಹಾಗೂ ಬಲಗೋಡೆಗಳ ವೃತ್ತಾಕಾರದ ಕಿಟಕಿಗಳಲ್ಲಿ ಸುಂದರವಾದ ಗಾಜಿನ ಚಿತ್ರಗಳಿವೆ. ಚರ್ಚ ಕಂಬಗಳ ಸಾಲುಗಳ ಚೂಪಾದ ಗೂಡುಗಳಲ್ಲಿ, ಪೀಠದ ತ್ರೀಕೋನಾಕಾರದ ಕಿಟಕಿಗಳಲ್ಲಿ ಕ್ರಿಸ್ತ ಕಥಾನಕ ದೃಶ್ಯಗಳನ್ನು ಸೂಚಿಸುವ ಗಾಜಿನ ನಕ್ಷೆ ಚಿತ್ರಗಳನ್ನು ಅಳವಡಿಸಿದ್ದಾರೆ. ಈ ಚಿತ್ರಗಳನ್ನು ೧೯೦೦ ರ ಪ್ರಾರಂಭದ ದಶಕದಲ್ಲಿ ಫ್ರಾನ್ಸದಿಂದ ತಂದು ಅಳವಡಿಸಲಾಗಿದೆ.

---

೭. ಪ್ರೊ. ಎಸ್.ಕೆ.ರಾಮಚಂದ್ರರಾವ್ ; ಕನ್ನಡ ನಾಡಿನ ಧಾರ್ಮಿಕ ಪರಂಪರೆ, ಪುಟ ೪೧ ರಿಂದ ೪೪

ಇದೇ ಚರ್ಚದ ಆವರಣದಲ್ಲಿರುವ 'ಫಾದರ' ವಾಸಿಸುವ ಮನೆಯಲ್ಲಿನ ಪೂರ್ವದ ಗೋಡೆಯ ಕಿಟಕಿಗಳ ಮೇಲೆ ೧೯ನೆಯ ಶತಮಾನದ ಮಧ್ಯಭಾಗದಲ್ಲಿ ರಚನೆಯಾದ ಎರಡು ಗಾಜಿನ ಚಿತ್ರಗಳಿವೆ. ಈ ಎರಡು ಚಿತ್ರಗಳು ಕ್ರಿಸ್ತನ ಅನುಯಾಯಿಗಳ ಚಿತ್ರಗಳಾಗಿವೆ.

ಬೆಂಗಳೂರಿನ ಸಂತ ಫ್ರಾನ್ಸಿಸ್ ಕ್ಸೇವಿಯರ್ ಕೆಥೇಡ್ರಲ್ ಚರ್ಚನ್ನು ೧೮೫೧ ರಲ್ಲಿ ನಿರ್ಮಿಸಲಾಯಿತು. ಸಂಪೂರ್ಣ ಗ್ರಾನೈಟ್‌ನಿಂದ ನಿರ್ಮಾಣವಾದ ಈ ಕಟ್ಟಡದಲ್ಲಿ 'ಮದರ ಆಫ್ ಪರ್ಪೆಚುಯಲ್ ಹೆಲ್ಪ' ಎಂಬ ಗಾಜಿನ ಚಿತ್ರವು ಕಂಡು ಬರುತ್ತದೆ. ಬೆಂಗಳೂರಿನ ಬ್ರಿಗೇಡ್ ರಸ್ತೆಯಲ್ಲಿರುವ 'ಸಂತ ಪ್ಯಾಟ್ರಿಕ್ ಚರ್ಚನ್ನು ಗ್ರೀಕೋ, ರೋಮನ್, ರಿನೈಸಾನ್ಸ್ ಶೈಲಿಯಲ್ಲಿ ನಿರ್ಮಿಸಲಾಗಿದೆ. ಚರ್ಚದ ಎರಡು ಗೋಪುರಗಳ (ರೋಮನ್) ನಡುವೆ ಒಂದು ಕಮಾನಿನ ಬಾಗಿಲ ಮೇಲೆ ರೋಸ್ ಮರದ ಕಿಟಕಿಗೆ ಬಣ್ಣದ ಗಾಜುಗಳನ್ನು ಅಳವಡಿಸಲಾಗಿದೆ.[೮]

೧೮ ಮತ್ತು ೧೯ ನೇ ಶತಮಾನದಲ್ಲಿ ಮಂಗಳೂರು ಹಾಗೂ ದಕ್ಷಿಣ ಕನ್ನಡದ ಅನೇಕ ನಗರಗಳಲ್ಲಿ ಹಲವಾರು ಚರ್ಚುಗಳು ನಿರ್ಮಾಣಗೊಂಡಿದ್ದನ್ನು ಕಾಣಬಹುದು. ಮಂಗಳೂರು ನಗರ ಒಂದರಲ್ಲಿಯೇ ಬಹಳಷ್ಟು ಚರ್ಚುಗಳು ಕಾಣಸಿಗುತ್ತವೆ. ಇಂತಹ ಅನೇಕ ಚರ್ಚುಗಳಲ್ಲಿ ಅಳವಡಿಸಿದ ಗಾಜಿನ ಚಿತ್ರಗಳು ನೋಡಲು ಸಿಗುತ್ತವೆ.

ಕ್ರಿ.ಶ. ೧೮೮೫ ರಲ್ಲಿ ನಿರ್ಮಾಣಗೊಂಡ ಸಂತ ಎಲೋಸಿಯಸ್ ಚರ್ಚು ರೋಮ್‌ನಲ್ಲಿರುವ ಸಂತ ಫಿಲಿಫ್ ಚರ್ಚನ ಮಾದರಿಯನ್ನು ಹೋಲುತ್ತದೆ. ಈ ಚರ್ಚನ್ನು ಫಾದರ ಜೋಶೆಫ್‌ರು ನಿರ್ಮಿಸಿದರು. ಚರ್ಚದ ಒಳಗೋಡೆಗಳಲ್ಲಿ ಚಿತ್ರಕಲಾವಿದ Br. Antonio Moscheni ರಚಿಸಿದ ಅಪರೂಪದ ಚಿತ್ರಗಳಿವೆ. ಇವು ಪ್ರೆಸ್ಕೋ ಹಾಗೂ ಸೆಸ್ಕೋ ಪದ್ಧತಿಯಲ್ಲಿ ರಚನೆಗೊಂಡಿವೆ. ಈ ಚಿತ್ರ ಸರಣಿಯನ್ನು ೧೯೦೧ ರಲ್ಲಿ ರಚಿಸಲಾಗಿದೆ. ಈ ಚಿತ್ರಗಳು ಕ್ರಿಸ್ತ ಕಥಾನಕ ಸನ್ನಿವೇಶಗಳನ್ನು ಸಾರುತ್ತವೆ. ಚರ್ಚದ ಪೂರ್ವ ಗೋಡೆಯ (ಬಲಭಾಗ) ಕ್ರಿಸ್ತನ ಪೀಠ ಹೊಂದಿರುವ ಗೂಡಿನ ಎಡ ಮತ್ತು ಬಲಭಾಗದ ಕಿಟಕಿಗಳಿಗೆ ೨ ಗಾಜಿನ ಚಿತ್ರಗಳಿವೆ. ಧರ್ಮ ಪ್ರವರ್ತಕರಾದ Beatus caludiu, Colomiers S.J. ಹಾಗೂ St Margarita Memoria Alaloque ರ ಚಿತ್ರಗಳೆನ್ನಬಹುದು. ಬಹುತೇಕ ಗಾಜಿನ ಚಿತ್ರಗಳಾಗಿರಬಹುದು, ಭಿತ್ತಿ ಚಿತ್ರಗಳಾಗಿರಬಹುದು, ಯೇಸುವಿನ ಜೀವನ ಕಥೆ ಒಂದೇ ಅಲ್ಲದೇ ಧರ್ಮ ಪ್ರವರ್ತಕರ ಹಾಗೂ ಕಟ್ಟಡಕ್ಕೆ ಧನಸಹಾಯ ಮಾಡಿದವರ ಚಿತ್ರಗಳನ್ನು ಕಾಣಬಹುದು.

ಕಂಕನಾಡಿಯ 'ಕ್ಲೋಯಿಸ್ಟ್ರೆಡ್ ಕಾರ್ಮೆಲ್‌ಹೌಸ್' ಎಂಬ ಚರ್ಚನ್ನು ೧೮೭೯ರ ಸುಮಾರಿಗೆ ಗಾತಿಕ್ ಮಾದರಿಯಲ್ಲಿ ನಿರ್ಮಿಸಲಾಗಿದೆ. ಈ ಚರ್ಚದ ಮುಂಭಾಗದ ಮೂರು ಕಿಟಕಿಗಳಿಗೆ ಗಾಜಿನ ಚಿತ್ರಗಳನ್ನು ಅಳವಡಿಸಿದ್ದು, ಇವು ಸುಮಾರು ೧೦ ಅಡಿಗಿಂತಲೂ ದೊಡ್ಡದಾಗಿವೆ. ಈ ಗಾಜಿನ ಚಿತ್ರಗಳು ಕ್ರಿಸ್ತ ಹಾಗೂ ಕ್ರಿಸ್ತನನ್ನು ಆರಾಧಿಸುತ್ತಿರುವ ಸನ್ನಿವೇಶಗಳಾಗಿವೆ. ಈ ಚಿತ್ರಗಳನ್ನು ೧೮೯೯ ರಲ್ಲಿ ಪ್ಯಾರಿಸ್ ಕಲಾವಿದ ರಚಿಸಿದ್ದು, ಫ್ರಾನ್ಸದಿಂದ ತಂದು ಅಳವಡಿಸಲಾಗಿದೆ. ಚರ್ಚದ ಇನ್ನಿತರ ಕಿಟಕಿಗಳಲ್ಲಿ ನಕ್ಷಾ ವಿನ್ಯಾಸಗಳನ್ನೊಳಗೊಂಡ ಅನೇಕ ಗಾಜಿನ ಚಿತ್ರಗಳಿವೆ. ಹೊರಗಿನಿಂದ

೮ ಪ್ರೊ. ಎಂ. ವಿ ಶ್ರೀನಿವಾಸ : (ಸಂ) ಕರ್ನಾಟಕ ಚರಿತ್ರೆ, (ಸಂಪುಟ ಆರು), ಪುಟ ೨೬೩

ಬರುವ ಬೆಳಕಿನಿಂದ ಈ ಚಿತ್ರಗಳು ನೋಡುಗರನ್ನು ವಿಸ್ಮಯಗೊಳಿಸುತ್ತವೆ. ಹಾಗೂ ಚರ್ಚದ ಒಳಾವರಣವೂ ವಿವಿಧ ವರ್ಣ ಛಾಯೆಗಳಿಂದ ಗೋಚರಿಸುತ್ತವೆ. ಆ ಕಾರಣಕ್ಕಾಗಿಯೇ ಬಹುತೇಕ ನಿರ್ಮಾಣಗೊಳ್ಳುವ ಚರ್ಚು ವಾಸ್ತುಗಳಲ್ಲಿ ಗಾಜಿನ ಚಿತ್ರಗಳನ್ನು ಹೇರಳವಾಗಿ ಬಳಸಿಕೊಂಡಿರುವುದನ್ನು ಕಾಣಬಹುದು. ಈ ಕಲೆ ಮಧ್ಯಯುಗದಲ್ಲಿಯೇ ಕಾಣಿಸಿಕೊಳ್ಳುತ್ತದೆ. ಆ ಸಂದರ್ಭಗಳಲ್ಲಿ ಉತ್ಕೃಷ್ಟತೆ ಕಂಡು ಬರುವುದಿಲ್ಲ. ಕ್ರಿ.ಶ. ೧೮೮೬ ರಿಂದ ಫ್ರಾನ್ಸ ಕಲಾವಿದರು ರಚಿಸಿದ ಚಿತ್ರಗಳಲ್ಲಿ ಅನೇಕ ವೈವಿಧ್ಯತೆಯನ್ನು ಹಾಗೂ ಆಕರ್ಷಕ ರಚನೆ ಕಂಡುಬರುತ್ತದೆ.

ಮಂಗಳೂರು ಕುಲಶೇಖರ್ ದಲ್ಲಿರುವ ಹಾಲಿಕ್ರಾಸ್ ಕಾರ್ಡೆಲ್ ಚರ್ಚು, ಇದು ಅಪೂರ್ವ ಸ್ಟೇನ್‌ಗ್ಲಾಸ್ ಚಿತ್ರಗಳ ಸಂಕೀರ್ಣ. ಈ ಚರ್ಚಿನಲ್ಲಿ ಅಳವಡಿಸಲಾದ ಗಾಜಿನ ಚಿತ್ರಗಳು ೧೯೦೦ ರ ಆಸುಪಾಸಿನಲ್ಲಿ ನಿರ್ಮಿಸಲಾಗಿದೆ. ಇವು ಕ್ರೈಸ್ತ ಸಂತರ ಚಿತ್ರಗಳಾಗಿವೆ. ಮಂಗಳೂರಿನ ಬೆಂದೂರಿನಲ್ಲಿರುವ 'ಸಂತ ಸೆಬಾಸ್ಟಿಯನ್' ಚರ್ಚು ಅತ್ಯಂತ ಸುಂದರವಾದ ವಾಸ್ತುಕಟ್ಟಡಗಳಲ್ಲಿ ಒಂದಾಗಿದೆ. ಈ ಚರ್ಚದ ಕಂಬಗಳ ಸಾಲುಗಳಲ್ಲಿ ವೃತ್ತಾಕಾರದ ಕಿಟಕಿಗಳಿದ್ದು, ಈ ಕಿಟಕಿಗಳಲ್ಲಿ ಹೂವಿನ ನಕ್ಷೆಗಳ ಗಾಜಿನ ಚಿತ್ರಗಳನ್ನು ಅಳವಡಿಸಲಾಗಿದೆ. ಚರ್ಚದ ಪೀಠದ ಹಿಂಬದಿಯ ಗೋಡೆಯ ೬ ಕಿಟಕಿಗಳಲ್ಲಿ ೧೯೯೦ ರ ದಶಕದಲ್ಲಿ ರಚನೆ ಮಾಡಲಾದ ಸಾಂಕೇತಿಕ ಕ್ರೈಸ್ತಕಥಾನಕ ದೃಶ್ಯಗಳನ್ನು ಹೇಳುವ ಗಾಜಿನ ಚಿತ್ರಗಳಿವೆ.

ಈ ಆರು ಚಿತ್ರಗಳು ಆಧುನಿಕ ತಂತ್ರಗಾರಿಕೆಯ ರಚನಾವಿಧಾನವನ್ನು ಹೊಂದಿವೆ. ಮಂಗಳೂರಿನ ಫಾದರ ಮುಲ್ಲರ್ ಮೆಡಿಕಲ್ ಕಾಲೇಜು ಹಾಗೂ ಆಸ್ಪತ್ರೆಯ ಆವರಣದಲ್ಲಿ ನಿರ್ಮಾಣಗೊಂಡ ಸಂತ ಜೋಶೆಫ್‌ರ ಛಾಪೇಲ್ ಚರ್ಚು ೨೧ ನೆಯ ಶತಮಾನದ ಪ್ರಥಮಾರ್ಧದಲ್ಲಿ ನಿರ್ಮಾಣ ಮಾಡಲಾಗಿದೆ. ಅಷ್ಟ ಭುಜಾಕೃತಿಯ ಒಳಾವರಣ ಹೊಂದಿದ ಈ ಸುಂದರ ಚರ್ಚಿನ ೧೭ ಕಿಟಕಿಗಳಲ್ಲಿ ಆಯತಾಕಾರದ ಗಾಜಿನ ಚಿತ್ರಗಳನ್ನು ಅಳವಡಿಸಲಾಗಿದೆ. ಆಧುನಿಕ ರಚನಾ ಕ್ರಮಗಳನ್ನು ಹೊಂದಿದ ಈ ಚಿತ್ರಗಳು ಯೇಸುವಿನ ಶಿಲುಬೆಯ ಹಾದಿಯ ಸರಣಿ ಚಿತ್ರಗಳಾಗಿವೆ. ಕ್ರಿ.ಶ. ೧೮೬೯ ರಲ್ಲಿ ಬೆಳಗಾಂವಿಯ ಸಂತ ಮೇರಿಸ್ ಚರ್ಚುನ್ನು ನಿರ್ಮಿಸಲಾಗಿದೆ. ರೆ. ಫ್ರಾನ್ಸಿಸ್ ಗೆಲ್ ಎಂಬುವನು ಈ ಕಟ್ಟಡ ವಿನ್ಯಾಸ ರಚಿಸಿದ್ದಾನೆ. ಚರ್ಚದ ಪ್ರಾರ್ಥನಾ ಸಭಾಂಗಣದಲ್ಲಿನ ಕಿಟಕಿಗಳಲ್ಲಿ ಕ್ರಿಸ್ತಕಥಾನಕ ದೃಶ್ಯಗಳನ್ನೊಳಗೊಂಡ ಗಾಜಿನ ಚಿತ್ರಗಳಿವೆ.

ಕರ್ನಾಟಕದ ಮೈಸೂರಿನಲ್ಲಿ ವಿವಿಧ ಕಾಲಘಟ್ಟಗಳಲ್ಲಿ ನಿರ್ಮಿಸಲಾದ ಅನೇಕ ಚರ್ಚುಗಳಿವೆ. ಇವು ೧೮ ಮತ್ತು ೧೯ನೆಯ ಶತಮಾನಗಳಲ್ಲಿ ನಿರ್ಮಾಣಗೊಂಡಿದ್ದರೂ ಹಂತ ಹಂತವಾಗಿ ಪುನರುಜ್ಜೀವನಗೊಳ್ಳುತ್ತಾ ಅನೇಕ ಸ್ವರೂಪಗಳನ್ನು ಪಡೆದುಕೊಂಡಿವೆ. ೧೮೪೦ ರಲ್ಲಿ ನಿರ್ಮಾಣಗೊಂಡ ಸಂತ ಫಿಲೋಮಿನಾ ಚರ್ಚು, ಸುಂದರ ಹಾಗೂ ಅದ್ಭುತ ಕಟ್ಟಡಗಳಲ್ಲಿ ಒಂದಾಗಿದೆ. ನ್ಯೂಯಾರ್ಕಿನ ಸಂತ ಪ್ಯಾಟ್ರಿಕ್ ಕೆಥೀಡ್ರಲ್ ಹಾಗೂ ಜರ್ಮನಿಯ ಕೋಲೋನ್ ನಲ್ಲಿರುವ ಗಾತಿಕ್ ಚರ್ಚುಗಳ ಮಾದರಿಯಲ್ಲಿ ಇದನ್ನು ನಿರ್ಮಿಸಲಾಗಿದೆ. ಗಾತಿಕ್ ಮಾದರಿಯಲ್ಲಿ ರಚಿಸಲಾದ ಈ ಚರ್ಚಿನ ಮುಂಭಾಗದಲ್ಲಿ ೧೭೫ ಅಡಿ ಎತ್ತರ ಹೊಂದಿದ ಎರಡು ಗೋಪುರಗಳು ಆಕಾಶಕ್ಕೆ ಚಾಚಿಕೊಂಡಿವೆ. ಚರ್ಚದ ಒಳಾವರಣದಲ್ಲಿ ದೊಡ್ಡ ಕಿಟಕಿಗಳಲ್ಲಿ ಅಳವಡಿಸಲಾದ ಗಾಜಿನ

ಚಿತ್ರಗಳಾಗಿವೆ. ಈ ಚರ್ಚಿನಲ್ಲಿ ಕಂಡುಬರುವ ಗಾಜಿನ ಚಿತ್ರಗಳು ಎರಡು ರೀತಿಯ ರಚನಾ ವಿಧಾನವನ್ನು ಹೊಂದಿವೆ. ಪಾರದರ್ಶಕ ತೈಲವರ್ಣಗಳಿಂದ ರಚಿಸಿದ ಗಾಜಿನ ಚಿತ್ರಗಳು, ಅಪಾರದರ್ಶಕ ವರ್ಣವಿಧಾನದಲ್ಲಿ ರಚನೆಗೊಂಡ ಗಾಜಿನ ಚಿತ್ರಗಳು ಕಂಡು ಬರುತ್ತವೆ. ಪಾರದರ್ಶಕ ಗಾಜಿನ ಚಿತ್ರಗಳನ್ನು ೧೯೦೦ ರ ಸುಮಾರಿಗೆ ಫ್ರೆಂಚ್ ಕಲಾವಿದರು ರಚಿಸಿದ್ದಾರೆಂದು ತೋರುತ್ತದೆ. ಮತ್ತು ಈ ಚಿತ್ರಗಳನ್ನು ಫ್ರಾನ್ಸದಿಂದ ತರಿಸಿ ಅಳವಡಿಸಿದ್ದಾರೆ. ಅಪಾರದರ್ಶಕ ಚಿತ್ರಗಳ ರಚನೆಗೆ ಭಿತ್ತಿ ಚಿತ್ರರಚನೆಗೆ ಬಳಸಲಾದ ರಚನಾ ವಿಧಾನವನ್ನೇ ಅನುಸರಿಸಿದ್ದಾರೆ. ಚರ್ಚದ ಪೀಠದ ಒಳ ಅಂಕಣದ ಹಿಂಬದಿಯ ಗೋಡೆಯ ಎಡ ಮತ್ತು ಬಲಭಾಗದ ಕಿಟಕಿಗಳಲ್ಲಿ ೧೨ ಗಾಜುಗಳ ಅಂಕಣಗಳ ಮೇಲೆ ಚಿತ್ರಗಳನ್ನು ರಚಿಸಿದ್ದಾರೆ.[೯]

ಮೈಸೂರಿನ ಸಬರ್ಬ ಬಸ್ ನಿಲ್ದಾಣದ ಹತ್ತಿರವಿರುವ ಸಂತ ಬಾರ್ಥೊಲೋಮ್ಯುವ್ ಚರ್ಚನ್ನು ೧೮೩೦ ರಲ್ಲಿ ರೆಸಿಡೆನ್ಸಿಗೆ ಸೇರಿದ ಸಿವಿಲ್ ಅಧಿಕಾರಿಗಳಿಂದ ಸಂಗ್ರಹಿಸಿದ ಹಣದಿಂದ ಕಟ್ಟಲಾಯಿತು. ೧೮೬೫ ರ ಸುಮಾರಿಗೆ ಈ ಚರ್ಚನ್ನು ಪವಿತ್ರಗೊಳಿಸಲಾಯಿತು. ಈ ಚರ್ಚದ ಕಿಟಕಿಗಳಿಗೆ ಬಣ್ಣದ ಗಾಜನ್ನು ಮೈಸೂರಿನ ಮಹಾರಾಜರು ಉಡುಗೋರೆಯಾಗಿ ನೀಡಿದ್ದಾರೆಂದು ಪ್ರೊ. ಎಂ.ವಿ. ಶ್ರೀನಿವಾಸರು ಅಭಿಪ್ರಾಯ ಪಡುತ್ತಾರೆ. ಈಗ ಚರ್ಚಿನ ಒಳ ವಿನ್ಯಾಸವು ಸಂಪೂರ್ಣ ಆಧುನಿಕರಣಗೊಂಡಿದ್ದು ಕಿಟಕಿಗಳಿಗೆ ಇತ್ತೀಚೆಗೆ ಅದರೆ ೧೯೯೫ ರಲ್ಲಿ ಅಳವಡಿಸಿದ ೨ ಗಾಜಿನ ಚಿತ್ರಗಳಿವೆ.

ಒಂದು ಚಿತ್ರ ಮಾತ್ರ ೧೯೧೦ ರ ಕಾಲದಲ್ಲಿ ಅಳವಡಿಸಿದ ಸಂತ ಬಾರ್ಥೊಲೋಮ್ಯುವ್ ನ ಪೂರ್ಣಭಾವಚಿತ್ರವಿದೆ. ಈ ಕ್ರಿಸ್ತ ಮಠಗಳು ಕಾಲ ಕಾಲಕ್ಕೆ ಪುನರ್ ರೂಪಪಡೆದರೂ ಸಹಿತ ಗಾಜನ್ನು ಸಮರ್ಥವಾಗಿ ಬಳಸಿಕೊಂಡು ಬರುತ್ತಲಿದ್ದಾರೆ. ಇತ್ತೀಚಿನ ಆಧುನಿಕರಣಗೊಂಡ ಚರ್ಚುಗಳ ವಾಸ್ತು ವಿನ್ಯಾಸಗಳಲ್ಲಿ ಬಳಸಿದ ಗಾಜಿನ ಚಿತ್ರಗಳನ್ನು ನೋಡಬಹುದಾಗಿದೆ. ೨೧ನೇ ಶತಮಾನದ ಅಪರೂಪದ ಆಧುನಿಕ ರಚನಾ ಶೈಲಿಯನ್ನು ಒಳಗೊಂಡ ೨೦೦೪ ರಲ್ಲಿ ಲೋಕಾರ್ಪಣೆಗೊಂಡು ಮೈಸೂರಿನ ಆರ್. ಎಸ್. ನಾಯ್ಡು ನಗರದಲ್ಲಿ ತಲೆ ಎತ್ತಿರುವ ಪುಷ್ಪಾಶ್ರಮದ ಬಾಲ ಯೇಸುವಿನ (ಕಾರ್ಮೆಲ್ ಸಭೆ) ಚರ್ಚು ಅಭೂತಪೂರ್ಣವಾದುದು.

ಮೈಸೂರಿನ ಅರಮನೆಯನ್ನು ಹೋಲುವ ಇಂಡೋ-ಮೊಗಲ್ ಶೈಲಿಯ ವಾಸ್ತುಶಿಲ್ಪವನ್ನು ಹೊಂದಿರುವ ಈ ದೇವಾಲಯವು ಅನೇಕ ಭಿನ್ನತೆಗಳಿಂದ ಕೂಡಿದ ಸುಂದರವಾದ ಭಕ್ತಿಕೇಂದ್ರವೆನಿಸಿಕೊಂಡಿದೆ. ಚರ್ಚದ ಮುಖ್ಯದ್ವಾರಗಳ ಮೇಲೆ ಬಣ್ಣದ ಗಾಜಿನಿಂದ ಅಲಂಕೃತಗೊಂಡ ಅನೇಕ ಗಾಜಿನ ಚಿತ್ರಸರಣಿಗಳಿವೆ. ಪಂಚಭುಜಗಳುಳ್ಳ ಕಮಾನುಗಳ ಕಿಟಕಿಗಳನ್ನು ಹೊಂದಿರುವ ಇವು ಪರಮ ತ್ರಿತ್ವದ ಮೂರು ವ್ಯಕ್ತಿಗಳನ್ನು ಪ್ರತಿಬಿಂಬಿಸುತ್ತವೆ. ಬಲಭಾಗದ ಪ್ರವೇಶದ್ವಾರದ ಕಿಟಕಿಗಳ ಗಾಜಿನ ಮೇಲೆ ದೇವರ ಕೈಗಳನ್ನು ಕಾಲ್ಪನಿಕವಾಗಿ ಚಿತ್ರಿಸಲಾಗಿದ್ದು, ದೇವರು ವಿಶ್ವದ ಸೃಷ್ಟಿಕರ್ತನೆಂದು ಸಂಕೇತಿಸಿದರೆ, ಎಡಭಾಗದ ದ್ವಾರದ ಕಿಟಕಿಯ ಮೇಲೆ ಪವಿತ್ರಾತ್ಮನು ತನ್ನ ಸಪ್ತವರಗಳನ್ನು ವಿಶ್ವಾಸಿಗಳ ಮೇಲೆ ಸುರಿಸುವ ಸಂಕೇತ ಪ್ರಧಾನ ಚಿತ್ರವು ಭಕ್ತರನ್ನೆಲ್ಲಾ ಪಾವನಗೊಳಿಸುತ್ತದೆ

೯. ಪ್ರೊ. ಎಂ. ವಿ. ಶ್ರೀನಿವಾಸ ; (ಸಂ) ಕರ್ನಾಟಕ ಚರಿತ್ರೆ (ಸಂಪುಟ ಆರು), ಪುಟ ೨೬೩

ಹಾಗೂ ಚರ್ಚದ ಮಧ್ಯದಲ್ಲಿರುವ ಪ್ರಮುಖ ದ್ವಾರದ ಕಿಟಕಿಯ ಮೇಲೆ ಬಾಲ ಯೇಸುವನ್ನು ಪಶ್ಚಿಮದ ಮೂರು ರಾಜರು ಬಂದು ನಮಸ್ಕರಿಸುವ ಸಂಯೋಜನಾ ಚಿತ್ರವಿದೆ.

ಚರ್ಚಿನಲ್ಲಿ ಮೂರು ಹಂತಗಳಲ್ಲಿ ರಚಿಸಲಾದ ಗಾಜಿನ ಚಿತ್ರಗಳು ಕಂಡು ಬರುತ್ತವೆ. ಮೊದಲ ಹಂತದಲ್ಲಿನ ಚಿತ್ರಗಳು ಯೇಸುವಿನ ಜನನದಿಂದ ಮರಣದ ತನಕ ನಂತರ ಪುನರುತ್ಥಾನದ ವಿಷಯಗಳನ್ನು ಒಳಗೊಂಡರೆ, ಎರಡನೆಯ ಹಂತದಲ್ಲಿ ಚಿತ್ರಗಳು ದೇಗುಲದ ಮಧ್ಯದ ಗೋಡೆಗಳ ಕಿಟಕಿಗಳಲ್ಲಿ ಕಂಡು ಬರುತ್ತವೆ. ಇಲ್ಲಿ ರಚನೆಗೊಂಡಿರುವ ೧೩ ಕಿಟಕಿಗಳಲ್ಲಿ ಬಣ್ಣದ ಗಾಜಿನ ಕೈ ಚಿನ್ಹೆಗಳು ಬೈಬಲ್ ಆಧಾರಿತವಾಗಿದ್ದು ಅದರಲ್ಲಿನ ಪ್ರಮುಖ ಘಟನೆಗಳನ್ನು ನೆನಪಿಸುತ್ತವೆ. ಚರ್ಚದ ಮೂರನೆಯ ಹಂತದ ವೃತ್ತಾಕಾರವಾಧ ಕಿಟಕಿಗಳಲ್ಲಿ ಅಳವಡಿಸಿದ ಗಾಜುಗಳ ಮೇಲೆ ಪ್ರಪಂಚದ ಕೆಲವು ಶ್ರೇಷ್ಠ ಧರ್ಮಗಳ ಚಿನ್ಹೆಗಳನ್ನು ಚಿತ್ರಿಸಲಾಗಿದೆ. ಈ ಚಿತ್ರಗಳು 'ಸರ್ವಧರ್ಮ ಸಮನ್ವಯ' ಎಂದು ಸಾರುತ್ತವೆ.

ಕ್ರೈಸ್ತ ಮತಧರ್ಮಿಯರು ಕರ್ನಾಟಕದ ವಿವಿಧ ನಗರ ಪ್ರದೇಶಗಳಲ್ಲಿ ಕಂಡು ಬರುತ್ತರಾದರೂ, ಅವರಲ್ಲಿ ಅನೇಕ ಒಳಪಂಗಡಗಳನ್ನು ಸಹಿತ ಕಾಣಬಹುದಾಗಿದೆ. ಎನೇ ಇದ್ದರೂ ಇವರು ಕ್ರಿಸ್ತ ಧರ್ಮ ಪ್ರಚಾರದ ಜೊತೆಗೆ ಸಮಾಜ ಸೇವೆ, ಶಿಕ್ಷಣ ಕ್ಷೇತ್ರದಲ್ಲಿ ತೊಡಗಿಸಿಕೊಂಡಿದ್ದಾರೆ. ಮುಖ್ಯವಾಗಿ ಕ್ರೈಸ್ತಮಠಗಳನ್ನು ನಿರ್ಮಾಣ ಮಾಡುವಾಗ ಕಟ್ಟಡಗಳ ಬೃಹತ್ ಕಿಟಕಿಗಳಲ್ಲಿ ಬಣ್ಣ ಬಣ್ಣದ ಗಾಜನ್ನು ಅಳವಡಿಸುವುದರ ಜೊತೆಗೆ ಆ ಧರ್ಮದ ಮೂಲ ಪುರುಷ ಯೇಸುಕ್ರಿಸ್ತನ ಜೀವನ ಕಥೆ, ಧರ್ಮಪ್ರವರ್ತಕರ, ಧರ್ಮದ ಅನುಯಾಯಿಗಳ, ಕಟ್ಟಡಕ್ಕೆ ಸಹಾಯ, ಸಹಕಾರ ನೀಡಿದವರು ಚಿತ್ರಗಳನ್ನು ಬರೆದು ಆ ಮೂಲಕ ಮತ ಪ್ರಚಾರ ಮಾಡಿದ್ದನ್ನೂ, ಮಾಡುತ್ತಿರುವುದನ್ನು ನೋಡಬಹುದು. ಗಾಜಿನ ಚರಿತ್ರೆಯನ್ನು ಅವಲೋಕಿಸಿದಾಗ ಬಹುಶಃ ಈ ಧರ್ಮದವರು ಬಳಸಿಕೊಂಡಿರುವಷ್ಟು ಬೇರೆ ಯಾವ ಧರ್ಮದವರು ಗಾಜನ್ನು ಬಳಸಿಕೊಂಡಿಲ್ಲ ಎನ್ನಬಹುದು.

ಹಿಂದೂ ಧರ್ಮದ ಹಾಗೂ ಹಿಂದೂ ದೇವಾನುದೇವತೆಗಳ ಪುರಾಣ, ಪುಣ್ಯಕಥೆಗಳನ್ನು ಚಿತ್ರಕಲೆಯ ಮೂಲಕ ನೋಡಬಹುದು. ಪ್ರಾಚೀನ ಶಾಸ್ತ್ರ, ಗ್ರಂಥಗಳಲ್ಲಿ ವಿವಿಧ ಹಸ್ತಪ್ರತಿಗಳಲ್ಲಿ ಭಿತ್ತಿಗಳಲ್ಲಿ ಹಾಗೂ ವಿವಿಧ ಫಲಕಗಳಲ್ಲಿ ಮೈದಳೆದ ಚಿತ್ರಕಲೆಯನ್ನು ಗಮನಿಸಬಹುದಾಗಿದೆ. ಯಾವುದೇ ಕಲೆ ರೂಪಪಡೆದು ಕೊಂಡಿದ್ದರೂ ಧರ್ಮದ ಚೌಕಟ್ಟನ್ನು ಅನುಸರಿಸಿವೆ. ಧಾರ್ಮಿಕ ಆಚರಣೆಗಳು ಕಲೆಯ ರೂಪವನ್ನು ತಾಳುತ್ತವೆ. ಈ ಆಚರಣೆಗಳು ಧರ್ಮ ಸಂಪ್ರದಾಯಗಳ ಪ್ರಭಾವಕ್ಕೆ ಸಿಲುಕಿ ದೇವರ ಆರಾಧನೆಗೆ ತೊಡಗಿ, ದೇವರನ್ನು ಸ್ತುತಿಸಲು, ನಂಬಿಸಲು, ದೇವರ ಕಣ್ಣಿಗೆ ಹಬ್ಬ ಮಾಡಲು ಸಾಹಿತ್ಯ, ನೃತ್ಯ, ಅಲಂಕಾರದಂತಹ ಕಲೆಗಳು ಹುಟ್ಟಿಬಂದವು. ಯಾವುದೇ ಕಲೆಯ ಉಗಮವನ್ನು ಧಾರ್ಮಿಕ ಆಚರಣೆಯ ಹಿನ್ನೆಲೆಯಲ್ಲಿ ದೈವದ ಆರಾಧನೆಯ ಹಿನ್ನೆಲೆಯಲ್ಲಿ ಬೆಳೆದು ಬಂದಿದೆ ಎನ್ನಬಹುದು.[೧೦]

ಮತಾಚರಣೆಯ ಸಂದರ್ಭಗಳಲ್ಲಿ ಹಿಂದೂ ದೇವತೆಗಳ, ಧಾರ್ಮಿಕ ಪುರುಷರ, ಪುರಾಣ, ಪುಣ್ಯ ಕಥೆಗಳ ಹಾಗೂ ಹಿಂದೂ ಧರ್ಮದ ಸಾರವನ್ನು ಗಾಜಿನ ಫಲಕಗಳ ಮೇಲಿನ

---

೧೦. ಡಾ. ಎಸ್.ಸಿ.ಪಾಟೀಲ ; ಕರ್ನಾಟಕದ ಜನಪದ ಚಿತ್ರಕಲೆ, ಪುಟ ೧೭

ಚಿತ್ರಗಳಿಂದ ಅರಿಯಬಹುದಾಗಿದೆ. ಈ ಬಗೆಯ ಚಿತ್ರಗಳು ನಾಡಿನುದ್ದಕ್ಕೂ ವಿವಿಧ ಸಂದರ್ಭಗಳಲ್ಲಿ ರಚನೆ ನೋಡಿದ್ದನ್ನು ನೋಡಬಹುದು. ಹಿಂದೂ ಧರ್ಮದಲ್ಲಿ ಅನೇಕ ಒಳಪಂಗಡಗಳು ಕಾಣಸಿಗುತ್ತವೆ. ವೈಷ್ಣವ ಆರಾಧನೆಯ ಗಾಜಿನ ಚಿತ್ರಗಳು, ಶೈವ ಆರಾಧನೆಯ ಗಾಜಿನ ಚಿತ್ರಗಳು ಹಾಗೂ ಇತರೆ ದೇವತೆಗಳ ಆರಾಧನೆಯ ಗಾಜಿನ ಚಿತ್ರಗಳು ದೊರಕುತ್ತವೆ.

ಈ ಕಲಾಪ್ರಕಾರವನ್ನು ಭಾರತೀಯ ಚಿತ್ರಕಾರರು ಸಮರ್ಥವಾಗಿ ಬಳಸಿಕೊಂಡರು. ಇದಕ್ಕೆ ಗಾಜಿನ ಆಕರ್ಷಕ ಹೊಳಪಿನ ಮೇಲ್ಮೈ, ಪಾರದರ್ಶಕತೆ ಹಾಗೂ ವೈಶಿಷ್ಟ್ಯ ಪೂರ್ಣವಾದ ರಚನಾ ವಿಧಾನವೇ ಕಾರಣವಾಗಿರಬಹುದು. ಹಾಗಾಗಿಯೇ ಗಾಜಿನ ಮೇಲೆ ಹಿಂದೂ ದೇವತೆಗಳ ಚಿತ್ರಗಳನ್ನು ಬರೆದು ನಾಡಿನುದ್ದಕ್ಕೂ ಹರಡಿದ್ದಾರೆ. ಪೌರಾಣಿಕ ಕಥೆಗಳಾದ ರಾಮಾಯಣ, ಮಹಾಭಾರತ ಹಾಗೂ ದೇವಾನುದೇವತೆಗಳ ಚಿತ್ರಗಳನ್ನು ಬರೆದು ಮಾರಾಟ ಮಾಡುತ್ತಿದ್ದರು. ವಿಜಯನಗರ ಪತನಗೊಂಡ ನಂತರ ಅವರ ಆಶ್ರಯದಲ್ಲಿದ್ದ ಕಲಾವಿದರು ಹೊಟ್ಟೆ ಪಾಡಿಗಾಗಿ ದೇಶದುದ್ದಕ್ಕೂ ಚದುರಿಹೋದರು. ಚದುರಿ ಹೋದ ಕೆಲವು ಕಲಾವಿದರು. ನಾಡಿನ ಪ್ರಸಿದ್ಧ ಧಾರ್ಮಿಕ ಕ್ಷೇತ್ರಗಳಲ್ಲಿ ನೆಲೆಸಿ ಅಲ್ಲಿ ದೇವರ ಚಿತ್ರಗಳನ್ನು ಬರೆದು ಮಾರಾಟ ಮಾಡುತ್ತಿದ್ದರು. ಈ ಹಿನ್ನೆಲೆಯಲ್ಲಿಯೇ ಗಾಜಿನ ಚಿತ್ರಕಲೆ ಜನಪ್ರೀಯ ಕಲೆಯಾಗಿ ಪರಿಣಮಿಸಿತು. ಇಂತಹ ಕ್ಷೇತ್ರಗಳಲ್ಲಿ ನೆಲೆಸಿದ್ದ ಕಲಾವಿದರು ಬೇಡಿಕೆಗನುಗುಣವಾಗಿ ಹೆಚ್ಚು ಮಾರಾಟವಾಗುವ ಗಾಜಿನ ಚಿತ್ರಗಳನ್ನು ಪ್ರತಿಕೃತಿಮಾಡಿ ಮಾರಾಟ ಮಾಡುತ್ತಿದ್ದರು. ಈ ಕಾರಣಕ್ಕಾಗಿಯೇ ಒಂದೇ ವಿಷಯದ ಚಿತ್ರಗಳು ಹೆಚ್ಚು ಸಂಖ್ಯೆಯಲ್ಲಿ ಕಾಣಸಿಗುತ್ತವೆ. ಶ್ರೀಮತಿ ಜಯಾ ಅಪ್ಪಾಸ್ವಾಮಿಯವರು 'Indian Paintings on Glass'ಎಂಬ ಪುಸ್ತಕದಲ್ಲಿ ಈ ಅಂಶಗಳನ್ನು ಉಲ್ಲೇಖಿಸಿದ್ದಾರೆ.

ತಂಜಾವೂರನ್ನು ಆಳುತ್ತಿದ್ದ ಮರಾಠ ದೊರೆಗಳು, ಮೈಸೂರು ದೊರೆಗಳು, ಸುರಪುರ ದೊರೆಗಳು, ಕೆಳದಿ ಅರಸರು, ಚಿತ್ರದುರ್ಗದ ನಾಯಕರು ಹಾಗೂ ಸಣ್ಣ ಪುಟ್ಟ ಅರಸು ಮನೆತನಗಳ ಆಶ್ರಯದಲ್ಲಿ ರಚನೆಗೊಂಡ ಗಾಜಿನ ಚಿತ್ರಗಳು ಕರ್ನಾಟಕದಲ್ಲಿ ಕಂಡುಬಂದಿವೆ. ಇವು ಧಾರ್ಮಿಕ ಅಂಶಗಳನ್ನು ಎತ್ತಿ ಹಿಡಿಯುತ್ತವೆ. ಮರಾಠ ಅರಸರ ಗಾಜಿನ ಚಿತ್ರಗಳು ಶ್ರೀಕೃಷ್ಣ ಬಾಲಲೀಲೆಗಳು, ಶಿವಲೀಲೆಗಳು ಹಾಗೂ ಇತರ ದೇವತೆಗಳ ಚಿತ್ರಗಳು ಕಂಡು ಬಂದರೆ ಮೈಸೂರು ಅರಸರ ಗಾಜಿನ ಚಿತ್ರಗಳಲ್ಲಿ ಶಿವ, ಗಣೇಶ, ಬೆಣ್ಣೆ ಕೃಷ್ಣ, ವೇಣುಗೋಪಾಲ, ಶ್ರೀರಾಮನ ಪಟ್ಟಾಭಿಷೇಕ ಹಾಗೂ ದೇವಾನು ದೇವತೆಗಳ ಚಿತ್ರಗಳು ಹೆಚ್ಚು ಪ್ರಮಾಣಗಳಲ್ಲಿ ರಚನೆಗೊಂಡಿವೆ.

ಗಾಜಿನ ಚಿತ್ರಗಳು ಆಯಾ ಧರ್ಮ, ಪಂಥಗಳ, ದೇವತೆಗಳ ಆರಾಧಕರ ಆಶ್ರಯದ ಮೇರೆಗೆ ರಚನೆಗೊಂಡಿರುವದನ್ನು ಗಮನಿಸಬಹುದು. ವೈಷ್ಣವ ಧರ್ಮ ಆರಾಧಕರ ಮನೆತನಗಳಲ್ಲಿ ವಿಷ್ಣು ಹಾಗೂ ಅವನ ಅವತಾರಗಳಿಗೆ ಸಂಬಂಧಸಿದ ಚಿತ್ರಗಳು ಕಾಣಿಸಿಕೊಂಡರೆ, ಶಿವನ ಆರಾಧಕರ ಮನೆತನಗಳಲ್ಲಿ ಶಿವನಿಗೆ ಸಂಬಂಧಿಸಿದ ಗಾಜಿನ ಚಿತ್ರಗಳು ಕಂಡು ಬರುತ್ತವೆ. ಈ ವಿಷಯಕ್ಕೆ ಸಂಬಂಧಿಸಿದಂತೆ ರಾಜ್ಯದ ಮಹಿಳಾ ಸಾಹಿತಿಗಳಾದ ಶ್ರೀಮತಿ ವೈದೇಹಿಯವರು ಹೀಗೆ ಅಭಿಪ್ರಾಯ ಪಡುತ್ತಾರೆ. ಗಾಜಿನ ಚಿತ್ರಕಲೆಯು ಒಂದು ಕೌಟುಂಬಿಕ ಕಲೆಯಾಗಿದ್ದು, ಈ ಕಲೆಯನ್ನು ಹೆಚ್ಚಾಗಿ ಮಹಿಳೆಯರೇ ಮಾಡುತ್ತಾರೆ. ವೈಶ್ಯ ಕುಟುಂಬಗಳಲ್ಲಿ ಹೆಚ್ಚಾಗಿ ಹೆಣ್ಣುಮಕ್ಕಳು (ಮಹಿಳೆಯರು)

ಮನೆಯಲ್ಲೇ ಇರುವುದರಿಂದ ಅವರು ಕಸೂತಿ ಹೆಣೆಯುವುದು. ಹಾಡು ಹಾಡುವುದು, ಸಂಗೀತ ನುಡಿಸುವುದು, ಚಿತ್ರಕಲೆಯನ್ನು ಬಿಡಿಸುವುದು, ದೇವರ ಪೂಜೆ ಪುನಸ್ಕಾರಗಳಂತಹ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದುದೆನೆಂದರೆ ವೈಶ್ಯ ಸಮುದಾಯದ ಪುರುಷರು ವ್ಯಾಪಾರಿಗಳಾಗಿರುವುದರಿಂದ ಅವರು ಅನೇಕ ವ್ಯಾಪಾರಗಳಲ್ಲಿ ಮಗ್ನರಾಗಿರುತ್ತಾರೆ. ಆದರೆ ಹೆಣ್ಣು ಮಕ್ಕಳು ಹೊರಗೆ ಯಾವುದೇ ಕೆಲಸಕ್ಕೆ ಹೋಗುವುದಿಲ್ಲ. ಆರ್ಥಿಕವಾಗಿ ಉತ್ತಮರಾಗಿರುವುದರಿಂದ ಇವರು ಮನೆಯಲ್ಲೇ ಕಾಲಕಳೆಯುತ್ತಾರೆ. ಆದ್ದರಿಂದ ಈ ಮಹಿಳೆಯರು ಸಮಯವನ್ನು ಕಳೆಯಲು ಈ ರೀತಿಯ ಕಾರ್ಯಗಳಲ್ಲಿ ತೊಡಗಿಕೊಳ್ಳುತ್ತಾರೆ. ವೈಶ್ಯ ಹೆಣ್ಣುಮಕ್ಕಳು ಕೆಲವರು ಉತ್ತಮ ಕಲವಿದರೂ ಇದ್ದಾರೆ.

ಗಾಜಿನ ಮೇಲಿನ ಚಿತ್ರಗಳು ಹೆಚ್ಚಾಗಿ ಈ ಸಮುದಾಯದ ಕುಟುಂಬಗಳಲ್ಲಿ ಕಂಡು ಬರುವವು. ಈ ಚಿತ್ರಗಳನ್ನು ಗಮನಿಸಿದಾಗ ಈ ಸಮುದಾಯದ ಮಹಿಳೆಯರ ದೈಹಿಕ ಲಕ್ಷಣಗಳು, ಉಡುಗೆ, ತೊಡುಗೆ ಆಭರಣಗಳ ಬಳಕೆ ಹಾಗೂ ಬಳಸುವ ವಿವಿಧ ವಸ್ತುಗಳು ಹಾಗೂ ಹಿನ್ನೆಲೆಯನ್ನು ಅವರ ಮನೆಯ ಪರಿಸರವನ್ನು ಚಿತ್ರಿಸಿದ್ದನ್ನು ಕಾಣಬಹುದು. ಮನೆತನದ ದೇವತೆಗಳಾದ ತಿರುಪತಿಯ ತಿರುಮಲೇಶ, ಬಾಲಾಜಿ, ವೆಂಕಟೇಶ, ಬಾಲಕೃಷ್ಣ, ಯುವಕೃಷ್ಣ ಸಖಿಯರು ಇತ್ಯಾದಿ ಪೌರಾಣಿಕ ಗಾಜಿನ ಚಿತ್ರಗಳನ್ನು ರಚಿಸಿದ್ದಾರೆ ಎನ್ನುವರು. ಇಂತಹ ಚಿತ್ರಗಳು ಹವ್ಯಾಸಿ ಹಿನ್ನೆಲೆಯಲ್ಲಿ ರಚನೆಗೊಂಡಿರುವುದು ವಿಶೇಷ. ಇಂತಹ ಚಿತ್ರಗಳಲ್ಲಿ ಆಕೃತಿಗಳ ಸಂಯೋಜನೆ, ರೇಖಾ ನಿರೂಪಣೆ, ವರ್ಣ ವಿನ್ಯಾಸ ಹಿನ್ನೆಲೆ ಹಾಗೂ ಮುನ್ನೆಲೆಯ ಯಥಾದರ್ಶನವನ್ನು ಗಮನಿಸಿದ್ದಾರೆ. ಈ ಮಹಿಳೆಯರೇ ಚಿತ್ರಸಿದ್ದು ಎಂದು ಗೊತ್ತಾಗುತ್ತದೆ.

ಗಾಜಿನ ಚಿತ್ರ ಕಲಾವಿದರು ತಮ್ಮ ಕಲ್ಪನೆಗೆ ತಕ್ಕಂತೆ ಹಾಗೂ ಸಮಾಜದ ನಂಬಿಕೆಗೆ ತಕ್ಕಂತೆ ಚಿತ್ರಿಕರಿಸುತ್ತಾನೆ.[೧೧] ಬುದ್ಧ, ಬಸವ, ಯೇಸು, ಪೈಗಂಬರರನ್ನು ಈ ನಿಟ್ಟಿನಲ್ಲಿ ಉದಾಹರಿಸಬಹುದು. ಹುಬ್ಬಳ್ಳಿಯ ಕರವೀರಶೆಟ್ಟರ ಮನೆಯಲ್ಲಿ ಹಾಗೂ ಧಾರವಾಡ ಜಿಲ್ಲೆಯ ಗುಡುಗೇರಿಯ ಹುತಗೊಣ್ಣನವರ ಮನೆಯಲ್ಲಿ ಬಸವೇಶ್ವರ ಹಾಗೂ ನೀಲಾಂಬಿಕೆಯರ ಚಿತ್ರಗಳು ಕಂಡು ಬರುತ್ತವೆ. ಈ ಎರಡು ಮನೆತನಗಳು ಲಿಂಗಾಯತ ಮತಕ್ಕೆ ಸೇರಿವೆ. ಈ ಮನೆತನಗಳ ನಾಲ್ಕೂ ಚಿತ್ರಗಳ ವಿಷಯ ಒಂದೇಯಾಗಿದ್ದರೂ ರಚನಾ ವಿಧಾನ ವಿಭಿನ್ನವಾಗಿದೆ.

ಜೈನಧರ್ಮಕ್ಕೆ ಸಂಬಂಧಿಸಿದ ಕೆಲವು ಗಾಜಿನ ಚಿತ್ರಗಳು ಕರ್ನಾಟಕದಲ್ಲಿ ಇತ್ತೀಚೆಗೆ ನಿರ್ಮಾಣಗೊಂಡ ಕೆಲವು ಬಸದಿಗಳಲ್ಲಿ ಆ ಧರ್ಮಕ್ಕೆ ಸಂಬಂಧಿಸಿದ ಕಥಾನಕ ದೃಶ್ಯಗಳನ್ನೊಳಗೊಂಡ ಸನ್ನಿವೇಶಗಳು ಕಂಡು ಬರುತ್ತವೆ. ಜೈನರು ಇತ್ತೀಚಿನ ದೇವಾಲಯಗಳನ್ನು ಆಧುನಿಕವಾಗಿ ಸಂಗಮವರಿ ಕಲ್ಲಿನಲ್ಲಿಯೇ ನಿರ್ಮಿಸುತ್ತಿದ್ದು ಇಂತಹ ದೇವಾಲಯದ ಭಿತ್ತಿಗಳಲ್ಲಿ ಬಣ್ಣ ಬಣ್ಣದ ಗಾಜುಗಳ ಮೇಲೆ ತೀರ್ಥಂಕರ ಜೀವನ ಚಿತ್ರಗಳನ್ನು ರಚಿಸಿರುವುದು ಕಂಡುಬರುತ್ತದೆ.

ಗದಗ ಜಿಲ್ಲೆಯ ಲಕ್ಷ್ಮೇಶ್ವರದ ಶ್ವೇತಾಂಬರ ಪಂಥಕ್ಕೆ ಸೇರಿದ ಶ್ರೀ ಶಾಂತಿನಾಥ ಶ್ವೇತಾಂಭರ ಜೈನ ಮಂದಿರದಲ್ಲಿ ಗಾಜಿನ ಚಿತ್ರಗಳಿವೆ. ಈ ದೇಗುಲವು ಸಂಪೂರ್ಣ ಅಮೃತ

೧೧. ಚಂದ್ರಕಾಂತ ಕುಸನೂರು ; ಕಲೆ, ಸಾಹಿತ್ಯ ಮತ್ತು ಚಿತ್ರಕಲೆ, ಪುಟ ೭೧

ಶಿಲೆಯಲ್ಲಿ ನಿರ್ಮಾಣಗೊಂಡಿದ್ದು, ದೇವಾಲಯದ ಒಳಗೋಡೆಗಳು ಸಂಪೂರ್ಣ ಗಾಜಿನ ಚಿತ್ರಗಳಿಂದ ಆವರಿಸಿದೆ. ಈ ಚಿತ್ರಗಳ ರಚನೆಯನ್ನು ರಾಜಸ್ಥಾನದ ಕಲಾವಿದರು ೧೯೯೫ ರಿಂದ ೨೦೦ ಇಸ್ವಿವರೆಗೆ ಮಾಡಿದ್ದಾರೆ. ಮೈಸೂರಿನ ರಾಮಾನುಜ ರಸ್ತೆಯಲ್ಲಿರುವ ಸಾಯಿಬಾಬಾ ಮಂದಿರದ ಭಿತ್ತಿಗಳ ಮೇಲೆ ಗಾಜಿನ ಚಿತ್ರಗಳು ಕಂಡು ಬರುತ್ತವೆ. ಇದೇ ರೀತಿ ಹೆಚ್ಚು ಹೆಚ್ಚು ಸಂಖ್ಯೆಗಳಲ್ಲಿ ಗಾಜನ್ನು ಬಳಸಲಾಗುತ್ತಿದ್ದು, ದೇವಾಲಯಗಳು ಹೆಚ್ಚು ಸುಂದರವಾಗಿ ಕಾಣುವುದರ ಜೊತೆಗೆ ಆಧ್ಯಾತ್ಮ ಪರಿಸರವನ್ನು ನಿರ್ಮಾಣ ಮಾಡುತ್ತವೆ.

ಧರ್ಮದ ಹಿನ್ನೆಲೆ ಗಾಜಿನ ಚಿತ್ರಗಳನ್ನು ವೃತ್ತಿಪರ ಹಾಗೂ ಹವ್ಯಾಸಿ ಕಲಾವಿದರು ರಚಿಸಿದ ಅನೇಕ ಧಾರ್ಮಿಕ ದೇವರುಗಳಚಿತ್ರಗಳನ್ನು ರಚನೆಗೊಂಡಿವೆ. ಬೆಂಗಳೂರಿನ ಸಂಪಂಗಿ ರಾಮನಗರದ ನಿವಾಸಿ ಎಂ. ಎಸ್. ಗುರಪ್ಪ ಅವರು ೬೦ ವರ್ಷಗಳ ಪೂರ್ಣಬದುಕನ್ನು ಕಳೆದು ಇತ್ತೀಚೆಗೆ ನಿಧನರಾದರು. ಇವರು ವೃತ್ತಿಯಿಂದ ೧೯೪೦ ರ ಸುಮಾರಿಗೆ ಬೆಂಗಳೂರಿನ ಎಚ್. ಎ. ಎಲ್. ಸಂಸ್ಥೆಯಲ್ಲಿ ಉದ್ಯೋಗಿಯಾಗಿದ್ದರು. ಅವರ ಇನ್ನೊಂದು ಹವ್ಯಾಸ ಚಿತ್ರ ಬರೆಯುವುದು. ಅದು ಗಾಜು ಮತ್ತು ಅಕ್ರಲಿಕ್ ಸೀಟ್‌ಗಳ ಮೇಲೆ ದೇವರ ಚಿತ್ರಗಳನ್ನು ಬರೆಯುವುದು. ಇವರು ರಚಿಸಿದ ದೇವರ ಚಿತ್ರಗಳು ಬೆಂಗಳೂರು ಹಾಗೂ ಸುತ್ತಮುತ್ತಲಿನ ನಗರ ಪ್ರದೇಶಗಳಲ್ಲಿನ ದೇವಾಲಯಗಳಲ್ಲಿ ಆರಾಧನ ಮಂದಿರಗಳಲ್ಲಿ, ಕಲ್ಯಾಣ ಮಂಟಪಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಸಿಗುತ್ತವೆ. ಗುರಪ್ಪನವರು ಗಾಜು ಹಾಗೂ ಅಕ್ರಲಿಕ್ ಸೀಟ್‌ಗಳ ಮೇಲೆ ಸಾವಿರಾರು ಚಿತ್ರಗಳನ್ನು ಬರೆದಿದ್ದಾರೆ. ಪಂಚಮುಖ ಗಣೇಶ, ಶಿವ, ಪಾರ್ವತಿ, ವೆಂಕಟೇಶ, ಬಾಲಾಜಿ ಹಾಗೂ ಇತರೆ ದೇವತೆಗಳ ಚಿತ್ರಗಳನ್ನು ಈ ಕಲಾವಿದರು ರಚಿಸಿದ್ದಾರೆ. 'ಸ್ವರ್ಣ ಆರ್ಟ' ಗ್ಯಾಲರಿಯೊಂದನ್ನು ನಿರ್ಮಿಸಿ ಆ ಮೂಲಕ ಅನೇಕ ಕಲಾವಿದರಿಗೆ ತರಬೇತಿಯನ್ನು ನೀಡಿದ್ದಾರೆ. ಅವರ ಕಿರಿಯ ಮಗ ಸುರೇಶ. ಜಿ.ಎಸ್. ಇವರ ಕಲಾ ಶಿಷ್ಯರಲ್ಲಿ ಒಬ್ಬರು. ಇವರು ಅವರ ತಂದೆಯ ಮಾರ್ಗದರ್ಶನದಲ್ಲಿ ಅನೇಕ ಚಿತ್ರಗಳನ್ನು ಬರೆದಿದ್ದಾರೆ. ವಿಶೇಷವಾಗಿ ದೇವರ ಚಿತ್ರಗಳನ್ನು ರಚಿಸಿದ್ದಾರೆ.

ಬಳ್ಳಾರಿ ಜಿಲ್ಲೆಯ ಮಲಪನ ಗುಡಿಯ ನಿವಾಸಿಯಾದ ಮೂರ್ತ್ಯಾಚಾರ್. ವಿ. ಬಡಿಗೇರರವರ ತಂದೆಯವರಾದ ಕುಡಿತಿನಿ ವೀರಾಚಾರ್ಯರು ಅನೇಕ ಗಾಜಿನ ಚಿತ್ರಗಳನ್ನು ಬರೆದಿದ್ದಾರೆ. ವಿಶ್ವಕರ್ಮ ಮನೆತನದವರಾದ ಇವರು ಚಿತ್ರಕಾರರು, ಶಿಲ್ಪಕಾರರು, ನಾಟಕಕಾರರು ಹಾಗೂ ಸಂಗೀತಕಾರರು ಆಗಿದ್ದರು. ಈ ಕಲಾವಿದರು 'ಕಾಮಧೇನು'ವಿನ ಚಿತ್ರಗಳನ್ನು ಗಾಜಿನ ಮೇಲೆ ಬರೆದಿದ್ದಾರೆ. ಇದೇ ಚಿತ್ರಗಳು ೧೦ಕ್ಕೂ ಹೆಚ್ಚು ಸಂಖ್ಯೆಯಲ್ಲಿ ಇಂದು ನಮಗೆ ಸಿಗುತ್ತವೆ. ಇವರ ಸಂಬಂಧಿಗಳೇ ಆದ ಹೂವಿನ ಹಡಗಲಿ ತಾಲೂಕಿನ ಇಟಗಿಯ ನಿವಾಸಿಯಾದ ಶ್ರೀ ಗಂಗಾಧರ ಇಟಗಿಯವರು ಅನೇಕ ದೇವರ ಗಾಜಿನ ಚಿತ್ರಗಳನ್ನು ಬರೆದಿದ್ದಾರೆ. ಇವರೂ ಕೂಡಾ ವಿಶೇಷವಾಗಿ ಕಾಮಧೇನುವಿನ ಚಿತ್ರ ಬರೆದಿದ್ದನ್ನು ಗಮನಿಸಬಹುದು. ಇದೇ ಚಿತ್ರಗಳು ಹೆಚ್ಚು ಸಂಖ್ಯೆಗಳಲ್ಲಿ ನಿರ್ಮಾಣಗೊಂಡಿರುವುದನ್ನು ನೋಡಿದರೆ, ಆ ದೇವತೆಯ ಆರಾಧಕರ ಬೇಡಿಕೆಯೇ ಕಾರಣವೆನ್ನಬಹುದು. ಕಲಾವಿದರೂ ಸಹಿತ ಜನರ ಅವಶ್ಯಕತೆಗನುಗುಣವಾಗಿ ರಚಿಸಿರುವುದನ್ನು ಆ ಕಲಾವಿದರ ಅನುಭವಗಳಿಂದ ತಿಳಿಯುತ್ತದೆ. ಉತ್ತರ ಕನ್ನಡದ ಶಿರಸಿಯ ಯುವ ಚಿತ್ರಕಲಾವಿದ

ಶ್ರೀ ಅರ್ಜುನ, ಅನಂತ ನಗರಕರ್ ಅವರು ಗಾಜಿನ ಚಿತ್ರಬಿಡಿಸುವುದನ್ನು ವೃತ್ತಿಯಾಗಿರಿಸಿಕೊಂಡಿದ್ದಾರೆ. ಅದರಲ್ಲೂ ವಿಶೇಷವಾಗಿ ಹಿಂದೂ ಧರ್ಮದ ದೇವಾನುದೇವತೆಗಳನ್ನು ಗಾಜಿನ ಮೇಲೆ ನೂರಾರು ಸಂಖ್ಯೆಯಲ್ಲಿ ರಚಿಸಿದ್ದಾರೆ. ರಾಮ, ಕೃಷ್ಣ, ಗಣೇಶ, ಲಕ್ಷ್ಮೀ, ದುರ್ಗೆ ಇತ್ಯಾದಿ ದೇವರುಗಳ ಚಿತ್ರಗಳು ವಿಶೇಷವಾಗಿವೆ. ಅರ್ಜುನ ಅವರು ಪ್ರಸ್ತುತ ಚಿತ್ರಕಲಾ ಪದವಿಯನ್ನು ಮಾಡುತ್ತಿದ್ದಾರೆ.

ಮಂಡ್ಯ ಜಿಲ್ಲೆಯೆ ಮೇಲುಕೋಟೆಯ ನಿವಾಸಿ ಶ್ರೀಮತಿ ರಂಜಿತಾ ರಾಜೇಶರವರು ಗಾಜಿನ ಮೇಲೆ ಅನೇಕ ದೇವರ ಚಿತ್ರಗಳನ್ನು ಬರೆದಿದ್ದಾರೆ. ವಿಷ್ಣುವಿನ ದಶಾವತಾರಕ್ಕೆ ಸಂಬಂಧಿಸಿದ ಚಿತ್ರಗಳನ್ನು ಕಾಣಬಹುದು. ಮೇಲುಕೋಟೆಯು ಪ್ರಸಿದ್ಧ ಧಾರ್ಮಿಕ ಕೇಂದ್ರವು ಹೌದು ಹಾಗೂ ಮೈಸೂರು ಅರಸರ ಕಾಲಕ್ಕೆ ಕಲಾಕೇಂದ್ರವೂ ಆಗಿತ್ತು. ಬಾಗಲಕೋಟೆ ಜಿಲ್ಲೆಯ ಬಾದಾಮಿಯ ಭಾರತಿ ಸರಗಣಾಚಾರಿಮಠರವರು ನೂರು ಗಾಜಿನ ಚಿತ್ರಗಳನ್ನು ಬರೆದಿದ್ದಾರೆ. ಇವರು ಮೂಲತಃ ಚಿತ್ರಕಲೆಯಲ್ಲಿ ಪದವಿ ಪಡೆದುಕೊಂಡಿದ್ದಾರೆ. ಗಣೇಶ, ಶಿವ, ಪಾರ್ವತಿ, ಕೃಷ್ಣ, ಲಕ್ಷ್ಮೀ, ಸರಸ್ವತಿಯಂತಹ ದೇವತೆಗಳ ಚಿತ್ರಗಳನ್ನು ಗಾಜಿನ ಮೇಲೆ ರಚಿಸಿದ್ದಾರೆ. ಇವರು ಅನೇಕ ಯುವ ಕಲಾವಿದೆಯರಿಗೆ ತರಬೇತಿಯನ್ನು ನೀಡುತ್ತಲಿದ್ದಾರೆ. ಇದೇ ರೀತಿ ನಾಡಿನೂದ್ದಕ್ಕೂ ಪುರುಷ ಹಾಗೂ ಮಹಿಳಾ ಕಲಾವಿದರೂ ವೃತ್ತಿ ಹಾಗೂ ಪ್ರವೃತ್ತಿಯಾಗಿ ಗಾಜಿನ ಚಿತ್ರಗಳ ರಚನೆಯಲ್ಲಿ ತೊಡಗಿಸಿಕೊಂಡಿರುವುದನ್ನು ನೋಡುತ್ತೇವೆ. ಇದು ಮನೆಯ ಒಳಗೆ ಕಂಡು ಬರುವ ಕಲೆಯಾದರೆ ಇದನ್ನೇ ಒಂದು ಉದ್ಯಮವನ್ನಾಗಿ ತೊಡಗಿಸಿಕೊಂಡಿರುವುದನ್ನು, ರಾಜ್ಯದ ಬೆಂಗಳೂರು, ಮೈಸೂರು, ಮಂಗಳೂರು, ಹುಬ್ಬಳ್ಳಿ, ಬೆಳಗಾವಿ, ಶಿವಮೊಗ್ಗ, ಬಳ್ಳಾರಿ ಯಂತಹ ಮಹಾನಗರಗಳಲ್ಲಿ ನೋಡುತ್ತೇವೆ.

ಕರ್ನಾಟಕದಲ್ಲಿ ಗಾಜಿನ ಮೇಲಿನ ಚಿತ್ರಕಲೆಯು ಟಿಪ್ಪು ಸುಲ್ತಾನನ ಪ್ರೋತ್ಸಾಹದೊಂದಿಗೆ ಬೆಳೆದು ಬಂದಿತೆಂದು ಹೇಳಬಹುದು. ಯಾಕೆಂದರೆ ಟಿಪ್ಪು ಬ್ರಿಟೀಷರನ್ನು ಗೆಲ್ಲುವ ಸಲುವಾಗಿ ಫ್ರೆಂಚರೊಂದಿಗೆ ಉತ್ತಮ ಸ್ನೇಹ ಸಂಬಂಧವನ್ನು ಬೆಳೆಸಿಕೊಂಡಿದ್ದನು. ಮುಖ್ಯವಾಗಿ ವ್ಯಾಪಾರ ವಹಿವಾಟನ್ನು ಮಾಡಿಕೊಂಡಿದ್ದರಿಂದ ಅನೇಕ ಕೈಗಾರಿಕಾ ಕೆಲಸಗಳು ಉದಯಗೊಂಡವು. ಈ ಮೂಲಕ ಅನೇಕ ವಸ್ತುಗಳನ್ನು ಆಮದು ಹಾಗೂ ರಫ್ತುಗಳಾಗಿ ಮಾಡಲಾಗುತ್ತಿತ್ತು ಟಿಪ್ಪುವು ವಿದೇಶಗಳಿಂದ ಕುಶಲಕರ್ಮಿಗಳನ್ನು ಹಾಗೂ ತಂತ್ರಜ್ಞರನ್ನು ಕರೆಯಿಸಿಕೊಂಡು ಆ ಮೂಲಕ ಕೈಗಾರಿಕಾ ಕ್ಷೇತ್ರದಲ್ಲಿ ಹೊಸ ಪ್ರಯೋಗಗಳನ್ನು ಅಭಿವೃದ್ಧಿ ಪಡಿಸಿದನು. ಹಡಗು ನಿರ್ಮಾಣ, ಬಂದೂಕು ತಯಾರಿಕೆ, ಗಾಜು ಹಾಗೂ ಇತರ ಉಪಯುಕ್ತ ವಸ್ತುಗಳ ತಯಾರಿಕೆಯಲ್ಲಿ ನಿಪುಣರಾದವರನ್ನು ಕರೆತರುವ ವ್ಯವಸ್ಥೆಯನ್ನು ಮಾಡಿದನು. ಟಿಪ್ಪು ತನ್ನ ರಾಜಧಾನಿ ಮೈಸೂರಿನಲ್ಲಿ ರೇಷ್ಮೆಯ ಉದ್ಯಮವನ್ನು ಅಭಿವೃದ್ಧಿ ಪಡಿಸಿದನು. ಜೊತೆಗೆ ಜವಳಿ ಉದ್ಯಮವನ್ನು ಪ್ರಾರಂಭಿಸಿದನು. ಶ್ರೀರಂಗಪಟ್ಟಣದಲ್ಲಿ ಕಾಗದದ ಕಾರ್ಖಾನೆಯನ್ನು ಸ್ಥಾಪಿಸಲಾಯಿತು. ಚನ್ನಪಟ್ಟಣದಲ್ಲಿ ಗಾಜಿನ ವಸ್ತುಗಳನ್ನು ತಯಾರಿಸಲಾಗುತ್ತಿತ್ತು.[೧೨]

ಐರೋಪ್ಯ ರಾಷ್ಟ್ರಗಳ ಜೊತೆ ಚೀನಾದ ವ್ಯಾಪಾರಿಗಳು ಸಮುದ್ರಯಾನ ವ್ಯಾಪಾರ ಸಂಪರ್ಕವಿದ್ದುದರ ಪರಿಣಾಮವಾಗಿ ಆದೇಶದ ವ್ಯಾಪರಿಗಳು ಗಾಜಿನ ಚಿತ್ರಗಳನ್ನು ಆಮದು

---

೧೨. ಡಾ. ಮೋಹನಕೃಷ್ಣ ರೈ : ವಸಾಹತು ಪೂರ್ವ ಕರ್ನಾಟಕದ ನಗರ ಚರಿತ್ರೆ, ಪುಟ ೪೯

ಮಾಡಿಕೊಳ್ಳುತ್ತಿದ್ದರು. ಇದರೊಂದಿಗೆ ಚೀನಾದ ಬಂದರುಗಳಲ್ಲಿ ಈ ಚಿತ್ರಕಲೆ ಪ್ರಾರಂಭಗೊಂಡಿತು. ನಂತರ ಇವರು ಐರೋಪ್ಯರ ತಂತ್ರಗಳನ್ನು ಬಳಸಿಕೊಂಡು ತಮ್ಮ ದೇಶದಲ್ಲಿ ತಯಾರಿಸಿ ಐರೋಪ್ಯರಾಷ್ಟ್ರಗಳಿಗೆ ರಫ್ತು ಮಾಡತೊಡಗಿದರು. ಇದು ಭಾರತಕ್ಕೂ ಪಾದಾರ್ಪಣೆ ಮಾಡಿತು. ಇಲ್ಲಿಯ ಸಂಸ್ಥಾನಿಕರ ಆಶ್ರಯ ಪಡೆದು ಈ ಕಲೆಯನ್ನು ಅಭಿವೃದ್ಧಿ ಪಡಿಸಿದರು.[೧೩] ಟಿಪ್ಪು ಕೂಡಾ ಈ ಕಲಾವಿದರಿಗೆ ವ್ಯಾಪಾರ ಮಾಡಲು ಸಹಮತ ನೀಡಿದ್ದನೆಂದು ತೋರುತ್ತದೆ. ಜಗನ್ಮೋಹನ ಅರಮನೆಯಲ್ಲಿ ಚೀನಾ ಕಲಾವಿದರು ಹಾಗೂ ಐರೋಪ್ಯ ಕಲಾವಿದರು ರಚಿಸಿದ ಸುಮಾರು ಗಾಜಿನ ಚಿತ್ರಗಳಿವೆ. ಇವು ಶ್ರೀರಂಗಪಟ್ಟಣ ಪತನಗೊಳ್ಳುವ ಪೂರ್ವದಲ್ಲಿ ರಚನೆ ಮಾಡಲಾಗಿದೆ ಎಂದು ಶ್ರೀಮತಿ ಪೋಸ್ವಾನ್ಸ್ ಅಭಿಪ್ರಾಯ ಪಡುತ್ತಾರೆ.

ಮೈಸೂರು ಸುಲ್ತಾನರ ಆಳ್ವಿಕೆಯಲ್ಲಿ ಅದರಲ್ಲೂ ಟಿಪ್ಪು ಸುಲ್ತಾನನ ಆಳ್ವಿಕೆಯಲ್ಲಿ ದೇಶದ ಒಳಗೆ ಹಾಗೂ ಹೊರಗೆ ಅನೇಕ ವಾಣಿಜ್ಯ ಕೇಂದ್ರಗಳು ಹುಟ್ಟಿಕೊಂಡವು. ಮಸ್ಕತ್‌ನಲ್ಲಿ ಟಿಪ್ಪುವಿನ ಎರಡು ವ್ಯಾಪಾರ ಕೇಂದ್ರಗಳಿದ್ದವು. ವಿದೇಶಿ ವ್ಯಾಪಾರಕ್ಕೆ ಸಂಬಂಧಿಸಿದಂತೆ ಟಿಪ್ಪು ತನ್ನ ರಾಜ್ಯದಲ್ಲಿ ಅನೇಕ ಡಿಪೋಗಳನ್ನು ತೆರೆದನು. ಅವುಗಳಲ್ಲಿ ಬಹುಮುಖ್ಯವಾದವುಗಳೆಂದರೆ, ಶ್ರೀರಂಗಪಟ್ಟಣ, ಮೈಸೂರು, ಬೆಂಗಳೂರು, ಕೋಲಾರ, ಸತ್ಯಮಂಗಲ, ಮದನಪಲ್ಲಿ, ಮುಳಬಾಗಿಲು, ಚಿತ್ರದುರ್ಗ, ಬಿದನೂರ, ಶಿಕಾರಿಪುರ, ಮಂಗಳೂರು, ಸೊಂದಾ, ಕುಶಾಲನಗರ, ಕಾರವಾರ, ಭಟ್ಕಳ, ಕಲ್ಲಿಕೋಟೆ, ಬನವಾಸಿ ಮತ್ತು ನಂದಿದುರ್ಗದಲ್ಲಿ ಇದ್ದಂತವು

ಮೈಸೂರು, ಬೆಂಗಳೂರು, ಶ್ರೀರಂಗಪಟ್ಟಣ, ಬಿದನೂರು, ಚಿತ್ರದುರ್ಗ, ಧಾರವಾಡ, ಚಿಕ್ಕಬಳ್ಳಾಪೂರ ಮುಂತಾದವು, ಕೈಗಾರಿಕಾ ಕೇಂದ್ರಗಳಾಗಿಯೂ ಬೆಳೆದವು. ಮಂಗಳೂರು, ಕಲ್ಲಿಕೋಟೆ, ಸದಾಶಿವಘಡಗಳು, ನೌಕಾ ನಿರ್ಮಾಣದ ಪ್ರಮುಖ ನೆಲೆಗಳಿದ್ದವು. ಟಿಪ್ಪು ಅನೇಕ ದೇಶಗಳೊಂದಿಗೆ ವ್ಯಾಪಾರ ಮತ್ತು ರಾಜ ತಾಂತ್ರಿಕ ಸಂಬಂಧಗಳನ್ನು ಹೊಂದಿದ್ದರಿಂದಾಗಿ ಮೈಸೂರು ಅಂದಿನ ಸಂದರ್ಭದ ಪ್ರಮುಖ ರಾಜಧಾನಿಯಾಗಿತ್ತು.[೧೪] ವ್ಯಾಪಾರ ಹಾಗೂ ರಾಜ ತಾಂತ್ರಿಕತೆಯೊಂದಿಗೆ ಕಲಾವಿದರು ಹಾಗೂ ಕರಕುಶಲ ಕಲಾವಿದರು ನೆಲೆಗೊಂಡು ವಿವಿಧ ಕಲೆಗಳನ್ನು ಅಭಿವೃದ್ಧಿ ಪಡಿಸಲು ಸಹಕಾರಿಯಾಯಿತೆನ್ನಬಹುದು. ಟಿಪ್ಪುವು ಕೂಡಾ ಕಲೆ ಹಾಗೂ ಕಲಾವಿದರನ್ನು ಪ್ರೋತ್ಸಾಹಿಸುತ್ತಿದ್ದನು. ೧೭೮೦ ರ ಸುಮಾರಿಗೆ ರಚನೆಗೊಂಡ ಶ್ರೀರಂಗಪಟ್ಟಣದ ದರಿಯಾ ದೌಲತ್ತನ ಅಪೂರ್ವ ಭಿತ್ತಿ ಚಿತ್ರಗಳು ಸಾಕ್ಷಿಯೆನ್ನಬಹುದು. ಬ್ರಿಟೀಷ ಕಲಾವಿದರು, ಇತರ ವಿದೇಶಿ ಕಲಾವಿದರು ರಚಿಸಿದ ಅನೇಕ ಚಿತ್ರಗಳನ್ನು ಕಾಣಬಹುದಾಗಿದೆ. ಇವುಗಳಲ್ಲಿ ಕಲ್ಲಚ್ಚುಮುದ್ರಣದಲ್ಲಿ ರಚಿಸಿದ ಚಿತ್ರಗಳು ಪ್ರಮುಖವಾದವು. ಹೀಗಾಗಿ ಇವನ ಕಾಲದಲ್ಲಿ ರಾಜ ತಾಂತ್ರಿಕರ ಹಾಗೂ ಪ್ರಮುಖ ವ್ಯಕ್ತಿಗಳ ಭಾವಚಿತ್ರಗಳು ಗಾಜಿನ ಮೇಲೆ ರಚನೆಗೊಂಡಿದ್ದನ್ನು ಮನಗಾಣಬಹುದು.

ಟಿಪ್ಪು ಸುಲ್ತಾನನು ಮೂರನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಸೋತ ಕಾರಣ ಯುದ್ಧನಷ್ಟ ಪರಿಹಾರವಾಗಿ ಮೂರುಕೋಟಿ  ಮೂವತ್ತು ಲಕ್ಷ ರೂಪಾಯಿಗಳನ್ನು ಬ್ರಿಟೀಷರಿಗೆ ಕೊಡುವವರೆಗೂ ತನ್ನ ಇಬ್ಬರೂ ಕಿರಿಯ ಪುತ್ರರಾದ ಅಬ್ದುಲ್‌ಖಲಾಕ್ ಮತ್ತು ಮುಯಿಜ್-

---

೧೩. ಡಾ. ಎಸ್. ಕೆ. ಅರುಣಿ ; ದಖ್ಖನಿ ಚಿತ್ರಕಲೆ, ಪುಟ ೧೨೦

೧೪. ಡಾ. ಮೋಹನಕೃಷ್ಣ ರೈ ; ವಸಾಹತು ಪೂರ್ವ ಕರ್ನಾಟಕದ ನಗರ ಚರಿತ್ರೆ, ಪುಟ ೧೯

ಉದ್-ದೀನ್ ರನ್ನು ಅವರ ಬಳಿ ಒತ್ತೆಯಾಳಾಗಿರಿಸಿದ್ದನು. ಅವರ ಬಿಡುಗಡೆಯ ಚಿತ್ರವು ಜಗನ್ಮೋಹನ ಅರಮನೆಯಲ್ಲಿದೆ. ಈ ಗಾಜಿನ ಚಿತ್ರವನ್ನು ಪಾಶ್ಚಿಮಾತ್ಯ ಕಲಾವಿದರು ರಚಿಸಿದ್ದಾರೆ.[೧೫] ಶ್ರೀರಂಗಪಟ್ಟಣ ಪತನಗೊಂಡ ನಂತರ ಅಲ್ಲಿದ್ದ ಕಲಾವಿದರು ಚದುರಿಹೋಗಿ ತಂಜಾವೂರಿನ ಮರಾಠ ದೊರೆಗಳ ಆಶ್ರಯ ಪಡೆದರು. ಇದೇ ಸಂದರ್ಭದಲ್ಲಿ ಮೈಸೂರು ಅರಸರು (ಒಡೆಯರು) ಪುನಃ ಆಡಳಿತದ ಚುಕ್ಕಾಣಿ ಹಿಡಿದರು. ಮೈಸೂರು ಅರಸರು ಬ್ರಿಟೀಷರೊಂದಿಗೆ ಉತ್ತಮ ಸ್ನೇಹ ಸೌಹಾರ್ದತೆಯನ್ನು ಹೊಂದಿದ್ದರು.

ಟಿಪ್ಪು ಬ್ರಿಟೀಷರನ್ನು ಹೊರಹಾಕಲು ವಿವಿಧ ಪ್ರಯತ್ನಗಳನ್ನು ಮಾಡಿದ್ದನ್ನು ಇಲ್ಲಿ ವಿವೇಚಿಸಬಹುದು. ಇವನು ತನ್ನ ಆಳ್ವಿಕೆಯ ಕೊನೆಯ ದಿನಗಳಲ್ಲಿ (ವರ್ಷಗಳಲ್ಲಿ) ಟಿಪ್ಪು ದೇಶವನ್ನು ಬ್ರಿಟೀಷ ದಾಸ್ಯದಿಂದ ಬಿಡುಗಡೆ ಮಾಡಲು ಫ್ರೆಂಚರ ನೆರವನ್ನು ಪಡೆಯುವುದಕ್ಕಾಗಿ ಬಹಳ ಪ್ರಾಮಾಣಿಕ ಪ್ರಯತ್ನ ಮಾಡಿದನು. ಫ್ರಾನ್ಸ್ ದ್ವೀಪದ ಗವರ್ನರ್ ಜನರಲ್ ಮಲಾರ್ಟಿಕ್ ಟಿಪ್ಪುವಿನ ಕಡೆಯಿಂದ ಇಬ್ಬರು ರಾಯಭಾರಿಗಳನ್ನು ಬರಮಾಡಿಕೊಂಡ ನಂತರ ಪ್ಯಾರಿಸಿನ ಫ್ರೆಂಚ್ ಡೈರೆಕ್ಟರಿಗೆ ಸಂದೇಶಗಳನ್ನು ಕಳುಹಿಸಿದನು. ಪ್ರಕಟಿತ ಘೋಷಣೆಯೊಂದರಲ್ಲಿ ೧೭೯೮ ಜನೇವರಿ ೩೦ ರಂದು ಅವನು ಹೇಳುತ್ತಾನೆ.

ಟಿಪ್ಪುವು ಫ್ರೆಂಚ್‌ರೊಂದಿಗೆ ಅಕ್ರಮಣಶೀಲ ಹಾಗೂ ರಕ್ಷಕ ಮೈತ್ರಿಯೊಂದನ್ನು ಸ್ಥಾಪಿಸಿಕೊಳ್ಳಲು ಬಯಸುತ್ತಾನೆ. ಭಾರತದಲ್ಲಿ ಎಲ್ಲಿಯವರೆಗೆ ಯುದ್ಧವು ನಡೆಯುತ್ತಿರುತ್ತದೆಯೋ ಅಲ್ಲಿಯವರೆಗೆ ನಾವು ಕಳಿಸಿಕೊಡುವ ಸೇನೆಗಳನ್ನು ತನ್ನ ವಶದಲ್ಲಿರಿಸಿಕೊಂಡು ಪಾಲಿಸುತ್ತಾನೆ. ಯುದ್ಧವನ್ನು ನಡೆಸಲು ಅಗತ್ಯವಾದ ಎಲ್ಲವನ್ನು ಒದಗಿಸುವುದಾಗಿ ಭರವಸೆ ನೀಡುತ್ತಾನೆ. ವೈನು ಮತ್ತು ಬ್ರ್ಯಾಂಡಿ ಮಾತ್ರವಿಲ್ಲ. ಅವುಗಳನ್ನು ಅವನು ಒದಗಿಸುವುದಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಅವನು ಇಂಗ್ಲೀಷರನ್ನು ಭಾರತದಿಂದ ಹೊರಗಟ್ಟಲು ತೀವ್ರವಾಗಿ ಇಚ್ಛಿಸುತ್ತಾನೆ. ಅದಕ್ಕಾಗಿ ಅವರ ಮೇಲೆ ಯುದ್ಧವನ್ನು ಸಾರಲು ಫ್ರೆಂಚರು ಯಾವ ಗಳಿಗೆಯಲ್ಲಿ ನೆರವಿಗೆ ಬರುತ್ತಾರೆ ಎಂದು ಕಾದಿದ್ದಾನೆ.

ಫ್ರಾನ್ಸ್ ದ್ವೀಪದ ಫ್ರೆಂಚ್ ಗವರ್ನರನು ಮುಂದುವರೆದು ಹೀಗೆ ಹೇಳುತ್ತಾನೆ. ಸ್ವಯಂ ಸೇವಕರಾಗಿ ಸೇರಿಸಿಕೊಳ್ಳಲು ಬಯಸುವ ಪ್ರಜೆಗಳನ್ನು ಅವರವರ ಮುನಸಿಪಾರ್ಟಿಗಳಲ್ಲಿ ನೋಂದಾಯಿಸಿಕೊಳ್ಳಲು ಆವ್ಹಾನಿಸುತ್ತೇವೆ. ಟಿಪ್ಪುವು ಜನಸಾಮಾನ್ಯರ ನೆರವನ್ನು ಬಯಸುತ್ತಾನೆ. ಆದ್ದರಿಂದ ಅವರ ಧ್ವಜದ ಆಶ್ರಯದಲ್ಲಿ ಸೇವೆ ಸಲ್ಲಿಸಲು ಬಯಸುವ ಎಲ್ಲರನ್ನೂ ಸ್ವಾಗತಿಸುತ್ತೇವೆ.[೧೬] ಈ ಮಾತಿನಂತೆ ಟೀಪು ತನ್ನ ಸೈನ್ಯಕ್ಕೆ ಫ್ರೆಂಚರನ್ನು ಸೇರಿಸಿಕೊಂಡನು. ಇವನು ಇಷ್ಟೊಂದು ನಿಕಟ ಸಂಪರ್ಕ ಹೊಂದಿದದ್ದರಿಂದ ವ್ಯಾಪಾರ ಮತ್ತು ಕಲೆ ವಿಪುಲವಾಗಿತ್ತು ಎನ್ನಬಹುದು ವಿದೇಶಿ ಕಲಾವಿದರು ಭಾರತದಲ್ಲಿಯೇ ನೆಲೆಸಿ ತಮ್ಮ ಹಾಗೂ ಸ್ಥಳೀಯ ರಾಜರ ದೈನಂದಿನ ಚಟುವಟಿಕೆಗಳನ್ನು ಹಾಗೂ ಅವರ ಕರಾರು ಒಪ್ಪಂದಗಳ ಸನ್ನಿವೇಶಗಳನ್ನು ಹಾಗೂ ಪ್ರಭಾವಿ ಅಧಿಕಾರಿಗಳ ಹಾಗೂ ಸ್ಥಳೀಯ ರಾಜರುಗಳ ಭಾವಚಿತ್ರಗಳನ್ನು ಈ ಕಲಾಕಾರರು ಸೆರೆ ಹಿಡಿದಿದ್ದಾರೆ. ಮೈಸೂರಿನ

೧೫. ಎಸ್. ವೆಂಕಟೇಶ ; (ಸಂ) ಸಾಹಿತಿ-ಕಲಾವಿದರ ಕಣ್ಣಲ್ಲಿ ಟಿಪ್ಪು, ಪುಟ ೩೭

೧೬. ಡಾ. ಸೆಬಾಸ್ಟಿಯನ್ ಜೋಸೆಫ್; (ಸಂ) ಕರ್ನಾಟಕ ಚರಿತ್ರೆ (ಸಂಪುಟ-ಆರು), ಪುಟ ೪, ೫

ಜಗನ್ಮೋಹನ ಅರಮನೆಯಲ್ಲಿ French Constituent Assembly ಎಂಬ ಗಾಜಿನ ಚಿತ್ರವು ಇದಕ್ಕೆ ತಕ್ಕ ಉದಾಹರಣೆಯಾಗಿದೆ. ಇನ್ನೊಂದು ಚಿತ್ರ Napoleon's Entry to Berlim ಇದು ಕೂಡಾ ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಸಂಗ್ರಹಗೊಂಡಿವೆ. ಈ ಚಿತ್ರವು ನೆಪೋಲಿಯನ್ ಹಾಗೂ ಟಿಪ್ಪುವಿನ ಸ್ನೇಹ ಸಂಬಂಧವನ್ನು ಸೂಚಿಸುತ್ತದೆ. ನೆಪೋಲಿಯನ್ ಬೋನಪಾರ್ಟೆಯು ಮೆಕ್ಕಾದ ಶರೀಫನ ಮೂಲಕ ಒಂದು ಪತ್ರವನ್ನು ಕಳಿಸುತ್ತಾನೆ. ಅದು ಕೈರೋದ ನೆಪೋಲಿಯನ್ ಕಛೇರಿಯಿಂದ ಬಂದಿತು. ಆ ಪತ್ರದಲ್ಲಿ ನೆಪೋಲಿಯನ್‌ನು ಟಿಪ್ಪುವನ್ನು ಅತೀ ಭವ್ಯ ಸುಲ್ತಾನ ಎಂದೂ ತನ್ನ ಅತೀ ದೊಡ್ಡ ಮಿತ್ರನೆಂದೂ ಸಂಬೋಧಿಸಿದ್ದನ್ನು ಕಾಣಬಹುದು ಆ ಪತ್ರದಲ್ಲಿ ಮುಂದುವರೆದು.

ನಾನು ಅಸಂಖ್ಯಾತವೂ ಅಜೇಯವೂ ಆದ ಸೇನೆಯೊಂದಿಗೆ ಕೆಂಪು ಸಮುದ್ರವನ್ನು ಕರಾವಳಿಗೆ ಬಂದಿರುವ ವಿಷಯ ನಿಮಗೆ ಈಗಾಗಲೇ ತಿಳಿದಿದೆ. ನಿಮ್ಮನ್ನು ಇಂಗ್ಲೇಂಡಿನ ಕಬ್ಬಿಣದ ನೊಗದಿಂದ ಬಿಡುಗಡೆ ಮಾಡುವ ಉದ್ದೇಶದಿಂದ ನಾವು ಬರುತ್ತಿದ್ದೇವೆ. ಮಸ್ಕತ್ ಮತ್ತು ಮೇಚಾಗಳ ದಾರಿಯಾಗಿ ನನಗೆ ತಿಳಿಯ ಪಡಿಸಿರುವ ನಿಮ್ಮ ಅಶೋತ್ತರಗಳನ್ನು ರಾಜಕೀಯ ಸ್ಥಿತಿಗತಿಯನ್ನು ಅರ್ಥ ಮಾಡಿಕೊಂಡಿದ್ದೇನೆ ಎಂಬುದನ್ನು ತಿಳಿಯ ಪಡಿಸುತ್ತಿದ್ದೇನೆ. ಯಾರಾದರೊಬ್ಬ ಬುದ್ಧಿವಂತನಾದ ನಮ್ಮ ವಿಶ್ವಾಸಕ್ಕೆ ಪಾತ್ರನಾದ ವ್ಯಕ್ತಿಯನ್ನು ಸೂಯೇಜ್ ಅಥವಾ ಕೈರೋಗೆ ಕಳುಹಿಸಿಕೊಟ್ಟರೆ ಆತನೊಂದಿಗೆ ಮಾತನಾಡಬಹುದು.[೧೭]

–ಬೋನ ಪಾರ್ಟೆ

ಟಿಪ್ಪುವಿಗೆ ಇಷ್ಟೆಲ್ಲ ನೆರವು ಕೋರಿದ್ದರೂ ೧೮ನೇ ಶತಮಾನದ ಹೊತ್ತಿಗೆ ಅವನ ಕನಸೆಲ್ಲ ನುಚ್ಚುನೂರಾದವು. ನಾಲ್ಕನೇಯ ಆಂಗ್ಲೋ ಮೈಸೂರು ಯುದ್ಧದಲ್ಲಿ ಬ್ರಿಟೀಷ–ನಿಜಾಂ–ಮರಾಠ ಮೈತ್ರಿಕೋಟವು, ಶ್ರೀರಂಗಪಟ್ಟಣದಲ್ಲಿ ನಡೆದ ಭೀಕರ ಕಾಳಗದಲ್ಲಿ ಪರಾಕ್ರಮಿಯಾದ ಟಿಪ್ಪುವನ್ನು ಸೋಲಿಸಿ ಕೊಂದುಬಿಟ್ಟರು.[೧೮] ಪೋರ್ಚಗೀಸ್, ಫ್ರೆಂಚ್ ಹಾಗೂ ಚೀನಿ ಕಲಾವಿದರಿಗೆ ಟಿಪ್ಪುವು ಆಶ್ರಯ ನೀಡಿದ್ದರಿಂದ ಇಲ್ಲಯೇ ನೆಲೆಯೂರಿ ಐತಿಹಾಸಿಕ ಘಟನೆಗಳನ್ನು ಗಾಜಿನ ಚಿತ್ರಗಳ ಮೂಲಕ ಪರಿಚಯಿಸಿದ್ದಾರೆ. ಈ ಚಿತ್ರಗಳನ್ನು ವಿದೇಶಿ ಹಾಗೂ ಸ್ಥಳೀಯ ಕಲಾವಿದರು ಸೇರಿಯೇ ರಚಿಸಿದ್ದಾರೆನ್ನಬಹುದು.

ದಕ್ಷಿಣ ಭಾರತದಲ್ಲಿ ಸುಲ್ತಾನರ ಆಡಳಿತ ಪ್ರದೇಶದಲ್ಲಿ ಮೊಘಲರು ನಂತರ ಮರಾಠರು ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಂಡು ಪೂರ್ಣ ಪ್ರಮಾಣದ ಅಧಿಪತ್ಯ ಸ್ಥಾಪಿಸಿದರು. ಮರಾಠ ಸರದಾರ ಶಿವಾಜಿಯ ಹೋರಾಟಗಳಿಂದ ಪ್ರಾರಂಭಗೊಂಡ ಮರಾಠರ ರಾಜ್ಯ ತನ್ನ ಕೊನೆಯ ಕಾಲದವರೆಗೂ ವೈರಿಗಳ ವಿರುದ್ಧ ಯುದ್ಧ ಮಾಡುವುದರಲ್ಲೇ ಮಗ್ನವಾಗಿತ್ತು. ಮರಾಠರ ಇತಿಹಾಸ ಕೇವಲ ಯುದ್ಧಗಳ ಇತಿಹಾಸವೆಂದೇ ಕರೆಯಲ್ಪಟ್ಟಿತ್ತು. ಮರಾಠರು ಕೇವಲ ಮಹಾರಾಷ್ಟ್ರ ರಾಜ್ಯದಲ್ಲಿ ಅಲ್ಲದೇ ದಕ್ಷಿಣ ಭಾರತದ ತಮಿಳುನಾಡಿನವರೆಗೂ ಹಾಗೂ ಉತ್ತರ ಭಾರತದಲ್ಲಿ

೧೭. ಡಾ. ಸೆಬಾಸ್ಟಿಯನ್ ಜೋಸೆಫ್; (ಸಂ) ಕರ್ನಾಟಕ ಚರಿತ್ರೆ (ಸಂಪುಟ–ಆರು), ಪುಟ ೫

೧೮. ಡಾ. ಸೆಬಾಸ್ಟಿಯನ್ ಜೋಸೆಫ್ ; (ಸಂ) ಕರ್ನಾಟಕ ಚರಿತ್ರೆ (ಸಂಪುಟ–ಆರು). ಪುಟ ೬

ದೆಹಲಿಯವರೆಗೂ ತಮ್ಮ ರಾಜ್ಯ ವಿಸ್ತಾರಗೊಳಿಸಿದ್ದರು. ಆ ಕಾರಣದಿಂದಾಗಿ ಉತ್ತರ ಮತ್ತು ದಕ್ಷಿಣ ಭಾರತದ ಕಲೆಯ ಕಲಾವಿದರು ಇವರ ಆಶ್ರಯ ಪಡೆದಿದ್ದರು.[೧೯]

ಪೂನಾ, ಸಾಂಗ್ಲಿ, ಕೋಲ್ಹಾಪೂರ, ಸಾತಾರ, ವಾಹಿ, ನಾಸಿಕ, ಪೈಠಾನ, ಅಹ್ಮದನಗರ, ಬರೋಡಾ, ಗ್ವಾಲಿಯರ, ತಂಜಾವೂರು, ಮರಾಠರ ಕಲೆಯ ಕೇಂದ್ರಗಳಾಗಿದ್ದವು. ದಕ್ಷಿಣದ ಭಾರತದಲ್ಲಿ ಇವರು ತಮ್ಮ ರಾಜ್ಯವಿಸ್ತಾರ ಮಾಡಿ ಅಲ್ಲಿನ ಕಲಾವಿದರಿಗೂ ಆಶ್ರಯ ನೀಡಿದರು. ತಂಜಾವೂರು ಇವರ ಕಲೆಯ ಮುಖ್ಯ ಕೇಂದ್ರವಾಗಿತ್ತು. ದಕ್ಷಿಣ ಭಾರತದ ಬಹುತೇಕ ಕಲಾವಿದರು ಮರಾಠ ದೊರೆಗಳ ಆಶ್ರಯ ಪಡೆದಿದ್ದರು. ತಂಜಾವೂರು ಗಾಜಿನ ಕಲೆಯ ಕೇಂದ್ರವಾಗಿತ್ತು. ಮರಾಠ ದೊರೆಗಳು ಈ ಕಲೆ ಹಾಗೂ ಕಲಾವಿದರಿಗೆ ಆಶ್ರಯ ನೀಡಿದ್ದರು. ಮಹಾರಾಜ ಶರಭೋಜಿಯು ಲಲಿತಕಲೆಗಳ ಪೋಷಕನಾಗಿದ್ದನು. ಇವನ ಆಡಳಿತಾವಧಿಯಲ್ಲಿ ಕೇವಲ ಆಸ್ಥಾನದಲ್ಲಿದ್ದ ಕಲಾವಿದರಿದ್ದವರಿಗೆ ಮಾತ್ರವಲ್ಲದೇ ಸ್ವತಂತ್ರವಾಗಿ ಕಲಾಬದುಕನ್ನು ಸಾಗಿಸುವವರಿಗೆ ಸಹಮತ ತೋರುತ್ತಿದ್ದನು. ಇಲ್ಲಿನ ಕಲಾವಿದರು ವಿದೇಶಿ ಕಲೆಯಾದ ಗಾಜಿನ ಚಿತ್ರಕಲೆಯನ್ನು ಸ್ಥಳೀಯ ಅರಸರ ಹಾಗೂ ಶ್ರೀಮಂತವರ್ಗದವರ ಜೀವನ ಶೈಲಿಯನ್ನು ನಿರೂಪಿಸುವಂತಹ ಚಿತ್ರಗಳನ್ನು ರಚಿಸಿ ಜೀವನೋಪಾಯದಲ್ಲಿ ತಲ್ಲೀನರಾಗಿದ್ದರು.

ಗಾಜಿನ ಚಿತ್ರಗಳು ತಂಜಾವೂರು, ಮೈಸೂರು ಹಾಗೂ ದಖ್ಖನಿ ಚಿತ್ರಗಳ ಪ್ರತಿಕೃತಿಗೊಂಡ ಚಿತ್ರಗಳಾಗಿವೆ. ಈ ಚಿತ್ರಗಳು ಸ್ವತಂತ್ರ ಶೈಲಿಯನ್ನು ರೂಪಿಸಿಕೊಂಡದ್ದನ್ನು ಕಾಣುವುದಿಲ್ಲ. ಈ ಕಲೆಯ ಕಲಾವಿದರು ತಮ್ಮ ಮನಸ್ಸಿಗೆ ಹಿಡಿಸಿದಂತಹ ವಿಷಯಗಳನ್ನು ನೇರವಾಗಿ ಆಯ್ದುಕೊಂಡಿದ್ದಾರೆ. ಚಿತ್ರ ರಚನೆಯ ಸಂದರ್ಭಗಳಲ್ಲಿ ತಮಗೆ ಯಾವುದು ಸುಂದರವಾಗಿ ಕಂಡು ಬರುವುದೋ ಅದನ್ನು ಯಥಾವತ್ತಾಗಿ ಬಳಸಿಕೊಂಡಿದ್ದು ಸಹ ಕೆಲವು ಚಿತ್ರಗಳಿಂದ ತಿಳಿದು ಬರುತ್ತದೆ. ಮೈಸೂರು ಮತ್ತು ತಂಜಾವೂರು ಚಿತ್ರಗಳಲ್ಲಿ ರಚನಾಭಿನ್ನತೆ ಹೊರತು ಪಡಿಸಿದರೆ ವಿಷಯಗಳು ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿಯೇ ಗಾಜಿನ ಚಿತ್ರಗಳಲ್ಲಿ ಮೈಸೂರು ಮತ್ತು ತಂಜಾವೂರು ಶೈಲಿಯ ಭಿನ್ನತೆ ಕಾಣುವುದು ಕಷ್ಟಕರವೆನಿಸುತ್ತದೆ. ಹೆಚ್ಚು ಚಿತ್ರಗಳು ತಮಿಳುನಾಡಿನಲ್ಲಿ ರಚನೆಗೊಂಡಿರಬಹುದಾದರೂ ಆ ಚಿತ್ರಗಳನ್ನು ಕರ್ನಾಟಕದ ಕರಕುಶಲ ಕಲಾವಿದರು ಪ್ರತಿಕೃತಿ ಮಾಡಿರುವದನ್ನು ನೋಡಬಹುದು. ಮೈಸೂರು ಅರಸ ಮುಮ್ಮಡಿಯ ಕೃಷ್ಣರಾಜ ಒಡೆಯರು ಸ್ವತಃ ಕಲಾವಿದರು ಹಾಗೂ ಕಲಾ ಪೋಷಕರಾಗಿರುವುದರಿಂದ ಈ ಕಲೆಯೂ ಪ್ರಚಲಿತದಲ್ಲಿತ್ತು. ನಂತರದಲ್ಲಿ ಈ ಗಾಜಿನ ಕಲೆ ಅಷ್ಟೇನು ಪ್ರಚಾರ ಪಡೆಯಲಿಲ್ಲ.

೧೮೯೭–೧೯೧೨ ರ ನಡುವೆ ನಿರ್ಮಾಣಗೊಂಡ ಮೈಸೂರು ಅರಮನೆ ವಿಶಿಷ್ಟವಾದ ಮತ್ತು ಅದ್ಭುತವಾದ ಕಟ್ಟಡ ತನ್ನ ವಿಶಿಷ್ಟ ರಚನಾ ಶೈಲಿಯಿಂದ ಎಲ್ಲರನ್ನೂ ಆಕರ್ಷಿಸುವಂತಹ ಕಟ್ಟಡವಾಗಿದೆ. ಅರಮನೆಯ ಕಲ್ಯಾಣ ಮಂಟಪ ಹಾಗೂ ಅಂಬಾವಿಲಾಸದಲ್ಲಿ ಗಾಜಿನ ಚಿತ್ರಕಲೆಯನ್ನು ಕಾಣಬಹುದು. ಈ ಎರಡು ಕಟ್ಟಡಗಳ ಮೇಲ್ಛಿತ್ತು ಸಂಪೂರ್ಣ ಗಾಜಿನಿಂದ ಆವರಿಸಿದ್ದು ಇದರ ಮೇಲೆ ಅಲಂಕಾರಿಕ ನಕ್ಷೆ ಹಾಗೂ ನವಿಲು ಚಿತ್ರಗಳು ರಾರಾಜಿಸುತ್ತವೆ. ಇದು

---

೧೯. ಎಸ್.ಕೆ. ಅರುಣಿ ; ದಖ್ಖನಿ ಚಿತ್ರಕಲೆ, ಪುಟ ೮೫

ನಾಲ್ವಡಿ ಕೃಷ್ಣರಾಜರ ಕಾಲದಲ್ಲಿ ನಿರ್ಮಾಣಗೊಂಡಿದೆ ಎನ್ನಬಹುದು. ಇದೇ ಕಾಲಾವಧಿಯಲ್ಲಿ ಮೈಸೂರು ಹಾಗೂ ಸುತ್ತಲಿನ ವಾಸ್ತು ಕಟ್ಟಡಗಳಲ್ಲಿ ಗಾಜನ್ನು ಹಾಗೂ ಗಾಜಿನ ಕಲೆಯನ್ನು ಯಥೇಚ್ಛವಾಗಿ ಬಳಸಿದ್ದನ್ನು ಅರಿಯಬಹುದಾಗಿದೆ. ಆ ಕಾಲದಲ್ಲಿ ಕಟ್ಟಡಗಳ ಸೌಂದರ್ಯ ಹೆಚ್ಚಿಸುವ ಸಲುವಾಗಿ ಗಾಜನ್ನು ಹೆಚ್ಚು ಹೆಚ್ಚಾಗಿ ಬಳಸುತ್ತಿದ್ದರು. ಮೈಸೂರು ಅರಸರು ಅನ್ಯಧರ್ಮೀಯರ ಧಾರ್ಮಿಕ ಕಟ್ಟಡಗಳಿಗೆ ಗಾಜನ್ನು ಕೊಡುಗೆಯಾಗಿ ನೀಡಿರುವುದು ತಿಳಿದು ಬರುತ್ತದೆ. ಮೈಸೂರಿನ ಇಂದಿನ ಕೇಂದ್ರ ಬಸ್ ನಿಲ್ದಾಣದ ಹತ್ತಿರವಿರುವ ಬಾರ್ಥೋಲೋಮ್ಯು ಚರ್ಚ ಕಟ್ಟಡದ ಕಿಟಕಿಗಳಿಗೆ ಬಣ್ಣದ ಗಾಜನ್ನು ಕೊಡುಗೆ ನೀಡಿದ್ದನ್ನು ಚರಿತ್ರೆಯಿಂದ ತಿಳಿದು ಬರುತ್ತದೆ.

೧೮-೧೯ನೆಯ ಶತಮಾನಗಳಲ್ಲಿ ಹೈದರಬಾದ ನಿಜಾಮನ ಕಾಲದಲ್ಲಿ ಬ್ರಿಟೀಷರ ನೇರ ಸಂಪರ್ಕವಿದ್ದುದರ ಕಾರಣದಿಂದ ಅವರ ಪ್ರಭಾವ ಹೆಚ್ಚು ಕಂಡು ಬರುತ್ತಿದೆ. ಇಲ್ಲಿ ಹೆಚ್ಚು ಸ್ತ್ರೀಯರ ಚಿತ್ರಗಳನ್ನು ರಚಿಸಿದ್ದು ಆ ಚಿತ್ರಗಳಿಗೆ ಆದ್ಯತೆ ಕೊಡುತ್ತಿದ್ದರೆಂದು ತಿಳಿಯುವುದು. ಹೈದರಬಾದ ನಿಜಾಮನ ಕಾಲದಲ್ಲಿ ಹೈದರಬಾದ್ ಅಲ್ಲದೇ ಬೀದರ, ಗುಲ್ಬರ್ಗ, ಗೊಲ್ಕೊಂಡಾ, ಔರಂಗಬಾದ್ ಇತ್ಯಾದಿಗಳು ಕಲಾಕೇಂದ್ರಗಳಾಗಿದ್ದವು, ನಿಜಾಮನ ಸಂಸ್ಥಾನದಲ್ಲಿ ಬ್ರಿಟೀಷ ಸಂಪರ್ಕದಿಂದ ಅವರ ಜೀವನ ಶೈಲಿ, ಉಡುಪು, ಆಭರಣಗಳು, ಉಪಕರಣಗಳು ಚಿತ್ರಕಲಾವಿದರು ಅನುಕರಿಸಿದರು. ಈ ಕಾಲದಲ್ಲಿ ನಿಜಾಮರಲ್ಲದೇ ಸಣ್ಣ ಪುಟ್ಟ ಅರಸರು, ಆ ಕಾಲದ ಶ್ರೀಮಂತವರ್ಗದ ಜನರು, ಚಿಕ್ಕ ಪುಟ್ಟ ಪಾಳೇಗಾರರು, ಅಧಿಕಾರಿಗಳು ಕಲಾವಿದರಿಗೆ ಆಶ್ರಯ ನೀಡಿ ಅವರಿಂದ ಭಾವಚಿತ್ರಗಳಲ್ಲದೇ ಇತರ ಚಟುವಟಿಕೆಗಳಾದ ಸಂಗೀತ ಆಲಿಸುವ ಕುದುರೆ ಸವಾರಿ ಮಾಡುತ್ತಿರುವ ಇತ್ಯಾದಿ ದೃಶ್ಯಗಳ ಚಿತ್ರಗಳನ್ನು ರಚಿಸಿಕೊಳ್ಳುತ್ತಿದ್ದರು.[೨೦] ಈ ಪದ್ಧತಿಯನ್ನು ನಮ್ಮ ಗಾಜಿನ ಚಿತ್ರಕಲಾವಿದರು ಅನುಸರಿಸಿದ್ದನ್ನು ಗಾಜಿನ ಚಿತ್ರಗಳಿಂದ ತಿಳಿದುಕೊಳ್ಳಬಹುದಾಗಿದೆ.

ಸುರಪುರ ಸಂಸ್ಥಾನ ಇಂದಿನ ಗುಲ್ಬರ್ಗ ಜಿಲ್ಲೆಯ ಸಗರ ನಾಡಿನಲ್ಲಿ ವಿಜಯ ನಗರೋತ್ತರ ನಂತರ ಆಳಿದ ಒಂದು ಚಿಕ್ಕ ಸಂಸ್ಥಾನ. ಕೃಷ್ಣಾ ಹಾಗೂ ಭೀಮಾ ನದಿಗಳ ಪ್ರದೇಶದಲ್ಲಿ ಸುಮಾರು ಎರಡು ಶತಮಾನಗಳ ಕಾಲ (೧೬೫೦–೧೮೫೮) ಆಡಳಿತ ನಡೆಸಿತು. ಇವರು ವಿಜಯನಗರದ ನಂತರ ಬಿಜಾಪೂರದ ಆದಿಲ್ ಶಾಹಿಯ ಸಾಮಂತರಾಗಿ ಸೇವೆ ಸಲ್ಲಿಸಿದರು. ಮೊಘಲ ದೊರೆ ಔರಂಗಜೇಬನ ಮರಣದ ನಂತರ ಸಂಸ್ಥಾನದ ಇಮ್ಮಡಿ ಪಿಡ್ಡನಾಯಕ ಸುರಪುರವನ್ನು ರಾಜಧಾನಿಯಾಗಿ ಮಾಡಿ ಅದಿಪತ್ಯವನ್ನು ಪುನರ್ ಸ್ಥಾಪಿಸಿದನು. ಸುರಪುರ ಕೇವಲ ರಾಜಕೀಯ ಕೇಂದ್ರವಾಗಿ ಉಳಿಯದೇ ಸಂಸ್ಥಾನದ ನಾಡಿನ ಕಲೆ, ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಯಿತು. ವಿಜಯನಗರ ಮತ್ತು ದಖಿನ್ ಸುಲ್ತಾನರ ಪತನದ ನಂತರ ಕಲಾವಿದರಿಗೆ ಕಲೆಯ ಕೇಂದ್ರವಾಗಿ ರೂಪಗೊಂಡಿತು. ಸುರಪುರ ಶೈಲಿ ಚಿತ್ರಕಲೆ ವಿಜಯನಗರ, ದಖಿನಿ, ಮೊಘಲ, ಮರಾಠ, ನಿಜಾಮ ಮತ್ತು ಕಂಪನಿ ಕಲೆಯ ಶೈಲಿಯನ್ನು ಮೈಗೂಡಿಸಿಕೊಂಡು ಸ್ವತಂತ್ರವಾಗಿ ಸುರಪುರ ಚಿತ್ರಕಲಾ ಶೈಲಿಯಾಗಿ ಬೆಳೆಯಿತು.[೨೧]

---

೨೦. ಎಸ್.ಕೆ. ಅರುಣಿ ; ದಖ್ಖನಿ ಚಿತ್ರಕಲೆ, ಪುಟ ೯೯–೧೦೧
೨೧. ಎಸ್.ಕೆ. ಅರುಣಿ ; ದಖ್ಖನಿ ಚಿತ್ರಕಲೆ, ಪುಟ ೧೦೬

ಸುರಪುರ ಸಂಸ್ಥಾನ ಹೈದರಬಾದ ನಿಜಾಮನ ಸಾಮಂತ ಅರಸರಾಗಿದ್ದರಿಂದ ಹಾಗೂ ರಾಜಕೀಯ ಸಂದರ್ಭಗಳಿಂದ ಆಂಧ್ರದ ಕಲಾವಿದರು, ಸಂಗೀತರಾರರು, ಪಂಡಿತರು ಸುರಪುರ ಸಂಸ್ಥಾನದಲ್ಲಿ ಆಶ್ರಯ ಪಡೆದಿದ್ದರು. ೧೮೫೮ ರ ಸುಮಾರಿಗೆ ಸುರಪುರ ಸಂಸ್ಥಾನ ನಿಜಾಂನ ಸಂಸ್ಥಾನಕ್ಕೆ ಒಳಪಟ್ಟ ನಂತರ ಕಲಾವಿದರು ಇತರ ಪಟ್ಟಣಗಳ ಶ್ರೀಮಂತರ ಆಶ್ರಯ ಪಡೆದರು. ಕೆಲವರು ಹೈದರಬಾದ್, ಗುಲ್ಬರ್ಗಾ ಮುಂತಾದ ನಗರಗಳಲ್ಲಿ ಆಶ್ರಯ ಪಡೆದರು. ಇನ್ನೂ ಕೆಲವರು ಶ್ರೀಮಂತರು, ಊರ ಅಧಿಕಾರಿಗಳು, ಗೌಡರು, ಪಾಟೀಲರು, ದೇಸಾಯಿ, ದೇಶಮುಖರು, ಕುಲಕರ್ಣಿಗಳು ಸಂಸ್ಥಾನದ ಅರಸರಂತೆ ತಮ್ಮ ಭಾವ ಚಿತ್ರಗಳನ್ನು ರಚಿಸಿಕೊಳ್ಳತೊಡಗಿದರು.[೨೨] ಸುರಪುರ ನಾಯಕ ಅರಸರು ಗಾಜಿನ ಚಿತ್ರಕಲೆ ಹಾಗೂ ಕಲಾವಿದರಿಗೆ ಪ್ರೋತ್ಸಾಹ ಕೊಡುತ್ತಿದ್ದರೆಂಬುದಕ್ಕೆ ಅಲ್ಲಿನ ಅನೇಕ ಗಾಜಿನ ಚಿತ್ರಗಳೇ ಸಾಕ್ಷಿಯಾಗಿವೆ. ಗಾಜಿನ ಚಿತ್ರಕಲಾವಿದರು ಸ್ವತಂತ್ರವಾಗಿ ಚಿತ್ರರಚನೆ ಮಾಡಿದ್ದು ಕಂಡುಬರುವುದಿಲ್ಲ. ಅವರು ಜನರ ಬೇಡಿಕೆಗನುಗುಣವಾಗಿ ಗಾಜಿನ ಚಿತ್ರಗಳನ್ನು ರಚಿಸಿಕೊಡುತ್ತಿದ್ದರೆಂದು ತೋರುತ್ತದೆ. ಸುರಪುರದಲ್ಲಿ ಕಂಡು ಬರುವ ಬಹುತೇಕ ಚಿತ್ರಗಳು ಪೌರಾಣಿಕ ಕಥೆಗಳನ್ನೊಳಗೊಂಡಿವೆ.

ಹೈದರಬಾದ ನಿಜಾಮನ ಸಾಮಂತರಾಗಿದ್ದ ಗಡವಾಲ, ವನಪರ್ತಿ ಸಂಸ್ಥಾನಗಳು ೧೮-೧೯ನೇ ಶತಮಾಣಗಳ ಕಾಲದ ದಖನಿ ಚಿತ್ರಕಲೆಯ ಪ್ರಮುಖ ಕೇಂದ್ರಗಳಾಗಿದ್ದವು. ಇಲ್ಲಿ ಕಂಡು ಬರುವ ಚಿತ್ರಗಳ ಲಕ್ಷಣಗಳನ್ನು ಗಮನಿಸಿದರೆ ಗಾಜಿನ ಚಿತ್ರಕಲೆಯನ್ನು ತಯಾರಿಸುವ ಕಲಾವಿದರು ಇಲ್ಲಿಯೂ ನೆಲೆಸಿರುಬಹುದೆಂದು ತೋರುತ್ತದೆ. ಈ ಸಂಸ್ಥಾನಿಕರು ಕಲಾವಿದರಿಗೆ ಪ್ರೋತ್ಸಾಹ ಕೊಡುತ್ತಿದ್ದರು. ಕಂಪನಿ ಸರಕಾರದಲ್ಲಿ ಈ ಕಲೆ ಪ್ರಚಲಿತವಿತ್ತೆಂದು, ಕಲಾವಿದರಿಗೆ ಗಾಜಿನ ಚಿತ್ರಕಲೆಯನ್ನು ರಚಿಸಿ ಜೀವನ ಸಾಗಿಸಲು ಉತ್ತಮ ವಾತಾವರಣವಿತ್ತೆಂದು ಕೆಲವು ಗಾಜಿನ ಚಿತ್ರಗಳಿಂದ ತಿಳಿದುಕೊಳ್ಳಬಹುದಾಗಿದೆ. ಯಾಕೆಂದರೆ ಆ ಕಾಲದ ಸಂಸ್ಥಾನಿಕರ ಚಿತ್ರಗಳಲ್ಲಿ ಹಿನ್ನೆಲೆಯಾಗಿ ಗಾಜಿನ ಬಲ್ಬಗಳನ್ನು ಬಳಸಿದ್ದನ್ನು ಮನಗಾಣಬಹುದಾಗಿದೆ.

ಕರ್ನಾಟಕದಲ್ಲಿ ೧೮ ಮತ್ತು ೧೯ನೆಯ ಶತಮಾನಗಳಲ್ಲಿ ಚಿಕ್ಕ ಪುಟ್ಟ ಸಂಸ್ಥಾನದ ಆಳರಸರು ತಮ್ಮ ರಾಜಕೀಯ ಚಟುವಟಿಕೆಗಳ ಜೊತೆಗೆ ಲಲಿತಕಲೆಗಳನ್ನು ಬೆಳೆಸಿರುವುದನ್ನು ಇತಿಹಾಸಗಳಿಂದ ಕಾಣಬಹುದು. ಶ್ರೀರಂಗಪಟ್ಟಣ ಹಾಗೂ ಮೈಸೂರು ನಂತರ ಇನ್ನೂ ಅನೇಕ ಕಲಾ ಕೇಂದ್ರಗಳಿದ್ದವು. ಬೆಂಗಳೂರು, ಕೋಲಾರ, ಅರಸಿಕೇರೆ, ಶಿವಮೊಗ್ಗ, ನೆಲಮಂಗಲ, ಚಿತ್ರದುರ್ಗ, ಶ್ರೀಂಗೇರಿ, ಮೇಲುಕೋಟೆ, ನಂಜನಗೂಡುಗಳಂತಹ ಅನೇಕ ಧಾರ್ಮಿಕ ಕ್ಷೇತ್ರಗಳು ಕಲಾ ಕೇಂದ್ರಗಳಾಗಿದ್ದವು. ಇಲ್ಲಿ ಕಲಾವಿದರು ಸ್ವತಂತ್ರವಾಗಿ ದೇವರ ಹಾಗೂ ಜನರ ಅಪೇಕ್ಷಗನುಗುಣವಾಗಿ ವಿವಿಧ ಮಾಧ್ಯಮಗಳಲ್ಲಿ ಚಿತ್ರಗಳನ್ನು ಬರೆದು ಮಾರಾಟ ಮಾಡಿ ಬದುಕನ್ನು ಸಾಗಿಸುತ್ತಿದ್ದರು. ಇದಕ್ಕೆ ಸ್ಥಳೀಯ ಆಳರಸರ ಪ್ರೋತ್ಸಾಹವಿದ್ದಿರಬೇಕು. ಹರಪನಹಳ್ಳಿ ಪಾಳೇಗಾರ ರಾಜಾ ಸೋಮಶೇಖರ ನಾಯಕ, ಮೊದಲ ಸೋಮಶೇಖರ ನಾಯಕ ಹಾಗೂ ಆತನ ಮಡದಿ ರಾಣಿ ಸೋಮಮ್ಮಾಜಿಯ ಭಾವಚಿತ್ರಗಳು ಗಾಜಿನ ಚಿತ್ರಗಳಲ್ಲಿ ರೂಪಗೊಂಡಿದ್ದನ್ನು ಗಮನಿಸಬಹುದು. ಚಿತ್ರದುರ್ಗದ ಬೃಹನ್ಮಠದ

---

೨೨. ಎಸ್.ಕೆ. ಅರುಣಿ ; ದಖ್ಖನಿ ಚಿತ್ರಕಲೆ, ಪುಟ ೧೧೧

ವಸ್ತು ಸಂಗ್ರಹಾಲಯದಲ್ಲಿ ಕೆಲವು ಗಾಜಿನ ಚಿತ್ರಗಳು ಕಂಡು ಬರುತ್ತವೆ. ಇಲ್ಲಿನ ನಾಯಕರು ಈ ಕಲೆಗೆ ಪ್ರೋತ್ಸಾಹ ಕೊಡುತ್ತಿದ್ದರೆಂದು ತೋರುತ್ತದೆ. ಶಿವಮೊಗ್ಗದ ಕೆಳದಿ ಅರಸರು ಕೂಡಾ ಈ ಕಲೆಗೆ ಪ್ರೋತ್ಸಾಹ ನೀಡಿದ್ದರೆಂಬುದಕ್ಕೆ ಕೆಳದಿ ವಸ್ತು ಸಂಗ್ರಹಾಲಯದಲ್ಲಿರುವ ಗಾಜಿನ ಚಿತ್ರಗಳು ನಿದರ್ಶನವಾಗಿವೆ. ಹೀಗೆ ಕರ್ನಾಟಕದ ಅರಸರು, ನಾಯಕರು, ಚಿಕ್ಕ ಪುಟ್ಟ ಸಂಸ್ಥಾನಿಕರು, ಅಧಿಕಾರಿ ವರ್ಗದವರು, ಶ್ರೀಮಂತ ವ್ಯಾಪಾರಸ್ಥರು, ಗಾಜಿನ ಚಿತ್ರಕಲೆಗೆ ಹಾಗೂ ಈ ಕಲಾವಿದರಿಗೆ ಪ್ರೋತ್ಸಾಹ ನೀಡುತ್ತಿದ್ದರೆಂಬುದಕ್ಕೆ ಕರ್ನಾಟಕದಲ್ಲಿ ಕಂಡು ಬರುವ ಗಾಜಿನ ಚಿತ್ರಗಳೇ ಸಾಕ್ಷಿಯಾಗಿವೆ.

ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಗುಳೇದಗುಡ್ಡದ ಅನೇಕ ಮನೆತನಗಳಲ್ಲಿ ೧೮-೧೯ನೇ ಶತಮಾನಕ್ಕೆ ಸಂಬಂಧಿಸಿದ ತೂಗಹಾಕುವ ಚಿತ್ರಗಳಿವೆ. ವೀರಸಂಗಪ್ಪ ಬಾವಿಯವರ ಮನೆಯಲ್ಲಿ ಅಲಂಕಾರ ಭೂಷಿತಳಾದ ಮಹಿಳೆಯರ ಚಿತ್ರಗಳು ಹಾಗೂ ಸರಸ ಸಲ್ಲಾಪದಲ್ಲಿರುವ ಗಂಡು ಹೆಣ್ಣಿನ ಚಿತ್ರಗಳು ಕಂಡು ಬರುತ್ತವೆ. ಮಹಿಳೆಯರ ವೇಷಭೂಷಣಗಳು ಹಾಗೂ ದೈಹಿಕ ಲಕ್ಷಣಗಳು ಮರಾಠ ಸಂಪ್ರದಾಯವನ್ನು ಸೂಚಿಸುತ್ತವೆ. ಆ ಕಾಲದ ಶ್ರೀಮಂತಿಕೆಯ ದರ್ಪವನ್ನು ತೋರ್ಪಡಿಸುತ್ತಿರುವಂತೆ ಕಾಣುತ್ತವೆ. ಅವರು ಕುಳಿತಿರುವ ಭಂಗಿ, ಹಿನ್ನೆಲೆಯ ವಾತಾವರಣ, ಶ್ರೀಮಂತ ಮನೆತನದ ವಾತಾವರಣ ಎದ್ದು ಕಾಣುತ್ತದೆ. ೧೮ ಮತ್ತು ೧೯ನೆಯ ಶತಮಾಣದಲ್ಲಿ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಶ್ರೀಮಂತರ ಹಾಗೂ ಅಧಿಕಾರ ಶಾಹಿಗಳ ಅವರ ಮನೆತನಗಳ ಒಳಗಡೆ ನಡೆಯುವ ವೈಭವ ಹಾಗೂ ವಿಲಾಸಿ ಬದುಕನ್ನು ಕಲಾವಿದರು ತೆರೆದಿಡಲು ಪ್ರಯತ್ನಿಸಿದ್ದಾರೆ.

ಗುಳೇದಗುಡ್ಡದ ಶಂಕರಸಾ ಫಕೀರಸಾ ಪವಾರರವರ ಮನೆಯಲ್ಲಿ ಸ್ತ್ರೀ ಪುರುಷರು ಶೃಂಗಾರ (ಪ್ರಣಯ) ಸಲ್ಲಾಪದಲ್ಲಿ ನಿರತರಾಗಿರುವ ಕೆಲವು ಚಿತ್ರಗಳು ಕಂಡು ಬರುತ್ತವೆ. ಅಂದಿನ ಕಾಲದಲ್ಲಿ ಸ್ತ್ರೀಯರನ್ನು ಶ್ರೀಮಂತ ವರ್ಗದವರು, ಅಧಿಕಾರಿ ವರ್ಗದವರು ಯಾವ ರೀತಿ ನಡೆಸಿಕೊಳ್ಳುತ್ತಿದ್ದರು ಎನ್ನುವದನ್ನು ನಿರೂಪಿಸುತ್ತವೆ. ಈ ಸಮುದಾಯವರು ಮಹಿಳೆಯರನ್ನು ತಮ್ಮ ಕಾಮ ಪಿಪಾಸೆಗೆ ಬಲಿಪಸು ಮಾಡುತ್ತಿದ್ದರು ಎನ್ನುವದನ್ನು ಗಮನಿಸಬಹುದು. ಅದರಲ್ಲಿ ಕೆಳವರ್ಗದ ಮಹಿಳೆಯರು, ವಿಧವೆಯರ ಹಾಗೂ ನಿರ್ಗತಿಕ ಬಾಲಕಿಯರು ಬಲಿಯಾಗಿದ್ದನ್ನು ನೋಡಬಹುದು. ಸ್ತ್ರೀಯು ಪ್ರಾಚೀನ ಕಾಲದಿಂದಲೂ ಗಂಡಿನ ಅಡಿಯಾಳಾಗಿ ಅವನ ಭೋಗದ ವಸ್ತುವಾಗಿಯೇ ಬಂದಿದ್ದಾಳೆ. ಪಾಲಕರು ಸಹಿತ ಹೆಣ್ಣುಮಕ್ಕಳನ್ನು ತಿರಸ್ಕಾರದ ಮನೋಭಾವವನ್ನು ತಾಳುತ್ತಲೇ ಬಂದಿದ್ದಾರೆ. ಗಾಜಿನ ಚಿತ್ರಕಲಾವಿದರು ತಮಗೆ ಆಶ್ರಯ ನೀಡಿದ ಶ್ರೀಮಂತರ ಹಾಗೂ ಅಧಿಕಾರಿಗಳ ಕೃತ್ಯಗಳನ್ನು ಚಿತ್ರಗಳ ಮೂಲಕ ಸಮಾಜಕ್ಕೆ ತೋರಿಸಲು ಪ್ರಯತ್ನಿಸಿದ್ದಾರೆ. ಶ್ರೀಮಂತರ ಅನಾಚಾರಗಳನ್ನು ಹಾಗೂ ಅವರ ಅನೈತಿಕ ನಡತೆಗಳನ್ನು ಗಾಜಿನ ಕೃತಿಗಳ ಮೂಲಕ ತೋರಿಸಲು ಯತ್ನಿಸಿದ್ದಾರೆ.

ಮೈಸೂರು ವಿಶ್ವವಿದ್ಯಾಲಯದ ಜನಪದ ವಸ್ತುಸಂಗ್ರಹಾಲಯದಲ್ಲಿ ಇಂಥ ಪ್ರಸಂಗವನ್ನು ತೋರ್ಪಡಿಸುವ ಗಂಡು-ಹೆಣ್ಣಿನ ಪ್ರಣಯ ಸ್ವರೂಪವನ್ನು ತೋರುವ ಕೆಲವು ಚಿತ್ರಗಳಿವೆ. ೨೦ನೆಯ ಶತಮಾನದ ಪ್ರಾರಂಭದಲ್ಲಿ ರಚನೆಗೊಂಡಿವೆ. ಕರ್ನಾಟಕದ ಪ್ರಭಾವಿ

ವ್ಯಕ್ತಿಗಳ ಪ್ರಣಯ ಲೀಲೆಯನ್ನು ಎತ್ತಿ ತೋರುತ್ತವೆ. ಆ ಕಾಲದ ಸಂಸ್ಥಾನಿಕರು ಅಧಿಕಾರಕ್ಕಾಗಿ ಬ್ರಿಟೀಷರ ಮನ ಒಲಿಸಲು ಅವರಿಗೆ ಸಕಲ ಸೌಕರ್ಯಗಳನ್ನು ಹಾಗೂ ವಿಶೇಷ ಅತಿಥ್ಯಗಳನ್ನು ಕೊಡುತ್ತಿದ್ದರು. ಅವರಿಗೆ ಭವ್ಯಬಂಗಲೆಯನ್ನು ನೀಡಿ ಅವರ ಸಲುವಾಗಿ ಮಧ್ಯ, ಮೃಷ್ಟಾಣಗಳನ್ನು ಹಾಗೂ ಅವರು ಬಯಸಿದ ಸ್ತ್ರೀಯರ ಜೊತೆಗೆ ಮೋಜು ಮಾಡಲು ಅವಕಾಶ ಕಲ್ಪಿಸಿ ಕೊಡುತ್ತಿದ್ದರು. ಹೀಗಾಗಿಯೇ ಅನೇಕ ಸಂಸ್ಥಾನಗಳು ಅವನತಿ ಹೊಂದಲಿಕ್ಕೆ ಕಾರಣವಾಗಿವೆ. ಇಂಥ ಅನೇಕ ಘಟನೆಗಳು ಇತಿಹಾಸದುದ್ದಕ್ಕೂ ನಡೆದದ್ದನ್ನು ಚಿತ್ರಿಯ ಮೂಲಕ ವಿಶೇಷವಾಗಿ ಗಾಜಿನ ಮೇಲೆ ರಚನೆಗೊಂಡಂತಹ ಚಿತ್ರಗಳು ನಮಗೆ ಮನವರಿಕೆ ಮಾಡಿಕೊಡುತ್ತೇವೆ.

ಗುಳೇದಗುಡ್ಡದ ಶ್ರೀ ವೀರುಪಾಕ್ಷಪ್ಪ. ತಿಪ್ಪಾ ರವರ ಮನೆಯಲ್ಲಿ ಕೆಲವು ಮಹಿಳೆಯರ ಗಾಜಿನ ಚಿತ್ರಗಳು ಸ್ತ್ರೀಯರು, ಮರಾಠ ಶ್ರೀಮಂತ ಸಂಪ್ರದಾಯವನ್ನು ಹಾಗೂ ಮರಾಠ ಸಂಪ್ರದಾಯ ಮನೆತನದ ವಾತಾವರಣವನ್ನು ಪ್ರತಿನಿಧಿಸುತ್ತವೆ. ಮರಾಠಿ ಮಹಿಳೆಯರ ದೈಹಿಕ ಲಕ್ಷಣಗಳನ್ನು ವೇಷಭೂಷಣಗಳನ್ನು ಅಲಂಕಾರವನ್ನು ಹಾಗೂ ಅವರ ವೈಭವದ ಬದುಕನ್ನು ನೆನಪು ಮಾಡಿಕೊಡುತ್ತವೆ. ಶ್ರೀಮಂತ ಮನೆತನಗಳಲ್ಲಿ ಹಿಂದೆ ಮಹಿಳೆಯರು ಸಂಗೀತ ನುಡಿಸುವುದು, ಶೃಂಗಾರ ಮಾಡಿಕೊಳ್ಳುವುದು,ದೇವರ ನಾಮಗಳನ್ನು ಪಠಣ ಮಾಡುವುದು, ಪೂಜೆ ಪುನಸ್ಕಾರಗಳಲ್ಲಿ ತೊಡಗುವುದು. ಸರ್ವೆ ಸಾಮಾನ್ಯವಾಗಿತ್ತು. ಈಗಲೂ ಸಹಿತ ಕೆಲವು ವೈಶ್ಯ ಮನೆತನದ ಹೆಣ್ಣು ಮಕ್ಕಳು ಆ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದ್ದನ್ನು ನೋಡುತ್ತೇವೆ. ಇಂಥ ಚಿತ್ರಗಳು ಹೆಚ್ಚಾಗಿ ಆ ಮನೆತನಗಳಲ್ಲಿ ಕಂಡು ಬರುತ್ತವೆ. ಇನ್ನೂ ವಿಶೇಷವೆಂದರೆ ಆ ಮನೆತನದ ಮಹಿಳೆಯರು ಉತ್ತಮ ಚಿತ್ರಕಲಾವಿದೆಯಾಗಿದ್ದರು ಎನ್ನುವುದಕ್ಕೆ ಗಾಜಿನ ಚಿತ್ರಗಳನ್ನು ಬರೆಯುವ ಕೆಲವು ಕಲಾವಿದೆಯರನ್ನು ಕಾಣಬಹುದು.

ವೀಣೆ, ಗಿಟಾರ್, ವಯೋಲಿನ್ ಗಳಂತಹ ಪರಿಕರಗಳನ್ನು ಬಳಸಿಕೊಂಡು ಸಂಗೀತದಲ್ಲಿ ನಿರತರಾದ ಮಹಿಳೆಯರ ಕೆಲವು ಗಾಜಿನ ಚಿತ್ರಗಳು ಕರ್ನಾಟಕದ ಅನೇಕ ಮನೆತನಗಳಲ್ಲಿ ಕಾಣಸಿಗುತ್ತವೆ. ಈ ಚಿತ್ರಗಳನ್ನು ಗಮನಿಸಿದರೆ ಗೃಹಿಣಿಯರು ತಮ್ಮ ಕೌಟುಂಬಿಕ ಬದುಕಿನೊಂದಿಗೆ ಆಯಾಸ ಕಳೆಯಲು ಅಥವಾ ಮನೆಯಲ್ಲಿ ನಡೆಯುವ ವಿವಿಧ ಕಾರ್ಯಕ್ರಮಗಳಲ್ಲಿ ಸಂಗೀತವನ್ನು ಮತ್ತು ಹಾಡುಗಳನ್ನು, ಭಜನೆಗಳನ್ನು ಮಾಡುತ್ತಿದ್ದರು. ಇಂಥ ಸನ್ನಿವೇಶಗಳನ್ನು ಇಂದೂ ಸಹಿತ ಇಂಥ ಪರಂಪರೆಯುಳ್ಳ ಮನೆತನಗಳಲ್ಲಿ ಕಂಡು ಬರುತ್ತದೆ. ಈ ಮಹಿಳೆಯರ ಅಲಂಕಾರವನ್ನು ಗಮನಿಸಿದರೆ ಹಬ್ಬ ಹರಿದಿನಗಳಲ್ಲಿ ವಿಶೇಷವಾಗಿ ಶೃಂಗರಿಸಿಕೊಂಡು ಇಂಥ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿರುವುದನ್ನು ವಿವೇಚನೆಗೆ ಹಾದಿ ಮಾಡಿಕೊಡುತ್ತವೆ. ಇಂಥ ಸನ್ನಿವೇಶಗಳನ್ನು ಆಗಿನ ಮಹಿಳೆಯರು ಚಿತ್ರಗಳ ಮೂಲಕ ತಮ್ಮ ಸಂತೋಷಗಳನ್ನು ಹಂಚಿಕೊಳ್ಳುತ್ತಿದ್ದರು. ಮನೆಯಲ್ಲಿ ಇಂಥ ಚಿತ್ರಗಳನ್ನು ಅಲಂಕರಿಸಿ ಆನಂದಿಸುತ್ತಿದ್ದರು. ಇಂಥ ಚಿತ್ರಗಳು ಶ್ರೀಮಂತ ವರ್ಗದ ಮಹಿಳೆಯರ ಕಾರ್ಯ ಚಟುವಟಿಕೆಗಳನ್ನು ಪ್ರತಿನಿಧಿಸುತ್ತವೆ.

ಕರ್ನಾಟಕದಲ್ಲಿ ಸಂಗ್ರಹಗೊಂಡ ಹಾಗೂ ಸಂಗ್ರಹೇತರ ಗಾಜಿನ ಮೇಲಿನ ಚಿತ್ರಗಳಲ್ಲಿ ಹಲವಾರು ಪೌರಾಣಿಕ ಕಥೆಗಳನ್ನು ನಿರೂಪಿಸುವ ಚಿತ್ರಗಳು ಸಿಗುತ್ತವೆ. ಈ ಚಿತ್ರಗಳಲ್ಲಿ

ಬೇರೆ ಬೇರೆ ಸಂದರ್ಭಗಳಲ್ಲಿ ವಿವಿಧ ಕಾಲಘಟ್ಟಗಳಲ್ಲಿ ರಚನೆಗೊಂಡಿವೆ. ಬಹುತೇಕ ಬಾಲಕೃಷ್ಣನ ಚಿತ್ರಗಳು ಪ್ರತಿಕೃತಿಗೊಂಡಿದ್ದನ್ನು ಇಲ್ಲಿ ಗಮಿಸಬಹುದು. ಬಾಲಕೃಷ್ಣನು ಗೋಕುಲದಲ್ಲಿ ಬೆಳೆಯುತ್ತಿದ್ದ ಸಂದರ್ಭಗಳಲ್ಲಿ ನಂದ ಹಾಗೂ ಯಶೋದೆಯರು ತೋರಿದ ಅಕ್ಕರೆ, ಪ್ರೀತಿಯನ್ನು, ಕಾವ್ಯಗಳಲ್ಲಿ, ಶಿಲ್ಪಗಳಲ್ಲಿ ಮತ್ತು ಚಿತ್ರಗಳಲ್ಲಿ ಮೂಡಿಬಂದಿವೆ. ಇಂಥ ಭಾತೃತ್ವ ಸಂಬಂಧಗಳನ್ನು ನಮ್ಮ ತಾಯಿಯಂದಿರು ತಮ್ಮ ಮಕ್ಕಳ ಮೂಲಕ ಹೊರಹಾಕಲು ಪ್ರಯತ್ನಿಸಿರಬಹುದೆಂದು ಈ ಗಾಜಿನ ಚಿತ್ರಗಳು ಸಾರುತ್ತವೆ. ತಮ್ಮ ಮಕ್ಕಳು ಶ್ರೀಕೃಷ್ಣನಂತೆ ಇರಬೇಕು, ಅವನಂತೆ ಸುಂದರವಾಗಿರಬೇಕು ಅವನಂತೆ ತುಂಟತನವನ್ನು ತಮ್ಮ ಮಕ್ಕಳು ಮಾಡಬೇಕು, ಅವನಂತೆ ತಮ್ಮ ಮಕ್ಕಳನ್ನು ಶೃಂಗರಿಸಿ ಆನಂದಿಸುವ ಪರಿಯನ್ನು ಇಂದಿಗೂ ನೋಡಬಹುದು.

ಹೀಗಾಗಿ ನಮ್ಮ ತಾಯಂದಿರು ಬಾಲಕೃಷ್ಣನ ಚಿತ್ರಗಳನ್ನು ಗಾಜಿನ ಮೇಲೆ ಹೆಚ್ಚು ಹೆಚ್ಚು ಸಂಖ್ಯೆಗಳಲ್ಲಿ ಚಿತ್ರಿಸಿದ್ದನ್ನು ನೋಡಬಹುದು. ಅಂಬೆಗಾಲಿನ ಕೃಷ್ಣ, ಸ್ತನಪಾನ ಮಾಡುತ್ತಿರುವ ಕೃಷ್ಣ, ಬೆಣ್ಣೆಯನ್ನು ಮೆಲ್ಲುತ್ತಿರುವ ಕೃಷ್ಣ, ಸಿಂಹಾಸನರೂಢ ಬಾಲಕೃಷ್ಣ ಇತ್ಯಾದಿ ಸನ್ನಿವೇಶಗಳು ಮಕ್ಕಳ ಚಟುವಟಿಕೆಗಳನ್ನು ಅನುಸರಿಸುತ್ತವೆ. ಕೆಲವು ತಾಯಂದಿರು ತಮ್ಮ ಮಕ್ಕಳನ್ನು ಕೃಷ್ಣನಂತೆ ಶೃಂಗರಿಸಿ ತಾಯ್ತನದ ಸುಖಗಳನ್ನು ಕಾಣುತ್ತಾರೆ. ಇಂದು ಸಮಾಜದಲ್ಲಿ ನಡೆಯುವ ಸಂಗತಿಗಳನ್ನು ಈ ಚಿತ್ರಗಳು ಪ್ರತಿನಿಧಿಸುತ್ತವೆ. ಹೀಗೆ ಈ ಗಾಜಿನ ಚಿತ್ರಗಳು ಕಾಲದಿಂದ ಕಾಲಕ್ಕೆ ಪ್ರತಿರೂಪ ಪಡೆಯುತ್ತಾ ಹೊಸ ಹೊಸ ಹೊಳಹುಗಳನ್ನು ಮೈಗೂಡಿಸಿಕೊಂಡು ಬೆಳೆದು ಬಂದಿದೆ ಎನ್ನಬಹುದು, ವಿಷಯ ಪೌರಾಣಿಕವಾಗಿದ್ದರೂ ಕೌಟುಂಬಿಕ ಬದುಕನ್ನು ನಿರೂಪಿಸುತ್ತವೆ.

ಗಾಜಿನ ಚಿತ್ರಕಲೆಯು ಕರ್ನಾಟಕದಲ್ಲಿ ಸಾಂಸ್ಕೃತಿಕ ಆಚರಣೆಯಲ್ಲಿ ವಿವೇಚಿಸುವುದಾದರೆ, ನಾಡಿನ ವಿವಿಧ ಭಾಗಗಳಲ್ಲಿ ಆಚರಿಸಲಾಗುವ ಹಬ್ಬ ಹರಿದಿನಗಳು, ಉತ್ಸವಗಳು ಹಾಗೂ ಆಚರಣೆಗಳಂತಹ ವಿಶೇಷ ಸಂದರ್ಭಗಳಲ್ಲಿ ಗಾಜಿನ ಚಿತ್ರಗಳನ್ನು ಅಲಂಕರಿಸಿ ಸಂಭ್ರಮ ಪಡುವುದನ್ನು ನೋಡಬಹುದಾಗಿದೆ. ವೈಯಕ್ತಿಕವಾಗಿ ಹಾಗೂ ಸಾಮೂಹಿಕವಾಗಿ ಈ ಪಾರಂಪರಿಕ ಆಚರಣೆಗಳನ್ನು ಇಂದು ಸಹ ಕೆಲವು ಸಮುದಾಯದವರಲ್ಲಿ ಕಾಣುತ್ತೇವೆ. ವರ್ಷದ ಬಾರ ಮಾಸಗಳಲ್ಲಿ ವೈವಿಧ್ಯಮಯ ಹಬ್ಬಗಳಲ್ಲಿ ತೊಡಗಿರುವ ನಮ್ಮ ಜನಪದರು ಗಣೇಶ ಚತುರ್ಥಿ, ಹೋಳಿಹಬ್ಬ, ಗೌರಿಹಬ್ಬ, ವರಮಹಾಲಕ್ಷ್ಮೀಪೂಜೆ, ದೀಪಾವಳಿಯಂತಹ ಹಬ್ಬಗಳನ್ನು ಆಚರಿಸಿಕೊಳ್ಳುತ್ತಾರೆ. ಈ ಸಂದರ್ಭಗಳಲ್ಲಿ ತಮ್ಮ ತಮ್ಮ ಮನೆಗಳಲ್ಲಿ ಹಾಗೂ ಗಲ್ಲಿ ಗಲ್ಲಿಗಳಲ್ಲಿ ವಿಶೇಷ ಮಂಟಪಗಳನ್ನು ನಿರ್ಮಿಸಿ ಆ ಮಂಟಪಗಳಲ್ಲಿ ಸಂದರ್ಭಾನುಸಾರವಾಗಿ ಗಾಜಿನ ಮೇಲಿನ ಚಿತ್ರಗಳನ್ನು ಅಲಂಕರಿಸಿ ಮಂಟಪಗಳನ್ನು ಶೃಂಗರಿಸುತ್ತಾರೆ. ಈ ಪರಂಪರೆ ಎರಡು ಮೂರು ತಲೆ ಮಾರುಗಳಿಂದ ನಡೆದುಕೊಂಡು ಬಂದದ್ದನ್ನು ಗಮನಿಸಬಹುದು. ಗಾಜಿನ ಚಿತ್ರಗಳ ಪೋಷಕರು ಹೇಳುವ ಪ್ರಕಾರ ಹಿಂದೆ ನಮ್ಮ ಪೂರ್ವಜರು ಬೇರೆ ಬೇರೆ ಹಬ್ಬಗಳ ಸಂದರ್ಭಗಳಲ್ಲಿ ಜಾತ್ರೆಯ ಸಂದರ್ಭಗಳಲ್ಲಿ ಪಾರಿಜಾತ, ದೊಡ್ಡಾಟ, ಸಣ್ಣಾಟಗಳನ್ನು ಆಡುತ್ತಿದ್ದರು. ಆ ಸಮಯದಲ್ಲಿ ವಿಶೇಷ ಮಂಟಪಗಳನ್ನು ಕಟ್ಟುತ್ತಿದ್ದರು. ಆ ಮಂಟಪಗಳಲ್ಲಿ ಈ ಆಕರ್ಷಕ ಗಾಜಿನ ಚಿತ್ರಗಳನ್ನು ತೂಗುಹಾಕುತ್ತಿದ್ದರು. ಇನ್ನೂ ವಿಶೇಷವೆಂದರೆ ಮನೆಯಲ್ಲಿ ಬಾಲಕಿಯರು ಋತುಮತಿಯಾದರೆ

೫, ೭, ೯ ದಿನಗಳ ಕಾಲ ಮಂಟಪಕಟ್ಟಿ ಅಲ್ಲಿ ಗಾಜಿನ ಚಿತ್ರಗಳನ್ನು ಅಲಂಕರಿ ಸುತ್ತಿದ್ದರು. ಪ್ರತಿರಾತ್ರಿಯೂ ಶೋಭಾನ ಕಾರ್ಯವನ್ನು ಗಲ್ಲಿಯ ಹೆಣ್ಣುಮಕ್ಕಳು ಸೇರಿ ನಡೆಸುತ್ತಿದ್ದರು. ಈಗಲೂ ಸಹ ಈ ಪದ್ಧತಿಯು ಕೆಲವು ಸಮುದಾಯದವರಲ್ಲಿ ಕಾಣಸಿಗುತ್ತದೆ.

ಉತ್ತರ ಕರ್ನಾಟಕದಲ್ಲಿ ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲೂಕಿನ ಗುಳೇದಗುಡ್ಡವು ಇಂಥ ಸಾಂಸ್ಕೃತಿಕ ಕೇಂದ್ರವಾಗಿದೆ. ಈ ಊರು ಹುಟ್ಟಿನಿಂದಲೇ ನಗರವಾಗಿ ಬೆಳೆದದ್ದು ವಿಶೇಷವಾಗಿದೆ. ಉತ್ತಮ ಸಾಂಸ್ಕೃತಿಕ ಪರಿಸರವನ್ನು ಹೊಂದಿದ ಈ ಊರಿನಲ್ಲಿ ಅನೇಕ ಮತ ಪಂಗಡದ ಜನರು ಇಲ್ಲಿ ವಾಸಿಸುತ್ತಿದ್ದಾರೆ. ಬಿಜಾಪೂರದ ಆದಿಲಶಾಹಿ ಆಡಳಿತ ಕ್ಷಿಣಿಸುತ್ತಿದ್ದಂತೆ ಮರಾಠರ ಪ್ರಭಾವದ ಚಿತ್ರಗಳು ದಖನಿ ಶೈಲಿಯಲ್ಲಿ ರಚನೆಗೊಂಡವು. ಗುಳೇದಗುಡ್ಡದ ಶೇಖರಪ್ಪ ಶಂಕ್ರಪ್ಪ ಹೊಸಮನಿ ಗೌಡ್ರ ವಾಡೆಯಲ್ಲಿ ಭಿತ್ತಿ ಚಿತ್ರಗಳಿದ್ದು ಅವು ಮರಾಠರ ಪ್ರಭಾವಕ್ಕೆ ಒಳಗಾಗಿರುವಂತೆ ತೋರುತ್ತವೆ. ಅದೇ ರೀತಿ ಊರಿನಲ್ಲಿ ತಂಜಾವೂರು ಕಡೆಯಿಂದ ಸಂಗ್ರಹಿಸಿದ ಅನೇಕ ಗಾಜಿನ ಚಿತ್ರಗಳು ಕಂಡು ಬರುತ್ತವೆ.

ಇದೇ ಊರಿನಲ್ಲಿ ಸಂಗೀತ ಶಾಲೆಗಳು, ಸಂಗೀತ ಕಲಾವಿದರು, ಅನೇಕ ವೃತ್ತಿನಾಟಕ ಕಂಪನಿಗಳು, ನಾಟಕಗಾರರು ಇಲ್ಲಿರುವುದು ಈ ಊರಿನ ಸಾಂಸ್ಕೃತಿಕ ಹಿರಿಮೆಯನ್ನು ಅರಿಯಬಹುದಾಗಿದೆ. ಈ ಸಂದರ್ಭದಲ್ಲಿ ಮರಾಠಿ ನಾಟಕ ಪ್ರದರ್ಶನಗಳು ಹೆಚ್ಚತೊಡಗಿದವು ಕ್ರಿ. ಶ. ೧೮೯೫-೯೬ ರಲ್ಲಿ ಬಾದಾಮಿಯಲ್ಲಿ ಒಂದು ಕನ್ನಡ ನಾಟಕ ಮಂಡಳಿ ಹುಟ್ಟಿಕೊಂಡಿತ್ತು. ಚುರುಮರಿಯವರ ಶಾಕುಂತಲದ ಮೊದಲನೇ ನಾಲ್ಕು ಅಂಕಗಳನ್ನು ಕನ್ನಡದಲ್ಲಿ ಪ್ರದರ್ಶಿಸಲಾಯಿತು. ಕಿರ್ಲೋಸ್ಕರ್ ನಾಟಕ ಮಂಡಳಿಯ ಮರಾಠಿಯ 'ಸೌಭದ್ರ' ನಾಟಕವನ್ನು ಕನ್ನಡಕ್ಕೆ ಭಾಷಾಂತರಿಸಿ ಆಡಲಾಯಿತು. ಗುಳೇದಗುಡ್ಡ ಗಂಗೂಬಾಯಿಯವರು ಮದ್ವರಾಯರ ಸ್ನೇಹದಿಂದಾಗಿ ಶ್ರೀಕೃಷ್ಣ ನಾಟಕ ಮಂಡಳಿ ಎಂಬ ನಾಟಕ ಮಂಡಳಿಯನ್ನು ೧೯೨೫ ರಲ್ಲಿ ಸ್ಥಾಪಿಸಲಾಯಿತು. ಗಂಗೂಬಾಯಿಯ ಜೊತೆಗೆ ನಾಯಕ ನಟನಾಗಿ ಅಭಿನಯಿಸುತ್ತಿದ್ದ ಗುರುರಾವ್ ದೇಶಪಾಂಡೆಯವರು ಮಂಡಳಿ ಬಿಟ್ಟ ಮೇಲೆ ನಟರಿಲ್ಲದೇ ತೊಂದರೆಯಾದಾಗ, ವಾಮನರಾಯರ ಕಂಪನಿಯಲ್ಲಿ ಪಳಗಿದ ಬಸವರಾಜ ಮನಸೂರರನ್ನು ಆವ್ಹಾನಿಸಿ ನಾಯಕ ನಟನ ಪಾತ್ರ ನೀಡಿದ ಮೇಲೆ ಈ ಕಂಪನಿ ಮತ್ತೇ ನಡೆಯಿತು. ಮೈಸೂರು ಮಹಾರಾಜರು ಈ ಕಂಪನಿಯನ್ನು ಕರೆಸಿ ನಾಟಕಗಳನ್ನಾಡಿಸಿದರು.

ಬೇರೆ ಬೇರೆ ಸ್ಥಳಗಳಲ್ಲಿ ನಾಟಕ ಪ್ರದರ್ಶನ ನೀಡಿ ಒಮ್ಮೆ ಬಿಜಾಪೂರಕ್ಕೆ ಹಿಂದಿರುಗಿದಾಗ ಛತ್ರೆ ರಂಗಮಂದಿರದಲ್ಲಿ ಮಹಾರಾಷ್ಟ್ರದ ಪ್ರಸಿದ್ಧ ನಾಯಕ ನಟಿ ಹೀರಾಬಾಯಿ ಬಡೋದೆಕರರ ನಾಟಕ ಮಂಡಳಿ ವಾಸ್ತವ್ಯಮಾಡಿತ್ತು. ಈ ಎರಡು ಮಂಡಳಿಗಳ ನಡುವೆ ಪೈಪೋಟಿ ನಡೆಯುವ ಬದಲು, ಪರಸ್ಪರ ಸೌಹಾರ್ದಯುತವಾಗಿ ನಾಟಕ ಪ್ರದರ್ಶನಗಳು ನಡೆದವು. ಒಂದು ದಿನ ಆ ಕಂಪನಿಯಿಂದ ಮರಾಠಿ ನಾಟಕ ನಡೆದರೆ ಇನ್ನೊಂದು ದಿನ ಶ್ರೀಕೃಷ್ಣ ನಾಟಕ ಮಂಡಳಿಯಿಂದ ಕನ್ನಡ ನಾಟಕಗಳು ಪ್ರದರ್ಶನಗೊಳ್ಳುತ್ತಿದ್ದವು. ಎರಡೂ ಮಂಡಳಿಗಳೂ ಸಂಶಯ ಸಾಮ್ರಾಜ್ಯ, 'ಸೌಭದ್ರ' ಮಾನಾಪಮಾನ, ಎಂಬ ನಾಟಕಗಳನ್ನೇ ಆಡಿದವು. ಕಂದಗಲ್

ಹನುಮಂತರಾಯರು, ಗಂಗೂಬಾಯಿಯ ಕರೆಯ ಮೇರೆಗೆ 'ಸಂಧ್ಯಾರಾಗ' ನಾಟಕಕ್ಕೆ ತರಬೇತಿ ನೀಡಲು ಬಂದು, ಹಂದಿಗನೂರು ಸಿದ್ರಾಮಪ್ಪನವರೂ ಈ ಮಂಡಳಿ ಸೇರಿದಾಗ, ಮಂಡಳಿಯ ಪ್ರದರ್ಶನಗಳು ವೈಭವದಿಂದ ನಡೆದವು. ಕೆಲವು ಕಾಲದ ನಂತರ ಈ ನಾಟಕ ಮಂಡಳಿ ಉಡುಪಿಗೆ ಬಂದಾಗ, ಮಂಡಳಿಯ ಆದಾಯ ಕುಸಿಯುತ್ತಿದ್ದಂತೆ ಉಡುಪಿಯಲ್ಲಿಯೇ ಮಂಡಳಿಯನ್ನು ಮುಚ್ಚಿ ಗಂಗೂಬಾಯಿ ಗುಳೇದಗುಡ್ಡಕ್ಕೆ ಹಿಂತಿರುಗಿದರು.[೨೩]

ಕನ್ನಡ ವೃತ್ತಿ ರಂಗಭೂಮಿಯ ಉಚ್ಛ್ರಾಯ ಕಾಲವೆನ್ನಬಹುದಾದ ೧೯೦೦ ರಿಂದ ೧೯೬೫ ರವರೆಗಿನ ಅವಧಿಯಲ್ಲಿ ಕರ್ನಾಟಕದ ಇತರೆಡೆಗಳಲ್ಲಿ ಅನೇಕ ನಾಟಕ ಕಂಪನಿಗಳು ಹುಟ್ಟಿಕೊಂಡಿದ್ದವು. ಪ್ರದರ್ಶನದ ಸಂದರ್ಭಗಳಲ್ಲಿ ರಂಗ ಸಜ್ಜಿಕೆಯಲ್ಲಿ ಸನ್ನಿವೇಶಕ್ಕೆ ತಕ್ಕಂತೆ ಗಾಜಿನ ಚಿತ್ರಗಳನ್ನು ಅಲಂಕರಿಸುತ್ತಿದ್ದಿರಬಹುದೆಂದು ತೋರುತ್ತದೆ. ಯಾಕೆಂದರೆ ಈ ಊರಿನಲ್ಲಿ ಕಂಡು ಬರುವಷ್ಟು ಗಾಜಿನ ಚಿತ್ರಗಳು ಬೇರೆಲ್ಲಿ ಕಂಡು ಬರುವುದಿಲ್ಲ. ಇಲ್ಲಿ ಮರಾಠರ ಸಾಂಸ್ಕೃತಿಕ ಸಂಬಂಧಗಳು ಕನ್ನಡಿಗರ ಜೊತೆ ಹೆಣೆದುಕೊಂಡದ್ದನ್ನು ವಿವೇಚಿಸಬಹುದು.

ಗುಳೇದಗುಡ್ಡದ ಹೊಸಪೇಟೆಯಲ್ಲಿರುವ ವೀರಸಂಗಪ್ಪ ಗೌರೀಶಪ್ಪ ಭಾವಿ ಇವರ ಮನೆಯಲ್ಲಿ ಅನೇಕ ಗಾಜಿನ ಚಿತ್ರಗಳು ಲಭ್ಯಇವೆ. ಇವರು ಅಜ್ಜನ ಕಾಲದಿಂದಲೂ ಈ ಚಿತ್ರಗಳನ್ನು ಪೋಷಿಸಿಕೊಂಡು ಬಂದಿರುವರು. ಇವರ ಮನೆಯಲ್ಲಿ ಗೌರಿಹುಣ್ಣಿಮೆಯಂದು ಮನೆಯ ಆವರಣದಲ್ಲಿ ದೊಡ್ಡದಾದ ಗೌರಿಮಂಟಪಕಟ್ಟಿ ಆ ಮಂಪಟದ ಖಾನೆಗಳಲ್ಲಿ ಗಾಜಿನ ಚಿತ್ರಗಳನ್ನು ಅಲಂಕರಿಸುತ್ತಾರೆ. ಹುಣ್ಣಿಮೆಯ ದಿನಗಳಂದು ಊರಿನ ಮಹಿಳೆಯರು ಇವರ ಮನೆಯಲ್ಲಿ ಪ್ರತಿಷ್ಠಾಪಿಸಲಾದ ಗೌರಿ-ಶಂಕರ ಪ್ರತಿಮೆಗೆ ಆರತಿ ತಟ್ಟೆತಂದು ಆರತಿ ಮಾಡುತ್ತಾರೆ. ಹುಣ್ಣಿಮೆಯ ರಾತ್ರಿಯಂದು ಗಲ್ಲಿಯ ಮಹಿಳೆಯರು, ಯುವತಿಯರು, ಹುಡುಗಿಯರು, ಗೌರಿ ಪೂಜೆ ಸಲ್ಲಿಸಿ ಗೌರಿ ಹಾಡುಗಳನ್ನು ಹಾಡುತ್ತಾರೆ. ವಿನೋದಗಳನ್ನು ಮಾಡುತ್ತಾರೆ. ರಾತ್ರಿ ಇಡೀ ಜಾಗರಣೆಯನ್ನು ಮಾಡುತ್ತಾರೆ. ಈ ಪರಂಪರೆ ಈಗಿನದಲ್ಲ ಅದು ತಾತ ಮುತ್ತಾತರ ಕಾಲಗಳಿಂದ ನಡೆದುಕೊಂಡು ಬಂದಿದೆ ಎನ್ನುತ್ತಾರೆ ಗೌರೀಶಪ್ಪನವರು. ಈ ಮಂಟಪ ಕಟ್ಟಲಾಗುವ ಸೆಟ್‌ಗಳು ಪೂರ್ವ ಕಾಲದಲ್ಲಿನವು. ಅದಕ್ಕೆ ಬಣ್ಣದ ಹಾಗೂ ಮೆರುಗು ಕಾಗದಗಳನ್ನು ಅಂಟಿಸಿ ವಿಶೇಷ ದೀಪದ ಅಲಂಕಾರವನ್ನು ಮಾಡುತ್ತೇವೆ ಎನ್ನುವರು. ಈ ದೊಡ್ಡದಾದ ಗೌರಿ ಮುಖಮಂಪಟದ ಸೆಟ್ ಮೈಸೂರು ಅರಮನೆಯಂತೆ ರಾತ್ರಿ ಗೋಚರಿಸುತ್ತದೆ. ಈಗಲೂ ಈ ಇಂಥ ಸುಂದರ ಸನ್ನಿವೇಶವನ್ನು ಪ್ರತಿ ವರ್ಷ ರಾತ್ರಿ ಗೌರಿಹಬ್ಬದಂದು ನೋಡಬಹುದಾಗಿದೆ. ಈ ಗೌರಿ ಮಂಟಪದಲ್ಲಿ ಅಲಂಕರಿಸಲಾದ ಗಾಜಿನ ಚಿತ್ರಗಳು ನೋಡುಗರನ್ನು ರಂಜಿಸುತ್ತವೆ. ಇಲ್ಲಿ ಪ್ರಣಯದ ಚಿತ್ರಗಳು, ದೇವರ ಚಿತ್ರಗಳು, ಸ್ತ್ರೀಯರ ಚಿತ್ರಗಳು ನಮ್ಮ ಸಂಪ್ರದಾಯ ಸ್ತ್ರೀ-ಪುರುಷರ ಮೇಲೆ ಗಾಢ ಪರಿಣಾಮವನ್ನು ಬೀರುತ್ತವೆ.

ಇದೇ ಊರಿನ ಇನ್ನೊಂದು ಮನೆತನವಾದ ಶ್ರೀ ಬಸವರಾಜ ಉದ್ನೂರು ಹಾಗೂ ತಮ್ಮಣ್ಣಪ್ಪ ಉದ್ನೂರ ಮನೆತನದವರು ಪ್ರತಿವರ್ಷ ಹೋಳಿ ಹಬ್ಬದಂದು ಕಾಮ-ರತಿಯ ಶಿಲ್ಪಗಳನ್ನು ಪ್ರತಿಷ್ಠಾಪಿಸುತ್ತಾರೆ. ಇದಕ್ಕೆ ವಿಶೇಷ ಮಂಟಪಗಳನ್ನು ಕಟ್ಟಿ ಈ ಮಂಟಪಗಳಲ್ಲಿ ಪ್ರಣಯ ನಿರತ

೨೩. ಡಾ. ಆರ್. ಮುನಿಸ್ವಾಮಿ ; (ಸಂ) ವಿಜಾಪೂರ ಜಿಲ್ಲೆ ಗೆಜೆಟೀಯರ್, ೧೯೯೯ ಪುಟ ೯೦೧

ಸ್ತ್ರೀ–ಪುರುಷರ ಗಾಜಿನ ಚಿತ್ರಗಳನ್ನು ಅಲಂಕರಿಸುತ್ತಾರೆ. ಈ ಎರಡು ಮನೆತನದವರು ಈ ಆಚರಣೆಯನ್ನು ಅವರ ಪೂರ್ವಜರಿಂದ ಆಚರಿಸಿಕೊಂಡು ಬರುತ್ತಲಿದ್ದಾರೆ. ಬಸವರಾಜ ಉದ್ನೂರರ ಮನೆಯಲ್ಲಿ ಸ್ಥಾಪಿಸುವ ಕಾಮಣ್ಣನು ಗುಳೇದಗುಡ್ಡಕ್ಕೆ ದೊಡ್ಡ ಕಾಮಣ್ಣನೆಂದು ಮಾದರಿಯಾಗಿದೆ. ಅದೇ ರೀತಿ ಊರಿನ ವಿವಿಧ ಗಲ್ಲಿಗಳಲ್ಲಿ ಕಾಮ ಮತ್ತು ರತೀಯರ ಶಿಲ್ಪಗಳನ್ನು ಸ್ಥಾಪಿಸಿ, ವಿಶೇಷ ಮಂಟಪಗಳನ್ನು ನಿರ್ಮಿಸಿ ಸುಂದರವಾದ ಗಾಜಿನ ಚಿತ್ರಗಳನ್ನು ಅಲಂಕರಿ ಹೋಳಿ ಹಬ್ಬವನ್ನು ಆಚರಿಸಲಾಗುತ್ತಿತ್ತು. ಇಂದೂ ಕೂಡಾ ಈ ಪರಿಪಾಠ ಕಂಡು ಬರುತ್ತಿದ್ದು, ಕೆಲವು ಚಿತ್ರಗಳು ಮಾತ್ರ ನೋಡಲು ಲಭ್ಯಇವೆ.

ಗುಳೇದಗುಡ್ಡದ ಇನ್ನೊಂದು ವಿಶೇಷ ಮನೆತನವಾದ ಶ್ರೀ ಬಸವಪ್ರಭು. ಮಹಾದೇವಪ್ಪ. ಗಂಗಾವತಿಯವರ ಮನೆಯಲ್ಲಿ ಹಲವಾರು ಗಾಜಿನ ಚಿತ್ರಗಳು ಶತಶತಮಾನಗಳಿಂದಲೂ ರಾರಾಜಿಸುತ್ತಲಿವೆ. ಇವರ ಮನೆಯೂ ಕೂಡಾ ಅತ್ಯಾಕರ್ಷಕ ಕುಸುರಿ ಕೆಲಸದ ಕಟ್ಟಿಗೆಯ ಕಟ್ಟಡವಾಗಿದೆ. ಇದು ಗುಳೇದಗುಡ್ಡಕ್ಕೆ ಮಹಾಮನೆಯೆಂದು ಪ್ರಸಿದ್ಧವಾಗಿದೆ. ಶಿವಶಿಂಪಿ ಸಮುದಾಯಕ್ಕೆ ಸೇರಿದ ಈ ಮನೆತನದವರು ಪ್ರತಿವರ್ಷ ಗಣೇಶ ಚತುರ್ಥಿದಿನದಂದು ಗಣೇಶನ ಮೂರ್ತಿ ಪ್ರತಿಷ್ಠಾಪಿಸಿ ವಿಶೇಷ ಮಂಟಪವನ್ನು ಕಟ್ಟಿ ಆ ಮಂಟಪದಲ್ಲಿ ಸುಂದರವಾದ ಗಾಜಿನ ಚಿತ್ರಗಳನ್ನು ಅಲಂಕರಿಸುತ್ತಾರೆ. ಇವರು ಸಹಿತ ಈ ಪದ್ಧತಿಯನ್ನು ಅವರ ಪೂರ್ವಜರಿಂದಲೂ ಆಚರಿಸಿಕೊಂಡು ಬರುತ್ತಿದ್ದಾರೆ. ಈ ಮಂಪಟದಲ್ಲಿ ಸಾಮಾನ್ಯವಾಗಿ ದೇವರು ಹಾಗೂ ದೇವತೆಗಳ ಗಾಜಿನ ಚಿತ್ರಗಳನ್ನು ಅಲಂಕರಿಸುತ್ತಾರೆ. ಇವು ಅಷ್ಟೇ ಅಲ್ಲದೇ ಬಣ್ಣ ಬಣ್ಣಗಳ ಗಾಜಿನ ಜುಮ್ಮರಗಳನ್ನು ನೇತುಹಾಕಿ ಅಲಂಕರಿಸುತ್ತಾರೆ.

ಇದೇ ಊರಿನ ವೀರಗಂಟೆಪ್ಪ. ಸಂಗಪ್ಪ. ಕರಡಿಯವರ ಮನೆತನದವರು ಗಣೇಶ ಚತುರ್ಥಿಯಂದು ಅವರ ಮನೆಯಲ್ಲಿ ಗಣೇಶ ಮೂರ್ತಿಯನ್ನು ಸ್ಥಾಪಿಸಿ ಮಂಟಪ ನಿರ್ಮಿಸಿ ಗಾಜಿನ ಚಿತ್ರಗಳನ್ನು ಅಲಂಕರಿಸುತ್ತಿದ್ದರು. ಈ ಊರಿನಲ್ಲಿ ಗಾಜಿನ ಚಿತ್ರಗಳು ಕಂಡು ಬರುವ ಮನೆತನಗಳಲ್ಲಿ ಹಬ್ಬಹರಿದಿನಗಳಲ್ಲಿ ಅಲಂಕರಿಸಿ ಸಂಭ್ರಮ ಪಡುತ್ತಿರುವರು.

ಹುನಗುಂದ ತಾಲೂಕಿನ ಅಮೀನಗಡ ಗ್ರಾಮದ ಮುತ್ತಣ್ಣ. ಸಣ್ಣಬಸಪ್ಪ. ಗರಡಿಯವರ ಮನೆಯಲ್ಲಿ ಶತಮಾನಗಳಿಂದ ಸಂಗ್ರಹಿಸಲಾದ ಗಾಜಿನ ಚಿತ್ರಗಳು ಕಂಡು ಬರುತ್ತವೆ. ಹತ್ತಿಗಿರಣಿಗಳಿಂದ ಪ್ರಖ್ಯಾತವಾಗಿದ್ದ ಈ ಮನೆತನವೂ ದೂರದ ಮುಂಬೈಯೊಂದಿಗೆ ವ್ಯಾಪಾರ ವಹಿವಾಟು ಹೊಂದಿತ್ತೆಂದು ಮುತ್ತಣ್ಣನವರು ಅಭಿಪ್ರಾಯ ಪಡುತ್ತಾರೆ. ಇವರ ಮನೆತನವು ಸಾಂಸ್ಕೃತಿಕವಾಗಿ ಒಂದು ಮಾದರಿ ಮನೆತನವಾಗಿತ್ತು. ಇವರು ಪ್ರತಿವರ್ಷ ಗಣೇಶ ಚತುರ್ಥಿಯೆಂದು ಗಣಪತಿ ಮೂರ್ತಿ ಸ್ಥಾಪಿಸಿ ಮಂಟಪ ನಿರ್ಮಿಸಿ ಈ ಅಪರೂಪದ ಗಾಜಿನ ಚಿತ್ರಗಳನ್ನು ಅಲಂಕರಿಸುತ್ತಿರುವರು. ಇವರು ಕೂಡಾ ಅವರ ಪೂರ್ವಜರಿಂದಲೂ ಈ ಹಬ್ಬವನ್ನು ಆಚರಿಸುತ್ತಾ ಬಂದಿರುವರು.

ಬಾಗಲಕೋಟೆಯು ಹೋಳಿ ಹಬ್ಬದ ಆಚರಣೆಯಲ್ಲಿ ತನ್ನದೇ ಆದ ವೈಶಿಷ್ಟ್ಯತೆಯನ್ನು ಹೊಂದಿದೆ. ಇಲ್ಲಿನ ಕಾಮನ ಹಾಗೂ ರತಿದೇವಿಯರ ವಿಶಿಷ್ಠ ಮೂರ್ತಿ ಪ್ರತಿಷ್ಠಾಪನೆ, ಹೋಳಿ ಕುಣಿತ, ವಿನೋದ ಹಾಗೂ ಬಣ್ಣಗಳನ್ನು ಆಡುವುದು. ಉತ್ತರ ಕರ್ನಾಟಕದಲ್ಲಿಯೇ ಪ್ರಸಿದ್ಧ

ವಾಗಿದೆ. ಈ ಊರಿನ ಶ್ರೀ ಎಸ್. ಎಸ್. ನಾರಾ ಅವರ ಮನೆಯಲ್ಲಿ ಕಾಮನ ಹಬ್ಬವನ್ನು ಅವರ ಪೂರ್ವಜರಿಂದಲೂ ವೈಶಿಷ್ಟ್ಯ ಪೂರ್ಣವಾಗಿ ಆಚರಿಸಿಕೊಂಡು ಬರುತ್ತಿದ್ದರು. ಕಾಮ-ರತಿಯರ ಮೂರ್ತಿಯನ್ನು ಪ್ರತಿಷ್ಠಾಪಿಸಲು ಹಾಗೂ ಮಂಟಪ ಕಟ್ಟಲೂ ವಿಶೇಷ ಸೆಟ್‌ಗಳಿವೆ. ಈ ಮಂಪಟ ಅಲಂಕಾರ ಮಾಡಲೆಂದೇ ಗಾಜಿನ ಬಲ್ಬಗಳು (ಕ್ಯಾಂಡಲ್ ಬಲ್ಬಗಳು) ಝುಮ್ಮರಗಳು, ಗಾಜಿನ ಅಲಂಕಾರಿಕ ವಸ್ತುಗಳು ಹಾಗೂ ಗಾಜಿನ ಚಿತ್ರಗಳು ಲಭ್ಯಇವೆ. ಪ್ರತಿವರ್ಷ ಈ ಹಬ್ಬದ ಸಂದರ್ಭಗಳಲ್ಲಿ ಮಾತ್ರ ತೆಗೆದು ಅಲಂಕರಿಸುತ್ತಾರೆ. ಹಬ್ಬ ಮುಗಿದ ನಂತರ ಅವುಗಳನ್ನು ತೆಗೆದು ಸುರಕ್ಷಿತವಾಗಿ ಇಡುತ್ತೇವೆಂದು ಮನೆಯವರು ಹೇಳುತ್ತಾರೆ. ಆದರೆ ಇಂದು ಬಾಗಲಕೋಟೆ ಮುಳುಗಡೆಯಾದಾಗಿನಿಂದ ಈ ಮನೆಯು ಸ್ಥಳಾಂತರವಾದುದರಿಂದ ಈ ಆಚರಣೆ ಮಾಡಲಾಗುತ್ತಿಲ್ಲವೆಂದು ಮನೆಯ ಹಿರಿಯರು ಅಭಿಪ್ರಾಯ ಪಡುತ್ತಾರೆ.

ಇದೇ ಊರಿನ ಹೊಕ್ರಾಣಿ, ಹಲಕಾಟಿಯವರ ಮನೆತನಗಳು ಹಿಂದಿನ ಕಾಲದಿಂದಲೂ ಶ್ರೀಮಂತ ವ್ಯಾಪಾರಸ್ಥ ಕುಟುಂಬಗಳಾಗಿವೆ. ಈ ಮನೆತನದವರು ಸಹ ಹೋಳಿ ಹಬ್ಬದ ಸಂದರ್ಭಗಳಲ್ಲಿ ವಿಶೇಷ ಆಚರಣೆಯನ್ನು ಮಾಡಿಕೊಳ್ಳುತ್ತಾ ಬಂದಿವೆ. ಇವರ ಮನೆತನಗಳಲ್ಲಿ ಹೋಳಿಹಬ್ಬದ ಸಂದರ್ಭಗಳಲ್ಲಿ ಹಾಗೂ ಗಣೇಶ ಚತುರ್ಥಿಯ ಸಂದರ್ಭಗಳಲ್ಲಿ ವಿಶೇಷ ಮಂಟಪಗಳನ್ನು ನಿರ್ಮಿಸಿ ಆ ಮಂಪಟಗಳನ್ನು ವಿವಿಧ ಅಲಂಕಾರಿಕ ವಸ್ತುಗಳಿಂದ ಚಿತ್ರಗಳಿಂದ ಅಲಂಕರಿಸುತ್ತಿದ್ದರು. ಈ ಹಬ್ಬದ ಸಂದರ್ಭಗಳಲ್ಲಿ ಮಂಟಪವನ್ನು ಅಲಂಕರಣ ಮಾಡುವುದರ ಸಲುವಾಗಿ ಗಾಜಿನ ವಸ್ತುಗಳನ್ನು ಹಾಗೂ ಗಾಜಿನ ಚಿತ್ರಗಳನ್ನು ಖರೀದಿ ತಂದಿರಬಹುದೆಂದು ತೋರುತ್ತದೆ. ಇಂಥ ಹಬ್ಬಗಳ ಸಂದರ್ಭಗಳಲ್ಲಿ ಹಾಡು, ಕುಣಿತ, ಪೂಜೆ ಪುನಸ್ಕಾರಗಳಂತಹ ಜಾಗರಣೆಯನ್ನು ಮನೆತನದ ಹಿರಿಯರು ಮಾಡುತ್ತಿದ್ದರೆಂದು ತೋರುತ್ತದೆ. ಯಾಕೆಂದರೆ ಇವರ ಮನೆತನಗಳಲ್ಲಿ ಕಂಡು ಬರುವ ಗಾಜಿನ ವಸ್ತುಗಳು, ಗಾಜಿನ ಚಿತ್ರಗಳು ಹಾಗೂ ಅಲಂಕಾರಿಕ ವಸ್ತುಗಳು ಸಾಕ್ಷಿಯೆನ್ನಬಹುದು. ಸಧ್ಯ ಈ ಯಾವ ಕಾರ್ಯಗಳು ಈ ಎರಡು ಮನೆತನಗಳಲ್ಲಿ ಮಾಡುತ್ತಿಲ್ಲ. ಯಾಕೆಂದರೆ ಈ ಕುಟುಂಬಗಳು ವಿಭಜನೆ ಹೊಂದಿರುವುದರಿಂದ ಅವರು ತಮ್ಮ ಪೂರ್ವಜರು ನಡೆಸಿಕೊಂಡು ಬರುತ್ತಿದ್ದ ಇಂಥ ಸಾಂಸ್ಕೃತಿಕ ಚಟುವಟಿಕೆಗಳನ್ನು ಆಚರಿಸಲಾಗುತ್ತಿಲ್ಲ. ಇವರ ಮನೆತನಗಳಲ್ಲಿ ಸಂಗ್ರಹಿಸಲಾಗಿದ್ದ ಗಾಜಿನ ವಸ್ತುಗಳು ಹಾಗೂ ಗಾಜಿನ ಚಿತ್ರಗಳು ಹಾಳಾಗಿ ಹೋಗಿವೆ. ಕೆಲವು ಚಿತ್ರಗಳನ್ನು ಮಾರಾಟ ಮಾಡಿದ್ದಾರೆ. ಕೆಲವು ಚಿತ್ರಗಳು ಸಂರಕ್ಷಣೆಯಿಲ್ಲದೇ ಒಡೆದು ಹೋಗಿವೆ. ಧಾರವಾಡ ಜಿಲ್ಲೆ ನವಲಗುಂದದ ಕೆಲವು ಮನೆತನಗಳಲ್ಲಿ ಗಣಪತಿಯ ಮಂಟಪಗಳನ್ನು ಕಟ್ಟಿಗೆಯಲ್ಲಿ ತಯಾರಿಸಿದ್ದು ಕಂಡು ಬರುತ್ತದೆ. ಈ ಕಟ್ಟಿಗೆಯ ಮಂಪಟಗಳನ್ನು ಸ್ಥಳೀಯ ಕುಶಲಕರ್ಮಿಗಳು ತಯಾರಿಸಿದ್ದಾರೆ. ಮಂಟಪಗಳ ಸುತ್ತಲಿನ ಚೌಕಾಣಿಗಳಲ್ಲಿ ದಶಾವತಾರಕ್ಕೆ ಸಂಬಂಧಿಸಿದ ಗಾಜಿನ ಚಿತ್ರಗಳನ್ನು ಅಳವಡಿಸಿದ್ದು, ಇವು ೧೦೦-೧೫೦ ವರ್ಷಗಳ ಹಿಂದೆ ರಚಿಸಲಾಗಿದೆ ಎಂದು ಆ ಮನೆತನಗಳ ಹಿರಿಯರು ಹೇಳುತ್ತಾರೆ. ಗಣೇಶನ ಹಬ್ಬದಂದು ಈ ಮಂಟಪಗಳನ್ನು ವಿಶೇಷವಾಗಿ ಅಲಂಕರಿಸಿ ಪ್ರತಿವರ್ಷ ಹಬ್ಬಗಳನ್ನು ಆಚರಿಸುತ್ತಾ ಬಂದಿದ್ದಾರೆ. ಇದು ಅವರ ಪೂರ್ವಜರ ಕಾಲದಿಂದಲೂ ನಡೆದುಕೊಂಡು ಬಂದದ್ದಾಗಿದೆ. ಇಂಥ ಮಂಟಪಗಳು

ನವಲಗುಂದ ಹಾಗೂ ಸುತ್ತಲಿನ ಊರುಗಳಲ್ಲಿ ಕೆಲವು ಶ್ರೀಮಂತ ವ್ಯಾಪಾರಸ್ಥ ಮನೆತನಗಳಲ್ಲಿ ದೊರೆಯಬಹುದಾದರೂ ಇಂದು ಕೆಲವು ಮಂಟಪಗಳನ್ನು ನೋಡಲು ಲಭ್ಯ ಇವೆ.

ಕೆಲವು ಮಂಟಪಗಳಲ್ಲಿನ ಗಾಜಿನ ಚಿತ್ರಗಳು ಒಡೆದು ಹೋಗಿರುವುದರಿಂದ ಅಲ್ಲಿ ದೇವರ ಪೋಸ್ಟರಗಳನ್ನು ಅಂಟಿಸಿದ್ದು ಕಂಡು ಬರುತ್ತವೆ. ಇನ್ನು ಕೆಲವು ಮನೆತನದವರು ಮನೆಯನ್ನು ಪುನರ್ ನಿರ್ಮಿಸಿರುವುದರಿಂದ ಆ ಮಂಟಪಗಳನ್ನು ತೆಗೆದು ಹಾಕಿದ್ದು ಸಹಿತ ಸ್ಥಳೀಯರಿಂದ ತಿಳಿದು ಬರುತ್ತದೆ. ಹಿಂದೆ ನಮ್ಮ ಜನರು ಹಬ್ಬ ಹರಿದಿನಗಳನ್ನು ಅತ್ಯಂತ ವೈಭವದಿಂದ ಆಚರಿಸುತ್ತಿದ್ದರೆಂಬುದಕ್ಕೆ ನಮಗೆ ಲಭ್ಯವಿರುವ ಅಲಂಕಾರ ಮಂಟಪಗಳು, ಅಲಂಕಾರಿಕ ವಸ್ತುಗಳು, ಸಾಕ್ಷಿಯೆನ್ನಬಹುದು. ಅವರು ಸೌಂದರ್ಯ ಪ್ರೀಯರೂ ಅಲಂಕಾರ ಪ್ರೀಯರೂ ಹಾಗೂ ವಿಲಾಸಿಗಳೂ ಆಗಿದ್ದರೆಂದು ತೋರುತ್ತದೆ.

ಮೈಸೂರು ವಿಶ್ವವಿದ್ಯಾಲಯದ ಜನಪದ ವಸ್ತು ಸಂಗ್ರಹಾಲಯದಲ್ಲಿರುವ ಗೊಂಬೆ ಮಂಟಪವನ್ನು ಶಿವಮೊಗ್ಗದಿಂದ ತಂದು ಸಂಗ್ರಹಿಸಲಾಗಿದೆ. ಈ ಕಟ್ಟಿಗೆ ಮಂಟಪವು ಗಾಜಿನ ಚಿತ್ರಗಳಿಂದ ಅಲಂಕೃತಗೊಂಡಿದ್ದು ಇನ್ನೂ ವಿಶೇಷವೆನೆಂದರೆ ಆ ಮಂಟಪದ ಪ್ರತಿಯೊಂದು ಖಾನೆಗಳು ಹಾಗೂ ಅಂಚುಗಳು ಚಿಕ್ಕ ಚಿಕ್ಕ ಅಲಂಕಾರಿಕ ಗಾಜಿನ ತುಂಡುಗಳಿಂದ ರಚಿಸಿದೆ. ಇದರ ಕುಸುರಿ ಕೆಲಸ ಅಮೋಘವಾಗಿದೆ. ಈ ಮಂಪಟವು ಅತ್ಯಂತ ಹಳೆಯ ಕಾಲದಾಗಿದ್ದು ಇದು ಅಪರೂಪವಾದ ಕುಸುರಿ ಮಂಟಪವೆಂದೇ ಹೇಳಬಹುದು. ಆಗಿನ ಶ್ರೀಮಂತರು ಇಂಥ ಮಂಟಪಗಳನ್ನು ಕುಶಲ ಕರ್ಮಿಗಳಿಂದ ತಯಾರಿಸಿ ತಮ್ಮ ಮನೆಯಲ್ಲಿ ನಡೆಯುವ ಹಬ್ಬ ಹರಿದಿನಗಳು, ಉತ್ಸವಗಳು, ಮದುವೆ ಮುಂಜಿಗಳನ್ನು ಮಾಡುತ್ತಿದ್ದಿರಬೇಕು. ಇವರು ಸಾಂಸ್ಕೃತಿಕ ಸಂಪನ್ನರಾಗಿದ್ದರು. ಇವರು ಯಾವುದೇ ಕೆಲಸ ಮಾಡಿದರೂ ಕಲಾತ್ಮಕವಾಗಿ ಹಾಗೂ ಮುಂದಿನ ವರಿಗೆ ಮಾದರಿಯಾಗಿರಬೇಕೆಂಬ ಮಹಾದಾಸೆಯನ್ನು ಅರಿಯಬಹುದು.

ಮೈಸೂರು, ತುಮಕೂರು, ಶಿವಮೊಗ್ಗ, ಚಿತ್ರದುರ್ಗ, ಬೆಂಗಳೂರು ಸುತ್ತಮುತ್ತಲಿನ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ನೂರಾರೂ ಗಾಜಿನ ಚಿತ್ರಗಳು ಸಾಂಪ್ರದಾಯಕ ಕಿರುರೂಪ ಚಿತ್ರಗಳು, ಅಲಂಕಾರಿಕ ಗಾಜಿನ ವಸ್ತುಗಳು ಕಂಡು ಬರುತ್ತವೆ. ಹಬ್ಬ ಹರಿದಿನ, ಜಾತ್ರೆ, ಉತ್ಸವ ಹಾಗೂ ಆಚರಣೆಗಳಂತಹ ಸಂದರ್ಭಗಳಲ್ಲಿ ಇಂಥ ವಸ್ತುಗಳನ್ನು ಮನೆ, ಮಂಟಪಗಳನ್ನು ಅಲಂಕರಿಸಿ ಸಂಭ್ರಮ ಪಡುತ್ತಿದ್ದರೂ ಆ ದಿನಗಳಲ್ಲಿ ಶ್ರೀಮಂತರು, ವ್ಯಾಪಾರಸ್ಥರು, ಆಳರಸರು ತಮ್ಮ ಬೇಡಿಕೆಗಳನ್ನು ಪೂರೈಸುವುದರ ಸಲುವಾಗಿ ಇಂಥ ಕುಶಲಕರ್ಮಿಗಳನ್ನು ಹಾಗೂ ಕಲಾವಿದರನ್ನು ಪ್ರೋತ್ಸಾಹಿಸಿ ಪೋಷಿಸುತ್ತಿದ್ದರೆಂದು ತಿಳಿದುಬರುತ್ತದೆ. ಗಾಜಿನ ಚಿತ್ರಗಳು ಆಯಾ ಪ್ರದೇಶದ ಜನರ ಆಸೆ ಅಭಿಲಾಷೆಯನ್ನು ಪ್ರತಿನಿಧಿಸುತ್ತವೆ. ಆ ಕಲಾವಿದರೂ ಕೂಡಾ ಸ್ಥಳೀಯ ಜನರ ಅಭಿರುಚಿಗಳನ್ನು ಅರಿತುಕೊಂಡು ಇಂಥ ಕುಶಲಕೆಲಸ ಮಾಡುತ್ತಿದ್ದರು.

ಹೈದರಬಾದ ಕರ್ನಾಟಕ ಪ್ರದೇಶದಲ್ಲಿ ಕಂಡು ಬರುವ ಗಾಜಿನ ಚಿತ್ರಗಳು ಸಹ ಆಯಾ ಪೋಷಕರು, ಆಯಾ ಜನಾಂಗದವರು ಆಚರಿಸಲಾಗುತ್ತಿದ್ದ ಹಬ್ಬ, ಉತ್ಸವಗಳಂತಹ ಸಂದರ್ಭಗಳಲ್ಲಿ ಚಿತ್ರಗಳನ್ನು ಅಲಂಕರಿಸಿ ಸಂಭ್ರಮ ಪಡುತ್ತಿದ್ದರು. ಇದಕ್ಕೆ ಅಲ್ಲಿ ಲಭ್ಯವಿರುವ

ಕೆಲವು ಶ್ರೀಮಂತ ವ್ಯಾಪಾರಸ್ಥ ಮನೆತನಗಳೇ ಸಾಕ್ಷಿಯೆನ್ನಬಹುದು. ಇಲ್ಲಿ ವಿಶೇಷವೆನೆಂದರೆ ಶ್ರೀಮಂತರು ತಮ್ಮ ಮನೆಯ ಅಂದಕ್ಕಾಗಿ ದೂರದಿಂದ ತರಿಸಿದ ಹಾಗೂ ಸ್ಥಳೀಯ ಕಲಾಕಾರರಿಂದ ರಚಿಸಿದ ಗಾಜಿನ ಚಿತ್ರಗಳು ಹೆಚ್ಚು ಕಂಡುಬರುತ್ತಿವೆ.

ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಗುಡಗೇರಿ ಗ್ರಾಮದಲ್ಲಿ ಶ್ರೀ ಬಸವರಾಜ. ಹುತುಗೊಣ್ಣನವರ ಎಂಬ ಮನೆತನವಿದೆ. ಇದು ಶೈವ ಸಂಪ್ರದಾಯಕ್ಕೆ ಸೇರಿದ ರೈತಾಪಿ ಕುಟುಂಬ. ಇವರ ಮನೆಯಲ್ಲಿ ಅವರ ಪೂರ್ವಜರು ಸಂಗ್ರಹಿಸಿದ ಕೆಲವು ಗಾಜಿನ ಚಿತ್ರಗಳಿವೆ. ಈ ಚಿತ್ರಗಳು ವೀರಶೈವ ಧರ್ಮಕ್ಕೆ ಸಂಬಂಧಿಸಿದ ಬಸವಣ್ಣ, ನೀಲಾಂಬಿಕೆಯರ ಚಿತ್ರಗಳಾಗಿವೆ. ಈ ಮನೆತನದವರು ಪ್ರತಿವರ್ಷ ಬಸವಜಯಂತಿಯ ದಿವಸ ಎತ್ತುಗಳನ್ನು ಶೃಂಗರಿಸಿ, ಚಕ್ಕಡಿಗೆ ವಿಶೇಷ ಅಲಂಕಾರ ಮಾಡಿ ಬಸವಣ್ಣನ ಗಾಜಿನ ಚಿತ್ರಗಳನ್ನು ಊರ ತುಂಬೆಲ್ಲಾ ಮೆರವಣಿಗೆ ಮಾಡುತ್ತಾರೆ. ಈ ಮೆರವಣಿಗೆಯನ್ನು ಸ್ಥಳೀಯರು ಸಾಮೂಹಿಕವಾಗಿ ಆಚರಿಸುತ್ತಾರೆ. ಊರಿನಲ್ಲಿ ಏನಾದರೂ ಜಾತ್ರೆ, ಉತ್ಸವಗಳಂಥ ಕಾರ್ಯಗಳು ನಡೆದರೆ ಇವರ ಮನೆಯಲ್ಲಿರುವ ಗಾಜಿನ ಚಿತ್ರಗಳನ್ನು ತೆಗೆದುಕೊಂಡು ಹೋಗಿ ಅವುಗಳನ್ನು ಅಲಂಕರಿಸಿ ಹಬ್ಬ ಆಚರಣೆಗಳನ್ನು ಮಾಡುತ್ತಾರೆ. ಈ ಚಿತ್ರಗಳನ್ನು ಸುಮಾರು ವರ್ಷಗಳ ಹಿಂದೆ ನಮ್ಮ ಪೂರ್ವಜರು ಇಂಥ ಸಂದರ್ಭಗಳಲ್ಲಿ ಅಲಂಕರಿಸಲು ತಂದಿರುವರು ಎಂದು ಮನೆಯ ಹಿರಿಯರು ಅಭಿಪ್ರಾಯ ಪಡುತ್ತಾರೆ. ಇದೇ ವಿಷಯಗಳನ್ನೊಳಗೊಂಡ ಗಾಜಿನ ಚಿತ್ರಗಳು ಹುಬ್ಬಳ್ಳಿಯ ಹಾಗೂ ಸುತ್ತಲಿನ ಕೆಲವು ಊರುಗಳ ಮನೆತನಗಳಲ್ಲಿ ಭಜನಾ ಮಂದಿರಗಳಲ್ಲಿ ಕಾಣಸಿಗುತ್ತವೆ. ಈ ಚಿತ್ರಗಳನ್ನು ಜನರು ವೈಯಕ್ತಿಕವಾಗಿ ಹಾಗೂ ಸಾಮೂಹಿಕವಾಗಿ ಆಚರಿಸಲಾಗುವ ಹಬ್ಬ, ಉತ್ಸವಗಳಲ್ಲಿ ಅಲಂಕಾರ ಮಾಡಲು ಬಳಸುತ್ತಿದ್ದರು ಎಂದು ತೋರುತ್ತದೆ.

ಕರ್ನಾಟಕದಲ್ಲಿ ಕಂಡು ಬರುವ ಸಂಗ್ರಹಗೊಂಡ ಹಾಗೂ ಸ್ಥಳೀಯ ಕಲಾವಿದ, ಕಲಾವಿದೆಯರಿಂದ ರಚನೆಗೊಂಡ ಗಾಜಿನ ಚಿತ್ರಗಳು ಮನೆ, ಮಠಗಳನ್ನು ಧಾರ್ಮಿಕ ಕಾರ್ಯಗಳ ಸಂದರ್ಭಗಳಲ್ಲಿ ಹಾಗೂ ಶುಭ ಕಾರ್ಯ ಸಂದರ್ಭಗಳಲ್ಲಿ ಅಲಂಕಾರ ಮಾಡುವುದಕ್ಕೋಸ್ಕರ ಹೆಚ್ಚು ಸಂಖ್ಯೆಯಲ್ಲಿ ರಚನೆಯಾಗಿರಬಹುದೆಂದು ತಿಳಿಯಬಹುದಾಗಿದೆ. ಈ ಚಿತ್ರಗಳು ಬಹುತೇಕ ಶ್ರೀಮಂತ ಕುಟುಂಬಗಳಲ್ಲಿ ಕಂಡುಬರುತ್ತವೆ. ಅದರಲ್ಲೂ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸಿಕೊಂಡು ಬಂದ ಕುಟುಂಬಗಳಲ್ಲಿಯೇ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತವೆ. ಇದಕ್ಕೆ ಆ ಶ್ರೀಮಂತ ಕುಟುಂಬಗಳು ತೋರುತ್ತಿದ್ದ ಸಾಂಸ್ಕೃತಿಕ ಧೋರಣೆಗಳೇ ಸಾಕ್ಷಿಯೆನ್ನಬಹುದು. ಈ ಚಿತ್ರಗಳು ವಿಶೇಷ ಸಂದರ್ಭಕ್ಕನುಗುಣವಾಗಿ ರಚನೆಗೊಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

ಇಂದಿನ ಸಮಕಾಲೀನ ಯುಗದಲ್ಲಿ ವೃತ್ತಿಪರ ಹಾಗೂ ಹವ್ಯಾಸಿ ಕಲಾವಿದ, ಕಲಾವಿದೆಯರೂ ಕಸೂತಿ, ಹೆಣಿಕೆ, ಗ್ಲಾಸ್ ಪೈಂಟಿಂಗ್, ಕ್ಲಾಥ್ ಪೈಂಟಿಂಗ್, ಸೆರಾಮಿಕ್ ಪೈಂಟಿಂಗ್, ಗೊಂಬೆ ತಯಾರಿಕೆಯಂತಹ ಕೆಲಸವನ್ನು ಮಾಡುತ್ತಿದ್ದಾರೆ. ಮನೆಯ ಅಲಂಕಾರಕ್ಕಾಗಿ ಈ ವಸ್ತುಗಳನ್ನು ಸಿದ್ಧಪಡಿಸಲಾಗುತ್ತಿದ್ದು, ಜನರ ಬೇಡಿಕೆಗನುಗುಣವಾಗಿ ಈ ಕಲಾವಿದರು

ತಯಾರಿಸುತ್ತಿದ್ದುದ್ದನ್ನು ನೋಡುತ್ತೇವೆ. ಕೆಲವು ಕಲಾವಿದರು ಯುವಕ-ಯುವತಿಯರಿಗೆ ಹಾಗೂ ಹೆಣ್ಣು ಮಕ್ಕಳಿಗೆ ತರಬೇತಿಯನ್ನು ಕೊಡಲಾಗುತ್ತಿದೆ. ಕೆಲವರು ಮನೆಯಲ್ಲಿ ಕಾಲಕಳೆಯುವದಕ್ಕೋಸ್ಕರ ಇಂಥ ಚಟುವಟಿಕೆಯಲ್ಲಿ ತೊಡಗಿರುವುದನ್ನು ನೋಡಬಹುದು. ಮನೆಯಲ್ಲಿ ಅಲಂಕಾರ ಮಾಡುವುದಗೋಸ್ಕರ ದೇವರ ಚಿತ್ರಗಳು, ಹೂವಿನ ನಕ್ಷೆಗಳು, ನಿಸರ್ಗ ಚಿತ್ರಗಳು ಹಾಗೂ ಭಾವಚಿತ್ರಗಳನ್ನು ಕಾಗದ, ಬಟ್ಟೆ ಹಾಗೂ ಗಾಜಿನ ಮೇಲೆ ಚಿತ್ರಿಸುತ್ತಿರುವರು.

ವೈಷ್ಣವ ಕುಟುಂಬದವರು ಹೆಚ್ಚಾಗಿ ವ್ಯಾಪಾರಸ್ಥರು ಮತ್ತು ಶ್ರೀಮಂತರು, ಪುರುಷರು ವ್ಯಾಪಾರಗಳಲ್ಲಿ ನಿರತರಾದರೆ ಮಹಿಳೆಯರು ಮನೆಯಲ್ಲಿಯೇ ಇರುವರು. ಈ ಮಹಿಳೆಯರು ಮನೆಯಲ್ಲಿ ಮನೆಯ ಕೆಲಸದ ಜೊತೆಗೆ ಇಂಥ ಸಾಂಸ್ಕರತಿಕ ಚಟುವಟಿಕೆಗಳಲ್ಲಿ ತೊಡಗಿರುವುದು ಸಾಮಾನ್ಯ ಸಂಗತಿ. ಮನೆಯಲ್ಲಿ ಯಾವುದಾದರೂ ಧರ್ಮಕಾರ್ಯ, ಶುಭಕಾರ್ಯಗಳು ನಿರಂತರ ಇದ್ದೇ ಇರುತ್ತವೆ. ಇಂಥ ಮನೆತನಗಳಲ್ಲಿ ಕೆಲವರು ಚಿತ್ರ ರಚನೆ ಮಾಡುವುದರಲ್ಲಿ ಕೆಲವರು ಗೊಂಬೆ ತಯಾರಿಸುವುದರಲ್ಲಿ ಕೆಲವರು ಹಾಡು ಸಂಗೀತಗಳಂತಹ ಕಾರ್ಯದಲ್ಲಿ ಆಸಕ್ತಿ ಹೊಂದಿರುವರು. ಹೀಗಾಗಿ ಇವರ ಮನೆತನದಲ್ಲಿಯೇ ಅಪರೂಪವಾದ ಕರಕುಶಲ ವಸ್ತುಗಳು, ವರ್ಣಚಿತ್ರಗಳು, ಗಾಜಿನ ಅಲಂಕಾರಿಕ ವಸ್ತುಗಳು ಹೆಚ್ಚು ಸಂಖ್ಯೆಗಳಲ್ಲಿ ಕಂಡು ಬರುತ್ತವೆ.

ಗಾಜು ಒಂದು ಆಕರ್ಷಕ ವಸ್ತುವಾಗಿರುವುದರಿಂದ ವೃತ್ತಿಪರ ಹಾಗೂ ಹವ್ಯಾಸಿ ಕಲಾವಿದರು ತಮ್ಮ ಕಲಾ ಪ್ರತಿಭೆಯನ್ನು ಈ ಮೂಲಕ ಪ್ರದರ್ಶಿಸಲು ಪ್ರಯತ್ನಿಸಿದ್ದಾರೆ. ಇಂದು ಗಾಜಿನ ಚಿತ್ರಗಳ ಮೂಲಕ ಕಲೆ, ಆಚಾರ, ವಿಚಾರ ಹಾಗೂ ನಮ್ಮ ಸಂಪ್ರದಾಯ ನಂಬಿಕೆಗಳನ್ನು ಹೊರಹಾಕಲು ಅಥವಾ ಮತ್ತೊಂದು ಸಂಸ್ಕೃತಿಗೆ ಮಾದರಿಯಾಗಲು ಪ್ರಯತ್ನಪಟ್ಟಿದ್ದಾರೆ.





## ಅಧ್ಯಾಯ - ಮೂರು

# ಗಾಜಿನ ಮೇಲಿನ ಚಿತ್ರಕಲೆಯ ಪರಿಕರಗಳು ಮತ್ತು ರಚನಾ ವಿಧಾನ

**ಗಾ**ಜಿನ ಚಿತ್ರಕಲೆಯ ಪರಿಕರಗಳು ಮತ್ತು ರಚನಾ ವಿಧಾನಗಳನ್ನು ಕುರಿತು ವಿವೇಚಿಸುವ ಮೊದಲು ಗಾಜಿನ ತಯಾರಿಕೆ ಹಾಗೂ ಅದರಲ್ಲಿ ಬಳಕೆಗೊಳ್ಳುವ ಪರಿಕರಗಳ ಬಗ್ಗೆ ಸ್ಥೂಲವಾಗಿ ತಿಳಿದುಕೊಳ್ಳಬಹುದು.

**ಗಾಜಿನ ತಯಾರಿಕೆ :**

ಕೆಲವು ದ್ರವ ಪದಾರ್ಥಗಳು ಅತೀಯಾಗಿ ತಣಿಸಲ್ಪಟ್ಟು ತಮ್ಮ ದ್ರವರೂಪವನ್ನು ಕಳೆದುಕೊಂಡರೂ ದ್ರವದ ಲಕ್ಷಣಗಳನ್ನು ಉಳಿಸಿಕೊಂಡಾಗ ದೊರೆಯುವ ಘನ ವಸ್ತು (ಗ್ಲಾಸ್) ಸಾಮಾನ್ಯ ಉಷ್ಣತಾ ಮಟ್ಟದಲ್ಲಿ ಇದು ಗಟ್ಟಿಯಾಗಿರುತ್ತದೆ. ಮೇಲಿನಿಂದ ಕೈಬಿಟ್ಟರೆ ಒಡೆದು ಚೂರು ಚೂರಾಗುತ್ತದೆ. ಕೆಲವು ನೂರು ಡಿಗ್ರಿ ಉಷ್ಣತೆಯಲ್ಲಿ ಕಾಯಿಸಿದರೂ ಗಾಜಿನ ಘನರೂಪ ಬದಲಾಗುವುದಿಲ್ಲ. ಆದರೆ ಇದಕ್ಕಿಂತ ಉಷ್ಣತೆಯನ್ನು ಹೆಚ್ಚಿಸಿದರೆ ನಿಧಾನವಾಗಿ ಮೆತ್ತಗಾಗಿ ಮಂದವಾದ ದ್ರವರೂಪದಲ್ಲಿ ಹೊರಬರುತ್ತದೆ. ಬೇರೆ ಘನ ಪದಾರ್ಥಗಳಂತೆ ನಿರ್ದಿಷ್ಟವಾದ ಉಷ್ಣತಾಮಟ್ಟದಲ್ಲಿ ಇದು ಒಮ್ಮೆಲೆ ದ್ರವವಾಗುವುದಿಲ್ಲ. ಅಧಿಕ ಉಷ್ಣತಾಮಟ್ಟದಲ್ಲಿ ಗಾಜು ಮಿಕ್ಕ ದ್ರವಗಳಂತೆಯೇ ವರ್ತಿಸುತ್ತದೆ. ಬೇರೆ ದ್ರವ ಪದಾರ್ಥಗಳಂತೆ ಹರಿಯುವ, ತಾನಿರುವ ಪಾತ್ರೆಯ ಆಕಾರವನ್ನು ಪಡೆಯುವ, ಪಾತ್ರೆಗೆ ಯಾವ ಆಕಾರವಿದ್ದರೂ ತನ್ನ ಮಟ್ಟವನ್ನು ಉಳಿಸಿಕೊಳ್ಳುವ ಗುಣಗಳು ದ್ರವಗಾಜಿಗೂ ಇವೆ. ದ್ರವ ಗಾಜನ್ನು ಘನೀಭವನ ಉಷ್ಣತೆಗೆ ತಣಿಸಿದರೂ ಘನೀಭವಿಸುವುದಿಲ್ಲ. ಗಾಜಿನ ಹರಳುಗಳೂ ಕಾಣಿಸುವುದಿಲ್ಲ. ಅದು ದ್ರವರೂಪದಲ್ಲೇ ಇರುತ್ತದೆ. ಆದರೆ ಅದರ ಹರಿಯುವ ಗುಣ ಬಹಳ ಅತೀ ಕಡಿಮೆಯಾಗುವುದು. ಅದು ಘನ ಪದಾರ್ಥದಂತೆ ಕಾಣುತ್ತದೆ.

ಗಾಜಿನ ತಯಾರಿಕೆಗೆ ಮುಖ್ಯವಾಗಿ ಬೇಕಾಗುವ ಘಟಕಾಂಶಗಳೆಂದರೆ ಶುದ್ಧವಾದ ಮತ್ತು ಕಬ್ಬಿಣದ ಸಂಯುಕ್ತರಹಿತ ಮರಳು (ಗ್ಲಾಸ್ ಸ್ಯಾಂಡ್) ಸೋಡಕ್ಷಾರ (ಸೋಡಿಯಂ ಕಾರ್ಬೋನೇಟ್) ಮತ್ತು ಸುಣ್ಣದ ಕಲ್ಲು (ಲೈಮ್ ಸ್ಟೋನ್) ಇವು ಅವಶ್ಯ. ಇನ್ನು ಗಾಜಿನ ಬಗೆಯನ್ನು ಅನುಸರಿಸಿ ಕೆಲವೊಮ್ಮೆ ಪೊಟ್ಯಾಸಿಯಮ್ ಕಾರ್ಬೋನೇಟ್, ಲೆಡ್ ಮೋನಾಕ್ಸೈಡ್, ಬೋರಾನ್ ಟ್ರೈ ಆಕ್ಸೈಡ್ ಮುಂತಾದವನ್ನು ಸೇರಿಸುವರು. ಇಷ್ಟಲ್ಲದೇ ಒಂದು ಅಥವಾ ಹೆಚ್ಚು ವರ್ಗಗಳ ವಸ್ತುಗಳನ್ನು ಸಹ ಸೇರಿಸುತ್ತಾರೆ.

೦೧. ಕಲೆಟ್ ಎಂಬ ಅನುಪಯುಕ್ತವಾದ ಗಾಜು ಮತ್ತು ಚೂರಾದ ಗಾಜು.

೦೨. ಉತ್ಕರ್ಷಣಕಾರಕಗಳು (ಆಕ್ಸೈಡ್‌ಸಿಂಗ್ ಎಜೆಂಟ್ಸ್)

೦೩. ಬಣ್ಣಗಳನ್ನು ಹೋಗಲಾಡಿಸುವ ವಸ್ತುಗಳು.

೦೪. ನಿರ್ದಿಷ್ಟ ಬಣ್ಣಗಳನ್ನು ಬರಿಸುವ ವಸ್ತುಗಳನ್ನು ಗಾಜಿನ ತಯಾರಿಕೆಯಲ್ಲಿ ಬಳಸಲಾಗುತ್ತದೆ.[೧]

ಗಾಜಿನ ಉತ್ಪಾದನೆಯಲ್ಲಿ ಶೇಕಡಾ ೯೫ರಷ್ಟು ಭಾಗ ಸಾಮಾನ್ಯ ಗುಣದ ಗಾಜಿರುತ್ತದೆ. ಗಾಜಿನ ತಯಾರಿಕೆಯಲ್ಲಿ ಕಚ್ಚಾವಸ್ತುಗಳ ಪ್ರಮಾಣವು ಮುಖ್ಯವಾಗುತ್ತದೆ. ಶೇಕಡಾ ೭೫ ರಷ್ಟು ಭಾಗ ಸಿಲಿಕ (ಮರಳು) ಶೇಕಡಾ ೧೦ ರಷ್ಟು ಸುಣ್ಣ (ಲೈಮ ಸ್ಟೋನ್) ಶೇಕಡಾ ೧೫ ರಷ್ಟು ಭಾಗ ಸೋಡ ಬೇಕಾಗುತ್ತದೆ. ಗಾಜಿನ ಹಾಳೆಯನ್ನು ತಯಾರಿಸುವಾಗ ಸುಣ್ಣದ ಅಂಶದಲ್ಲಿ ನಾಲ್ಕು ಭಾಗ ತೆಗೆದು ಆ ಸ್ಥಳದಲ್ಲಿ ಮ್ಯಾಗ್ನೀಶಿಯಂನ್ನು ಬಳಸುತ್ತಾರೆ. ಸೀಸೆಯ ಗಾಜು ತಯಾರಿಸುವ ಶೇಕಡಾ ೨ ರಷ್ಟು ಭಾಗ ಅಲ್ಯುಮಿನಿಯಂನ್ನು ಬಳಸುತ್ತಾರೆ. ಭಾರಿ ಪ್ರಮಾಣದಲ್ಲಿ ಗಾಜನ್ನು ತಯಾರಿಸುವಾಗ ಗೋಣಿ ಚಿತ್ರಿಗಳಲ್ಲಿ ಕಚ್ಚಾವಸ್ತುಗಳನ್ನು ತೂಕ ಮಾಡುವ ಯಂತ್ರದಿಂದ ತೂಕಮಾಡಿ ಯಂತ್ರದ ಮೂಲಕ ಕುಲುಮೆಗೆ ಕಳಿಸಲಾಗುತ್ತದೆ. ಇಲ್ಲಿ ೧೪೮೦° ಸೆಂ ಉಷ್ಣತೆಯಲ್ಲಿ ಗಾಜನ್ನು ಬೇಕಾದ ಗಾತ್ರಕ್ಕೆ ಕತ್ತರಿಸಿಕೊಂಡು ಮುದ್ದೆಯಂತೆ ಮಾಡಲಾಗುವುದು. ಈ ಮುದ್ದೆಗಾಜು ಕೆಂಪಗೆ ಕಾಯ್ದು ನಕ್ಷತ್ರದಂತೆ ಹೊಳೆಯುತ್ತದೆ. ಇದನ್ನು ಬೇಕಾದ ಹಾಗೆ ವಿವಿಧ ವಸ್ತುಗಳನ್ನು ಪಡೆಯಬಹುದು ಹಾಗೂ ಅದರ ಮೇಲೆ ವಿವಿಧ ರೀತಿಯ ಚಿತ್ರಗಳನ್ನು ಮೂಡಿಸಬಹುದು.

ಶುದ್ಧವಾದ ಗಾಜಿನಲ್ಲಿ ಏನಾದರೂ ವಸ್ತುಗಳು ಬೆರೆಕೆಯಾಗಿದ್ದರೆ ಆ ಗಾಜು ಹಳದಿ ಅಥವಾ ಬೇರೆ ಬಣ್ಣಗಳಿದ ಕೂಡಿರುತ್ತದೆ. ಇದನ್ನು ಕಲೆಟ್ ಎಂದು ಪರಿಗಣಿಸಿ ಮತ್ತೆ ಆ ಗಾಜನ್ನು ಕರಗಿಸಿ ಶುದ್ಧಗಾಜನ್ನಾಗಿ ಪರಿವರ್ತಿಸಲಾಗುತ್ತದೆ. ಕಲೆಟ್ ಎಂದರೆ ಬಣ್ಣ ಕೂಡಿದ ಸುಲಭವಾಗಿ ಒಡೆಯುವ, ಗಾಜನ್ನು ಕಲೆಟ್ ಎಂದು ಕರೆಯುವರು. ಶುದ್ಧಗಾಜಿನಲ್ಲಿ ಯಾವುದೇ ಬಣ್ಣಗಳು ಬೇರೆತರ ಬರಲಾರದು. ಇಂತಹ ಸಂದರ್ಭಗಳಲ್ಲಿ ಉತ್ಕರ್ಷಕಾರಕಗಳನ್ನು ಬೆರೆಯಿಸಿ ಶುದ್ಧಗಾಜನ್ನು ತಯಾರಿಸಲಾಗುತ್ತದೆ. ಶುದ್ಧ ಗಾಜು ಎಂದು ಪರಿಕ್ಷಿಸಲು ವಿಶೇಷವಾದ ಬೆಳಕನ್ನು ಹಾಯಿಸಲಾಗುತ್ತದೆ. ಅಲ್ಲಿ ಯಾವುದೇ ಬಣ್ಣಗಳು ಕಂಡು ಬರದಿದ್ದರೆ ಅದನ್ನು ಶುದ್ಧ ಗಾಜು ಎಂದು ಪರಿಗಣಿಸಲಾಗುತ್ತದೆ.[೨]

೧. ಎಂ.ವಿ.ಬಿ ; ಗಾಜು, (ಸಂ) ಕನ್ನಡ ವಿಶ್ವಕೋಶ, (ಸಂಪುಟ ಆರು), ಪುಟ ೧೯೫
೨. ಹೆಚ್.ಜಿ.ಎಂ ; (ಸಂ) ಕನ್ನಡ ವಿಶ್ವಕೋಶ, (ಸಂಪುಟ ಆರು), ಪುಟ ೧೯೨–೯೩

ಗಾಜಿನ ತಯಾರಿಕೆಯಲ್ಲಿ ಬೇರೆ ಬೇರೆ ಕುಲುಮೆಗಳನ್ನು ಬಳಸುತ್ತಾರೆ. ವಿಶಿಷ್ಟ ಜಾತಿಯ ಗಾಜನ್ನು ತಯಾರಿಸಲು ಮಡಿಕೆ ಆಕಾರದ ಕುಲುಮೆಯನ್ನು, ಸಾಮಾನ್ಯ ಗಾಜನ್ನು ದೊಡ್ಡ ಗಾತ್ರದಲ್ಲಿ ತಯಾರು ಮಾಡಬೇಕಾದರೆ ಟ್ಯಾಂಕ್ ಆಕಾರದ ಕುಲುಮೆಗಳನ್ನು ಬಳಸುವರು. ಇದರಿಂದ ಬಂದ ಗಾಜಿನ ದ್ರವದಿಂದ ಅಚ್ಚುಗಳಿಗೆ ಹಾಕಿ, ವಸ್ತುಗಳನ್ನು ತಯಾರಿಸುವರು.

**ಬಣ್ಣದ ಗಾಜುಗಳ ತಯಾರಿಕೆ :**

ಈ ರೀತಿಯ ಗಾಜಿನ ತಯಾರಿಕೆಯ ವೇಳೆ ಕಚ್ಚಾ ಘಟಕಾಂಶಗಳೊಡನೆ ಅಗತ್ಯವಾದ ಲೋಹದ ಆಕ್ಸೈಡನ್ನು ಸಣ್ಣ ಪ್ರಮಾಣದಲ್ಲಿ ಬೆರೆಕೆ ಮಾಡುವುದರಿಂದ ಗಾಜಿಗೆ ಬೇಕಾದ ಬಣ್ಣ ಬರಿಸಬಹುದು.

* ಕೋಬಾಲ್ಟ್ ಆಕ್ಸೈಡನ್ನು ಸೇರಿಸುವುದರಿಂದ ಬಣ್ಣದ ಗಾಜನ್ನು ಪಡೆಯಬಹುದು.
* ಬಂಗಾರ ಅಥವಾ ಸಿಲೇನಿಯಂ ಸೇರಿಸುವುದರಿಂದ ಬಣ್ಣದ ಗಾಜನ್ನು ಪಡೆಯಬಹುದು.
* ಯುರೇನಿಯಂ ಆಕ್ಸೈಡ್‌ನ್ನು ಸೇರಿಸುವುದುರಿಂದ ಕೆಂಪು ಬಣ್ಣದ ಗಾಜನ್ನು ಪಡೆಯಬಹುದು.
* ಕ್ಯಾಲ್ಸಿಯಂ ಫ್ಲೋರೈಡ್, ಆರ್ಸಿನಿಯಸ್ ಆಕ್ಸೈಡ್, ಅಲ್ಯೂಮಿನಿಯಂ ಆಕ್ಸೈಡ್, ಜಿಂಕ್ ಮತ್ತು ಕ್ಯಾಲ್ಸಿಯಂ ಫಾಸ್ಫೇಟುಗಳನ್ನು ಒಂದೊಂದಾಗಿ ಆಗಲಿ ಕೆಲವುಗಳ ಕೂಟಗಳಿಂದ ಆಗಲಿ ಬಳಸುವುದರಿಂದ ಗಾಜಿಗೆ ಬಿಳಿ ಬಣ್ಣವನ್ನೂ, ಅಲ್ಪ ಪಾರದರ್ಶಕ ಗುಣವನ್ನು ಪಡೆಯಬಹುದು.
* ಇರಿಡಿಯಮ್ ಆಕ್ಸೈಡ್ ಸೇರಿಸಿದರೆ ಕಪ್ಪು ಬಣ್ಣದ ಗಾಜನ್ನು ಪಡೆಯಬಹುದು.
* ಮ್ಯಾಂಗನೀಸ್ ಡೈ ಆಕ್ಸೈಡ್ ಬೆರೆಕೆಯಿಂದ ನೇರಳೆ ಬಣ್ಣದ ಗಾಜನ್ನು ಪಡೆಯಬಹುದು.[೩]



**ಗಾಜುಗಳ ವೈವಿಧ್ಯತೆ**

ಗಾಜನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸುವ ಸಲುವಾಗಿ ಅನೇಕ ಘಟಕಾಂಶಗಳನ್ನು ಬೆರೆಸಿ ಗಾಜನ್ನು ತಯಾರಿಸಲಾಗುತ್ತದೆ.

* ಸೂಕ್ಷ್ಮದರ್ಶಕ ಕನ್ನಡಕ, ದೂರದರ್ಶಕ ಮೊದಲಾದ ಉಪಕರಣಗಳಲ್ಲಿ ಅಪ್ಟಿಕಲ್ ಎಂಬ ವಿಶಿಷ್ಟ ಜಾತಿಯ ಗಾಜನ್ನು ಬಳಸಲಾಗುತ್ತದೆ.
* ಸೆಲ್ಯುಲೋಸ್ ಆಸಿಟೇಟ್ ಎಂಬ ವಸ್ತುವಿನಿಂದ ತಯಾರಿಸಿದ ಗಾಜನ್ನು ಮೋಟಾರು ವಾಹನಗಳಲ್ಲಿ ಬಳಸಲಾಗುವುದು. ಇಂತಹ ಗಾಜಿಗೆ ಪೆಟ್ಟು ಬಿದ್ದರೂ ಕಲ್ಲು ಸಕ್ಕರೆಯಂತೆ ಪುಡಿಪುಡಿಯಾಗುತ್ತದೆ. ಹೊರತು ಚುರುಗಳು ಸಿಡಿದು ಯಾವುದೇ ಅಪಾಯವಾಗುವುದಿಲ್ಲ.
* ಸೋಡಖಾರ ಮತ್ತು ಶುದ್ಧವಾದ ಮರಳನ್ನು ಟ್ಯಾಂಕ ಆಕಾರದ ಕುಲುಮೆಯಲ್ಲಿ

---

೩. ಎಂ.ಎ.ಬಿ ; (ಸಂ) ಕನ್ನಡ ವಿಶ್ವಕೋಶ, (ಸಂಪುಟ ಆರು), ಪುಟ ೧೯೭

ಚೆನ್ನಾಗಿ ಕಾಯಿಸಿ ಹೊರತೆಗೆದು, ಗಾಜಿನ ದ್ರವವನ್ನು ಸೋಡಿಯಂ ಸಿಲಿಕೇಟ್ ದ್ರವವಾಗುತ್ತದೆ. ಇದಕ್ಕೆ ನೀರು ಚಿಮುಕಿಸಿ ಚೂರು ಚೂರು ಮಾಡಿ ಆ ಚೂರುಗಳನ್ನು ಮಿತಗಾತ್ರದಲ್ಲಿ ನಿರಿನೊಂದಿಗೆ ಬಾಯಿಲರನಲ್ಲಿ ಹೆಚ್ಚು ಒತ್ತಡದಲ್ಲಿ ಕುದಿಸಿದಾಗ ಸೋಡಿಯಂ ಸಿಲಿಕೇಟ್ ಕರಗಿ ದ್ರಾವಣವಾಗುತ್ತದೆ. ಇದನ್ನು ಅಗತ್ಯವಿರುವಷ್ಟು ಗಟ್ಟಿ ದ್ರವವಾಗುವವರೆಗೆ ಬಿಸಿ ಮಾಡಿದಾಗ ನೀರು ಗಾಜು ದೊರೆಯುತ್ತದೆ. ಈ ನೀರು ಗಾಜನ್ನು ಕಟ್ಟಿಗೆಯಂತಹ ವಸ್ತುಗಳಿಗೆ ಸವರಿದರೆ ಅವಕ್ಕೆ ಬೆಂಕಿ ತಗುಲುವುದಿಲ್ಲ. ಇದನ್ನು ಸಾಬೂನು ತಯಾರಿಕೆಯಲ್ಲಿ ಬಳಸಲಾಗುತ್ತದೆ.[೪]

* ಗಾಜಿನ ಸುರುಳಿ (ರೋಲ್ಡ್ ಗ್ಲಾಸ್) ಎಂದು ಪ್ರಾರಂಭದಲ್ಲಿ ಹಾಳೆಗಾಜು (ಷೀಟ್ ಗ್ಲಾಸ್) ಮತ್ತು ತಟ್ಟೆಗಾಜು (ಪ್ಲೇಟ್ ಗ್ಲಾಸ್) ಇವೆರಡರಲ್ಲಿ ವ್ಯತ್ಯಾಸವಿದ್ದವು. ಉದುವುದರ ಮುಖಾಂತರ ಒಂದು ಗಾಜನ್ನು ತಯಾರಿಸುತ್ತಿದ್ದರು. ಇನ್ನೊಂದನ್ನು ಅಚ್ಚಿಗೆ ಹಾಕಿ ಸುರುಳಿಸುತ್ತುತ್ತಿದ್ದರು.
* ಆರ್ಗ್ಯಾನಿಕ್ ಗಂಧಕದ ಮಿಶ್ರಣಗಳಾದ ಚಿನ್ನ, ಪ್ಲಾಟಿನಮ್ ಮತ್ತು ಇತರ ಪ್ರಮುಖ ಲೋಹಗಳನ್ನು ಲ್ಯಾವೆಂಡರ್ ಸುಗಂಧ ಎಣ್ಣೆಯಲ್ಲಿ ತೆಗೆದುಕೊಂಡು ಗಾಜಿಗೆ ಸವರಿ ಹೊಳಪಿನ ಗಾಜನ್ನು ತಯಾರಿಸಲಾಗುತ್ತಿತ್ತು.
* ಚಿನ್ನ, ಬೆಳ್ಳಿ ಮತ್ತು ತಾಮ್ರಗಳನ್ನುಳ್ಳ ಕೆಲವು ಗಾಜುಗಳು ಬೆಳಕಿಗೆ ಸೂಕ್ಷ್ಮವಾಗಿರುತ್ತವೆ. ಇವನ್ನು ಅತೀ ತೀಕ್ಷಣವಾದ ಅತೀ ನೇರಳೆ ಕಿರಣಗಳಿಗೆ (ಅಲ್ಟ್ರವಯೊಲೆಟ್ ರೇಸ್) ಒಡ್ಡಿದರೆ ಯಾವ ಬದಲಾವಣೆಯೂ ಗಾಜಿನಲ್ಲಿ ಕಂಡು ಬರುವುದಿಲ್ಲ. ಆದರೆ ಈ ಗಾಜನ್ನು ಮೃದುವಾಗಿ ಮಾಡಲು ಕಾಯಿಸಿದಾಗ ಅದು ಹಳದಿ ಅಥವಾ ಕೆಂಪು ಬಣ್ಣಕ್ಕೆ ತಿರುಗುತ್ತದೆ. ಇವುಗಳನ್ನು ಅಲಂಕೃತ ಗಾಜು ಎನ್ನುವರು.
* ಬಿಸಿಯಾಗಿರುವ ಗಾಜನ್ನು ದಾರದಂತೆ ತಯಾರಿಸಿ ಅದನ್ನು ಗಾಜಿನ ಪಾತ್ರೆಗಳ ಮೇಲೆ ಆಭರಣಗಳಂತೆ ತೊಡಿಸಲಾಗುತ್ತಿತ್ತು. ಈ ಗಾಜಿನ ದಾರದಿಂದ ಗಾಜಿನ ಬಟ್ಟೆಯನ್ನು ತಯಾರಿಸಬಹುದು. ಈ ಬಟ್ಟೆಯನ್ನು ಬೆಂಕಿಯಿಂದ ಸಿನೇಮಾ ಮಂದಿರಗಳಲ್ಲಿ ಬಳಸಲಾಗುತ್ತದೆ.
* ರಂಗಿನ ಹಾಜು ಎಂದು ಇನ್ನೊಂದು ಬಗೆಯ ಗಾಜು, ನೂರಾರು ವರ್ಷಗಳ ಹಿಂದೆ ಚರ್ಚುಗಳ ಕಿಟಕಿಗಳಿಗೆ ಈ ರಂಗಿನ ಗಾಜುಗಳನ್ನು ಅಳವಡಿಸುತ್ತಿದ್ದರು. ಗಾಜಿನ ಕೆಲಸಗಾರ ಕೊಳವೆಯೊಂದನ್ನು ಕರಗಿಸುವ ಗಾಜಿನಲ್ಲಿ ಅದ್ದಿ ತುದಿಯಲ್ಲಿ ಮೃದುವಾದ ಮುದ್ದೆ ತೆಗೆದುಕೊಂಡು ಕೊಳವೆಯ ಇನ್ನೊಂದು ಅಂಚಿನಿಂದ ಗಾಜನ್ನು ಊದಿ ದೊಡ್ಡ ಟೊಳ್ಳಾದ ಗಾಜಿನ ಚೆಂಡನ್ನು ಮಾಡಿ ಅದನ್ನು ತೂಗಾಡಿಸಿ ಕೊಳವೆಯ ಆಕಾರವನ್ನು ಮಾಡುತ್ತಾನೆ. ಇದು ತಣ್ಣಗಾಗಿ ಸ್ವಲ್ಪ ಗಟ್ಟಿಯಾದ ಮೇಲೆ ಅಂಚುಗಳ್ನು ಕತ್ತಿರಸುತ್ತಾನೆ. ಅನಂತರ ಅದನ್ನು ಕಾಯಿಸಿ ಮೃದುಮಾಡಿ

---

೪. ಎಂ.ವಿ.ಸಿ : (ಸಂ) ಕನ್ನಡ ವಿಶ್ವಕೋಶ, (ಸಂಪುಟ ಆರು), ಪುಟ ೧೯೭

ಗಾಜಿನ ಹಾಳೆಯಾಗಿ ಬಿಚ್ಚುತ್ತಾನೆ. ಈ ರೀತಿಯಲ್ಲಿ ೩' ಉದ್ದ ೨' ಅಗಲದ ಗಾಜಿನ ಹಾಳೆಗಳನ್ನು ಪಡೆದು ಅವುಗಳ ಮೇಲೆ ಆಕೃತಿ ಚಿತ್ರಗಳನ್ನು ಬರೆದು ಕಿಟಕಿಗಳಲ್ಲಿ ಬಳಸುತ್ತಿದ್ದರು.[೫]

ಯಾವುದೇ ಚಿತ್ರಕಲೆ ರೂಪುಗೊಳ್ಳಬೇಕಾದರೆ ಅದಕ್ಕೆ ಸೂಕ್ತವಾದ ಫಲಕ ಹಾಗೂ ಚಿತ್ರ ರಚನೆಗೆ ಬೇಕಾಗುವ ಪರಿಕರಗಳು, ಅಂದರೆ ರೇಖೆ ಬರೆಯುವ ವಸ್ತುಗಳು, ವರ್ಣಲೇಪನ ಮಾಡುವ ಬಣ್ಣಗಳು ಬೇಕಾಗುತ್ತವೆ. ಈ ವಿಧಾನವನ್ನು ನಮ್ಮ ಪ್ರಾಚೀನ ಮಾನವನ ಕಾಲದಿಂದ ಇಂದಿನವರೆಗೆ ಅನುಸರಿಸಿದ್ದನ್ನು ಪ್ರಾಗೈತಿಹಾಸಿಕ ಚಿತ್ರಗಳು, ಗುಹಾಂತರ ಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಭಿತ್ತಿ ಚಿತ್ರಗಳು, ಕಿರುರೂಪ ಚಿತ್ರಗಳು ಹಾಗೂ ಪ್ರಸ್ತುತವಿರುವ ಸಮಕಾಲೀನ ಚಿತ್ರಗಳಿಂದ ತಿಳಿದು ಬರುತ್ತದೆ. ಈ ಚಿತ್ರಗಳ ರಚನೆಯ ಪರಿಕರಗಳು ಹಾಗೂ ರಚನೆಯ ವಿಧಿ ವಿಧಾನಗಳು ಕಾಲದಿಂದ ಕಾಲಕ್ಕೆ ಅನೇಕ ಬದಲಾವಣೆಗಳನ್ನು ಮೈಗೂಡಿಸಿಕೊಂಡು ಬೆಳೆದು ಬಂದಿರುವುದು ವಿಶೇಷ. ಚಿತ್ರ ರಚನೆಗೆ ಬಳಸುವ ಕಲ್ಲು, ಭಿತ್ತಿ, ಕಾಗದ, ಕ್ಯಾನ್ವಾಸ್‌ಗಳಂತೆ ಗಾಜನ್ನು ಬಳಸಿಕೊಂಡಿದ್ದನ್ನು ಇತಿಹಾಸ ಪೂರ್ವದ ಕಾಲದಿಂದ ಸಮಕಾಲೀನ ಕಾಲದವರೆಗೂ ನೋಡುತ್ತೇವೆ. ಚಿತ್ರ ರಚನೆಗೆ ಬಳಸುವ ಬೇರೆ ಬೇರೆ ಫಲಕಗಳಿಗಿಂತ ಗಾಜನ್ನು ಬಳಸುವಾಗ ಕಲಾವಿದನು ತಾಳ್ಮೆ ಹಾಗೂ ಜಾಗೃತೆಯನ್ನು ಹೊಂದಿರಬೇಕಾಗುತ್ತದೆ. ಯಾಕೆಂದರೆ ಗಾಜು ಪಾರದರ್ಶಕವಾಗಿರುವುದರಿಂದ ಹಾಗೂ ಇದರ ಮೈಪಾತಳಿಯು ಅತ್ಯಂತ ನುಣುಪಾಗಿ, ಹೊಳಪಾಗಿರುವುದರಿಂದ ರೇಖೆ ಮತ್ತು ಬಣ್ಣಗಳು ಜಾರುವ ಸಂಭವವಿರುತ್ತದೆ. ಆ ಕಾರಣಕ್ಕಾಗಿ ಇದರ ಮೇಲೆ ಚಿತ್ರ ಬರೆಯುವಾಗ ಎಚ್ಚರವಹಿಸಬೇಕಾಗುತ್ತದೆ.

ಇಲ್ಲಿ ಗಾಜನ್ನು ಇನ್ನೂ ವಿಶೇಷ ರೀತಿಯಲ್ಲಿ ಬಳಸಿಕೊಳ್ಳಬಹುದು. ಗಾಜು ಪಾರದರ್ಶಕವಾಗಿರುವುದರಿಂದ ಅದರ ಎರಡೂ ಮೈಪಾತಳಿಗಳನ್ನು ಚಿತ್ರ ರಚನೆಗೆ ಬಳಸಿಕೊಳ್ಳಬಹುದು. ಗಾಜಿನ ಒಂದು ಮೈಪಾತಳಿಯ ಮೂಲಕ ಚಿತ್ರ ಬರೆದು ಅದರ ಇನ್ನೊಂದು ಬದಿಯ ಮೂಲಕ ಚಿತ್ರ ವೀಕ್ಷಿಸಬಹುದು. ಇದರ ಮೇಲೆ ಎರಡು ರೀತಿಯ ಪದ್ಧತಿಯಲ್ಲಿ ವರ್ಣಲೇಪನ ಮಾಡಬಹುದು. ಒಂದು ಪಾರದರ್ಶಕ ಪದ್ಧತಿ ಇನ್ನೊಂದು ಅಪಾರದರ್ಶಕ ಪದ್ಧತಿ. ಪಾರದರ್ಶಕ ಪದ್ಧತಿಯಲ್ಲಿ ಗಾಜಿನ ಒಂದು ಮೈಪಾತಳಿಯ ಮೇಲೆ ಚಿತ್ರಿಸಿ ವರ್ಣಲೇಪನ ಮಾಡಿ ಅದರ ಹಿಂಬದಿಯ ಮೂಲಕ ಬೆಳಕನ್ನು ಹಾಯಿಸಿ ಚಿತ್ರವಿಕ್ಷಣೆ ಮಾಡುವುದಾಗಿದೆ. ಈ ರೀತಿಯ ಚಿತ್ರಕ್ರಮವನ್ನು ಸ್ಟೇನ್ಡ್ ಗ್ಲಾಸ್ (Stained glass) ಚಿತ್ರಗಳಲ್ಲಿ ಕಾಣಬಹುದು. ಕ್ರೈಸ್ತ ಇಗರ್ಜಿಗಳಲ್ಲಿ ಕಂಡುಬರುವ ಗಾಜಿನ ಚಿತ್ರಗಳನ್ನು ತಕ್ಕ ಉದಾಹರಣೆಯಾಗಿ ನೀಡಬಹುದಾಗಿದೆ.

ಅಪಾರದರ್ಶಕ ಪದ್ಧತಿಯಲ್ಲಿ ಗಾಜಿನ ಒಂದು ಮೈಪಾತಳಿಯಲ್ಲಿ ಚಿತ್ರಿಸಿ ವರ್ಣಲೇಪನ ಮಾಡಿ ಒಂದು ನಿರ್ದಿಷ್ಟ ಚೌಕಟ್ಟಿಗೆ ಅಲಂಕರಿಸುವುದು. ಗಾಜಿನ ಚಿತ್ರಕಲಾವಿದರು ಈ ವರ್ಣಪದ್ಧತಿಯನ್ನು ಅನುಸರಿಸುವುದರ ಜೊತೆಗೆ ಚಿತ್ರವು ಇನ್ನೂ ಸುಂದರವಾಗಿ ಕಾಣುವಂತಾಗಲು ವರ್ಣಮಯ ಮೆರಗು ಕಾಗದಗಳನ್ನು, ಲೋಹದ ಹಾಳೆಗಳನ್ನು, (Metal

---

೫. ಹೆಚ್.ಜಿ.ಎಂ : (ಸಂ) ಕನ್ನಡ ವಿಶ್ವಕೋಶ, (ಸಂಪುಟ ಆರು), ಪುಟ ೧೯೩

foil) ಬೆಳ್ಳಿ ಹಾಗೂ ಬಂಗಾರದ ಹಾಳೆಗಳನ್ನು ಬಳಸಿದ್ದಾರೆ. ಹೀಗೆ ಇಲ್ಲಿಯವರೆಗೆ ಲಭ್ಯವಾದ ವಿದೇಶಿ ಹಾಗೂ ದೇಶಿಯ ಕಲಾವಿದರು ರಚಿಸಿದ ಗಾಜಿನ ಚಿತ್ರಗಳ ರಚನಾ ವಿಧಾನ ಹಾಗೂ ಪರಿಕರಗಳನ್ನು ವಿಂಗಡಿಸಿಕೊಂಡು ಇಲ್ಲಿ ಚರ್ಚಿಸಲಾಗಿದೆ.

- ಉತ್ತಮ ದರ್ಜೆಯ ಗಾಜು
- ಬಣ್ಣಗಳು
- ರೇಖಾ ಚಿತ್ರಗಳು
- ಪಾರದರ್ಶಕ ಕಾಗದಗಳು (ಟ್ರಸಿಂಗ್ ಪೇಪರ್ಸ್)
- ಕಾರ್ಬನ್ ಪೇಪರ್ಸ್
- ವಿವಿಧ ಲೇಖನಿಗಳು
- ಬಗೆ ಬಗೆಯ ಕುಂಚುಗಳು
- ಮೆರಗು ಕಾಗದಗಳು
- ಬೆಳ್ಳಿ ಹಾಗೂ ಬಂಗಾರದ ಕಾಗದಗಳು (Silvar/Gold Foils)
- ಲೋಹದ ತಗಡುಗಳು (Metal Foils)
- ಚಿತ್ರಪಟಗಳು
- ಬಂಧಕಗಳು
- ವಿವಿಧ ಚೌಕಟ್ಟುಗಳು
- ಚೌಕಟ್ಟುಗಳ ಹಿಂದಿನ ರಕ್ಷಣಾ ಹಲಗೆಗಳು ಮತ್ತು ಇತ್ಯಾದಿ ಸಾಮಗ್ರಿಗಳು ಬೇಕಾಗುತ್ತವೆ.

**● ಉತ್ತಮ ದರ್ಜೆಯ ಗಾಜು**

ಗಾಜಿನ ಮೇಲೆ ಚಿತ್ರ ಬರೆಯಬೇಕಾದರೆ ಆ ಚಿತ್ರವು ಸುಸ್ಪಷ್ಟವಾಗಿ ಕಾಣಬೇಕಾದರೆ ಕಲಾವಿದನಾದವನು ಉತ್ತಮ ಗುಣಮಟ್ಟದ ಹಾಗೂ ಪರಿಶುದ್ಧವಾದ ಗಾಜನ್ನು ಆಯ್ದುಕೊಳ್ಳಬೇಕಾಗುತ್ತದೆ.

ಗಾಜಿನ ತಯಾರಿಕೆಯಲ್ಲಿ ಸುರುಳಿಗಾಜು (Rold Glass) ಹಾಳೇ ಗಾಜು (Sheet Glass) ತಟ್ಟೆ ಗಾಜು (Plate Glass) ಗಳನ್ನಾಗಿ ತಯಾರಿಸುತ್ತಿದ್ದರು. ಅದೇ ರೀತಿ ಹೊಳಪಿನಗಾಜು, ಅಲಂಕೃತಗಾಜು, ಸಂರಕ್ಷಕ ಗಾಜು, ಗಾಜಿನ ದಾರ ಹಾಗೂ ರಂಗಿನ ಗಾಜು ಎಂದು ತಯಾರಿಸಿರುವರು. ಈ ಕುರಿತು ಹಿಂದಿನ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಗಾಜಿನ ಕಲಾವಿದರು ರಂಗಿನ ಗಾಜನ್ನು ಹೆಚ್ಚು ಬಳಸುತ್ತಿದ್ದರು. ಸಾವಿರಾರು ವರ್ಷಗಳ ಹಿಂದೆ ಚರ್ಚುಗಳ ಕಿಟಕಿಯ ಗಾಜುಗಳನ್ನು ರಂಗಿನಿಂದ ಚಿತ್ರಿಸುತ್ತಿದ್ದರು. ಈ ತಯಾರಿಕೆಯಲ್ಲಿ ಗಾಜಿನ ಕೆಲಸಗಾರ, ಕೊಳವೆಯೊಂದನ್ನು ಕರಗಿರುವ ಗಾಜಿನಲ್ಲಿ ಅದ್ದಿ ತುದಿಯಲ್ಲಿ ಮೃದುವಾದ ಮುದ್ದೆ ತೆಗೆದುಕೊಳ್ಳುತ್ತಾನೆ.

ಕೊಳವೆಯ ಇನ್ನೊಂದು ಅಂಚಿನಿಂದ ಗಾಜನ್ನು ಊದಿ ದೊಡ್ಡ, ಟೊಳ್ಳಾದ ಗಾಜಿನ ಚಂಡನ್ನು ಮಾಡಿ ಅದನ್ನು ತೂಗಾಡಿಸಿ ಕೊಳವೆಯ ಆಕಾರವನ್ನು ಮಾಡುತ್ತಾನೆ. ಇದು ತಣ್ಣಗಾಗಿ ಸ್ವಲ್ಪ ಗಟ್ಟಿಯಾದ ಮೇಲೆ ಅಂಚುಗಳನ್ನು ಕತ್ತರಿಸುತ್ತಾರೆ. ಅದನ್ನು ಕಾಯಿಸಿ ಮೃದುಮಾಡಿ ಹಾಳೆಯಾಗಿ ಬಿಚ್ಚುತ್ತಾನೆ. ಈ ರೀತಿಯಲ್ಲಿ ೩/ ಉದ್ದ ಮತ್ತು ೨/ ಪೂಟ್ ಅಗಲದ ಗಾಜಿನ ಹಾಳೆಗಳನ್ನು ಪಡೆದು ಅವುಗಳ ಮೇಲೆ ಆಕೃತಿ, ಚಿತ್ರಗಳನ್ನು ಬರೆದು ಕಿಟಕಿಗಳಲ್ಲಿ ಉಪಯೋಗಿಸುತ್ತಿದ್ದುದು ತಿಳಿದು ಬರುತ್ತದೆ.[೬] ಹಾಳೆಯ ಗಾಜು ಪಾರದರ್ಶಕವಾಗಿಯೂ ಪರಿಶುದ್ಧವಾಗಿಯೂ ಇರಬೇಕು. ಇಂಥ ಗಾಜನ್ನು ಕಲಾವಿದರು ಚಿತ್ರರಚನೆಗೆ ಬಳಸುವರು ಈ ಗಾಜನ್ನು ಸಾಮಾನ್ಯ ಗಾಜಿನಿಂದ ತಯಾರಿಸುವರು. ಗಾಜು, ಗಾಜಿನ ತಯಾರಿಕೆ, ವಿವಿಧ ಗಾಜುಗಳು ಹಾಗೂ ಬಣ್ಣದ ಗಾಜುಗಳ ತಯಾರಿಕೆಯ ಕುರಿತು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಸ್ಟೇನ್ಡ್ ಗ್ಲಾಸ್ ಚಿತ್ರಗಳ ರಚನೆಗೆ, ತೂಗುಹಾಕುವ ಗಾಜಿನ ಚಿತ್ರಗಳ ರಚನೆಗೆ ಹಾಗೂ ಬೇರೆ ಬೇರೆ ವಸ್ತುಗಳಲ್ಲಿ ಅಳವಡಿಸಿದ ಗಾಜಿನ ಚಿತ್ರಗಳ ರಚನೆಗೆ ಹಾಳೆಯ ಗಾಜನ್ನೇ (Sheet Glass) ಬಳಸಿದ್ದಾರೆ. ಹಾಳೆ ಗಾಜು ವಿವಿಧ ಗಾತ್ರಗಳಲ್ಲಿ ಹಾಗೂ ವಿವಿಧ ಅಳತೆಗಳಲ್ಲಿ ತಯಾರಿಸಬಹುದಾದ್ದರಿಂದ ಈ ಕಲಾವಿದರು ೨ಎಂ.ಎಂ. ಗಾತ್ರದ ಗಾಜಿನ ಹಾಳೆಯನ್ನು ಬಳಸಿರುವರು. ಯಾಕೆಂದರೆ ಇದರ ಮೇಲೆ ಚಿತ್ರ ಬರೆಯುವದರಿಂದ ನೋಡುಗರಿಗೆ ಸ್ಪಷ್ಟವಾಗಿ ಕಾಣುತ್ತದೆ. ಈ ಗಾಜು ಸಾಮಾನ್ಯವಾಗಿರುವುದರಿಂದ ಮೇಲಿನಿಂದ ಬಿದ್ದರೆ ಅಥವಾ ಯಾವುದೇ ರೀತಿ ಪೆಟ್ಟು ಬಿದ್ದರೆ ಒಡೆಯುತ್ತದೆ. ಈ ಒಂದು ಜ್ಞಾನವಿದ್ದರೂ ನಮ್ಮ ಗಾಜಿನ ಕಲಾವಿದರು ಜನರನ್ನು ಆಕರ್ಷಿಸುವ ಸಲುವಾಗಿ, ಗಾಜಿನ ಮೇಲೆ ಚಿತ್ರಗಳನ್ನು ಬರೆಯುತ್ತಿದ್ದರು. ಇವರು ರಚಿಸಿದ ಚಿತ್ರಗಳು ಇಂದಿಗೂ ನಮಗೆ ನೋಡಲು ಸಿಗುತ್ತವೆ.

೨೦ ನೆಯ ಶತಮಾನದ ಉತ್ತರಾರ್ಧದಲ್ಲಿ ಕ್ಯಾಲೆಂಡರ್ ಚಿತ್ರಗಳು ಉದಯಗೊಂಡ ನಂತರ ಗಾಜಿನ ಕಲಾವಿದರು ಇವುಗಳನ್ನು ಉಪಯೋಗಿಸಿಕೊಂಡು ಒಂದು ಹೊಸ ರಚನಾ ವಿಧಾನವನ್ನು ಬೆಳಕಿಗೆ ತಂದರು. ದೇವತಾ ಚಿತ್ರಗಳನ್ನು, ಭಾವಚಿತ್ರಗಳನ್ನು (Photography) ಕನ್ನಡಿಯ ಹಿಂಭಾಗದಲ್ಲಿ ಅಂಟಿಸಿ ಬೇಕಾದ ಭಾಗವಷ್ಟೇ ಕಾಣುವಂತೆ ಮಾಡಿ ಚಿತ್ರಗಳನ್ನು ರಚನೆ ಮಾಡುವದನ್ನು ಕಂಡುಕೊಂಡರು. ಇದು ಜನರನ್ನು ವಿಶೇಷವಾಗಿ ಆಕರ್ಷಿಸತೊಡಗಿತು. ಮತ್ತು ಪ್ರಚಾರವೂ ವ್ಯಾಪಕವಾಯಿತು. ಈ ರೀತಿಯ ಚಿತ್ರಪದ್ಧತಿಯನ್ನು ಕಂಪನಿ ಚಿತ್ರಕಾರರು ಹೆಚ್ಚು ಹೆಚ್ಚು ಸಂಖ್ಯೆಗಳಲ್ಲಿ ರಚಿಸುತ್ತಿದ್ದರು. ಬ್ರಿಟೀಷ ಅಧಿಕಾರಿಗಳು, ಶ್ರೀಮಂತರು, ತಮ್ಮ ಭಾವಚಿತ್ರಗಳನ್ನು ಈ ಪ್ರಕಾರದ ಚಿತ್ರರಚನೆಯಲ್ಲಿ ಮಾಡಿಸುತ್ತಿದ್ದರು.

ಇಂದು ಗಾಜನ್ನು ಪ್ರತಿಯೊಂದು ಕ್ಷೇತ್ರಗಳಲ್ಲಿ ಹೇರಳವಾಗಿ ಬಳಸಲಾಗುತ್ತಿದ್ದು, ಇದು ಒಂದು ದೊಡ್ಡ ಉದ್ದಿಮೆಯಾಗಿ ರೂಪುಗೊಂಡಿದೆ. ಗಾಜು ಬೇಕಾದ ಅಳತೆಯಲ್ಲಿ ಬೇಕಾದ ಗಾತ್ರಗಳಲ್ಲಿ ಹಾಗೂ ಬೇಕಾದ ಬಣ್ಣಗಳಲ್ಲಿ ಮಾರುಟ್ಟೆಯಲ್ಲಿ ದೊರೆಯುತ್ತಿರುವುದರಿಂದ ಗಾಜಿನ ಕಲಾವಿದರು ಬೇಕಾದ ಗಾಜನ್ನು ಆಯ್ದುಕೊಂಡು. ಚಿತ್ರ ರಚನೆಯಲ್ಲಿ ತೊಡಗಿರುವರು. ಕಲಾವಿದರು

೬. ಹೆಚ್.ಜಿ.ಎಂ : (ಸಂ) ಕನ್ನಡ ವಿಶ್ವಕೋಶ (ಸಂಪುಟ ಆರು), ಪುಟ ೧೯೩

ಗಾಜನ್ನು ಯಾವುದೇ ರೀತಿ ಪೂರ್ವಸಿದ್ಧತೆ ಮಾಡಿಕೊಳ್ಳುವ ಪ್ರಮೆಯವೇ ಇಲ್ಲ, ಯಾಕೆಂದರೆ ಚಿತ್ರ ರಚನೆಗೆ ಸಿದ್ಧವಾಗಿಯೇ ರೂಪುಗೊಂಡಿರುತ್ತದೆ.

ಇತ್ತೀಚೆಗೆ ಗಾಜಿನಂತೆಯೇ ಇರುವ ಅಕ್ರಲಿಕ್ ಪಾರದರ್ಶಕ ಹಾಳೆಗಳು ಮಾರುಕಟ್ಟೆಯಲ್ಲಿ ಲಭ್ಯ ಇವೆ. ಇದರ ಮೇಲೆಯೂ ಗಾಜಿಗಿಂತ ಚಿತ್ರಗಳಂತೆ ಯಾವುದೇ ರೀತಿಯ ಚಿತ್ರಗಳನ್ನು ಬರೆಯಬಹುದಾಗಿದೆ. ಇದು ಗಾಜಿಗಿಂತ ದುಬಾರಿಯಾಗಿದೆ. ಯಾಕೆಂದರೆ ಇದು ಮೇಲಿಂದ ಬಿದ್ದರೆ ಒಡೆಯುವುದಿಲ್ಲ. ಗಾಜಿನಂತೆ ಹಗುರಾಗಿರುತ್ತದೆ. ಇದರಲ್ಲಿ ಒಂದು ದೋಷವನ್ನು ಕಾಣಬಹುದು. ಇದರ ಮೇಲೆ ಯಾವುದಾದರೂ ವಸ್ತುವಿನಿಂದ ಗೀಚಿದರೆ ಶಾಶ್ವತ ಗೀಚುಗಳು ಬೀಳುತ್ತವೆ. ಇದನ್ನು ಗಾಜಿನಂತೆ ಚಿತ್ರ ರಚನೆಗೆ ಧಾರಾಳವಾಗಿ ಬಳಸಬಹುದಾಗಿದೆ.

ಇತ್ತೀಚಿನ ಚಿತ್ರಕಾರರು ಇವುಗಳನ್ನು ಬಳಸುತ್ತಿದ್ದಾರೆ. ಅಕ್ರಲಿಕ್ ಹಾಳೆಯ ಮೇಲೆ ಬೆಂಗಳೂರಿನ ಎಂ. ಎಸ್. ಗುರಪ್ಪ ಎಂಬ ಕಲಾವಿದರು ನೂರಾರು ದೇವರ ಚಿತ್ರಗಳನ್ನು ಬರೆದಿರುವರು. ಈ ಚಿತ್ರಗಳನ್ನು ದೂರದಿಂದ ವೀಕ್ಷಿಸಿದಾದ ಗಾಜಿನ ಮೇಲೆ ರಚಿಸಿದಂತೆ ಕಾಣುತ್ತವೆ. ಇವರು ರಚಿಸಿದ ೨ ಫೀಟ್‌ದಿಂದ ೧೦ ಫೀಟ್ ಅಳತೆಯ ಅಕ್ರಲಿಕ್ ಹಾಳೆಯಲ್ಲಿ ಅನೇಕ ಚಿತ್ರಗಳನ್ನು ಬರೆದಿದ್ದಾರೆ. ಮೈಸೂರಿನ ಕಲಾವಿದರಾದ ಶ್ರೀ ರಾಮದಾಸ ಅಡ್ಯಂತ್ಯಾಯ, ಬೆಂಗಳೂರಿನ ಕಲಾವಿದರಾದ ಶ್ರೀ ಜೆ.ಎಂ.ಎಸ್. ಮಣಿ ಇತ್ಯಾದಿ ಕಲಾವಿದರು ಈ ಪಾರದರ್ಶಕ ಅಕ್ರಲಿಕ್ ಹಾಳೆಯಲ್ಲಿ ಚಿತ್ರಗಳನ್ನು ಈಗಲೂ ಬರೆಯುತ್ತಿದ್ದುದು ಕಂಡು ಬರುತ್ತದೆ.

● **ಬಣ್ಣಗಳು**

ಗಾಜಿನ ಮೇಲಿನ ಚಿತ್ರಕಲೆಗೆ ಬಣ್ಣಗಳನ್ನು ಬಳಸಿರುವ ಕುರಿತು ನಮಗೆ ಲಭ್ಯವಿರುವ ಪ್ರಕಾರ ಮಧ್ಯಕಾಲದ ಸ್ಟೇನ್ಡ್ ಗ್ಲಾಸ್ ಚಿತ್ರಗಳಿಂದ ೧೮-೧೯ ನೇ ಶತಮಾನಗಳ ಪಾಶ್ಚಿಮಾತ್ಯರ ಹಾಗೂ ಭಾರತೀಯರ ಆಧುನಿಕ ಕಾಲದ ಗಾಜಿನ ಚಿತ್ರಗಳಿಗೆ ನೈಸರ್ಗಿಕ ಹಾಗೂ ರಾಸಾಯನಿಕವಾಗಿ ತಯಾರಿಸಲಾಗುತ್ತಿದ್ದ ಬಣ್ಣಗಳನ್ನು ಬಳಸಿದ್ದು ಕಂಡು ಬರುತ್ತದೆ. ಇವುಗಳಿಗೆ ಜಲ ಮತ್ತು ತೈಲಗಳನ್ನು ಮಿಶ್ರಣ ಮಾಡಿ ಗಾಜಿನ ಚಿತ್ರಗಳನ್ನು ಬರೆಯುತ್ತಿದ್ದರು. ಇವು ಆಯಾ ಕಾಲಗಳ ಸಂದರ್ಭಗಳಲ್ಲಿ ಪ್ರಚಲಿತವಿದ್ದ ಭಿತ್ತಿ, ಕಾಗದ, ಕಟ್ಟಿಗೆ, ಬಟ್ಟೆಗಳ ಮೇಲೆ ಚಿತ್ರ ರಚಿಸಲು ಬಳಸುತ್ತಿದ್ದ ಬಣ್ಣಗಳನ್ನೇ ಗಾಜಿನ ಚಿತ್ರಕಲಾವಿದರು ಬಳಸುತ್ತಿದ್ದರು. ಗಾಜಿನ ಮೇಲೆ ಹೆಚ್ಚಾಗಿ ತೈಲವರ್ಣಗಳನ್ನೇ ಬಳಸಿದ್ದು ಗಮನಾರ್ಹವಾದುದು. ೧೯ನೆಯ ಶತಮಾನದ ಕೊನೆಯ ಅವಧಿಯಲ್ಲಿ ರಾಸಾಯನಿಕ ವರ್ಣಗಳು ಮಾರುಕಟ್ಟೆಯಲ್ಲಿ ಲಭ್ಯವಾದ ಕಾರಣ ಕಲಾವಿದರು ಗಾಜಿನ ಮೇಲೆ ಅವುಗಳನ್ನೆ ಬಳಸತೊಡಗಿದರು.

**ಟೆಂಪರಾ ವರ್ಣ**

'ಟೆಂಪರಾ' ಬಣ್ಣಗಳನ್ನು ಗಾಜಿನ ಚಿತ್ರ ರಚನೆಯಲ್ಲಿ ಹೆಚ್ಚು ಪ್ರಮಾಣದಲ್ಲಿ ಬಳಸಿರುವುದನ್ನು ಇಂದು ಲಭ್ಯವಿರುವ ಗಾಜಿನ ಚಿತ್ರಗಳಿಂದ ತಿಳಿಯಬಹುದು. ಮೊಟ್ಟೆಯ ಬಿಳಿಯ ಭಾಗದೊಂದಿಗೆ ಯಾವುದೇ ಮೂಲದ ಬಣ್ಣಗಳನ್ನು ಬೆರೆಸಿ ಬೇಕಾದ ರೀತಿಯಲ್ಲಿ ತಯಾರಿಸಿಕೊಂಡು ಚಿತ್ರಕ್ಕೆ ಬಣ್ಣ ತುಂಬುವ ವಿಧಾನವನ್ನು 'ಟೆಂಪರಾ' ಎಂದು ಕರೆಯುವರು

ಇದನ್ನು ತೆಳುವಾಗಿ, ಮಂದವಾಗಿ ಹಾಗೂ ಗಟ್ಟಿಯಾಗಿಯೂ ಬಳಸಬಹುದು. ನೈಸರ್ಗಿಕವಾಗಿ ದೊರೆಯುವ ಬಣ್ಣಗಳ ಹೆಂಟೆ ಮತ್ತು ಪುಡಿ ವರ್ಣಗಳನ್ನು ಮೊಟ್ಟೆ ಅಥವಾ ಅಂಟು ಪದಾರ್ಥ ಗಳಲ್ಲಿ ಬೆರೆಸಿ ಚಿತ್ರ ರಚಿಸುತ್ತಿದ್ದರು. ಈಜಿಪ್ತಿಯನ್ನರು, ರೋಮನ್ನರು ಹಾಗೂ ಗ್ರೀಕರು ಉಪಯೋಗಿಸಲ್ಪಟ್ಟ ಹಳೆಯ ಚಿತ್ರ ವಿಧಾನ ಟೆಂಪರಾ ವರ್ಣ ಪದ್ಧತಿಯೇ ಯಾಗಿತ್ತು. ಇದು ಭಿತ್ತಿಚಿತ್ರಗಳ ರಚನೆಗೆ ಕ್ಯಾನ್ವಾಸ್ ಚಿತ್ರರಚನೆಗೆ ಹಾಗೂ ಕಟ್ಟಿಗೆ, ಗಾಜುಗಳಂತಹ ಫಲಕಗಳ ಮೇಲೆ ಚಿತ್ರ ರಚನೆಗೆ ಬಳಸಬಹುದಾದಂತಹ ಮಾಧ್ಯಮ. ಮೊಟ್ಟೆ ಬೆರೆಸಿದ ಟೆಂಪರಾವನ್ನು ನೀರಿನಿಂದ ತೆಳುಗೊಳಿಸಿ ರಚಿಸಿದ ಚಿತ್ರಕ್ಕೆ ಹೊಳಪಿನ ಲೇಪನ ಮಾಡಿದರೆ ಅದು ಜಲವರ್ಣದಂತೆ ಕಾಣುತ್ತದೆ. ಟೆಂಪರಾ ಬಣ್ಣಗಳಿಗೆ ಬಿಳಿ ಬಣ್ಣ ಮಿಶ್ರಣ ಮಾಡಿದರೆ ಅದು ಪೇಸ್ಟಲ್‌ನ ನಾಜೂಕು ಕಂಡು ಬರುತ್ತದೆ. ಇದಕ್ಕೆ ತೈಲದಂತಹ ಪದಾರ್ಥ (ಅಗಸೆ, ಕುಸುಬಿ, ಸೇಂಗಾ ದಂತಹ ಎಣ್ಣೆ ಕಾಳಿನ ಜಿಗುಟಾ ತೈಲ) ಮಿಶ್ರಣ ಮಾಡಿದರೆ ತೈಲದಂತಹ ಟೆಂಪರಾ ಸಿದ್ಧವಾಗುತ್ತದೆ.

ಚಿತ್ರ ರಚನೆಯಲ್ಲಿ ತೆಳುವಾಗಿ ಲೇಪಿಸಿದ ಟೆಂಪರಾ ಮೇಲೆ ವಾರ್ನಿಷ್‌ನ ಒಂದು ಪದರು ಲೇಪಿಸಿದರೆ ಅದು ತೈಲವರ್ಣಕ್ಕೆ ಅತ್ಯುತ್ತಮ ತಳಪಾಯ ನೀಡುತ್ತದೆ. ಜನಸಾಮಾನ್ಯರು ತೈಲವರ್ಣವೆಂದು ಭಾವಿಸುವ ಮಧ್ಯಯುಗದ ಅನೇಕ ಕೃತಿಗಳು ವಾಸ್ತವದಲ್ಲಿ ಮೇಲೆ ಹೇಳಿದಂತೆ ರಚಿಸಿದ ಟೆಂಪರಾಗಳಲ್ಲಿ ಮೂಲತಃ ಹೊಳಪಿಲ್ಲದ ಟೆಂಪರಾಗಳೇ. ಹೊಳಪಿಲ್ಲದ ಟೆಂಪರಾಗಳಿಗೆ ವಾರ್ನಿಷ್‌ನ ಹೊಳಪು ನೀಡುವುದರಿಂದ ಮೂಲತಃ ಟೆಂಪರಾ ವರ್ಣಗಳು ಆಕರ್ಷಕ ತೈಲವರ್ಣ ಚಿತ್ರಗಳಂತೆ ಕಾಣುತ್ತವೆ. 'ಟೆಂಪರಾ' ತೈಲವರ್ಣದ ಮೂಲ ವರ್ಣವಾಗಿರುವುದರಿಂದ ೧೯ನೇ ಶತಮಾನದಲ್ಲಿ ರಾಸಾಯನಿಕ ತೈಲವರ್ಣದ ಹುಟ್ಟಿನಿಂದ ಇದರ ಬೇಡಿಕೆ ಕಡಿಮೆಯಾಯಿತು. ೨೦ನೇ ಶತಮಾನದ ಕಲೆಯಲ್ಲಿ ಟೆಂಪರಾಗೆ ವಿಶೇಷ ಸ್ಥಾನ ಕೊಟ್ಟವನು ಆಂದ್ರುವೈತ್. ಆತನ ಚಿತ್ರ 'ಕ್ರಿಸ್ಟಿನಾಸ್ ವರ್ಲ್ಡ್', ಅಮೂರ್ತ ಕಲೆಯ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಸಂದರ್ಭದಲ್ಲಿ ರಿಯಾಲಿಸ್ಟಿಕ್ ಮಾದರಿಯಲ್ಲಿದ್ದ ಈ ಕೃತಿಯು ಅತ್ಯಂತ ಮೇರು ಕೃತಿಯೆಂದು ಪರಿಗಣಿಸಲ್ಪಟ್ಟಿತ್ತು. ಇವನ ಹಿಂಬಾಲಕರಲ್ಲಿ ರಾಬರ್ಟವಿಕ್ಟರಿಯೊಬ್ಬನಾಗಿದ್ದಾನೆ. ಟೆಂಪರಾ ಯಾವುದೇ ಆಧಾರದ ಮೇಲೆ ಬರೆಯಬಹುದಾದದ್ದರಿಂದ ಆ ಸಂದರ್ಭಗಳಲ್ಲಿ ಗಾಜಿನ ಚಿತ್ರಕಲಾವಿದರು ಸಮರ್ಪಕವಾಗಿ ಬಳಸಿಕೊಂಡಿದ್ದಾರೆ.

ಬಹುತೇಕ ಕರ್ನಾಟಕದಲ್ಲಿ ಲಭ್ಯವಿರುವ ಗಾಜಿನ ಚಿತ್ರರಚನೆಗೆ ಆ ದಿನಗಳಲ್ಲಿ ಬಳಸಲಾಗುತ್ತಿದ್ದ ಟೆಂಪರಾ ವರ್ಣಗಳಲ್ಲಿ ನೈಸರ್ಗಿಕ ಮೂಲದ ವೈವಿಧ್ಯಮಯವಾದ ಬಂಧಕಗಳನ್ನು ಬಳಸಿಕೊಂಡು ಗಾಜಿನ ಮೇಲೆ ವಿಶಿಷ್ಟವಾಗಿ ಚಿತ್ರಿಸಿದ್ದಾರೆ. ಅಪಾರದರ್ಶಕವಾಗಿ ಬೆಳಕು, ನೆರಳನ್ನು ಈ ವರ್ಣಗಳಲ್ಲಿ ತರಲು ಪ್ರಯತ್ನಿಸಿದ್ದಾರೆ. ಈ ವರ್ಣಗಳು ನೋಡುಗರ ಕಣ್ಣಿಗೆ ತಂಪನ್ನು ತರುತ್ತವೆ ಮತ್ತು ಆನಂದವನ್ನು ಕೊಡುತ್ತವೆ.

**ತೈಲವರ್ಣಗಳು**

ತೈಲವರ್ಣಗಳ ರಚನೆ ಪ್ರಾರಂಭವಾದುದು ಹದಿನೈದನೆಯ ಶತಮಾನದ ಪ್ರಥಮಾರ್ಧದಲ್ಲಿ ಈ ವರ್ಣಗಳನ್ನು ಕ್ಯಾನ್ವಾಸ್ ಹಾಗೂ ಭಿತ್ತಿಚಿತ್ರಗಳ ಮೇಲೆ ಪ್ಲಾಸ್ಟರ್ ಆಫ್

ಪ್ಯಾರಿಸನ್ನು ಲೇಪಿಸುತ್ತಿದ್ದರು. ಈ ರೀತಿಯ ಆಧಾರದ ಮೇಲೆ ಮೊಟ್ಟೆಯ ಲೋಳೆಯೊಂದಿಗೆ ಯಾವುದೇ ಮೂಲದ ಬಣ್ಣಗಳನ್ನು ಬೆರೆಸಿಕೊಂಡು ಬೇಕಾದ ತೈಲಗಳನ್ನು ಸೇರಿಸಿ ಚಿತ್ರ ಬರೆಯುತ್ತಿದ್ದರು. ಇದು ಟೆಂಪರಾ ಆಗಿದ್ದರೂ ತೈಲವರ್ಣಗಳ ಪ್ರಾರಂಭದ ಹಂತ. ತೈಲ ಬೆರೆಸಿದ ಟೆಂಪರಾ ವರ್ಣಗಳ ಚಿತ್ರಗಳಿಗೆ ಮೆರುಗೆಣ್ಣೆಯನ್ನು ಲೇಪನ ಮಾಡಿದರೆ ತೈಲವರ್ಣ ಸಿದ್ಧವಾಗುತ್ತಿತ್ತು. ಮಧ್ಯಯುಗದಲ್ಲಿ ರಚಿತವಾದ ಚಿತ್ರಗಳಿಗೆ ಯಾವುದೇ ಟೆಂಪರಾ ಮಾಧ್ಯಮದಲ್ಲಿ ಚಿತ್ರ ರಚಿಸಿ ನಂತರ ಅದಕ್ಕೆ ತೆಳುವಾದ ಪಾರದರ್ಶಕ ಹೊಳಪುಳ್ಳ ಎಣ್ಣೆಯಂತಹ ಪದಾರ್ಥ ಲೇಪನ ಮಾಡುತ್ತಿದ್ದರು. ಇದನ್ನು ಆ ಕಾಲದ ಚರ್ಚುಗಳಲ್ಲಿನ ಕ್ರೈಸ್ತ ಕಥಾನಕ ದೃಶ್ಯಗಳು, ರಾಜಕೀಯ, ಧಾರ್ಮಿಕ, ಸಾಮಾಜಿಕ ಜೀವನದ ಪಾಶ್ಚಿಮಾತ್ಯ ಶೈಲಿಯ ಚಿತ್ರಗಳು ಈ ವರ್ಣ ಪದ್ಧತಿಯಲ್ಲಿಯೇ ರಚನೆಯಾಗಿವೆ.

ಕೆಲವು ಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಚಿತ್ರಗಳ ವರ್ಣಗಳಲ್ಲಿ ಸೀಳಿದ, ಬಿರುಕುಬಿಟ್ಟ ದೃಶ್ಯವು ಕಂಡುಬರುತ್ತದೆ. ಯಾಕೆಂದರೆ ಇವು ಟೆಂಪರಾ ಮಾಧ್ಯಮದಲ್ಲಿ ರಚನೆಯಾದುದರಿಂದ ಕಾಲಕ್ರಮೇಣ ಮಳೆ, ಗಾಳಿ, ಬಿಸಿಲಿಗೆ ಬಣ್ಣಗಳ ಹೊಳಪು ಕಳೆದುಕೊಂಡು ಮಸುಕಾಗಿ ಕಾಣುತ್ತವೆ ಹಾಗೂ ಅಲ್ಲಲ್ಲಿ ಬಿರುಕು ಕಾಣುತ್ತವೆ. ಆದ್ದರಿಂದ ಇದರ ಮೆರಗನ್ನು ಹೆಚ್ಚಿಸುವ ಸಲುವಾಗಿ ಮೇಲಿಂದ ಮೇಲೆ ಹೊಳಪುಳ್ಳ ಪಾರದರ್ಶಕ ತೈಲವನ್ನು ಲೇಪನ ಮಾಡಬೇಕು.

ತೈಲವರ್ಣಗಳನ್ನು ಚಿತ್ರ ರಚನೆಗೆ ೧೪-೧೫ ನೆಯ ಶತಮಾನಗಳಲ್ಲಿ 'ಜಾನವಾರ್ ಬೆಲ್ಜಿಯಂ' ಜಾನ್‌ವಾನ್ ಐಕ್ ಸಹೋದರರು ಈ ಪದ್ಧತಿಯ ಪ್ರವರ್ತಕರೆಂದು ಹೇಳುತ್ತಾರೆ. ಆದರೂ ಇದಕ್ಕಿಂತಲೂ ಪೂರ್ವದಲ್ಲಿಯೇ ಈ ಪದ್ಧತಿ ಇತ್ತೆಂಬುದಕ್ಕೆ ಅನೇಕ ಆಧಾರಗಳಿಂದ ಗೊತ್ತಾಗುತ್ತದೆ. ತೈಲಚಿತ್ರರಚನೆಯ ಆರಂಭದ ಕಾಲದಲ್ಲಿ ವರ್ಣದ್ರವ್ಯ ಪುಡಿಯನ್ನು ಅಮೃತ ಶಿಲೆಯ ಹಾಸುಗಲ್ಲಿನ ಮೇಲೆ ಅರೆಯುತ್ತ, ಅರೆಯುತ್ತಾ ಅರೆಯುತ್ತಾ ಅದಕ್ಕೆ ಸ್ವಲ್ಪ ಸ್ವಲ್ಪವಾಗಿ ತೈಲವನ್ನು ಸೇರಿಸಿ ತಮಗೆ ಬೇಕಾದ ತೈಲವರ್ಣವನ್ನು ಕಲಾವಿದರು ತಯಾರಿಸಿಕೊಳ್ಳುತ್ತಿದ್ದರು.

ಮೊದಮೊದಲು ತೈಲವರ್ಣವನ್ನು ಮರದ ಹಲಗೆ ಮೇಲೆ ರಚಿಸುತ್ತಿದ್ದರು. ೧೬ನೇ ಶತಮಾನದ ತರುವಾಯ ಕ್ಯಾನ್ವಾಸನ್ನು ಉಪಯೋಗಿಸ ತೊಡಗಿದರು. ಇದಕ್ಕಿಂತ ಪೂರ್ವದ ರೋಮನ್ ಮತ್ತು ಗಾತಿಕ್ ಕಲೆಯ ಗಾಜಿನ ಚಿತ್ರಗಳಲ್ಲಿ ಇದರ ಬಳಕೆಯಿತ್ತು ಎಂಬುದು ಆ ಕಾಲದ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಸಾಕ್ಷಿಯಾಗಿವೆ. ಮರದ ಚೌಕಟ್ಟಿನಲ್ಲಿ ಬಂಧಿಸಿದ ಕ್ಯಾನ್ವಾಸ್ ಮೇಲೆ ಅನುಕೂಲಕರ ತೈಲ ಚಿತ್ರವನ್ನು ರಚಿಸುವ ವಿಧಾನ ಹಾಗೂ ಅದಕ್ಕಾಗಿ ಬಳಸುವ ಬಣ್ಣದ ತೈಲ ಪ್ರಮಾಣಗಳನ್ನು ಒಬ್ಬೊಬ್ಬ ಕಲಾವಿದರು ತಮ್ಮದೇ ಆದ ರೀತಿಯಲ್ಲಿ ಉಪಯೋಗಿಸಿದ್ದಾರೆ. ಈ ಹಂತದಲ್ಲಿ ಬೇರೆ ಬೇರೆ ತೈಲಗಳ ಉಪಯೋಗವಾಗಿದೆಯಾದರೂ ಹೆಚ್ಚು ಬಳಕೆಯಲ್ಲಿರುವುದು ಗಸಗಸೆ, ಅಕ್ರೋಟ್ ಬೀಜ ಹಾಗೂ ಲೀನ್ ಬೀಜದ ಎಣ್ಣೆ ಕಂಡುಬರುವುದು. ಈ ಮಿಶ್ರಣದ ಬಣ್ಣಗಳನ್ನು ತೆಳುವುಗೊಳಿಸುವುದಗೋಸ್ಕರ 'ಟರ್ಪನ್ ಟೈನ್' ಎಣ್ಣೆಯನ್ನು ಉಪಯೋಗಿಸುತ್ತಾರೆ. ತೈಲ ಚಿತ್ರರಚನೆಯು ಚಿತ್ರಕಲೆಯ ಇತರ ವಿಧಾನವನ್ನು ಹಿಂದೆ ಹಾಕಿದೆ ತೈಲವರ್ಣ ಚಿತ್ರರಚನೆಯಲ್ಲಿ ಹಲವಾರು ಅಂಕುರತೆ ಇರುವುದು. ಬೇಡವಾದ ಬಣ್ಣವನ್ನು ಒರೆಸಿ ತೆಗೆಯಬಹುದು. ಅಗತ್ಯವೆನಿಸಿದರೆ ಯಾವುದಾದರೊಂದು ಚಿತ್ರದ ಭಾಗದ ಮೇಲೆ ಪುನಃ ಬಣ್ಣ ಹಚ್ಚಬಹುದು. ತೈಲವರ್ಣವನ್ನು

ಕಲಾವಿದ ತನಗೆ ಬೇಕಾದಂತೆ ತೆಳುವಾಗಿಯೂ ಮತ್ತು ಮಂದವಾಗಿಯೂ ಲೇಪಿಸಬಹುದು. ಇದನ್ನು ಪಾರದರ್ಶಕವಾಗಿಯೂ ಮತ್ತು ಅಪಾರದರ್ಶಕವಾಗಿಯೂ ಬಳಸಬಹುದು. ಈ ಪಾರದರ್ಶಕ ತೈಲವರ್ಣವನ್ನು ಸ್ಟೇನ್ಡ್ ಗ್ಲಾಸ್ ಚಿತ್ರಗಳ ರಚನೆಯಲ್ಲಿ ಬಳಸಿದ್ದಾರೆ. ಈ ರೀತಿಯ ಗಾಜಿನ ಚಿತ್ರಗಳು ಹೊರಗಿನ ಬೆಳಕಿನಿಂದ ಆಕರ್ಷಕವಾಗಿಯೂ ಕಂಡುಬರುತ್ತವೆ. ಅಪಾರದರ್ಶಕ ತೈಲವರ್ಣ ಪದ್ಧತಿಯನ್ನು ತೂಗುಹಾಕುವ ಗಾಜಿನ ಚಿತ್ರಗಳಲ್ಲಿ ಕಾಣಬಹುದು.

ಇಲ್ಲಿ 'ಟೆಂಪರಾ' ಬಣ್ಣಕ್ಕೆ ಸೇರಿಸಿದ ತೈಲವು ಬಣ್ಣದ ಕಣಗಳನ್ನು ಬಂದಿಸಿ ಹಿಡಿಯುವದರಿಂದ ತೈಲವರ್ಣಗಳು ಬಹು ಕಾಲದವರೆಗೆ ಕೆಡದೇ ಚನ್ನಾಗಿರುತ್ತವೆ. ಇಟಲಿಯ ಪ್ರಖ್ಯಾತ ಕಲಾವಿದ ಟಿಶನ್ (೧೪೭೭-೧೫೭೬) ಬಣ್ಣಗಳನ್ನು ಸಮೃದ್ಧವಾಗಿ ಉಪಯೋಗಿಸುತ್ತಿದ್ದ ಇವನು ಉಪಯೋಗಿಸಿದ ಕೆಂಪು ಬಣ್ಣ ಆಕರ್ಷಕವಾಗಿದ್ದು, ಈ ಕೆಂಪು ಬಣ್ಣಕ್ಕೆ 'ಟಿಶನ್ ರೆಡ್' ಎಂತಲೂ ಕರೆಯುತ್ತಾರೆ. ತೈಲ ಚಿತ್ರ ವಿಧಾನದಿಂದ ಭಿತ್ತಿಚಿತ್ರ ವಿಧಾನ ಹಿಂದೆ ಬಿತ್ತು. ಪಾಶ್ಚಿಮಾತ್ಯ ಕಲಾವಿದರಾದ ಲಿಯನಾರ್ದೋ-ದ-ವಿಂಚಿ, ರಾಫೆಲ್, ರೆಂಬ್ರಾಂಟ್, ವ್ಯಾನಗಾಗ್ ರೂಬೆನ್ಸ್ ರೂಢಿಸಿಕೊಂಡಿದ್ದಾರೆ. ಬ್ರಿಟೀಷರ ಆಗಮನದಿಂದ ಭಾರತೀಯ ಕಲಾವಿದರಿಗೆ ತೈಲವರ್ಣ ಪರಿಚಯವಾಯಿತು.

೧೯ನೇ ಶತಮಾನದ ನಂತರ ನಮ್ಮಲ್ಲಿ ರಸಾಯನಿಕ ಬಣ್ಣಗಳು ಉತ್ಕೃಷ್ಟ ಮಟ್ಟದಲ್ಲಿ ಕಾಲಕಾಲಕ್ಕೆ ತಕ್ಕಂತೆ ಪರಿಶುದ್ಧ ವರ್ಣಗಳು ಕಲಾವಿದನಿಗೆ ಸಿದ್ಧವಾಗಿ ಮಾರುಕಟ್ಟೆಗೆ ಬರತೊಡಗಿದವು. ಬಣ್ಣವನ್ನು ತೆಳು ಮಾಡಿಕೊಳ್ಳಲು ಟರ್ಪಂಟೈನ್ ಮತ್ತು ಲಿನ್ಸಿಡ್ ಆಯಿಲ್ ನಂತರ ಮಿಡಿಯಮ್‌ಗಳು ಹೊರಬರತೊಡಗಿದವು. ತೈಲವರ್ಣ ಇಂದು Powder, liquid ಹಾಗೂ pest ಮಾದರಿಯಲ್ಲಿ ಮಾರುಕಟ್ಟೆಯಲ್ಲಿ ಲಭ್ಯಇವೆ. ಈ ಮೂರು ಮಾದರಿಯ ತೈಲವರ್ಣಗಳನ್ನು ಉಪಯೋಗಿಸುತ್ತಾರೆ. ಪೈಟಿಂಗ್ (Painting) ಮುದ್ರಣ (Graphic) ಹಾಗೂ ಇತರೆ ಕಲೆಗಳಲ್ಲಿ ಉಪಯೋಗಿಸುತ್ತಾರೆ. ಈ ತೈಲವರ್ಣ ಕಟ್ಟಿಗೆ, ಕಲ್ಲು, ಲೋಹ, ಬಟ್ಟೆ, ಗಾಜು ಹೀಗೆ ಯಾವುದೇ ಫಲಕದ ಮೇಲೆ ಹೊಂದಿಕೊಳ್ಳುವಂತಹ (ಬಣ್ಣವಾಗಿದೆ) ಗುಣಹೊಂದಿದೆ. ಹೀಗಾಗಿ ಈ ಮಾಧ್ಯಮದ ವರ್ಣವನ್ನು ಗಾಜಿನ ಚಿತ್ರಕಲೆಯಲ್ಲಿ ಬಳಸಿರುವರು. ಇದರಿಂದ ಆಕೃತಿಗಳಲ್ಲಿ ಬೆಳಕು ನೆರಳಿನ ಕಲ್ಪನೆಯನ್ನು ತರಲು ಮತ್ತು ಇತರ ವರ್ಣಗಳ ಜೊತೆಗೆ ಉತ್ತಮವಾಗಿ ಮಿಶ್ರಣ ಮಾಡಲು ಉತ್ತಮವಾಗಿದೆ.

ಪ್ರಾಚೀನ ಮಾನವನು ಕೂಡ ತೈಲವರ್ಣದಂತಹ ಮಾದರಿಯನ್ನು ಕಂಡು ಕೊಂಡಿದ್ದನು. ಆಹಾರ ಮತ್ತು ರಕ್ಷಣೆಯ ನಂತರ ದೊಡ್ಡ ಬಂಡೆಗಳ ಆಶ್ರಯ ಹಾಗೂ ಗುಹೆಗಳಂತಹ ಸ್ಥಳಗಳಲ್ಲಿ ವಿಶ್ರಾಂತಿ ಸಮಯದಲ್ಲಿ ಚಿತ್ರ ರಚನೆಗೆ ತೊಡಗುತ್ತಿದ್ದನು. ಈ ಸಮಯದಲ್ಲಿ ಪ್ರಾಣಿ, ಪಕ್ಷಿಗಳಂತ ಚಿತ್ರಗಳನ್ನು ಬರೆದು ಅದಕ್ಕೆ ತಕ್ಕಂತಹ ಬಣ್ಣ (Said) ಗಳನ್ನು ಹೂವು, ಹಣ್ಣು, ಎಲೆ, ಬೇರೆ ಹಾಗೂ ಕಲ್ಲುಗಳಂತಹ ವಸ್ತುಗಳಿಂದ ವರ್ಣಗಳನ್ನು ತಯಾರಿಸಿ, ತಾಳಿಕೆ ಬರುವ ಗಮನವಿಟ್ಟುಕೊಂಡು ತಾನು ಬೇಟೆಯಾಡುತ್ತಿದ್ದ ಪ್ರಾಣಿಗಳ ಕೊಬ್ಬನ್ನು ಬೆರೆಸಿ ತಾನು ರಚಿಸಿದ ರೇಖಾ ಚಿತ್ರಕ್ಕೆ ಬಣ್ಣ ಸವರುತ್ತಿದ್ದನು. ಈ ರೀತಿಯಾಗಿ ತಯಾರಿಸಿದ ಬಣ್ಣಗಳನ್ನು ಎಲುಬಿನ ತೊಳ್ಳಾದ ಭಾಗದಲ್ಲಿ ಸಂಗ್ರಹಿಸಿ ಇಡುತ್ತಿದ್ದನು. ಇದು ಕೂಡಾ ತೈಲವರ್ಣಕ್ಕೆ ಸಂಬಂಧಿಸಿದ

ವರ್ಣವೆಂದು ತಿಳಿಯಬಹುದು.[೭] ಇಂದು ಅನೇಕ ಸಸ್ಯ ತೈಲಗಳಿಂದ ಬೇರೆ ಬೇರೆ ದೇಶಗಳಲ್ಲಿ ಪೇಯಿಂಟ್ಸ್ ವಾರ್ನಿಷ್, ಲಿನೋಲಿಯಂ ನಂತಹ ಉತ್ಪಾದನೆಯಲ್ಲಿ ತೊಡಗಿವೆ. ಅದನ್ನು ಕೂಡಾ ಇಲ್ಲಿ ವಿವೇಚಿಸಲಾಗಿದೆ.

**ಒಣಗುವ ತೈಲಗಳು (Drying Oils)**

ಬೇಗ ಒಣಗುವ ಎಣ್ಣೆಗಳಿಂದ ಗೋಡೆಗಳ ಅಲಂಕರಣ ಮತ್ತು ಹಡಗುಗಳ ಹೊರಭಾಗ ತೇವ ನಿರೋಧಕವಾಗುವಂತೆ ಮಾಡುವುದು. ಮಾನವನಿಗೆ ಹಿಂದಿನಿಂದ ಪರಿಚಯವಾಗಿದ್ದ ಮೇಣ ಅಥವಾ ಎಣ್ಣೆಯನ್ನು ಬಣ್ಣಗಳೊಂದಿಗೆ ಮಿಶ್ರಣ ಮಾಡಿ ಸಸ್ಯ ಅಂಟುಗಳಿಂದ ಸ್ಥಿರಗೊಳಿಸಿ ಪ್ರಾಚೀನ ಚಿತ್ರಗಳಲ್ಲಿ ಬಳಸುತ್ತಿದ್ದರು. ಇವು ಆಧುನಿಕ ಮಿಶ್ರಣದ ತೈಲದ ಬಣ್ಣಗಳನ್ನು ಹೋಲುತ್ತಿದ್ದವು. ಬೇಗ ಒಣಗುವ ತೈಲಗಳು ಚಿತ್ರ ರಚನೆಗೆ ಅತ್ಯಂತ ಸಹಕಾರಿಯಾಗಿವೆ.

ಒಣಗುವ ಎಣ್ಣೆಗಳಲ್ಲಿ ಅಯೋಡಿನ್ ಮೌಲ್ಯ ೧೨೦ ಕ್ಕಿಂತ ಹೆಚ್ಚಾಗಿರುವುದು. ಇವುಗಳಲ್ಲಿ ಲಿನೋಲಿಯಂ ಮತ್ತು ಲಿನೋಲಿನಿಕ್ ಆಮ್ಲಗಳ ಪ್ರಮಾಣ ಅಧಿಕವಾಗಿರುತ್ತದೆ. ಅಗಸೆ, ಗಸಗಸೆ, ಟಂಗ ಎಣ್ಣೆಗಳು ಇವುಗಳಲ್ಲಿ ಪ್ರಮುಖವಾದವುಗಳು. ಈ ತೈಲಗಳನ್ನು ಲೇಪಿಸಿದಾಗ ಗಾಳಿಯ ಸಂಪರ್ಕದಲ್ಲಿ ಮೊದಲು ಅಂಟಾದರೂ ಕ್ರಮೇಣ ಶುಷ್ಕವಾದ ಸುಭದ್ರ ಪೊರೆ ರಚನೆ ಉಂಟಾಗುತ್ತದೆ. ಗಸಗಸೆ ಎಣ್ಣೆಯನ್ನು ಪ್ರಧಾನವಾಗಿ ಪೈಂಟ್ಸ್‌ಗಳ ತಯಾರಿಕೆಯಲ್ಲಿ ಬಳಕೆಯಾಗುತ್ತದೆ. ಇಂತಹ ಎಣ್ಣೆಗಳುಳ್ಳ ಪೈಂಟ್ಸ್ ಮತ್ತು ವಾರ್ನಿಷ್‌ಗಳನ್ನು ಲೇಪಿಸುವುದು ಸುಲಭ ಅಲ್ಲದೇ ಒಣಗಿದ ಮೇಲೆ ಬಲವಾದಸಾವಯವ ಪದರು ಏರ್ಪಡುತ್ತದೆ. ಈ ಪದರದ ಮೂಲಕ ಬಣ್ಣ ಸಮನಾಗಿ ಹಂಚಿ ಹೋಗುವುದು. ಸೀಸ ಅಥವಾ ಮ್ಯಾಂಗನೀಸ್ ಲವಣಗಳು ಈ ಒಣಗುವ ಕ್ರೀಯೆಯನ್ನು ತ್ವರಿತಗೊಳಿಸುತ್ತವೆ. ಲೋಹದ ಅಕ್ಸೈಡ್ ಬೆರೆಸಿ, ಕಾಯಿಸಿ ತಯಾರಿಸಿದ ಗಸಗಸೆ ಎಣ್ಣೆಗೆ ಕುದಿಸಿದ ಅಗಸೆ ಎನ್ನುವರು.

ಉತ್ತಮವಾಗಿ ಒಣಗುವ ಎಣ್ಣೆಯಲ್ಲಿ ಎರಡು ರೀತಿಯ ಲಕ್ಷಣಗಳನ್ನು ಕಾಣಬಹುದು. ೧) ಎರಡು ಅಥವಾ ಮೂರು 'ದ್ವಿ' ಬಂಧವಿರದ ಆಮ್ಲದ ಗ್ಲಿಸರೈಡ್‌ಗಳನ್ನು ಹೊಂದಿರುವುದು. ೨) ಆಮ್ಲದ ಇಂಗಾಲದ ಸರಣಿಯಲ್ಲಿ ಕ್ರಮವಾಗಿ ಎರಡು ದ್ವಿಬಂಧಗಳ ನಡುವೆ ಒಂದು ಏಕ ಬಂಧವಿರುವುದು. ಆಗ ಆ ಎಣ್ಣೆಗೆ ಆಕ್ಸಿಜನ್ ಹೀರುವ ಶಕ್ತಿ ಪ್ರಾಪ್ತವಾಗಿ ಬೇಗನೆ ಒಣಗುತ್ತದೆ. ಕ್ರಮಬರಿತ ದ್ವಿ ಬಂಧವಿರುವ ಟಂಗಎಣ್ಣೆ, ಗಸಗಸೆ ಎಣ್ಣೆಗಿಂತ ಉತ್ತಮವಾಗಿ ಕಾರ್ಯನಿರ್ವಹಿಸಲು ಇದಕ್ಕೆ ಕಾರಣ. ಅಗಸೆ ಎಣ್ಣೆ ಉತ್ಪಾದನೆಯಲ್ಲಿ ಭಾರತ ತೃತೀಯ ಸ್ಥಾನ ಪಡೆದಿದೆ. ಆಯಿಲ್ ಕ್ಲಾಥ್, ರೆಗ್ಸಿನ್ ಮತ್ತು ಲಿನೋಲಿಯಂ ತಯಾರಿಕೆಯಲ್ಲಿ ಈ ಎಣ್ಣೆಗಳ ಪಾತ್ರ ಪ್ರಮುಖವಾಗಿದೆ.[೮]

ಈ ರೀತಿಯಾಗಿ ದೊರೆಯುತ್ತಿದ್ದ ತೈಲವರ್ಣಗಳನ್ನು ಗಾಜಿನ ಚಿತ್ರಕಾರರು ಬಳಸುತ್ತಿದ್ದರು. ಗಾಜಿನ ಮೇಲೆ ಈ ಬಣ್ಣಗಳು ಪ್ರಖರವಾಗಿ ಹಾಗೂ ಪಾರದರ್ಶಕವಾಗಿಯೂ

---

೭. ಎಸ್ ಎಂ. ಅಂಗಡಿ : ಭಾರತೀಯ ಸಮಕಾಲೀನ ಚಿತ್ರಕಲೆಯಲ್ಲಿ ರವಿವರ್ಮ ಮತ್ತು ಹೆಬ್ಬಾರರ ತೈಲವರ್ಣ ಚಿತ್ರಗಳು. (ಅಪ್ರಕಟಿತ ಕಿರು ಸಂ.ಪ್ರಬಂಧ), ಪುಟ ೩

೮. ಅದೇ- ಪುಟ-೪

ಅತ್ಯಂತ ಆಕರ್ಷಕವಾಗಿ ನೋಡುಗರನ್ನು ವಿಸ್ಮಯಗೊಳಿಸುತ್ತಿದ್ದವು. ಇತ್ತೀಚೆಗೆ ರಾಸಾಯನಿಕ ವರ್ಣಗಳು ಬಹಳಷ್ಟು ಅಭಿವೃದ್ಧಿ ಕಂಡಿದ್ದರಿಂದ ವೈವಿಧ್ಯಮಯ ತೈಲವರ್ಣಗಳು ಮಾರುಕಟ್ಟೆಯಲ್ಲಿ ಲಭ್ಯವಿರುವುದರಿಂದ ಗಾಜಿನ ಕಲೆಯು ಹೊಸ ಅಧ್ಯಾಯದತ್ತ ಸಾಗಿದೆ.

| ಅ.ನಂ | ಒಣಗುವ ತೈಲ | ಉತ್ಪಾದಿಸುವ ಮುಖ್ಯ ದೇಶಗಳು | ಪ್ರಮುಖ ಉಪಯೋಗಗಳು |
|---|---|---|---|
| ೦೧ | ಅಗಸೆ | ಅರ್ಜಂಟೈನಾ, ಭಾರತ, ಉತ್ತರ ಅಮೇರಿಕಾ, ರಷ್ಯಾ | ಪೈಂಟ್ಸ್ ವಾರ್ನಿಷ್, ಲಿನೋಲಿಯಂ, ಅಚ್ಚು ಮಾಡುವ |
| ೦೨ | ಪೆರಿಲ್ಲಾ | ಚೀನಾ, ಕೋರಿಯಾ, ಜಪಾನ, ಭಾರತ | ಪೈಂಟ್ಸ್ ಮತ್ತು ವಾರ್ನಿಷ್ |
| ೦೩ | ಟಂಗೆ | ಜೀನಾ, ಜಪಾನ, ಅಮೇರಿಕಾ, ಸಂಯುಕ್ತ ಸಂಸ್ಥೆಗಳು | ಪೈಂಟ್ಸ್ ಮತ್ತು ವಾರ್ನಿಷ್ |
| ೦೪ | ಆಮ್ಲಿಸಿಕಾ | ಬ್ರಾಜಿಲ್ | ಪೈಂಟ್ಸ್ ಮತ್ತು ವಾರ್ನಿಷ್ |

ಗಾಜಿನ ಚಿತ್ರಗಳ ರಚನೆಯಲ್ಲಿ ಪ್ರಧಾನವಾಗಿ ಕಪ್ಪು, ಕೆಂಪು, ಹಳದಿ, ನೀಲಿ, ಹಸಿರು, ಬಿಳಿಯಂತಹ ಪ್ರಾಥಮಿಕ ವರ್ಗದ ಬಣ್ಣಗಳು ಕಂಡುಬರುತ್ತವೆ. ಇಲ್ಲಿ ಕಪ್ಪು ವರ್ಣವು ಚಿತ್ರದಲ್ಲಿ ರೇಖೆ ಬರೆಯಲು ಉಪಯೋಗಿಸಲಾಗುತ್ತದೆ. ಗಾಜಿನ ಚಿತ್ರಗಳಲ್ಲಿ ಕಪ್ಪು ಬಣ್ಣದ ರೇಖೆಗಳದೇ ಪ್ರಾಧಾನ್ಯ ಪಾತ್ರವಾಗಿದೆ. ಇನ್ನುಳಿದ ವರ್ಣಗಳನ್ನು ನೇರವಾಗಿಯೂ ಬಳಸಿದ್ದಾರೆ. ಹಾಗೂ ಬೇರೆ ಬೇರೆ ವರ್ಣಗಳನ್ನು ಬೆರೆಸಿ ದ್ವಿತೀಯ ವರ್ಗದ ಬಣ್ಣಗಳನ್ನು ಈ ಚಿತ್ರಕಾರರು ಬಳಸಿದ್ದಾರೆ. ಕರ್ನಾಟಕದಲ್ಲಿ ಲಭ್ಯವಿರುವ ಗಾಜಿನ ಚಿತ್ರಗಳು ಜಲ ಹಾಗೂ ತೈಲವರ್ಣಗಳಿಂದ ಚಿತ್ರಿತಗೊಂಡಿವೆ.

**ಕಪ್ಪು ಬಣ್ಣ**

ಕಪ್ಪು ಬಣ್ಣವನ್ನು ನೈಸರ್ಗಿಕವಾಗಿಯೂ ಹಾಗೂ ರಾಸಾಯನಿಕವಾಗಿಯೂ ಪಡೆದು ಕೊಳ್ಳಬಹುದಾಗಿದೆ. ಇದರ ತಯಾರಿಕೆಯ ಕುರಿತು ಅನೇಕ ಆಧಾರಗಳು ದೊರೆಯುತ್ತವೆ. 'ಮಾನಸೋಲ್ಲಾಸದಲ್ಲಿ' ಕಪ್ಪು ವರ್ಣವನ್ನು ದೀಪದ ಕಡ್ಡಿಯಿಂದ ತಯಾರಿಸಬಹುದು ಎಂದು ಹೇಳುತ್ತದೆ. ಶಿಲ್ಪ ರತ್ನದಲ್ಲಿ ಕಪ್ಪು ವರ್ಣವನ್ನು ಮಣ್ಣಿನ ಪಾತ್ರೆಗೆ ಆಕಳ ಸಗಣಿಯನ್ನು ಸಾರಿಸಿ ಒಣಗಿದ ನಂತರ ಎಣ್ಣೆ ಹಾಕಿ ದೊಡ್ಡ ದೀಪವನ್ನು ಹೊತ್ತಿಸಿ ಆ ಪಾತ್ರೆಯನ್ನು ದೀಪದ ಮೇಲೆ ಬೋರಲಾಗಿ ಇಡಬೇಕು. ಇದರಿಂದ ದೀಪದ ಕಾಡಿಗೆಯು ಸಂಗ್ರಹವಾಗುತ್ತದೆ. ಈ ಕಾಡಿಗೆಗೆ ಬೇವಿನ ಗಿಡದ ರಸವನ್ನು ಬೆರೆಸಿ ಕಪ್ಪು ಬಣ್ಣವನ್ನು ತಯಾರಿಸಲಾಗುತ್ತಿದೆ.

ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಕಪ್ಪು ವರ್ಣವನ್ನು ತಯಾರಿಸುವ ರೀತಿಯು ಅನೇಕ ಬಗೆಯಿಂದ ತಿಳಿದುಬರುತ್ತದೆ. ಬೆಳಗಾಂವಿ ಭಾಗದಲ್ಲಿ ಬರಗ-ರಾಗ, ಹೊನಗನ್ನೆ, ಮರವರಿಕೆ ಮಣಿ, ತುಂಬೆ ಹಾಗಲಕಾಯಿ ಎಲೆಯ ರಸ, ಚಪ್ಪರದ ರಸ, ಕಿರುಗೋಣೆ ಸೊಪ್ಪು, ಹಚ್ಚೆಗಿಡದ

ಸೊಪ್ಪು ಇತ್ಯಾದಿಗಳಿಂದ ಕಪ್ಪು ಬಣ್ಣವನ್ನು ಪಡೆಯುತ್ತಿದ್ದರು. ಬಿಜಾಪೂರ, ಬಾಗಲಕೋಟೆ, ಕಲಬುರ್ಗಿ, ಬೀದರ ಭಾಗದಲ್ಲಿ ಜೋಳದ ತೆನೆಯ ಕಾಡಿಗೆಯಿಂದ ಕಪ್ಪು ವರ್ಣವನ್ನು ತಯಾರಿಸುತ್ತಾರೆ. ಧಾರವಾಡ, ಕಾರವಾರದ ಕಡೆಗೆ ಔಡಲ ಎಣ್ಣೆ, ಅರಿಸಿನ ಪುಡಿ ಮಿಶ್ರಣ ಮಾಡಿ ಇದಕ್ಕೆ ದೀಪದ ಕಪ್ಪು ಕಾಡಿಗೆಯ ಪುಡಿಯನ್ನು ಬೆರೆಸಿ ಹಸಿರು ಮಿಶ್ರಿತ ಕಪ್ಪು ಬಣ್ಣವನ್ನು ತಯಾರಿಸುವರು.

ಬಳ್ಳಾರಿಯ ಕಡೆಗೆ ಕಪ್ಪು ಬಣ್ಣವನ್ನು ಈ ರೀತಿಯಾಗಿ ತಯಾರಿಸುವರು. ಇವರು ಹೊಸಗಡಿಗೆಯ ಕಂಠವನ್ನು ಒಡೆದು ಅದರ ಒಳಭಾಗಕ್ಕೆ ಹಚ್ಚೆಸೊಪ್ಪು, ಒಣ ಅಂಚರಿಕೆ ಸೊಪ್ಪು, ಅರಿಷಿಣಗಳನ್ನು ಸಮನಾಗಿ ಕೂಡಿಸಿ ಕುಟ್ಟಿ ನೀರು ಬೆರೆಸಿ ಮಂದವಾದ ದ್ರಾವಣವನ್ನು ಲೇಪಿಸಿ ಒಳ್ಳೆಣ್ಣೆಯ ಅಥವಾ ಔಡಲೆಣ್ಣೆಯ ದೀಪದ ಕುಡಿಯಿಂದ ಕಾಡಿಗೆಯನ್ನು ಸಂಗ್ರಹಿಸುತ್ತಾರೆ. ಈ ಮಿಶ್ರಣದಿಂದ ಒಳ್ಳೆಯ ಮಂದವಾದ ಕಪ್ಪು ವರ್ಣ ತಯಾರಾಗುತ್ತದೆ. ದಕ್ಷಿಣ ಕನ್ನಡದ ಭಾಗದಲ್ಲಿ ವಿಳ್ಳೆದೆಲೆಯ ರಸ ಹಾಗೂ ಸಗಣಿಯನ್ನು ಸೇರಿಸಿ ಪಾತ್ರೆಗೆ ಬಳಸಿದ್ದು ದೀಪದ ಕಾಡಿಗೆಯಿಂದ ಕಪ್ಪು ಬಣ್ಣವನ್ನು ತಯಾರಿಸಲಾಗುತ್ತದೆ.

ಕರ್ನಾಟಕದ ಗ್ರಾಮೀಣ ಭಾಗಗಳಲ್ಲಿ ವಿವಿಧ ಮೂಲಗಳಿಂದ ಕಪ್ಪು ಬಣ್ಣಗಳನ್ನು ತಯಾರಿಸಲಾಗುತ್ತದೆ. ಅವರೆ ಸೊಪ್ಪು, ನೆಲ್ಲಿ ಸೊಪ್ಪು, ವಿಳ್ಳೆದೆಲೆ ರಸ, ಹಾಗಲ ಸರ, ಚಪ್ಪರದವರೇ ರಸ ಮುಂತಾದವುಗಳನ್ನು ಮಣ್ಣಿನ ಪಾತ್ರೆಗೆ ಸವರಿ ದೀಪದ ಕಾಡಿಗೆಯಿಂದ ಕಪ್ಪು ಬಣ್ಣವನ್ನು ತಯಾರಿಸಲಾಗುತ್ತಿತ್ತು. ನೇಯ್ಗೆ ಕಲೆಯಲ್ಲಿ ನೇಕಾರರು ನೂಲಿಗೆ ಬಣ್ಣ ಹಾಕಲು ನೈಸರ್ಗಿಕವಾಗಿ ತಯಾರಿಸುವ ಕಪ್ಪು ಬಣ್ಣವನ್ನು ಬಳಸುವರು. ಈ ಕಪ್ಪು ಬಣ್ಣಗಳ ತಯಾರಿಕೆ ಕುರಿತು ಸಾಕಷ್ಟು ಮಾಹಿತಿಯನ್ನು ಡಾ. ಎಸ್. ಸಿ. ಪಾಟೀಲ ಅವರು ನೀಡಿದ್ದಾರೆ.[೯] ಕಪ್ಪು ವರ್ಣವನ್ನು ಗಾಜಿನ ಚಿತ್ರಕಲೆಯಲ್ಲಿ ಬಾಹ್ಯರೇಖೆ ಹಾಕಲು, ಕೂದಲು ಬರೆಯಲು ಕಣ್ಣು, ಹುಬ್ಬು ಹಾಗೂ ಬೇಕಾದಲ್ಲಿ ಚಿತ್ರದ ಹಿನ್ನೆಲೆಗೆ ಕಪ್ಪು ಬಣ್ಣ ತುಂಬಲು ಕಲಾವಿದರು ಬಳಸಿದ್ದಾರೆ.

**ಬಿಳಿ ವರ್ಣ**

ಬಿಳಿವರ್ಣವನ್ನು ಗಾಜಿನ ಚಿತ್ರಕಾರರು ವಿಪುಲವಾಗಿ ಬಳಸಿದ್ದಾರೆ. ಈ ವರ್ಣವನ್ನು ಬೇರೆ ಬೇರೆ ಮೂಲಗಳಿಂದ ತಯಾರಿಸಲಾಗುತ್ತಿದೆ. ಬಿಳಿಮಣ್ಣು ಶಂಖದ ಚಿಪ್ಪಿನಿಂದ ಬಿಳಿ ವರ್ಣವನ್ನು ತಯಾರಿಸುತ್ತಿದ್ದರು. ಬಿಳಿವರ್ಣದಲ್ಲಿ ಬಂಗಾರದ ಬಿಳಿ, ಆನೆದಂತದ ಬಿಳಿ, ಗಂಧದ ಬಿಳಿ, ಶರದೃತುವಿನ ಮೋಡದ ಬಿಳಿ ಮತ್ತು ಚಂದಿರನ ಬಿಳಿ ಎಂದು ಐದು ವಿಧದ ಬಿಳಿ ವರ್ಣಗಳಿವೆ. ಶಾಸ್ತ್ರ ಗ್ರಂಥಗಳಲ್ಲಿಯೂ ಬಿಳಿವರ್ಣದ ಕುರಿತು ಅನೇಕ ವಿವರಣೆಗಳನ್ನು ನೀಡಿರುವುದು ಕಂಡು ಬರುತ್ತವೆ.

ಕಶ್ಯಾಪ ಶಿಲ್ಪಶಾಸ್ತ್ರದ 'ವರ್ಣ ಸಂಸ್ಕಾರ ಲಕ್ಷಣಂ' ಎಂಬ ಅಧ್ಯಾಯದಲ್ಲಿ ಬಿಳಿವರ್ಣದ ವೈವಿಧ್ಯತೆಯ ಕುರಿತು ವಿವರಗಳಿವೆ. ಬಿಳಿವರ್ಣದಲ್ಲಿ ಶ್ವೇತ, ಶುಕ್ಲ, ಧವಳ, ಅವಧಾತ ಎಂದು ನಾಲ್ಕು ಬಗೆಗಳಿವೆ. ಶ್ವೇತ ವರ್ಣದಲ್ಲಿ ಮತ್ತೇ 'ಮುಕ್ತಾಭ, 'ವರ್ಣಾಭ' ಎಂಬ ಎರಡು ಬಗೆಗಳಿವೆ.

೯. ಡಾ. ಎಸ್. ಸಿ. ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪುಟ ೮೯, ೯೦

ಶಂಖದ ಬಣ್ಣದೊಂದಿಗೆ ಸಮವಾಗಿರುವ ಬಣ್ಣವನ್ನು ಶುಕ್ಲವರ್ಣವೆಂದು ಕರೆಯುವರು. ಬೆಳ್ಳಿಯ ವರ್ಣದೊಂದಿಗೆ ಸಮಾನವಾದುದನ್ನು 'ರಜತ್' ಎಂದೂ, ಹಸುವಿನಂತೆ ಬಣ್ಣವುಳ್ಳದ್ದನ್ನು 'ಅವಧಾತ' ಎಂದು ಬಿಳಿವರ್ಣದ ಕುರಿತು ತಿಳಿಸುತ್ತದೆ. ಅಲ್ಲದೇ ಬಿಳಿವರ್ಣದಲ್ಲಿ 'ಶುಕ್ಲ' ಮತ್ತು 'ವಳಕ್ಷ'ಎಂದು ಎರಡು ಪ್ರಭೇದಗಳಿದ್ದು ಶಂಖದ ಶಂಖದ ಬಿಳುಪು, ಹಸುವಿನ ಹಾಲಿನ ಬಿಳುಪು, ವಜ್ರದ ಬಿಳುಪುಗಳು 'ವಳಕ್ಷ; ಬಿಳುಪುಗಳಾಗಿವೆ. ಹಾಗೆಯೇ ಹಳದಿ ಛಾಯೆಯ ಬಿಳಿ, ಹಂಸ ಪಕ್ಷಿಯ ಬಿಳಿ, ಕಮಲದ ಹೂವಿನ ಬಿಳಿ ಎಂದೂ ಮೂರು ಪ್ರಕಾರದ ಬಿಳಿ ಬಣ್ಣಗಳು ಪ್ರಾಚೀನ ಸಾಹಿತ್ಯ ಕೃತಿಯಲ್ಲಿ ಉಲ್ಲೇಖಿಸಿದ್ದು ತಿಳಿಯುತ್ತದೆ.

'ಹರ್ಷಚರಿತ' ದಲ್ಲಿ ಆನೆ ದಂತದ ಬಿಳಿ, ಹಾಲಿನ ಬಿಳಿ, ಶಂಖದ ಬಿಳಿ ಮತ್ತು ಕೇದಗಿ ಹೂವಿನ ಬಿಳಿ ಎಂದು ನಾಲ್ಕು ಬಗೆಯಲ್ಲಿ ಹೇಳಲಾಗಿದೆ. ಬಿಳಿಬಣ್ಣವನ್ನು ಗಾಜಿನ ಚಿತ್ರಕಾರರು ಆಕೃತಿಗಳ ಮೈ ಬಣ್ಣಕ್ಕೆ ಚಿತ್ರದ ಹಿನ್ನೆಲೆಗೆ ಹಾಗೂ ಪರದೆಗಳಿಗೆ ಬಳಸಿದ್ದಾರೆ. ಈ ಬಣ್ಣವನ್ನು ಬೇರೆ ಮೂಲ ಬಣ್ಣಗಳೊಂದಿಗೆ ಬೆರೆಸಿ ವಿವಿಧ ಬಣ್ಣಗಳ ಛಾಯೆಯಾಗಿ ಬಳಸಿದ್ದಾರೆ.[೧೦]

**ಕೆಂಪು ವರ್ಣ**

ಕೆಂಪು ವರ್ಣವು ಗಾಜಿನ ಚಿತ್ರಕಲೆಯಲ್ಲಿ ಹೆಚ್ಚು ಪ್ರಮಾಣದಲ್ಲಿ ಬಳಕೆಯಾಗಿರುವುದು ಕಂಡು ಬರುತ್ತದೆ. ಮುಖ್ಯವಾಗಿ ಡ್ರ್ಯಾಪರಿ, ಆಕೃತಿಗಳ ಉಡುಗೆ-ಉಡುಗೆಗಳಲ್ಲಿ ಹಾಗೂ ಹಿನ್ನೆಲೆಗೆ ಚಪ್ಪಟೆಯಾಗಿ ಹಾಗೂ ವರ್ಣಛಾಯೆಯನ್ನಾಗಿ ಬಳಸಿದ್ದಾರೆ. ಬಹುತೇಕ ಟೆಂಪರಾದಂತಹ ಕೆಂಪು ವರ್ಣಗಳನ್ನೇ ಈ ಕಲಾವಿದರು ಉಪಯೋಗಿಸಿದ್ದಾರೆ. ಕಬ್ಬಿಣದ ಆಕ್ಸೈಡ್, ಮ್ಯಾಂಗನೀಸ್, ಹೆಮಟೈಟ್‌ಗಳ ಸಂಯುಕ್ತಗಳಿಂದ ಕೆಂಪು ಬಣ್ಣವನ್ನು ಪಡೆಯುತ್ತಿದ್ದರು. ಕೆಂಪು ಮಣ್ಣು ಮತ್ತು ಕೆಂಪುಕಲ್ಲುಗಳಿಂದ ಈ ಬಣ್ಣವನ್ನು ತಯಾರಿಸುತ್ತಿದ್ದರು. ಶಿಲ್ಪ ರತ್ನದಲ್ಲಿ 'ಗೆರಿಶಾ' ಎಂಬ ಕೆಂಪು ಮಣ್ಣಿನ ಪುಡಿಯನ್ನು ಸ್ವಚ್ಛ ನೀರಿನೊಡನೆ ಮಿಶ್ರಣ ಮಾಡಿಕೊಂಡು ಒಂದು ದಿನದವರೆಗೆ ಬಸಿಯಲು ಬಿಟ್ಟು ತಳದಲ್ಲಿ ಸಂಗ್ರಹಗೊಂಡ ಮಂದ ಮಿಶ್ರಣದಲ್ಲಿ ವರ್ಣ ಬಂಧಕವನ್ನು ಬೆರೆಸಿ ಉಪಯೋಗಿಸಬೇಕು. ಸೀಸವನ್ನು ಕಾಯಿಸಿ ಅದರಿಂದ ಕೆಂಪು ಬಣ್ಣವನ್ನು ಪಡೆಯುತ್ತಿದ್ದರು. ಕಾಶ್ಯಪದಲ್ಲಿ ಹಳದಿ ಬಣ್ಣದ ಕಲ್ಲನ್ನು ಚನ್ನಾಗಿ ಕುಟ್ಟಿ ಪುಡಿ ಮಾಡಿಕೊಂಡು ಅದಕ್ಕೆ ಟೆಂಗಿನ ಕಾಯಿಯ ನೀರು ಬೆರೆಸಿ ಕಾಯಿಸಿದರೆ ಕೆಂಪುಬಣ್ಣ ತಯಾರಾಗುತ್ತದೆ.

'ಮ್ಯಾಡರ್' ಎಂಬ ಸಸ್ಯದಿಂದಲೂ ಕೆಂಪು ವರ್ಣವನ್ನು ಪಡೆಯಲಾಗುತ್ತಿತ್ತು. ಮ್ಯಾಡರ್ ಎಂಬ ಸಸ್ಯದ ಬೇರಿನಿಂದ ದೊರೆಯುತ್ತಿದ್ದ ಕೆಂಪು ವರ್ಣಕ್ಕಾಗಿ ಈ ಸಸ್ಯವನ್ನು ಫ್ರಾನ್ಸ್, ಹಾಲೆಂಡ್, ಇಟಲಿ, ಟರ್ಕಿ, ಈಜಿಪ್ತ, ಪರ್ಶಿಯಾ ಹಾಗೂ ಭಾರತದಲ್ಲಿ ವಿಪುಲವಾಗಿ ಸಾಗುವಳಿ ಮಾಡುತ್ತಿದ್ದನ್ನು ಪ್ರಾಚೀನ ಕಾಲದಿಂದಲೇ ತಿಳಿದು ಬರುತ್ತದೆ. ಇಂಗಳಿಕದಿಂದಲೂ ಕೆಂಪು ವರ್ಣವನ್ನು ಪಡೆಯಲಾಗುತ್ತಿದ್ದು, ಇದನ್ನು ಚನ್ನಾಗಿ ಕುಟ್ಟಿ ಅದರ ಪುಡಿಯನ್ನು ನೀರಿನಲ್ಲಿ ಕಲಕಿ ನಂತರ ಅದನ್ನು ಬೇವಿನ ಅಂಟಿನೊಂದಿಗೆ ಬೆರೆಸಿ ಈ ಬಣ್ಣವನ್ನು ತಯಾರಿಸುತ್ತಿದ್ದರು. ಹೀಗೆ ಅನೇಕ ಮೂಲಗಳಿಂದ ಈ ಕೆಂಪು ಬಣ್ಣವನ್ನು ತಯಾರಿಸಿ ಚಿತ್ರ ರಚನೆ ಮಾಡುತ್ತಿದ್ದರು.[೧೧]

---

೧೦ ಡಾ. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕ ಭಿತ್ತಿಚಿತ್ರಕಲೆ (ಅಪ್ರಕಟಿತ ಪಿಹೆಚ್ ಡಿ ಪ್ರಬಂಧ). ಪುಟ ೧೧೫

೧೧. ಅದೇ- ಪುಟ ೧೨೮

**ಹಸಿರು ವರ್ಣ**

ಹಸಿರು ವರ್ಣವನ್ನು ನೀಲಿ ಮತ್ತು ಹಳದಿಯ ಮೂಲ ವರ್ಣಗಳಿಂದ ಪಡೆಯಲಾಗುತ್ತಿತ್ತು. ಈ ಬಣ್ಣವನ್ನು ಸಸ್ಯಗಳ ಮೂಲದಿಂದ ಹಾಗೂ ಖನಿಜಗಳ ಮೂಲದಿಂದ ಆ ಕಲಾವಿದರು ಹಸಿರು ಬಣ್ಣವನ್ನು ತಯಾರಿಸುತ್ತಿದ್ದರು. ಟೆರ್ರಾವರ್ಟ, ಮಲಟೈಟ್, ವೆಡ್ ರ್ಮೊಂಟಾನಾ, ಕ್ರಾಯಿ ಸೋಕೋಲ್ಲಾ ಮತ್ತು ಅಜುರೈಟ್ ಖನಿಜಗಳಿಂದ ಹಸಿರು ಬಣ್ಣವನ್ನು ತಯಾರಿಸುತ್ತಿದ್ದುದು ತಿಳಿದು ಬರುತ್ತದೆ. ಅದೇ ರೀತಿ ಅಳ್ಳಿಕಾಯಿ, ಕಾಕಡಸಿಂಬಿಗಳನ್ನು ಉಪಯೋಗಿಸಿ ಹಸಿರು ಬಣ್ಣವನ್ನು ತಯಾರಿಸುತ್ತಿದ್ದರು. ಹಸಿರು ವರ್ಣದಲ್ಲಿ ಗಿಳಿ ಹಸಿರು, ಪ್ಲಾಂಟೇನ್ ಎಲೆಯ ಹಸಿರು, ಪಚ್ಚೆ ಹಸಿರು, ಎಂಬ ಅನೇಕ ವಿಧಗಳನ್ನು ಕುರಿತು ನಮ್ಮ ಪ್ರಾಚೀನ ಶಾಸ್ತ್ರ ಗ್ರಂಥಗಳು ತಿಳಿಸುತ್ತವೆ.[೧೨] ಈ ರೀತಿಯಲ್ಲಿ ತಯಾರಿಸಲಾದ ಹಸಿರು ಗಾಜಿನ ಚಿತ್ರ ರಚನೆಯಲ್ಲಿ ಬಳಸುತ್ತಿದ್ದರು.

**ನೀಲಿ ವರ್ಣ**

ನೀಲಿ ಬಣ್ಣವನ್ನು ನೈಸರ್ಗಿಕ ಮೂಲವಾಗಿ ಪ್ರಾಚೀನ ಕಲಾವಿದರು ತಯಾರಿಸಿ ಉಪಯೋಗಿಸುತ್ತಿದ್ದ ವಿವರಗಳು ಅನೇಕ ರೀತಿಯಿಂದ ದೊರೆಯುತ್ತಿದೆ. ಇಂಡಿನೋ, ಫೆರಾ, ಎಂಬ ಸಸ್ಯದಿಂದ ನೀಲಿ ಬಣ್ಣವನ್ನು ತಯಾರಿಸಲಾಗುತ್ತಿತ್ತು. ನೀಲಿ ಕಲ್ಲು ಮತ್ತು ಮಣ್ಣುಗಳಿಂದಲೂ ಈ ಬಣ್ಣವನ್ನು ಪಡೆಯಲಾಗುತ್ತಿತ್ತು. ಈ ಬಣ್ಣ ತಯಾರಿಕೆಯಲ್ಲಿ 'ಲ್ಯಾಫೀಜ್‌ಲಾಜುಲಿ' ಎಂಬ ಖನಿಜವಸ್ತು ಪ್ರಮುಖವಾಗಿತ್ತು. ಪ್ರಾಚೀನ ಶಾಸ್ತ್ರಗಳಲ್ಲಿ ಈ ಲ್ಯಾಫೀಜ್‌ಲಾಜುಲಿ ಖನಿಜವನ್ನೇ 'ರಾಜಾವರ್ತ' ಎಂದು ಕರೆಯಲಾಗಿದೆ. ಲ್ಯಾಫೀಜ್‌ಲಾಜುಲಿ ಎಂಬ ಹರಳು ರೂಪದ ವರ್ಣದ್ರವ್ಯವನ್ನು ಪರ್ಶಿಯಾದಿಂದ ಭಾರತಕ್ಕೆ ಆಮದು ಮಾಡಿಕೊಳ್ಳಲಾಗುತ್ತಿತ್ತು. ಜರ್ಮನದ ವಿಜ್ಞಾನಿ ಅಡೂಲ್ಫವಾನ್ ಎಂಬುವ ಮೊದಲ ಬಾರಿಗೆ ಕೃತಕ ನೀಲಿ ವರ್ಣ ತಯಾರಿಸಿದ ನಂತರ ಪ್ರಾಚೀನ ಪದ್ಧತಿಯ ವಿಧಾನದ ನೀಲಿ ಬಣ್ಣವನ್ನು ಬಳಸುವುದು ಕಡಿಮೆಯಾಯಿತು. ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಜನಪದ ಚಿತ್ರಕಲಾವಿದರು ನೀಲಿವರ್ಣವನ್ನು ತುಂಬೆ ಹೂವು ಮತ್ತು ಎಲೆಗಳನ್ನು ಬಳಸಿ ತಯಾರಿಸಿ ಕೊಳ್ಳುತ್ತಿದ್ದರು.[೧೩] ನೀಲಿ ಬಣ್ಣದ ಬಳಕೆ ಗಾಜಿನ ಚಿತ್ರಗಳಲ್ಲಿ ಹೆಚ್ಚು ಹೆಚ್ಚು ಪ್ರಮಾಣಗಳಲ್ಲಿ ಕಾಣಸಿಗುತ್ತದೆ. ನೀಲಿಯ ವಿವಿಧ ವರ್ಣಛಾಯೆಯನ್ನು ಗಾಜಿನ ಚಿತ್ರಗಳಲ್ಲಿ ಕಾಣಬಹುದಾಗಿದೆ.

**ಹಳದಿ ವರ್ಣ**

ಗಾಜಿನ ಚಿತ್ರಕಾರರು ಚಿತ್ರ ರಚನೆಯಲ್ಲಿ ಹಳದಿ ಬಣ್ಣವನ್ನು ಬಳಸಿದ್ದು ಕಂಡು ಬರುತ್ತದೆ. ಈ ಹಳದಿ ಬಣ್ಣವನ್ನು ವಿವಿಧ ಛಾಯೆಯಾಗಿ ಬಳಸಿದ್ದಾರೆ. ಹಳದಿಯ ವರ್ಣವನ್ನು ಬೇರೆ ಬೇರೆ ಮೂಲಗಳಿಂದ ಪಡೆದುಕೊಂಡು, ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿದ್ದಾರೆ. ಇದರ ಕುರಿತು ಅನೇಕ ವಿವರಗಳು ದೊರೆಯುತ್ತವೆ. ಹಳದಿ ವರ್ಣವು ಆಕರ್ಷಕ ವರ್ಣವಾಗಿರುವುದರಿಂದ ಕಲಾವಿದರು ಚಿತ್ರರಚನೆಯಲ್ಲಿ ಹೆಚ್ಚು ಪ್ರಮಾಣದಲ್ಲಿ ಬಳಸಿರುವುದು ಕಂಡು ಬರುತ್ತದೆ.

೧೨. ಡಾ. ಯಾದಪ್ಪ ಪರದೇಶಿ ; ಉತ್ತರ ಕರ್ನಾಟಕ ಭಿತ್ತಿಚಿತ್ರಕಲೆ (ಅಪ್ರಕಟಿತ ಪಿಹೆಚ್ ಡಿ ಪ್ರಬಂಧ), ಪುಟ ೧೯೮

೧೩. ಅದೇ- ಪುಟ ೨೦೧

'ಶಿಲ್ಪರತ್ನ' ದಲ್ಲಿ ಹಳದಿವರ್ಣವನ್ನು ವಿಶಿಷ್ಟ ಸಸ್ಯ ಪರ್ವತಗಳಲ್ಲಿ ನದಿಯ ದಂಡೆಗಳಲ್ಲಿ ದೊರೆಯುವ ವಸ್ತುಗಳನ್ನು ಸಂಗ್ರಹಿಸಿ ಶುದ್ಧ ನೀರಿನಿಂದ ತೊಳೆದು ಅದನ್ನು ಪುಡಿ ಮಾಡಿ ನೀರಲ್ಲಿ ನೆನೆಹಾಕಿ ಅದರಿಂದ ಬರುವ ವರ್ಣ ದ್ರವ್ಯವನ್ನು ಶೇಖರಿಸಿ ಅಂಟು ದ್ರಾವಕವನ್ನು ಬೆರೆಸಿ ಸಿದ್ಧಪಡಿಸಲಾದ ವರ್ಣವು ಹಳದಿ ವರ್ಣವಾಗಿದೆ. ವಿಷ್ಣುಧರ್ಮೋತ್ತರದಲ್ಲಿ ಹಳದಿವರ್ಣಕ್ಕಾಗಿ ಹರಿದಾಳವನ್ನು ಹೇಳಿದೆ, 'ಕಾಶ್ಯಪ ಶಿಲ್ಪ ಶಾಸ್ತ್ರ'ದಲ್ಲಿ ಸ್ವರ್ಣ, ಪಿಶಂಗ, ಪೀತ ಹರಿತ ಎಂದು ನಾಲ್ಕು ಬಗೆಯ ಹಳದಿಯ ಕುರಿತು ಹೇಳಲಾಗಿದೆ. ಬಂಗಾರದಂತೆ ಇರುವ ಅರಿಷಿಣ ಬೇರಿನ ಬಣ್ಣವುಳ್ಳದ್ದು ಹರಿತ ವೆಂದೂ ಅರಿದಾಳದ ಬಣ್ಣದ ಹಳದಿಯನ್ನು ಪೀತವೆಂದೂ ಹೇಳಲಾಗಿದೆ. ಅಲ್ಲದೇ ಹಳದಿವರ್ಣದಲ್ಲಿ ಇನ್ನೂ ಎರಡು ವಿಧಗಳನ್ನು ಗುರುತಿಸಲಾಗಿದೆ ಅವು ಹರಿತ ಮತ್ತು ಪೀತವೆಂದು ಮಣಿಶಿಲೆಯ ಬಣ್ಣವೂ, ಅರಿದಾಳದ ವರ್ಣವೂ ಹರಿತವೆಂದೂ, ಹಳದಿ ವರ್ಣಕ್ಕೆ ಸೇರಿದರೆ ಅರಿಷಿಣ ಹಳದಿ ಮತ್ತು ಕುಂಕುಮ ಕೇಸರಿಯ ಹಳದಿ ಛಾಯೆಯು ಪೀತವೆನಿಸಿ ಕೊಳ್ಳುತ್ತದೆ. ಉತ್ತರ ಕರ್ನಾಟಕದ ಕೆಲವು ನೇಕಾರರು ಹಳದಿ ಬಣ್ಣ ತಯಾರಿಸಲು ಕಪಿಲದ ಬೀಜಗಳನ್ನು ಬಳಸುತ್ತಾರೆ. [೧೪]

**ಮಿಶ್ರ ವರ್ಣಗಳು**

ಮೂಲವರ್ಣಗಳಾದ ಕೆಂಪು, ನೀಲಿ, ಹಳದಿ, ಕಪ್ಪು, ಬಿಳಿ ವರ್ಣಗಳನ್ನು ಒಂದನ್ನೊಂದು ಸೇರಿಸಿ ಅವುಗಳಿಂದ ಉಂಟಾಗುವ ದ್ವಿತೀಯ, ತೃತೀಯ ಹಾಗೂ ಚತುರ್ಥ ವರ್ಗಗಳ ಬಣ್ಣಗಳನ್ನು ಬಳಸಿದ್ದು ಗಾಜಿನ ಚಿತ್ರಗಳಲ್ಲಿ ಕಾಣುತ್ತೇವೆ. ಈ ಕಲೆಯ ಕಲಾವಿದರೂ ಯಾವ ಬಣ್ಣಕ್ಕೆ ಇನ್ನೊಂದು ಬಣ್ಣವನ್ನು ಎಷ್ಟು ಪ್ರಮಾಣಗಳಲ್ಲಿ ಮಿಶ್ರಣ ಮಾಡಿದರೆ ಯಾವ ಛಾಯೇ ಉಂಟಾಗುತ್ತದೆ ಎಂಬುದನ್ನು ಚನ್ನಾಗಿ ತಿಳಿದವರಾಗಿದ್ದರು.

ದೇವಾನು ದೇವತೆಗಳ ಆಕೃತಿಗಳಿಗೆ, ಸಾಮಾನ್ಯ ಸ್ತ್ರೀಪುರುಷರ ಆಕೃತಿಗಳಿಗೆ ಚಿತ್ರಗಳಲ್ಲಿ ಬಳಸಲಾದ ಪ್ರಾಣಿಗಳಿಗೆ, ವಿವಿಧ ವಸ್ತುಗಳಿಗೆ ಮತ್ತು ಪ್ರಕೃತಿಗೆ ಹಾಗೂ ಚಿತ್ರದ ಹಿನ್ನೆಲೆಗೆ, ಡ್ರ್ಯಾಪರಿಗೆ, ವೇಷಭೂಷಣಗಳಿಗೆ, ಆಭರಣಗಳಿಗೆ ಹೊಂದಾಣಿಕೆಯಾಗುವಂತೆ ವರ್ಣಗಳನ್ನು ಬಳಸಿರುವರು. ಆಕೃತಿಗಳ ಮೈಬಣ್ಣಗಳನ್ನು ಬಿಳಿವರ್ಣವು ಪ್ರಧಾನವಾಗಿದ್ದುಅದಕ್ಕೆ ತಕ್ಕದಾದ ಹಳದಿ ಮಿಶ್ರಿತ ಬಿಳಿಯ ಬಣ್ಣ, ಗುಲಾಬಿ ಮಿಶ್ರಿತ ಬಿಳಿಯ ಬಣ್ಣ. ಕಂದು ಮಿಶ್ರಿತ ಬಿಳಿಯ ಬಣ್ಣ, ಹಸಿರು ಮಿಶ್ರಿತ ಬಿಳಿಯ ಬಣ್ಣಗಳನ್ನು ಅತ್ಯಂತ ಸೊಗಸಾಗಿ ಲೇಪಿಸಿದ್ದಾರೆ. ರಾಮನ ಪಟ್ಟಾಭಿಷೇಕ ಚಿತ್ರಗಳಲ್ಲಿ ರಾಮನನ್ನು ಹೆಚ್ಚಾಗಿ ಹಸಿರು ಮಿಶ್ರಿತ ಬಣ್ಣವನ್ನು ಬಳಸಿದ್ದು ಬಹು ಸಂಖ್ಯೆಯ ಗಾಜಿನ ಚಿತ್ರಗಳಲ್ಲಿ ಕಾಣುತ್ತೇವೆ.

'ಕೃಷ್ಣನ ಆಕೃತಿ'ಗೆ ನೀಲಿ ಮಿಶ್ರಿತ ಬಿಳಿ ಬಣ್ಣಗಳನ್ನು ಬಳಸಿದ್ದು ಕೆಲವು ಚಿತ್ರಗಳಲ್ಲಿ ಕಾಣುತ್ತೇವೆ. ಇನ್ನೂ ಕೆಲವು ಚಿತ್ರಗಳಲ್ಲಿ ಕೃಷ್ಣನನ್ನು ಸಾಮಾನ್ಯರ ಮೈಬಣ್ಣದ ಕಲ್ಪನೆ ನೀಡಿದ್ದಾರೆ. ಕೆಂಪು, ಕಂದು, ಹಳದಿ, ಗುಲಾಬಿ ಮಿಶ್ರಿತ ಬಿಳಿಯ ಬಣ್ಣವನ್ನು ಬಳಸಿದ್ದಾರೆ. ಇಲ್ಲಿ ಗಮನಿಸಬೇಕಾದುದು ಎರಡು ವರ್ಣಗಳ ನಡುವಿನ ವರ್ಣಛಾಯೆಯನ್ನು ಮಾತ್ರ, ಯಾಕೆಂದರೆ ಎರಡು ವರ್ಣಗಳ

೧೪. ಡಾ ಯಾದಪ್ಪ ಪರದೇಶಿ : ಉತ್ತರ ಕರ್ನಾಟಕ ಭಿತ್ತಿಚಿತ್ರಕಲೆ (ಅಪ್ರಕಟಿತ ಪಿಹೆಚ್ ಡಿ ಪ್ರಬಂಧ). ಪುಟ ೩೧೫

ನಡುವಿನ ಮಿಶ್ರಣದಲ್ಲಿ ಯಾವುದೇ ರೀತಿಯ ಸಣ್ಣ ತೆಪೆಗಳು (Stroke) ಕಾಣುವುದಿಲ್ಲ. ಅಷ್ಟೊಂದು ಸೂಕ್ಷ್ಮತರವಾದ ಛಾಯೆಯನ್ನು ತಂದಿದ್ದಾರೆ. ಗಾಜಿನ ಮೇಲೆ ಈ ರೀತಿ ತರುವುದು ಕಷ್ಟ ಸಾಧ್ಯವಾದುದರಿಂದ ಆ ಕಲಾವಿದನ ತಾಳ್ಮೆ ಹಾಗೂ ಅನುಭವವು ಎದ್ದು ಕಾಣುತ್ತದೆ.

ಗಾಜಿನ ಚಿತ್ರದ ಹಿನ್ನೆಲೆಗೆ ಬಹುತೇಕ ಮೂಲವರ್ಣಗಳಾದ ನೀಲಿ, ಕೆಂಪು, ಹಳದಿ, ಕಪ್ಪು, ಬಿಳಿ, ಹಸಿರು ಬಣ್ಣಗಳನ್ನು ಏಕವರ್ಣವಾಗಿ, ಚಪ್ಪಟೆ (Flate Colours) ಯಾಗಿ ಬಳಸಿದ್ದಾರೆ. ಅದರಂತೆ ಆಕೃತಿಗಳ ಕೂದಲಿಗೆ (ಕೇಶ) ಬಾಹ್ಯರೇಖೆಗಳಿಗೆ, ಕಣ್ಣುಗಳಿಗೆ, ಚಪ್ಪಟೆಯಾಗಿ ಕಪ್ಪು ವರ್ಣಗಳನ್ನೇ ಬಳಸಿದ್ದಾರೆ. ಆಕೃತಿಗಳ ಉಡುಗೆ-ತೊಡುಗೆಗಳಿಗೆ ಚಪ್ಪಟೆಯಾಗಿಯೂ, ವರ್ಣಛಾಯೆಯಾಗಿಯೂ ಬಣ್ಣಗಳನ್ನು ಲೇಪನ ಮಾಡಿರುವರು. ಚಿತ್ರಗಳ ಹಿನ್ನೆಲೆಯ ಡ್ರ್ಯಾಪರಿ (ಪರದೆ) ಗಳಿಗೆ ಪ್ರಥಮವರ್ಗದ ಬಣ್ಣಗಳನ್ನು ವಿವಿಧ ಛಾಯೆಯ ಕಲ್ಪನೆಯನ್ನು ತಂದಿದ್ದಾರೆ.

ಗಾಜಿನ ಚಿತ್ರಕಾರರು ಬಣ್ಣಗಳನ್ನು ಚಪ್ಪಟೆಯಾಗಿ (೨ಡಿ) ಹಾಗೂ ದುಂಡುತನ ತರಲು ವಿವಿಧ ವರ್ಣ (೩ಡಿ) ಛಾಯೆಗಳಾಗಿ ಚಿತ್ರ ರಚನೆಯಲ್ಲಿ ತರಲು ಪ್ರಯತ್ನಿಸಿದ್ದಾರೆ.

ಮಿಶ್ರವರ್ಣಗಳ ಕುರಿತು ಮಾನಸೋಲ್ಲಾಸ ಹಾಗೂ ಶಿಲ್ಪರತ್ನಗಳಲ್ಲಿ ಸಾಕಷ್ಟು ವಿವರಗಳನ್ನು ನೀಡಿವೆ. ಮಾನಸೋಲ್ಲಾಸವು ಮಿಶ್ರವರ್ಣಗಳ ಕುರಿತು ಈ ರೀತಿ ವಿವರಿಸುತ್ತದೆ.

- ಇಂಗಳೀಕದ ಕೆಂಪು ಮತ್ತು ಶಂಖದ ಬಿಳಿ ಕೂಡಿದರೆ ಕೆಂಪು ಕಮಲದ ಹೂವಿನ ವರ್ಣ.
- ಲಾಕ್ಷಾರಸದ ಕೆಂಪು ಮತ್ತು ಶಂಖದ ಬಿಳಿ ಸೇರಿದರೆ ರಸ ಎಂಬ ಗಿಡದ ವರ್ಣವಾಗುವುದು.
- ಹಳದಿ ಮತ್ತು ಶಂಖದ ಬಿಳಿ ಸೇರಿದರೆ ಕೋರಸಾ ಎಂಬ ಗಿಡದ ವರ್ಣವಾಗುವುದು.
- ಮಾಸಲು ಕೆಂಪು ಮತ್ತು ಶಂಖದ ಬಿಳಿ ಸೇರಿದರೆ ಗೌರವ ವರ್ಣ
- ದೀಪದ ಕಪ್ಪು ಮತ್ತು ಶಂಖದ ಬಿಳಿ ಸೇರಿದಾಗ ಪಾರಿವಾಳದ ಬೂದು ವರ್ಣವಾಗುವುದು.
- ಬೂದು ವರ್ಣ ಮತ್ತು ರಾಜವರ್ತ ಸೇರಿದರೆ ಆತನೇ ಹೂವಿನ ಬಣ್ಣ ವಾಗುವುದು.
- ಇಂಡಿಗೋ ನೀಲಿ ಮತ್ತು ಹಳದಿ ವರ್ಣ ಸೇರಿದಾಗ ಹಸಿರು ವರ್ಣ ಬರುವುದು.
- ದೀಪದ ಕಪ್ಪು ಮತ್ತು ಮಾಸಲು ಕೆಂಪು ಸೇರಿಸಿದಾಗ ದಟ್ಟ ಕಂದು ಬಣ್ಣವಾಗುವುದು.
- ಲಾಕ್ಷಾರಸದ ಕೆಂಪು ಮತ್ತು ನೀಲಿ ಕೂಡಿಸಿದಾಗ ಪಾಟಲ ಎಂಬ ಕಂದು ವರ್ಣ ವಾಗುವುದು.
- ಲಾಕ್ಷಾರಸದ ಕೆಂಪು ಮತ್ತು ನೀಲಿಯನ್ನು ಕೂಡಿಸಿದಾಗ ದಟ್ಟ ಮಾವು ವರ್ಣವಾಗುವುದು. ಇದು ಜಂಬು ಹಣ್ಣಿನ (ನೀಲಲರಹಣ್ಣು) ವರ್ಣವಾಗುತ್ತದೆ.

'ಶಿಲ್ಪರತ್ನ'ದಲ್ಲಿ ಮಿಶ್ರವರ್ಣಗಳ ಕುರಿತು ಅನೇಕ ವಿವರಗಳನ್ನು ನೀಡುತ್ತದೆ.

ಈ ಕೆಳಗಿನಂತೆ ವಿವರಿಸಬಹುದು.

- ಬಿಳಿವರ್ಣ ಮತ್ತು ಕೆಂಪು ವರ್ಣ ಸೇರಿಸಿದಾಗ ಗೌರವ ವರ್ಣ ಉಂಟಾಗುವುದು.
- ಬಿಳಿವರ್ಣ, ದೀಪದ ವರ್ಣ ಮತ್ತು ಹಳದಿ ಈ ಮೂರು ವರ್ಣಗಳು ಸೇರಿದಾಗ ಸಾರ ಎಂಬ ಗಿಡದ ಹಳದಿ ಮಿಶ್ರಿತ ಬೂದು ವರ್ಣವಾಗುವುದು.
- ಬಿಳಿ ಮತ್ತು ಕಪ್ಪು ಸಮ ಪ್ರಮಾಣದಲ್ಲಿ ಕೂಡಿದಾಗ ಆನೆಯ ಬೂದು ಬಣ್ಣ ಬರುವುದು.
- ಕೆಂಪು ಮತ್ತು ಹಳದಿ ಸಮ ಪ್ರಮಾಣದಲಿ ಸೇರಿಸಿದಾಗ ಬಕುಳದ ಹಣ್ಣಿನ ವರ್ಣವಾಗುವುದು.
- ಹಳದಿಯು ಬಿಳಿಯ ಬಣ್ಣದ ಜೊತೆಗೆ ಭಾಗದಷ್ಟು ಪ್ರಮಾಣದಲ್ಲಿ ಬೆರೆತಾಗ ಹಳದಿ ಮಿಶ್ರಿತ ಬಿಳಿವರ್ಣ ಬರುವುದು.
- ಹಳದಿ ಮತ್ತು ಕಪ್ಪು ವರ್ಣಗಳು ಸಮ ಪ್ರಮಾಣದಲ್ಲಿ ಬೆರೆತಾಗ ಮನುಷ್ಯನ ದೇಹದ ವರ್ಣವಾಗುವುದು.
- ಹಳದಿ ವರ್ಣವು ಹೆಚ್ಚು ಪ್ರಮಾಣದ ನೀಲಿ ವರ್ಣದೊಂದಿಗೆ ಬೆರೆತಾಗ ಗಿಳಿಯ ರೆಕ್ಕೆಯ ವರ್ಣವಾಗುವುದು.
- ಲಾಕ್ಷಾರಸದ ಕೆಂಪು ಮತ್ತು ಕಪ್ಪು ಬೆರೆತಾಗ ಜಂಬುಫಲದ ಬಣ್ಣ ಉಂಟಾಗುವುದು.
- ಲಾಕ್ಷಾರಸದ ಕೆಂಪು ಮತ್ತು ಬಿಳಿ ಸಮ ಪ್ರಮಾಣದಲ್ಲಿ ಬೆರೆತಾಗ ಉಚ್ಛಕುಲದ ಜನರ ವರ್ಣವಾಗುವುದು.
- ಕಪ್ಪು ಮತ್ತು ನೀಲಿ ಬೆರೆತಾಗ ಕೂದಲಿನ ವರ್ಣವಾಗುವುದು.
- ನೀಲಿ ಮತ್ತು ಬಿಳಿ ಬೆರೆತರೆ ಹೊಗೆಯ ಬಣ್ಣ ಉಂಟಾಗುತ್ತದೆ.
- ಹಳದಿ ಮತ್ತು ನೀಲಿ ಕೂಡಿದರೆ ಹಸಿರು ವರ್ಣವಾಗುವುದು ಎಂದು ಹೇಳುತ್ತದೆ.[೧೫]

ಹೀಗೆ ನಮ್ಮ ಪ್ರಾಚೀನ ಶಾಸ್ತ್ರಗ್ರಂಥಗಳಲ್ಲಿ ಕಾವ್ಯಗಳಲ್ಲಿ ಹಾಗೂ ಜನಪದರಲ್ಲಿ ವರ್ಣಗಳ ತಯಾರಿಕೆ ಹಾಗೂ ಮಿಶ್ರವರ್ಣಗಳ ತಯಾರಿಕೆಯ ವಿವರಗಳನ್ನು ನೀಡುತ್ತವೆ. ಈ ವರ್ಣ ಪದ್ಧತಿಯನ್ನು ಪ್ರಾಚೀನ ಕಲಾವಿದರು ಚಾಚು ತಪ್ಪದೇ ಅನುಸರಿಸುತ್ತಿದ್ದರು ಮತ್ತು ಅನೇಕ ಪ್ರಯೋಗಗಳನ್ನು ಮಾಡುತ್ತಿದ್ದರು ಎಂಬುದಕ್ಕೆ ಈ ಮೇಲಿನ ಅಂಶಗಳೇ ನಿದರ್ಶನವೆನ್ನಬಹುದು.

**ಕುಂಚಗಳು**

ಯಾವುದೇ ಚಿತ್ರ ರಚನೆ ಮಾಡಬೇಕಾದರೆ ಬಣ್ಣಗಳ ತಯಾರಿಕೆ ಹಾಗೂ ಅವುಗಳ ಬಳಸುವ ವಿಧಾನವು ಎಷ್ಟು ಪ್ರಾಮುಖ್ಯವೋ ಅದೇ ರೀತಿ ಆ ಬಣ್ಣಗಳನ್ನು ಹಚ್ಚಲು ಬಳಸುವ ಕುಂಚಗಳು ಅಷ್ಟೇ ಪ್ರಮುಖವಾಗಿದೆ. ಈ ಕುಂಚಗಳ ಇತಿಹಾಸ ಪ್ರಾಮಾದಿಕಾಲದ ಮಾನವ ಕಲಾವಿದನಿಂದಲೇ ಪ್ರಾರಂಭವಾಗುತ್ತದೆ. ಕೈಯ ಬೆರಳಿನಿಂದ ಹಿಡಿದು ಇಂದಿನ ಆಧುನಿಕ ರೀತಿಯ ಕುಂಚಗಳ ಬೆಳವಣಿಗೆಯು ಅಗಾಧವಾದುದು.

---

೧೫. ಡಾ. ಯಾದಪ್ಪ ಪರದೇಶಿ , ಉತ್ತರ ಕರ್ನಾಟಕ ಭಿತ್ತಿಚಿತ್ರಕಲೆ (ಅಪ್ರಕಟಿತ ಪಿಹೆಚ್.ಡಿ ಪ್ರಬಂಧ), ಪುಟ ೩೧೮

ಆಯಾ ಕಾಲಮಾನದ ಕಲಾವಿದನು ತಾನು ಕಂಡು ಕೊಂಡಿದ್ದ ಕುಂಚಗಳ ತಯಾರಿಕೆಯನ್ನು ಅತ್ಯಂತ ಸಮರ್ಪಕವಾಗಿ ಚಿತ್ರ ರಚನೆಯಲ್ಲಿ ಬಳಕೆ ಮಾಡಿಕೊಂಡಿರುವನು. ಪ್ರಾಚೀನ ಮಾನವನು ತಾನು ತಯಾರಿಸಿದ ವರ್ಣಗಳನ್ನು ಕೈಯ ಬೆರಳಿನಿಂದ, ವಿವಿಧ ಜಾತಿಯ ಮರದ ಕಡ್ಡಿಗಳಿಂದ, ಪ್ರಾಣಿಗಳ ಎಲುಬಿನಿಂದ, ನಂತರದಲ್ಲಿ ವಿವಿಧ ಪ್ರಾಣಿಗಳ ಕೂದಲುಗಳನ್ನು ಒಂದು ಆಧಾರಕ್ಕೆ ಸುತ್ತಿಕೊಂಡು ಅದನ್ನು ಬರೆಯುವ ಸಾಧನವಾಗಿ ಮಾಡಿಕೊಂಡು ಚಿತ್ರ ರಚಿಸುತ್ತಿದ್ದನು. ಪ್ರಾಚೀನ ಮಾನವನು ಬಣ್ಣಗಳನ್ನು ಹಚ್ಚಲು ಬಹಳ ಕೀಳ್ತಾರನಾದ ಕುಂಚಗಳನ್ನು ಉಪಯೋಗಿಸುತ್ತಿದ್ದನು. ಬರಿಯ ಕೈಯಿಂದಲೂ ಮತ್ತು ಕೆಲವು ವೇಳೆ ಒಂದು ಕೋಲಿನ ತುದಿಗೆ ಚರ್ಮವನ್ನು ಸುತ್ತಿ ಅದನ್ನು ಬಣ್ಣದಲ್ಲಿ ಅದ್ದಿ ಚಿತ್ರ ಬರೆಯುತ್ತಿದ್ದನು.[೧೬] ಗಿಡದ ರೆಂಬೆಯ ತುದಿಯನ್ನು ಸರಿಯಾಗಿ ಜಜ್ಜಿ ತೊಗಟೆಯು ಹೋಗುವಂತೆ ಮಾಡಿ, ಕೂದಲಿನಂತಹ ನಾರುಗಳನ್ನು ಬಿಡಿಸಿ ಕುಚ್ಚಿನಂತೆ ಮಾಡಿ ಅದನ್ನು ಕುಂಚದಂತೆ ಬಳಸುತ್ತಿದ್ದನು.[೧೭] ಪ್ರಾಚೀನ ಜನರು ನಿಸರ್ಗದತ್ತವಾಗಿ ದೊರೆಯುತ್ತಿದ್ದ ಉದ್ದನೆಯ ಕೈಗೆಟುವ ವಸ್ತುಗಳನ್ನು ಕುಂಚಗಳನ್ನಾಗಿ ಮಾಡಿಕೊಂಡು ಚಿತ್ರ ಬರೆಯುತ್ತಿದ್ದರು.

ಕರಕುಶಲ ಕಲೆಗಳಾದ ನೇಯ್ಗೆಯ ಬಣ್ಣ ಹಾಖುವವರು, ಗೋಕಾಕ, ಕಲಘಟಗಿ, ಕಿನ್ನಾಳದ ಗೊಂಬೆ ತಯಾರಕರು, ಅನೇಕ ಪ್ರಾಣಿಗಳ ತುಪ್ಪಳಗಳಿಂದ ತಮಗೆ ಬೇಕಾದ ಸೂಕ್ಷ್ಮತರ ಹಾಗೂ ಸ್ಥೂಲವಾದ ಕುಂಚಗಳನ್ನು ತಯಾರಿಸಿಕೊಂಡು ಚಿತ್ರ ಬರೆಯುತ್ತಿದ್ದರು. ಸಧ್ಯ ಮಾರುಟ್ಟೆಯಲ್ಲಿ ಲಭ್ಯವಿರುವ ವೈವಿಧ್ಯಮಯ ಕುಂಚಗಳನ್ನು ಬಳಸುತ್ತಿದ್ದಾರೆ.

ಜನಪದರು ಕೂಡಾ ಹಬ್ಬ ಹರಿದಿನಗಳಂತಹ ಸಂದರ್ಭಗಳಲ್ಲಿ ವಿವಿಧ ಸಾಧನಗಳನ್ನು ಕುಂಚಗಳಂತೆ ಬಳಸಿಕೊಂಡು ಚಿತ್ರ ಬರೆಯುತ್ತಿರುವುದನ್ನು ಕಾಣುವುದು. ಕಾರಹುಣ್ಣಿಮೆಯಲ್ಲಿ ಸುರುಮಂಜು, ಸುಣ್ಣಗಳನ್ನು ಬಳಸಿಕೊಂಡು ಕೈಯ ಬೆರಳಿನಿಂದ ವಿವಿಧ ಚಿತ್ತಾರಗಳನ್ನು ಬರೆಯುವರು. ಕಡ್ಡಿಯ ತುದಿಗೆ ಬಟ್ಟೆಯನ್ನು, ಹತ್ತಿಯನ್ನು ಸುತ್ತಿ ತಮಗೆ ಬೇಕಾದ ಚಿತ್ತಾರಗಳನ್ನು ಬಿಡಿಸುತ್ತಿರುವರು. ಸೀಗೆಹುಣ್ಣಿಮೆ, ಗೌರಿಹುಣ್ಣಿಮೆ ಯಂತಹ ಹಬ್ಬಗಳಲ್ಲಿ ಮಹಿಳೆಯರು ಮಣ್ಣಿನ ಗಡಿಗೆಗೆ ಸುಣ್ಣದಿಂದ ವಿವಿಧ ಚಿತ್ತಾರಗಳನ್ನು ಈ ಒಂದು ಸಾಧನಗಳನ್ನು ಬಳಸಿಕೊಂಡು ಚಿತ್ರ ಬರೆಯುವುದನ್ನು ನೋಡುತ್ತೇವೆ. ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಅಲ್ಲಿ ಆಚರಿಸಲಾಗುವ ಹಬ್ಬ ಆಚರಣೆಯ ಸಂದರ್ಭಗಳಲ್ಲಿ ತಮಗೆ ಲಭ್ಯವಿರುವ ವಸ್ತುಗಳನ್ನು ಬಳಸಿಕೊಂಡು ಕುಂಚಗಳಂತೆ ಮಾಡಿ ಸಾಂದರ್ಭಿಕ ಚಿತ್ತಾರಗಳನ್ನು ಬರೆಯುತ್ತಿದ್ದಾರೆ.

**ಪ್ರಾಚೀನ ಶಾಸ್ತ್ರಗಳಲ್ಲಿ ಕುಂಚಗಳ ಉಲ್ಲೇಖ**

ಹಿಂದಿನ ಚಿತ್ರಕಾರರು ಚಿತ್ರ ರಚನೆಯ ಸಿದ್ಧತೆ, ವರ್ಣ ತಯಾರಿಕೆ, ವಣ್ಣಗಳ ಮಿಶ್ರಣ, ಬಳಸುವ ಪದ್ಧತಿ, ರೂಪರಚನೆ ಎಷ್ಟು ಮುಖ್ಯವಾಗಿತ್ತೋ, ಅಷ್ಟೇ ಮುಖ್ಯ ಅವರು ಬಳಸುತ್ತಿದ್ದ ಕುಂಚಗಳಿಗಿತ್ತು. ಅವರು ಕುಂಚ ತಯಾರಿಕೆಯಲ್ಲಿ ತೋರಿರುವ ಜಾಣ್ಮೆಯು ವಿಶಿಷ್ಟವಾದುದು. ವಿಷ್ಣುಧರ್ಮೋತ್ತರದಲ್ಲಿ ಕುಂಚದ ಕುರಿತು ಹೆಚ್ಚು ಪ್ರಸ್ತಾಪವಾಗಿಲ್ಲವಾದರೂ

೧೬. ಬಿ.ವಿ.ಕೆ. ಶಾಸ್ತ್ರೀ : (ಸಂ) ಚಿತ್ರಕಲಾ ಪ್ರಪಂಚ, ಪುಟ ೧೨
೧೭. ಅ.ಸುಂದರ : (ಸಂ) ಚಿತ್ರಕಲಾ ಪ್ರಪಂಚ, ಪುಟ ೧೭

ಂದು ಕಡೆ ಪ್ರಾಣಿಗಳ ತೊಗಲಿನಿಂದ ಕುಂಚಗಳನ್ನು ಮಾಡುವ ವಿಷಯವನ್ನು ತಿಳಿಸುತ್ತದೆ. ಅಭಿಲಾಷಿತಾರ್ಥದಲ್ಲಿ ಎರಡು ಬಗೆಯ ಕುಂಚಗಳನ್ನು ಕಾಣುತ್ತೇವೆ. ವರ್ತಿಕ ಮತ್ತು ಲೇಖನಿ ಎಂದು. ಈ ಎರಡು ಬಗೆಯಲ್ಲಿ ಸ್ಥೂಲ, ಮಧ್ಯಮ ಮತ್ತು ಸೂಕ್ಷ್ಮ ಎಂಬ ಮೂರು ಉಪ ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಕೈ ಬೆರಳಿನ ಗಾತ್ರದ ಒಂದು ಬಿದಿರಿನ ಕಡ್ಡಿಯನ್ನು ಆರಿಸಿಕೊಳ್ಳಬೇಕು. ಆನಂತರ ಬಾರ್ಲಿ ಕಾಲಿನಷ್ಟು ಗಾತ್ರದ ಒಂದು ಮೊಳೆಯನ್ನು ಈ ಬಿದಿರು ಕಡ್ಡಿಗೆ ಸಿಕ್ಕಿಸಬೇಕು. ಅನ್ನದೊಡನೆ ಮಿಶ್ರ ಮಾಡಿಗ ದೀಪದ ಕಾಡಿಗೆಯ ಅಂಟನ್ನು ಅದರ ಮೇಲೆ ಉಜ್ಜಬೇಕು. ಇದನ್ನೇ ವರ್ತಿಕ ಎನ್ನುವುದು. ಕರುವಿನ ಕಿವಿಯ ಕೂದಲನ್ನು ಈ ಕಡ್ಡಿಗೆ ಅರಗಿನ ಮೇಣದ ಸಹಾಯದಿಂದ ಸಿಕ್ಕಿಸಬೇಕು. ಇದನ್ನೇ ಲೇಖನಿ ಎಂದು ಕರೆಯುವರು.

'ಶಿಲ್ಪರತ್ನ'[೧೮] ದಲ್ಲಿ ಕುಂಚದ ಕುರಿತು ಮಂದವಾದ, ಮಧ್ಯಮವಾದ ಮತ್ತು ಅತೀ ನವಿರಾದ ಕುಂಚಗಳೆಂದು ಮೂರು ಬಗೆಯಲ್ಲಿ ತಿಳಿಸುತ್ತದೆ. ಸ್ಥೂಲವಾದ ಕುಂಚಕ್ಕೆ ಕರುವಿನ ಕಿವಿಯ ಮೇಲಿನ ಒರಟು ಕೂದಲುಗಳು ಅಥವಾ ಮೇಕೆಯ ಉದರದ ಮೇಲಿನ ಕೂದಲುಗಳನ್ನು ಒಂದು ಬಾರ್ಲಿ ಕಾಳಿನಷ್ಟು ಗಾತ್ರ ಸಿಕ್ಕಿಸಿಬೇಕು. ಸೂಕ್ಷ್ಮತರವಾದ ನವಿರಾದ ಕುಂಚಕ್ಕೆ ಕಸ್ತೂರಿ ಇಲಿಯ ಬಾಲದ ಕೂದಲುಗಳನ್ನು ದಾರ ಅಥವಾ ಮೇಣವನ್ನು ಕೂಡಿರುವ ತುದಿಗೆ ಅಂಟಿಸಬೇಕು.

ಮಾನಸೋಲ್ಲಾಸದಲ್ಲಿಯೂ[೧೯] ಈ ಕುಂಚದ ಕುರಿತು ತಿಳಿಸಲಾಗಿದೆ. ಕರುವಿನ ಕಿವಿಯಲ್ಲಿ ಹುಟ್ಟಿದ ಕೂದಲುಗಳನ್ನು ಬಿದಿರಿನ ಕಡ್ಡಿಯ ಕೊನೆಗೆ ಅರಗಿನಿಂದ ಕಟ್ಟಿ ಲೇಖನಿಯನ್ನು ತಯಾರಿಸುತ್ತಿದ್ದರು. ಇದನ್ನು ಸ್ಥೂಲ, ಮಧ್ಯಾ, ಸೂಕ್ಷ್ಮಾ ಎಂದು ಮೂರು ವಿಧಗಳಲ್ಲಿ ತಯಾರಿಸಲಾಗುತ್ತಿತ್ತು. ಹೀಗೆ ನಮ್ಮ ಪ್ರಾಚೀನ ಶಾಸ್ತ್ರಗ್ರಂಥಗಳಲ್ಲಿ ಮತ್ತು ಕಾವ್ಯಗಳಲ್ಲಿ ಕುಂಚದ ಕುರಿತು ಅನೇಕ ಕಡೆ ಪ್ರಸ್ತಾಪ ಮಾಡಿದೆ. ಇದರಿಂದ ಕಲಾವಿದರೂ ಚಿತ್ರ ರಚನೆಗೆ ಬೇಕಾಗುವ ಪರಿಕರಗಳನ್ನು ತಂಯಾರಿಸುವುದನ್ನು ಮತ್ತು ಅವುಗಳನ್ನು ಹೇಗೆ ಬಳಸುತ್ತಿದ್ದನ್ನು ತಿಳಿದುಕೊಳ್ಳಬಹುದಾಗಿದೆ.

**ಆಧುನಿಕ ಕುಂಚಗಳು**

ಆಧುನಿಕ ರೀತಿಯ ಕುಂಚಗಳು ೧೮ ಮತ್ತು ೧೯ನೆಯ ಶತಮಾನಗಳಲ್ಲಿ ಉತ್ಕೃಷ್ಟವಾದ ಹಾಗೂ ವೈವಿಧ್ಯಮಯವಾದ ಕುಂಚಗಳ ಬಳಕೆಯನ್ನು ಕಾಣಬಹುದು. ಈ ಹಂತದ ಕಲಾವಿದರು ತಮಗೆ ಬೇಕಾದ ಚಪ್ಪಟೆಯಾದ, ದುಂಡಾದ ಕುಂಚಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಇದಕ್ಕೆ ಬೇಕಾದ ಬೇರೆ ಬೇರೆ ಪ್ರಾಣಿಗಳ ಕೂದಲುಗಳನ್ನು, ತಪ್ಪಲುಗಳನ್ನು ಉಪಯೋಗಿಸುತ್ತಿದ್ದರು. ೨೦ನೆಯ ಶತಮಾನದ ಪ್ರಥಮಾರ್ಧದ ಹೊತ್ತಿಗೆ ಕುಂಚಗಳನ್ನೇ ತಯಾರಿಸುವ ಕುಶಲಕರ್ಮಿಗಳು ಹುಟ್ಟಿಕೊಂಡರು. ಕಲಾವಿದರಿಗೆ ಅನುಕೂಲವಾಗುವಂತಹ ಸ್ಥೂಲವಾದ, ನವಿರಾದ, ಸೂಕ್ಷಮಾತಿ ಸೂಕ್ಷ್ಮದ ಕುಂಚಗಳನ್ನು ಒದಗಿಸತೊಡಗಿದರು. ಸೂಕ್ಷ್ಮವಾದ ಚಿತ್ರ ರಚನೆಗೆ ಮೃದು ತುಪ್ಪಳದ, ಕೂದಲಿನ ಕುಂಚಗಳನ್ನು ಚಪ್ಪಟೆಯಾಗಿ ಬಣ್ಣ ಹಚ್ಚಲು ಗಡಸು ಕೂದಲು ಹೊಂದಿದ ಸ್ಥೂಲವಾದ ಕುಂಚಗಳನ್ನು ತಯಾರಿಸುತ್ತಿದ್ದರು. ಈ ರೀತಿಯಾಗಿ ತಯಾರಾಗುತ್ತಿದ್ದ ಕುಂಚಗಳನ್ನು

೧೮. ಟಿ.ಆರ್.ತಿಪ್ಪೇಸ್ವಾಮಿ ; (ಸಂ) ಚಿತ್ರಕಲಾ ಪ್ರಪಂಚ, ಪುಟ ೨೨೩
೧೯. ಪ್ರೊ. ವಿ.ಎಸ್.ಕಟಗಿಹಳ್ಳಿಮಠ ; (ಸಂ) ನಿಜದ ನೆಲೆ, ಪುಟ ೨೩

ಕಲಾವಿದರು ತಮ್ಮ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸುತ್ತಿದ್ದರು. ಈ ಕುಂಚಗಳನ್ನು ಕಲಾವಿದರು ಹಿಡಿಕೆಯು ಸಹ ಉದ್ದವಾದ ಗಿಡ್ಡವಾದ, ಚಿತ್ರ ಬರೆಯಲು ಅನುಕೂಲವಾಗುವಂತೆ ಕಟ್ಟಿಗೆಯಿಂದ ತಯಾರಿಸುತ್ತಿದ್ದರು. ಸ್ಥೂಲ ಕುಂಚಗಳಿಗೆ ದಪ್ಪ ಕಟ್ಟಿಗೆಯನ್ನು ಸೂಕ್ಷ್ಮತರ ಕುಂಚಗಳಿಗೆ ಸಣ್ಣ ಕಟ್ಟಿಗೆಯನ್ನು ಅತ್ಯಂತ ನವುರಾಗಿ (ನೈಜವಾದ) ಸಿದ್ಧ ಪಡಿಸಿ ಕುಂಚಗಳಿಗೆ ಬಳಸುತ್ತಿದ್ದರು.

ಇಂದು ಮಾರುಕಟ್ಟೆಯಲ್ಲಿ ವಿವಿಧ ರೀತಿಯ ಕುಂಚಗಳು ಲಭ್ಯ ಇವೆ. ವಿವಿಧ ಪ್ರಾಣಿಗಳ ಕೂದಲು, ತುಪ್ಪಳಗಳಿಂದ ತಯಾರಿಸಿದ ಹಾಗೂ ಪ್ಲಾಸ್ಟಿಕ್ ಕೂದಲನಿಂದ ತಯಾರಾದ ಚಪ್ಪಟೆಯಾದ ಹಾಗೂ ದುಂಡಾದ ಕುಂಚಗಳು ಲಭ್ಯ ಇವೆ. ಸೂಕ್ಷ್ಮವಾದ ಹಾಗೂ ಸ್ಥೂಲವಾದ ಕುಂಚಗಳನ್ನು ಕಲಾವಿದನಿಗೆ ಅನುಕೂಲವಾಗುವಂತೆ ಕುಂಚ ತಯಾರಿಕೆಯ ಕಂಪನಿಗಳು ಇಂದು ತಯಾರಿಸುತ್ತಲಿವೆ. ಇಂದು ಬೆಂಗಳೂರಿನಲ್ಲಿರುವ 'ತಾಜ್ ಬ್ರಶ್' ಕಂಪನಿಯೂ ಸುಮಾರು ಎರಡು ಸಾವಿರ ನಮೂನೆಯ ಬ್ರಶ್‌ಗಳನ್ನು ತಯಾರಿಸುತ್ತಲಿದೆ. ಗಾಜಿನ ಚಿತ್ರಕಲಾವಿದರೂ ಸಹಿತ ಇಂಥ ವೈವಿಧ್ಯಮಯವಾದ ಕುಂಚಗಳನ್ನು ಸಿದ್ಧಪಡಿಸಿಕೊಂಡು, ಚಿತ್ರರಚನೆ ಮಾಡುತ್ತಿರುವರು.

### ❍ ಲೇಖನಿಗಳು

'ಲೆಖನಿ' ಎಂದರೆ ಬರೆಯುವ ಸಾಧನ. ಇಲ್ಲಿ ಎರಡು ರೀತಿ ಸಾಧನಗಳನ್ನಾಗಿ ವಿಂಗಡಿಸಿ ಹೇಳಬಹುದು. ಒಂದು ಘನರೂಪದಲ್ಲಿ ಬಳಸುವ ಲೇಖನಿಗಳು ಇನ್ನೊಂದು ದ್ರವರೂಪದ ಬಣ್ಣಗಳನ್ನು ಬೇರೆ ಬೇರೆ ಸಾಧನಗಳ ಆಧಾರದ ಮೇಲೆ ಅದ್ದಿ ಬರೆಯುವ ಲೇಖನಿಗಳು. ಘನರೂಪದಲ್ಲಿ ಬಳಸಲಾಗುವ ಲೇಖನಿಗಳು ಬಳಪದಕಲ್ಲು, ಸುಣ್ಣದಕಲ್ಲು ಹಾಗೂ ವಿವಿಧ ಕಲ್ಲುಗಳು. ಇದರಲ್ಲಿಯೇ ಮೃದುವಾದ ಘನರೂಪದ ಲೇಖನಿಗಳನ್ನು ಹೆಸರಿಸಬಹುದು. ಮೇಣದಿಂದ ಕೂಡಿದ ಬಣ್ಣದ ಲೇಖನಿಗಳು, ಗ್ರಾಫೈಟ್ ಮತ್ತು ಜೇಡಿ ಮಣ್ಣಿನಿಂದ ತಯಾರಿಸಿದ ಪೆನ್ಸಿಲ್ಸ್ ಇತ್ಯಾದಿ. ಈ ರೀತಿಯಾದ ಲೇಖನಿಗಳನ್ನು ದಪ್ಪ (ಸ್ಥೂಲ)ನಾದ ರೇಖೆ ಎಳೆಯಲು, ಸೂಕ್ಷ್ಮತರನಾದ ರೇಖೆ ಎಳೆಯಲು ಬಳಸಲಾಗುತ್ತಿತ್ತು. ಇವುಗಳನ್ನು ಕಲಾವಿದರು ತಮಗೆ ಹೇಗೆ ಬೇಕೋ ಹಾಗೆ ತಯಾರಿಸಿಕೊಳ್ಳುತ್ತಿದ್ದರು.

ಯಾವುದೇ ತೆರನಾದ ಚಿತ್ರ ಬರೆಯಬೇಕಾದರೆ ಅದಕ್ಕೆ ಮೊದಲು ರೇಖಾ ಚಿತ್ರ ಬರೆಯಬೇಕಾಗುತ್ತಿತ್ತು. ನಂತರ ಬೇಕಾದ ವರ್ಣ ಸಂಯೋಜನೆ ಮಾಡಿ ನಂತರ ಅಂತಿಮವಾದ ರೇಖೆಯನ್ನು ಹಾಕಲಾಗುತ್ತಿತ್ತು. ಇದಕ್ಕೆ ನಮ್ಮ ಸಾಂಪ್ರದಾಯಿಕ ಚಿತ್ರಗಳು ಉದಾಹರಣೆಯಾಗಿವೆ. ಇದಕ್ಕೆ ಗಾಜಿನ ಚಿತ್ರಕಾರರೂ ಹೊರತಾಗಿಲ್ಲ. ಗಾಜಿನ ಮೇಲೆ ಸರಿಯಾಗಿ ಮೂಡುವಂತಹ, ಸ್ಪಷ್ಟವಾಗಿ ಕಾಣುವಂತಹ ರೇಖೆಗಳನ್ನು ಬರೆಯಲು ಮೇಣದಂತಹ ಲೇಖನಿಗಳನ್ನು ಬಳಸುತ್ತಿದ್ದರು. ರೇಖಾಚಿತ್ರ ಬರೆದುಕೊಂಡ ನಂತರ ಅದರ ಹಿಮ್ಮುಖವಾಗಿ ಸುಂದರವಾದ, ಗಾಢವಾದ ಕಪ್ಪು ವರ್ಣದ ಸೂಕ್ಷ್ಮ ರೇಖೆಯನ್ನು ಬರೆದುಕೊಂಡು ನಂತರ ವರ್ಣ ಸಂಯೋಜನೆ ಮಾಡಬೇಕು.

ಗಾಜಿನ ಚಿತ್ರ ಕಲಾವಿದರು ನೇರವಾಗಿ ಗಾಜಿನ ಮೇಲೆ ಚಿತ್ರ ಬರೆಯದೇ ಮೊದಲು ಪ್ರತ್ಯೇಕ ರೇಖಾ ಚಿತ್ರಗಳನ್ನು ಬರೆದುಕೊಂಡು, ಅದರ ಕರಡನ್ನು ಗಾಜಿನ ಮೇಲೆ ಚಿತ್ರಿಸಿಕೊಂಡು ಚಿತ್ರ ಬರೆಯುತ್ತಿದ್ದರು. ಒಮ್ಮೆ ಒಂದು ರೇಖಾ ಚಿತ್ರ ಸಿದ್ಧ ಪಡಿಸಿಕೊಂಡರೆ ಅದರ ಸಹಾಯದಿಂದ

ಸಾವಿರಾರು ಚಿತ್ರಗಳನ್ನು ಪ್ರತಿಕೃತಿ ಮಾಡಿ ಗಾಜಿನ ಚಿತ್ರಗಳನ್ನು ರಚಿಸಬಹುದು. ಇಂಥ ರೇಖಾ ಚಿತ್ರಗಳನ್ನು ಸೂಕ್ಷ್ಮತರನಾದ ವಿವಿಧ ಬಣ್ಣಗಳ ಲೇಖನಿಗಳನ್ನು, ಮೇಣದಂತಹ ಲೇಖನಿಗಳನ್ನು ಗ್ರಾಫೈಟ್‌ನಿಂದ ತಯಾರಾದ ಲೇಖನಿಗಳನ್ನು ಬಳಸುತ್ತಿದ್ದರು. ಇಂದು ಮಾರುಕಟ್ಟೆಯಲ್ಲಿ ವಿವಿಧ ತರಹದ ಲೇಖನಿಗಳು ಲಭ್ಯ ಇವೆ.

**○ ಅಂಟು ದ್ರಾವಕಗಳು (ಬಂಧಕಗಳು)**

ಗಾಜಿನ ಚಿತ್ರಗಳ ರಚನೆಯಲ್ಲಿ ಚಿತ್ರಕಲಾವಿದರು ಬೇರೆ ಬೇರೆ ಮೂಲದಿಂದ ತಯಾರಿಸಲಾದ ಅಂಟು ದ್ರಾವಕಗಳನ್ನು ಬಳಸಿರುವರು. ಮರದ ಅಂಟು ದ್ರಾವಕಗಳನ್ನು ಬಣ್ಣಗಳ ಮಿಶ್ರಣದಲ್ಲಿ ಹಾಗೂ ತಿಳಿಯಾದ ಪಾರದರ್ಶಕ ಅಂಟು ದ್ರಾವಕಗಳನ್ನು ಗಾಜಿನ ಮೇಲ್ಮೈ ಮೇಲೆ ಲೇಪಿಸಿ, ಬೇಕಾದ ಮೆರಗು ಕಾಗದಗಳನ್ನು ಅಂಟಿಸಲು ಮತ್ತು ಮೆರಗು ದ್ರವ್ಯಗಳನ್ನು ಲೇಪಿಸಲು ಬಳಸಲಾಗಿದೆ. ಮರಗಳಿಂದ ಸ್ವಾಭಾವಿಕವಾಗಿ ಉತ್ಪತ್ತಿಯಾದ ಅಂಟು ಪದಾರ್ಥವನ್ನು ಗಾಜಿನ ಚೂರಿನಂತೆ ಮಾರ್ಪಡಿಸಿ ಮಾರುಕಟ್ಟೆಯಲ್ಲಿ ಇಂದು ಮಾರಲಾಗುತ್ತಿದೆ. ಇದನ್ನು ಮೀನುಸರಿ ಎಂದು ಕರೆಯುವರು. ಈ ಮೀನುಸರಿಯನ್ನು ಚನ್ನಾಗಿ ಕಾಯಿಸಿ ಹುಡಿ ವರ್ಣಗಳೊಂದಿಗೆ ಬೆರೆಸಿ ವರ್ಣಗಳನ್ನು ತಯಾರುಮಾಡುತ್ತಾರೆ. ಈ ರೀತಿ ತಯಾರಿಸಿದ ಬಣ್ಣವನ್ನು ಯಾವುದೇ ಆಧಾರದ ಮೇಲೆ ಬಳಸಲಾಗುತ್ತಿದೆ. ಹೆಚ್ಚಾಗಿ ಬೇವಿನಮರದ ಅಂಟು, ಜಾಲಿಮರದ ಅಂಟನ್ನು ಬಳಸಲಾಗುತ್ತಿದೆ. ಜಾಲಿಮರದ ಅಂಟು ದ್ರಾವಕವನ್ನು ಬೇರೆಬೇರೆ ಪದಾರ್ಥಗಳನ್ನು ತಯಾರು ಮಾಡಲು ಬಳಸುತ್ತಾರೆ. ಬೇವಿನ ಮರದ ಅಂಟನ್ನು ವಿಷವಾಗಿರುವುದರಿಂದ ಚಿತ್ರ ಕಲಾವಿದರು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸುತ್ತಾರೆ.

ಬೇರೆ ಬೇರೆ ಸಸ್ಯ, ಮರದ ಬೀಜಗಳಿಂದ ಅಂಟು ದ್ರಾವಕಗಳನ್ನು ತಯಾರಿಸಲಾಗುತ್ತಿದೆ. ಎಣ್ಣೆ ಬೀಜಗಳಾದ ಅಗಸೆ, ಪೆರಿಲ್ಲಾ, ಟಂಗೆ, ಆಮ್ಪಿ ಸಿಕಾ, ಗಸಗಸೆ, ಇತ್ಯಾದಿಗಳನ್ನು ಬಳಸಿಕೊಂಡು ಪೈಂಟ್ಸ್ ಮತ್ತು ವಾರ್ನಿಷ್‌ಗಳನ್ನು ತಯಾರಿಸಲಾಗುತ್ತದೆ. ಗಾಜಿನ ಕಲಾವಿದರು ತೈಲಬಂಧಕಗಳನ್ನು ಬಣ್ಣಗಳ ಸಂಯೋಜನೆಯಲ್ಲಿ ಬಳಸಿದರೆ ನೀರು ಬಂಧಕಗಳನ್ನು ಬೇಕಾದ ವಸ್ತುಗಳನ್ನು ಅಂಟಿಸಲು ಬಳಸಿದ್ದಾರೆ. ಗೋಲ್ಡ್ ಲೀಫ್‌ಗಳನ್ನು ಅಂಟಿಸಲು ಈ ಪಾರದರ್ಶಕ ಅಂಟು ದ್ರಾವಕವನ್ನು ಬಳಸಿದ್ದು ವಿಶೇಷ. ಇಂದು ಮಾರುಕಟ್ಟೆಯಲ್ಲಿ ಲಭ್ಯವಿರುವ ಅಂಟು ದ್ರಾವಕಗಳನ್ನು ಚಿತ್ರರಚನೆಯಲ್ಲಿ ಬಳಸುತ್ತಿದ್ದಾರೆ. ಪ್ರಾಚೀನ ಮಾನವನು ಪ್ರಾಣಿಗಳ ಕೊಬ್ಬನ್ನು ಶೇಖರಿಸಿ ಬಣ್ಣದಲ್ಲಿ ಬೆರೆಕೆ ಮಾಡಿ ಚಿತ್ರರಚಿಸುತ್ತಿದ್ದನೆಂದು ಇತಿಹಾಸದಿಂದ ತಿಳಿಯುತ್ತದೆ. ಪ್ರಾಣಿಗಳ ಚರ್ಮವನ್ನು, ಅದರ ಕೊಬ್ಬನ್ನು ಚನ್ನಾಗಿ ಕುದಿಸಿ ತಯಾರಿಸಿದ ದ್ರಾವಣವನ್ನು 'ಮರವಜ್ರ' ಎನ್ನುವರು. ಇದನ್ನು ಕಲಾವಿದರು ಚಿತ್ರ ರಚನೆಯಲ್ಲಿ ಚನ್ನಾಗಿ ಬಳಸಿಕೊಂಡಿದ್ದಾರೆ.

**○ ಮೆರಗು ಕಾಗದಗಳು**

ಮೆರಗು ಕಾಗದಗಳನ್ನು ಗಾಜಿನ ಚಿತ್ರಗಳಲ್ಲಿ ವಿಪುಲವಾಗಿ ಬಳಸಿದ್ದನ್ನು ಕಾಣಬಹುದು. ಚಿತ್ರಗಳ ಬಹುತೇಕ ಅರ್ಧದಷ್ಟು ಭಾಗವನ್ನು ಈ ಮೆರಗು ಕಾಗದಗಳು ಆವರಿಸಿವೆ. ಪ್ರಧಾನವಾಗಿ ಕೆಂಪು, ಹಸಿರು, ಹಳದಿ, ಗುಲಾಬಿ ವರ್ಣದ ಮೆರಗು ಕಾಗದಗಳು ಬಳಕೆಯಾಗಿವೆ.

ಚಿತ್ರದ ಹಿನ್ನೆಲೆಯ ಡ್ರ್ಯಾಪರಿಗಳಿಗೆ ಹಾಗೂ ಆಕೃತಿಗಳ ಉಡುಪುಗಳಿಗೆ, ಆಭರಣಗಳಿಗೆ ಈ ಮೆರಗು ಕಾಗದಗಳನ್ನು ಕಲಾವಿದರು ಅಂಟಿಸಿದ್ದಾರೆ.

### ❍ ಚಿನ್ನದ ಹಾಳೆ (Gold Leaf)

ಗಾಜಿನ ಚಿತ್ರಗಳ ರಚನೆಯಲ್ಲಿ ಆಕೃತಿಗಳ ಕಿರೀಟಾಭರಣಗಳಿಗೆ, ಉಡುಪುಗಳಿಗೆ, ಹಿನ್ನೆಲೆಯ ಡ್ರ್ಯಾಪರಿಗಳಿಗೆ ಹಾಗೂ ವಿವಿಧ ವಸ್ತುಗಳ ಚಿತ್ರಗಳಿಗೆ ಚಿನ್ನದ ಹಾಳೆಯನ್ನು ಗಾಜಿನ ಕಲಾಕಾರರು ಬಳಸಿದ್ದಾರೆ. ಚಿನ್ನದ ಹಾಳೆಯನ್ನು ತಂಜಾವೂರು ಮತ್ತು ಮೈಸೂರು ಶೈಲಿಯ ಚಿತ್ರಗಳಲ್ಲಿ ಹೆಚ್ಚು ಹೆಚ್ಚು ಪ್ರಮಾಣಗಳಲ್ಲಿ ಬಳಸಿದ್ದು ಕಂಡುಬರುತ್ತದೆ. ಸುರಪುರ ಚಿತ್ರಶೈಲಿಯ ಕಲಾವಿದರೂ ಸಹಿತ ಈ ಸೂಕ್ಷ್ಮತೆರನಾದ ಚಿನ್ನದ ಹಾಳೆಯನ್ನು ಸೀಮಿತವಾಗಿ ಬಳಸಿದ್ದು ಆ ಚಿತ್ರಗಳಿಂದ ತಿಳಿಯುತ್ತದೆ. ಚಿನ್ನದ ಹಾಳೆಯನ್ನು ೨೪ ಕ್ಯಾರೆಟ್ ಅಂಶದ ಚಿನ್ನದಿಂದ ತಯಾರಿಸಲಾಗುತ್ತದೆ. ಪ್ರಾಚೀನ ಕಲಾವಿದರು ಗಟ್ಟಿ ಚಿನ್ನವನ್ನು ಅರೆಯುವ ಕಲ್ಲಿನ ಮೇಲೆ ಚನ್ನಾಗಿ ತಿಕ್ಕಿ ತಿಕ್ಕಿ ಚಿನ್ನವನ್ನು ಪುಡಿಯಾಗುವಂತೆ ಮಾಡಿ ನಂತರ ಅದನ್ನು ಶುದ್ಧವಾದ ನೀರಿಗೆಹಾಕಿ, ಚನ್ನಾಗಿ ಸೋಸಿ ಶುದ್ಧ ಚಿನ್ನದ ಪುಡಿಯನ್ನು ಶೇಖರಿಲಾಗುತ್ತಿತ್ತು. ನಂತರ ಕಲಾವಿದರು ಆ ಸಿದ್ಧಪಡಿಸಿದ ಚಿನ್ನದ ಪುಡಿಯನ್ನು ಪಾರದರ್ಶಕ ಬಂಧಕದೊಡನೆ ಬೆರೆಸಿ ಚಿತ್ರ ರಚನೆ ಮಾಡುತ್ತಿದ್ದರು.

ಮಾನಸೋಲ್ಲಾಸದಲ್ಲಿ[೨೦] ಚಿನ್ನ ವರ್ಣವನ್ನು ತಯಾರಿಸುವ ಕುರಿತು ತಿಳಿಸುತ್ತದೆ. ಶುದ್ಧವಾದ ಚಿನ್ನವನ್ನು ಶಿಲೆಯ ಮೇಲೆ ಚನ್ನಾಗಿ ತಿಕ್ಕಿ ಕಂಚಿನ ಪಾತ್ರೆಯಲ್ಲಿ ನೀರನ್ನು ಹಾಕಿ, ಅದರಲ್ಲಿ ಚನ್ನಾಗಿ ತಿಕ್ಕಿ ಸಿದ್ಧಪಡಿಸಿದ ಚಿನ್ನದ ಪುಡಿಯನ್ನು ಬೆರೆಸಿ, ಕಲಸಿದ ಬಳಿಕ ಪದೇ ಪದೇ ಅದನ್ನು ಜಾಲಾಡಿಸಬೇಕು. ಚಿನ್ನದಲ್ಲಿ ಸೇರಿರುವ ಶಿಲೆಯು, ಧೂಳು ಕಣಗಳು ಹೋಗುವ ತನಕ ಜಾಲಾಡಿಸುತ್ತಿರಬೇಕು. ಚಿನ್ನವು ಘನವಾಗಿರುವದರಿಂದ, ನುಣುಪಾಗಿರುವುದರಿಂದ ನೀರಿನೊಂದಿಗೆ (ಜಾಲಾಡುವಾಗ) ಕೆಳಕ್ಕೆ ಹರಿದುಹೋಗುವುದಿಲ್ಲ. ಆಗ ಅತೀ ಶುದ್ಧವಾದ ಚಿನ್ನವು ಎಳೆಯ ಸೂರ್ಯನ ಪ್ರಭೆಯಂತೆ ಕಾಂತಿಯುಕ್ತವಾಗುತ್ತದೆ. ಗಂಜಿಯಂತಹ ಚಿನ್ನವನ್ನು ಶೇಖರಿಸಿ ವಜ್ರಲೇಪದೊಂದಿಗೆ ಬೆರೆಸಿ ಚಿತ್ರ ರಚನೆಯಲ್ಲಿ ಬಳಸಬೇಕು. ಚಿನ್ನವನ್ನು ಎಲ್ಲಿ ಬಳಸಲಾಗುತ್ತದೆಯೋ ಆ ಭಾಗವನ್ನು ಒಣಗಲು ಬಿಟ್ಟು ನಂತರ ಅದರ ಮೇಲೆ ಹಂದಿಯ ಕೋರೆಯ ಹಲ್ಲಿನಿಂದ ಮೆಲ್ಲ ಮೆಲ್ಲನೆ ಉಜ್ಜಬೇಕು. ಈ ರೀತಿ ಮಾಡುವುದರಿಂದ ಚಿನ್ನವು ಅತ್ಯಂತ ಪ್ರಕಾಶಮಾನವಾಗಿ ಹೊಳೆಯುತ್ತದೆ.

ವಿಷ್ಣುಧರ್ಮೋತ್ತರ ಮತ್ತು ಶಿಲ್ಪರತ್ನಗಳಲ್ಲಿ[೨೧] ಚಿನ್ನದ ತಯಾರಿಕೆಯ ಕುರಿತು ಪ್ರಸ್ತಾಪಿಸುತ್ತವೆ. ಈ ಎರಡೂ ಗ್ರಂಥಗಳಲ್ಲಿ ಚಿನ್ನ ತಯಾರಿಸುವ ರೀತಿ ಒಂದೇತೆರನಾಗಿದೆ. ಚಿನ್ನವನ್ನು ಮೊದಲು ತೆಳುವಾದ ತಗಡುಗಳನ್ನಾಗಿ ಮಾಡಿಕೊಂಡು, ನಂತರ ಮರಳು ಮತ್ತು ನೀರಿನಿಂದ ಮಿಶ್ರಣ ಮಾಡಿ ನಯವಾದ ಗುಂಡಿನಿಂದ ಅರೆಯಬೇಕು. ಮೇಣದಂತಾದಾಗ ಒಂದು ಗಾಜಿನ ಪಾತ್ರೆಯಲ್ಲಿ ಹಾಕಿ ಕುಲುಕಿದರೆ ಮರಳು ಮತ್ತು ಕೊಳೆಗಳು ತಳದಲ್ಲಿ ನಿಲ್ಲುತ್ತವೆ. ಆನಂತರ ಚಿನ್ನದ ಧೂಳನ್ನು ತೆಗೆದುಕೊಂಡು ವಜ್ರಲೇಪದೊಡನೆ ಬೆರೆಸಿ ಚಿತ್ರ ರಚನೆಯಲ್ಲಿ ಬಳಸಬೇಕು. ಈ

---

೨೦. ಪ್ರೊ. ವಿ.ಎಸ್.ಕಟಗಿಹಳ್ಳಿಮಠ ; (ಸಂ) ನಿಜದ ನೆಲೆ, ಪುಟ ೩೦
೨೧. ಪಿ.ಆರ್.ತಿಪ್ಪೇಸ್ವಾಮಿ ; (ಸಂ) ಚಿತ್ರಕಲಾ ಪ್ರಪಂಚ, ಪುಟ ೨೨೨

ಚಿನ್ನವನ್ನು ಬಳಸಿದ ಭಾಗವನ್ನು ಜಾಗರೂಕತೆಯಿಂದ ನಯವಾಗಿ ಉಜ್ಜಿದಾಗ ಚಿನ್ನವು ಪ್ರಕಾಶಮಾನವಾಗಿ ಹೊಳೆಯುತ್ತದೆ. ಈ ಎರಡು ಗ್ರಂಥಗಳು ಹಾಗೂ ಮಾನಸೋಲ್ಲಾದವು ಸುವರ್ಣ ತಯಾರಿಕೆಯ ಒಂದೇ ರೀತಿಯ ವಿಧಿ ವಿಧಾನಗಳನ್ನು ತಿಳಿಸುತ್ತವೆ.

**❍ ಬೆಳ್ಳಿಯ ಹಾಳೆ (ಬ್ಯಾಗಡಿ ಪೇಪರ್)**

ಗಾಜಿನ ಚಿತ್ರಗಳಲ್ಲಿ ಬೆಳ್ಳಿ ಅಥವಾ ಬ್ಯಾಗಡಿಯ ಕಾಗದಗಳನ್ನು ಬಳಸುತ್ತಿದ್ದರು. ಇವುಗಳನ್ನು ಆಕೃತಿಗಳ ಆಭರಣಗಳಲ್ಲಿ ಹಾಗೂ ಚಿತ್ರದ ಅಂಚಿನಲ್ಲಿ ಆಕರ್ಷಕವಾಗಿ ಕಾಣುವಂತೆ ಅಂಟಿಸಲಾಗುತ್ತಿತ್ತು. ಪ್ರಾರಂಭದ ಕಾಲದ ಹಂತದಲ್ಲಿ ಚಿನ್ನದ ಮಾದರಿಯಂತೆಯೇ ಬೆಳ್ಳಿಯನ್ನು ಚಿತ್ರಗಳಿಗೆ ಬಳಸಲಾಗುತ್ತಿತ್ತು. ಗಟ್ಟಿಯಾದ ಬೆಳ್ಳಿಯನ್ನು ಹಾಳೆಯಂತೆ ಪರಿವರ್ತಿಸಿ ಅದನ್ನು ಬೇಕಾದ ಸ್ಥಳಾವಕಾಶದಲ್ಲಿ ಬಳಸುತ್ತಿದ್ದರು. ಆದರೆ ನಂತರದ ಕಾಲದಲ್ಲಿ ಇದರ ಬಳಕೆ ಕಡಿಮೆಯಾಗಿ ಬ್ಯಾಗಡಿಯಂತಹ ಬೆಳ್ಳಿ ಹೊಳಪು ಕಾಗದಗಳನ್ನು ಉಪಯೋಗಿಸ ತೊಡಗಿದರು. ಇಂದು ಕೂಡಾ ಇಂಥ ಅನೇಕ ಮಾದರಿಯ ಕಾಗದಗಳು ಲಭ್ಯವಿರುವುದರಿಂದ ಇಂದಿನ ಕಲಾವಿದರು ಗಾಜಿನ ಚಿತ್ರಗಳಲ್ಲಿ ಬಳಸುತ್ತಿದ್ದಾರೆ.

**❍ ಪಾರದರ್ಶಕ ಕಾಗದಗಳು**

ಪಾರದರ್ಶಕ ಕಾಗದಗಳನ್ನು ರೇಖಾಚಿತ್ರಗಳನ್ನು ಪ್ರತಿಕೃತಿ ಮಾಡಿಕೊಳ್ಳಲು ಬಳಸಲಾಗುತ್ತದೆ. ಗಾಜಿನ ಚಿತ್ರಕಾರರು ನೇರವಾಗಿ ಯಾವುದೇ ಚಿತ್ರಗಳನ್ನು ಗಾಜಿನ ಮೇಲೆ ಬರೆಯದೇ ಮೊದಲು ಚಿತ್ರದ ರೇಖಾಚಿತ್ರವನ್ನು ಬರೆದುಕೊಂಡು ನಂತರ ಪಾರದರ್ಶಕ ಕಾಗದಗಳ ಸಹಾಯದಿಂದ ಗಾಜಿನ ಮೇಲೆ ರೇಖಾಚಿತ್ರವನ್ನು ಬರೆಯಲಾಗುತ್ತಿತ್ತು. ಬಹುತೇಕ ಗಾಜಿನ ಚಿತ್ರಗಳು ಮೈಸೂರು ಮತ್ತು ತಂಜಾವೂರು ಶೈಲಿಯ ಮೂಲ ಚಿತ್ರಗಳನ್ನು ಅನುಕರಿಸುತ್ತವೆ. ಗಾಜಿನ ಚಿತ್ರಕಲಾವಿದರು ಈ ಸಾಂಪ್ರದಾಯಿಕ ಚಿತ್ರಗಳನ್ನು ಪಾರದರ್ಶಕ ಕಾಗದಗಳ ಮೇಲೆ ಪರಿವರ್ತಿಸಿಕೊಂಡು ತಮ್ಮ ಅನುಕೂಲಕ್ಕೆ ತಕ್ಕಂತೆ ಚಿತ್ರರಚನೆಗೆ ಬಳಸಿಕೊಂಡಿದ್ದಾರೆ. ಈ ಪಾರದರ್ಶಕ ಕಾಗದಗಳನ್ನು ರೇಖಾ ಚಿತ್ರದಲ್ಲಿ ಕುಶಲ ಕಲಾವಿದರು ಹೆಚ್ಚು ಬಳಸಿಕೊಂಡು ಈ ಚಿತ್ರವೃತ್ತಿಯನ್ನು ಮಾಡುತ್ತಿದ್ದರು.

**❍ ರೇಖಾ ಚಿತ್ರಗಳು**

ಗಾಜಿನ ಚಿತ್ರಕಾರರು ಗಾಜಿನ ಮೇಲೆ ಯಾವುದೇ ಚಿತ್ರ ಬರೆಯುವ ಮೊದಲು ಆ ಚಿತ್ರದ ರೇಖಾಚಿತ್ರವನ್ನು ರಚಿಸಿಕೊಂಡು ಅದನ್ನು ಗಾಜಿನ ಕೆಳಗೆ ಇಟ್ಟು ಪ್ರತಿಕೃತಿಯನ್ನು ಮಾಡಿಕೊಳ್ಳುತ್ತಿದ್ದರು. ಈ ಕೆಲಸ ಮುಗಿದ ನಂತರ ಆ ರೇಖಾ ಚಿತ್ರವನ್ನು ಎಸೆಯುತ್ತಿದ್ದಿಲ್ಲ. ಅದೇ ಮೂಲ ರೇಖಾ ಚಿತ್ರವನ್ನು ಬಳಸಿಕೊಂಡು ಸಾವಿರಾರು ಗಾಜಿನ ಚಿತ್ರಗಳನ್ನು ರಚನೆ ಮಾಡುತ್ತಿದ್ದರು. ಹೀಗಾಗಿ ಬಹುತೇಕ ಗಾಜಿನ ಚಿತ್ರಗಳು ಒಂದೇ ಚಿತ್ರವಿನ್ಯಾಸ ಹೊಂದಿದ ದೃಶ್ಯಗಳು ಬಹು ಸಂಖ್ಯೆಯಲ್ಲಿ ರಚನೆಗೊಂಡಿವೆ. ಒಂದು ದೃಶ್ಯದ ರೇಖಾಚಿತ್ರವನ್ನು ಸಶಕ್ತವಾಗಿ ನಿರ್ಮಿಸಿಕೊಂಡು ಸುರಕ್ಷಿತವಾಗಿ ಇಟ್ಟುಕೊಳ್ಳುತ್ತಿದ್ದರು. ಆ ಚಿತ್ರಗಳ ಬೇಡಿಕೆ ಹೆಚ್ಚಾದಂತೆ ರೇಖಾ ಚಿತ್ರಗಳನ್ನು ಬಳಸಿಕೊಂಡು ಬಹುಸಂಖ್ಯೆಯಲ್ಲಿ ಚಿತ್ರಗಳನ್ನು ತಯಾರಿಸುತ್ತಿದ್ದರು.

ವಿದೇಶಿ ಕಲಾಶೈಲಿಯ ಚೀನಿ ಚಿತ್ರಕಲಾವಿದರ ಚಿತ್ರಗಳು ಸಹ ಒಂದೇ ರೀತಿಯ ಚಿತ್ರಗಳು ಪ್ರತಿಕೃತಿಗೊಂಡಿವೆ. ಈ ಕಲಾವಿದರು ಸಹಿತ ಮೊದಲು ರೇಖಾ ಚಿತ್ರಗಳನ್ನು ಸಿದ್ಧಪಡಿಸಿಕೊಂಡು ನತರ ಗಾಜಿನ ಮೇಲೆ ಚಿತ್ರರಚನೆ ಮಾಡುತ್ತಿದ್ದಿರಬೇಕು. ಮೈಸೂರಿನ ಜನಗ್ಮೋಹನ ಅರಮನೆಯಲ್ಲಿ ಸಂಗ್ರಹವಿರುವ ಕೆಲವು ವ್ಯಕ್ತಿ ಚಿತ್ರಗಳು ಈ ರೀತಿ ಪ್ರತಿಕೃತಿಗೊಂಡಿದ್ದನ್ನು ಗಮನಿಸಬಹುದು. ಆದರೆ ನಮ್ಮ ಸಂಪ್ರದಾಯ ಚಿತ್ರಗಳಾದ ಕೃಷ್ಣ, ಯಶೋದೆ-ಕೃಷ್ಣ, ರಾಮನ ಪಟ್ಟಾಭಿಷೇಕ, ಲಕ್ಷ್ಮೀ, ಗಣಪತಿ ಹಾಗೂ ಕೆಲವು ವ್ಯಕ್ತಿಚಿತ್ರಗಳು ಬಹಳಷ್ಟು ಸಂಖ್ಯೆಯಲ್ಲಿ ಪ್ರತಿಕೃತಿಗೊಂಡಿವೆ.

ಇಂದು ಸಹಿತ ಗಾಜಿನ ಚಿತ್ರದ ರಚನೆಯಲ್ಲಿ ತೊಡಗಿರುವ ಅನೇಕ ಕಲಾವಿದರು ಮೊದಲು ರೇಖಾ ಚಿತ್ರಗಳನ್ನು ಸಿದ್ಧಪಡಿಸಿಕೊಂಡು ನಂತರ ತಮಗೆ ಬೇಕಾದ ಆಕಾರದಲ್ಲಿ ಪರಿವರ್ತಿಸಿಕೊಂಡು ಚಿತ್ರ ರಚನೆ ಮಾಡುತ್ತಿರುವರು. ಈ ರಚನಾ ಪದ್ಧತಿಯಲ್ಲಿ ರೇಖಾ ಚಿತ್ರಗಳ ಮಹತ್ವ ಬಹಳವಿದೆ.

### ❍ ಚಿತ್ರಪಟಗಳು (Posters)

ಪ್ರಿಂಟ ಮಾಡುವ ತಂತ್ರವನ್ನು ಕಂಡುಕೊಂಡು ನಂತರ ಚಿತ್ರಕಲಾ ಕ್ಷೇತ್ರದಲ್ಲಿ ಹೊಸ ಹೊಸ ಬದಲಾವಣೆಗಳು ಆಗತೊಡಗಿದವು. ಕಲ್ಲಚ್ಚು ಮುದ್ರಣದ ಆವಿಷ್ಕಾರದ ತರುವಾಯ ವರ್ಣಮಯ ಚಿತ್ರಗಳನ್ನು ಸಾವಿರಾರು ಪ್ರತಿಗಳಲ್ಲಿ ಹೊರತರಲಾಯಿತು. ಈ ಮುದ್ರಣ ತಂತ್ರದಿಂದ ಪ್ರಸಿದ್ಧ ಚಿತ್ರಕಲಾವಿದರ ತೈಲ ಚಿತ್ರಗಳನ್ನು ಪ್ರತಿರೂಪ ಮಾಡಿ ಜನಸಾಮಾನ್ಯರ ಕೈಗೆ ಸಿಗುವಂತಾಯಿತು. ಇವು ಕ್ಯಾಲೆಂಡರ ರೂಪದಲ್ಲಿ ಎಲ್ಲರ ಮನೆ ಮನೆಗಳಲ್ಲಿ ಅಲಂಕೃತಗೊಂಡವು.

ರಾಜಾ ರವಿವರ್ಮನ ಅನೇಕಚಿತ್ರಗಳು ಈ ಓಲಿಯೋಗ್ರಾಫ್ ಮುಖಾಂತರ ಸಾವಿರಾರು ಚಿತ್ರಗಳು ಪ್ರತಿರೂಪಗೊಂಡು ದೇಶ ವಿದೇಶಗಳಲ್ಲಿಯೂ ಪ್ರಸಿದ್ಧವಾದವು. ಇವರ ಚಿತ್ರಗಳನ್ನು ಅನೇಕ ಜಾಹಿರಾತುಗಳಲ್ಲಿ ಬಳಸಲಾಯಿತು. ಈ ರೀತಿಯ ಕ್ಯಾಲೆಂಡರ ಚಿತ್ರಗಳನ್ನು ಸದುಪಯೋಗ ಪಡಿಸಿಕೊಂಡವರು ಕನ್ನಡಿ ಚಿತ್ರಕಲೆ ಕುಶಲಕಲಾವಿದರು. ಇವರು ಇಂಥ ಅನೇಕ ದೇವರ ಚಿತ್ರಗಳನ್ನು ತೆಗೆದುಕೊಂಡು ಗಾಜಿನ ಹಿಂಬದಿಗೆ ಅಂಟಿಸಿ ಬೇಕಾದ ಭಾಗವನ್ನು ಕನ್ನಡಿಯ ಮೆರಗನ್ನು ಕೊಟ್ಟು ಅದಕ್ಕೆ ಒಪ್ಪುವಂತಹ ಚೌಕಟ್ಟನ್ನು ಹಾಕಿ ಮಾರಾಟ ಮಾಡುತ್ತಿದ್ದರು. ಈ ಬಗೆಯ ಚಿತ್ರಗಳನ್ನು ಹೈದರಬಾದ ಕರ್ನಾಟಕ ಹಾಗೂ ಮುಂಬೈ ಕರ್ನಾಟಕದ ಪ್ರದೇಶಗಳಲ್ಲಿ ಹೆಚ್ಚು ಸಂಖ್ಯೆಯಲ್ಲಿ ಕಾಣುತ್ತೇವೆ.

ಛಾಯಾಚಿತ್ರಯಂತ್ರ ಉದಯದ ನಂತರ ಅನೇಕ ಭಾವಚಿತ್ರಗಳನ್ನು (ವ್ಯಕ್ತಿಯ ಛಾಯಾಚಿತ್ರಗಳನ್ನು) ತತ್ತಿಯಾಕಾರವಾಗಿ (Ovel shape) ಕತ್ತರಿಸಿಕೊಂಡು ಗಾಜಿನ ಹಿಂಭಾಗ ದಲ್ಲಿ ಅಂಟಿಸಿ ಇನ್ನುಳಿದ ಭಾಗವನ್ನು ಕನ್ನಡಿಯ ಮೆರಗನ್ನು ಕೊಡಲಾಗುತ್ತಿತ್ತು. ಈ ಬಗೆಯ ಚಿತ್ರಗಳು ಸುರಪುರ, ಗುಲ್ಬರ್ಗ ಹಾಗೂ ಹುಮ್ನಾಬಾದಗಳಲ್ಲಿ ಕಾಣಸಿಗುತ್ತವೆ. ಗಾಜಿನ ಚಿತ್ರಕಲಾವಿದರು ದೇವರ ಚಿತ್ರಪಟಗಳನ್ನು ಹಾಗೂ ವ್ಯಕ್ತಿಗಳ ಭಾವಚಿತ್ರಗಳನ್ನು (ಛಾಯಾಚಿತ್ರಗಳನ್ನು) ಜನರ ಬೇಡಿಕೆಗನುಗುಣವಾಗಿ ರಚನೆ ಮಾಡಿರುವರು.

## ❍ ಚೌಕಟ್ಟುಗಳು (Frames)

ತೂಗು ಹಾಕುವ ಗಾಜಿನಚಿತ್ರಗಳಿಗೆ ಸೂಕ್ತವಾದ ಮರದ ಚಕಟ್ಟನ್ನು ಹಾಕಿ ಅಲಂಕರಿಸುವುದು ವಾಡಿಕೆ. ದೊಡ್ಡದಾದ ಚಿತ್ರಗಳಿಗೆ ಅಗಲವಾದ ಕುಸುರಿ ಕೆಲಸದ ಮರದ ಚೌಕಟ್ಟನ್ನು ಹೊದಿಸಿದರೆ, ಚಿಕ್ಕ ಚಿತ್ರಗಳಿಗೆ ಸಾಧಾರಣ ಚೌಕಟ್ಟನ್ನು ಹಾಕಿರುವುದನ್ನು ನೋಡುತ್ತೇವೆ. ಈ ಚಿತ್ರಕಾರರು ಅಷ್ಟೇನು ದುಭಾರಿಯಲ್ಲದ ಸಾಧಾರಣ ಚೌಕಟ್ಟನ್ನು ಹಾಕಿ ಮಾರಾಟ ಮಾಡುತ್ತಿದ್ದರೆಂದು ತೋರುತ್ತದೆ. ಸಾಂಪ್ರದಾಯಕ ಚಿತ್ರಗಳಾದ ಮೈಸೂರು ಮತ್ತು ತಂಜಾವೂರು ಚಿತ್ರಗಳ ಚೌಕಟ್ಟುಗಳನ್ನು ಹೋಲಿಸಿದರೆ, ಈ ಚಿತ್ರಕಾರರು ಸಾಧಾರಣ ಚೌಕಟ್ಟನ್ನು ಬಳಸುತ್ತಿದ್ದುದು ಕಂಡು ಬರುತ್ತದೆ.

ಈ ಚಿತ್ರಕಾರರು ಚೌಕಟ್ಟನ್ನು ಅಷ್ಟೊಂದು ಕಲಾತ್ಮಕವಾಗಿ ಪ್ರಾಧಾನ್ಯತೆ ನೀಡುತ್ತಿರಲಿಲ್ಲವೆಂದೇ ಹೇಳಬಹುದು. ಇದಕ್ಕೆ ಕಾರಣ ಆ ಚಿತ್ರಗಳನ್ನು ಕಡಿಮೆ ಬೆಲೆಗೆ ಮಾರಾಟ ಮಾಡಿ ಹೊಟ್ಟೆ ಹೊರೆಯುತ್ತಿರುವುದು ಒಂದು ಕಾರಣವಾಗಿರಬಹುದು. ಕೆಲವೊಂದು ಚಿತ್ರಗಳಲ್ಲಿ ಉತ್ತಮ ಚೌಕಟ್ಟನ್ನು ಹೊಂದಿರುವುದನ್ನು ನೋಡುತ್ತೇವೆ. ಪೋಷಕರು ಪುನಃ ತಮಗೆ ಬೇಕಾದಂತಹ ಉತ್ಕೃಷ್ಟ ಮಟ್ಟದ ಚೌಕಟ್ಟನ್ನು ಹಾಕಿಸಿಕೊಳ್ಳುತ್ತಿದ್ದಿರಬೇಕು. ಯಾಕೆಂದರೆ ಕೆಲವು ಶ್ರೀಮಂತರ ಮನೆಗಳಲ್ಲಿ ಈ ಬಗೆಯ ಚೌಕಟ್ಟುಗಳನ್ನು ಹೊಂದಿದ ಚಿತ್ರಗಳು ಕಂಡುಬರುತ್ತವೆ.

## ❍ ರಕ್ಷಣಾ ಹಲಗೆಗಳು

ಗಾಜಿನ ಚಿತ್ರಕಾರರು ಚಿತ್ರಗಳಿಗೆ ಎರಡು ರೀತಿಯ ರಕ್ಷಣಾ ಹಲಗೆಗಳನ್ನು ಬಳಸಿರುವರು. ಒಂದು ಮರದ ತೆಳುವಾದ ಹಲಗೆಗಳನ್ನು, ಇನ್ನೊಂದು ಗಟ್ಟಿಯಾದ ತಗಡಿನ ಹಾಳೆಗಳನ್ನು ಬಳಸಿದ್ದಾರೆ. ಮರದ ಹಲಗೆಗಳು ಕೂಡಾ ಅಷ್ಟೇನು ಗಟ್ಟಿಮುಟ್ಟಾಗಿರುವದು ತೋರುವುದಿಲ್ಲ. ಸಾಧಾರಣ ಮರದ ಹಗುರವಾದ ಹಲಗೆಗಳನ್ನು ಬಳಸಿದ್ದನ್ನು ಕಾಣಬಹುದು. ತಗಡಿನ ಹಾಳೆಗಳು ಸ್ವಲ್ಪ ಸುರಕ್ಷಿತವೆನ್ನಬಹುದಾದ ರಕ್ಷಣಾ ಹಾಳೆಗಳಾಗಿವೆ. ಯಾಕೆಂದರೆ ಈ ಹಾಳೆಗಳು ತೆಳುವಾಗಿರುವುದರಿಂದ ಚೌಕಟ್ಟಿಗೆ ಹೊಂದಿಕೆಯಾಗಿ ಕೂಡುತ್ತದೆ. ಯಾವುದೇ ತರದ ಕಿಂಡಿ ಬಿಳುವುದಿಲ್ಲ. ಇದರ ಒಳಗೆ ಯಾವುದೇ ರೀತಿಯ ಕ್ರಿಮಿ ಕೀಟಗಳು ಒಳಗೆ ಹೋಗಲು ಆಸ್ಪದವಿಲ್ಲ.

ರಕ್ಷಣಾ ಹಲಗೆಗಳು ಸರಿಯಾಗಿ ಜೋಡಣೆಯಾಗದಿದ್ದರೆ, ಅಲ್ಲಿ ಕಿಂಡಿಗಳು ಉಂಟಾಗಿ ಸುಲಭವಾಗಿ ಕ್ರಿಮಿಕೀಟಗಳು ಪ್ರವೇಶ ಮಾಡಿ ಬಣ್ಣಗಳನ್ನು ತಿಂದು ಹಾಕುವ ಸಾಧ್ಯತೆಗಳಿವೆ. ಈ ರೀತಿ ಇದ್ದಂತಹ ಚಿತ್ರಗಳು ಅನೇಕ ಕಡೆ ಕಾಣ ಸಿಗುತ್ತವೆ. ಎಷ್ಟೋ ಚಿತ್ರಗಳು ಸರಿಯಾದ ಚೌಕಟ್ಟು ಮತ್ತು ರಕ್ಷಣಾ ಹಾಳೆಗಳು ಸರಿಯಾಗಿ ಇರದೇ ಇರುವುದಕ್ಕೆ ಹಾಳಾಗಿಹೋಗಿವೆ. ಗಾಜಿನ ಚಿತ್ರಕಲೆಯಲ್ಲಿ ಚಿತ್ರರಚನೆ ಎಷ್ಟು ಮುಖ್ಯವೋ ಅಷ್ಟೇ ಅದರ ರಕ್ಷಣೆಗೆ ಬೇಕಾಗುವ ಚಕಟ್ಟುಗಳು ಮತ್ತು ರಕ್ಷಣಾ ಹಲಗೆಗಳು ಮುಖ್ಯವಾಗಿವೆ.

## ರಚನಾ ವಿಧಾನ

ಯಾವುದೇ ರೀತಿಯ ಚಿತ್ರಕಲೆಯ ರಚನಾ ವಿಧಾನವು ಆಯಾ ಪರಿಕರಗಳ ಹಾಗೂ ಕಲಾವಿದರ ಮೇಲೆ ಅವಲಂಬಿತವಾಗಿರುತ್ತದೆ. ಭಿತ್ತಿ, ಕಾಗದ, ಕಟ್ಟಿಗೆ, ಲೋಹ ಹಾಗೂ ಕ್ಯಾನ್ವಾಸ್‌ಗಳಂತಹ ಫಲಕಗಳ ಮೇಲೆ ಚಿತ್ರ ಬರೆಯುವ ವಿಧಾನ ಒಂದೇಯಾಗಿದ್ದರೂ ಬಳಸುವ ರೀತಿ ನೀತಿಗಳು ಹಾಗೂ ಕಲಾವಿದರ ಕಲ್ಪನೆಯಲ್ಲಿ ವೈವಿಧ್ಯತೆಗಳು ಕಂಡುಬರುತ್ತವೆ. ಅದೇ ಗಾಜಿನಂತಹ ಫಲಕದ ಮೇಲೆ ಚಿತ್ರ ಬರೆಯುವ ಪರಿಕರಗಳು ಹಾಗೂ ರಚನಾ ಕ್ರಮಗಳು ವಿಭಿನ್ನವಾಗಿರುವುದನ್ನು ನೋಡಬಹುದು. ಇಲ್ಲಿ ಗಾಜು ಒಂದು ಪಾರದರ್ಶಕವಾದ, ನುಣುಪಾದ ಮೈಪಾತಳಿಯನ್ನು ಹೊಂದಿರುವುದರಿಂದ ಕಲಾಕಾರನು ಎರಡೂ ಮೈಪಾತಳಿಗಳನ್ನು ಬಳಸಿಕೊಂಡು ಅದಕ್ಕೆ ಹೊಂದಾನಿಕೆಯಾಗುವಂತಹ ಪರಿಕರಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ಅದೇ ರೀತಿ ಗಾಜನ್ನು ಬೇಕಾದಂತೆ ತುಂಡು ತುಂಡಾಗಿ ಕತ್ತರಿಸಿಕೊಂಡು ಅಲಂಕಾರಿಕವಾಗಿ ಜೋಡಿಸಿ ವೈವಿಧ್ಯಮಯ ಬಣ್ಣಗಳನ್ನು ಸಂಯೋಜಿಸಿ ಕೃತಿಯನ್ನು ರಚಿಸಬಹುದು.

ಗಾಜಿನ ಒಂದು ಮೈಪಾತಳಿಗಳನ್ನು ಬಳಸಿಕೊಂಡು ರೇಖೆ, ವರ್ಣ ಹಾಗೂ ಅಲಂಕಾರಿಕ ಕಾಗದಗಳ ಮೂಲಕ ಚಿತ್ರವನ್ನು ರಚಿಸಬಹುದಾಗಿದೆ. ಗಾಜಿನ ಒಂದು ಬದಿಗೆ ಕ್ಯಾಲೆಂಡರ ಹಾಗೂ ಛಾಯಾಚಿತ್ರಗಳನ್ನು ಬಳಸಿ, ಕನ್ನಡಿಯಂತಹ ಮೆರಗನ್ನು ನೀಡಿ ಸುಂದರವಾದ ಚಿತ್ರವನ್ನು ರಚಿಸಬಹುದಾಗಿದೆ. ಹಾಗೂ ಗಾಜಿನ ಮೈಪಾತಳಿಗಳನ್ನು ಕೊರೆದು ವೈವಿಧ್ಯಮಯ ಗಾಜಿನ ಚಿತ್ರಗಳನ್ನು ರಚನೆ ಮಾಡಬಹುದಾಗಿದೆ.

ಇಲ್ಲಿ ಮುಖ್ಯವಾಗಿ ಕರ್ನಾಟಕದಲ್ಲಿ ಲಭ್ಯವಿರುವ ಗಾಜಿನ ಚಿತ್ರಗಳ ರಚನಾ ವಿಧಾನವನ್ನು ಚರ್ಚಿಸಲು ಪ್ರಯತ್ನಿಸಲಾಗುತ್ತಿದೆ. ಇಲ್ಲಿ ಎರಡು ರೀತಿಯ ಗಾಜಿನ ಚಿತ್ರಗಳ ರಚನಾ ವಿಧಾನಗಳನ್ನು ಕಾಣಬಹುದು ೧. ಸ್ಟೇನ್ಡ್ ಗ್ಲಾಸ್ ಚಿತ್ರಗಳ ರಚನಾ ವಿಧಾನ ೨. ತೂಗುಹಾಕುವ ಗಾಜಿನ ಚಿತ್ರಗಳ ರಚನಾ ವಿಧಾನ ಎಂದು ವಿಂಗಡಿಸಿಕೊಂಡು ಇಲ್ಲಿ ವಿವೇಚಿಸಲಾಗುತ್ತಿದೆ.

### ೦೧. ಸ್ಟೇನ್ಡ್ ಗ್ಲಾಸ್ ಚಿತ್ರಗಳ ರಚನಾ ವಿಧಾನ

ಸ್ಟೇನ್ಡ್ ಗ್ಲಾಸ್ ಚಿತ್ರಗಳೆಂದರೆ ವೈವಿಧ್ಯಮಯ ಬಣ್ಣದ ಗಾಜುಗಳನ್ನು ಕತ್ತರಿಸಿ, ಮೆದುವಾದ ಸತುವಿನಿಂದ ಕತ್ತರಿಸಿದ ಗಾಜಿನ ತುಂಡುಗಳನ್ನು ಬಂಧಿಸಿ ಚಿತ್ರ ರಚಿಸುವ ಕ್ರಮವಾಗಿದೆ. ಇಲ್ಲಿ ಯಾವುದೇ ಒಂದು ಚಿತ್ರ ಬರೆಯಬೇಕಾದರೆ ಮೊದಲು ರೇಖಾ ಚಿತ್ರ ಸಿದ್ಧಪಡಿಸಿಕೊಳ್ಳಬೇಕು. ನಂತರ ಪಾರದರ್ಶಕ ಗಾಜಿನ ಹಾಳೆಯನ್ನು ತೆಗೆದುಕೊಂಡು ಅದರ ಮೇಲೆ ರೇಖಾಚಿತ್ರವನ್ನು ರಚಿಸಿಬೇಕು. ಆ ನಂತರ ರೇಖಾ ಚಿತ್ರ ಬರೆದ ಗಾಜನ್ನು ಅನುಕೂಲಕ್ಕೆ ತಕ್ಕಂತೆ ಕತ್ತರಿಸಿ ಮೆದುವಾದ ಸತುವಿನೊಂದಿಗೆ ಪುನಃ ಬಂದಿಸಬೇಕು. ಈ ರೀತಿಯಾಗಿ ಸತುವಿನೊಂದಿಗೆ ಬಂಧಿಸಿದ ಗಾಜಿನ ರೇಖಾ ಚಿತ್ರವನ್ನು ಚಿತ್ರಕ್ಕೆ ತಕ್ಕಂತೆ ತೈಲವರ್ಣಗಳನ್ನು ಸಂಯೋಜನೆ ಮಾಡಬೇಕು. ಈ ರೀತಿಯಾಗಿ ಸಿದ್ಧಗೊಂಡ ಗಾಜಿನ ಚಿತ್ರವನ್ನು ವಾಸ್ತು ಕಟ್ಟಡದ ಕಿಟಕಿಗಳಿಗೆ ಕಬ್ಬಿಣದ ಸರಳುಗಳ

ಆಧಾರವಾಗಿ ಅಳವಡಿಸಬೇಕು. ಈ ರೀತಿಯಾಗಿ ಅಳವಡಿಸಿದ ಗಾಜಿನ ಚಿತ್ರವು ಹೊರಗಿನ ಬೆಳಕಿನಿಂದ ಅತ್ಯಂತ ಆಕರ್ಷಕವಾಗಿ ವರ್ಣಮಯ ಬೆಳಕಿನಿಂದ ಗೋಚರಿಸುತ್ತದೆ. ಇದನ್ನು ಸ್ಟೇನ್ಡ್ ಗ್ಲಾಸ್ ಚಿತ್ರ ಎಂದು ಕರೆಯುವರು.

ಈ ರೀತಿಯ ಗಾಜಿನ ಚಿತ್ರಗಳ ರಚನಾ ಪದ್ಧತಿಯು ಮಧ್ಯಕಾಲೀನ ಪೂರ್ವದ ಹಾಗೂ ನಂತರದ ಕಾಲದಲ್ಲಿನ ಕ್ರೈಸ್ತ ದೇವಾಲಯಗಳಲ್ಲಿ ಕಿಟಕಿಗಳಿಗೆ ಅಳವಡಿಸಲಾಗುತ್ತಿತ್ತು. ಪ್ರಾರಂಭದ ದಿನಗಳಲ್ಲಿ ಕೇವಲ ಜ್ಯಾಮಿತಿಕ ನಕ್ಷೆಗಳಂತಹ ಚಿತ್ರಗಳನ್ನು ಅಳವಡಿಸಲಾಗುತ್ತಿತ್ತು. ನಂತರ ಕ್ರೈಸ್ತ ಕಥಾನಕ, ಧಾರ್ಮಿಕ ಪುರುಷರ ಹಾಗೂ ದೇವಾಲಯ ಕಟ್ಟಡಗಳಿಗೆ ಧನಸಹಾಯ ಮಾಡಿದವರ ಚಿತ್ರ ಸರಣಿಗಳನ್ನು ಬರೆಯಲಾಗುತ್ತಿತ್ತು. ಆ ಸಂದರ್ಭಗಳಲ್ಲಿನ ಯಾವುದೇ ಕ್ರೈಸ್ತ ದೇಗುಲಗಳಲ್ಲಿ ಸ್ಟೇನ್ಡ್ ಗ್ಲಾಸ್ ಚಿತ್ರಗಳನ್ನು ಮುಖ್ಯವಾಗಿ ಅಳವಡಿಸಲಾಗುತ್ತಿತ್ತು.

ಕ್ರೈಸ್ತ ದೇಗುಲಗಳು ಅತ್ಯಂತ ಭವ್ಯವಾದ ಕಟ್ಟಡಗಳಾಗಿರುವುದರಿಂದ ದೊಡ್ಡ ದೊಡ್ಡ ಬಾಗಿಲು ಕಿಟಕಿಗಳನ್ನು ಹೊಂದಿರುತ್ತಿದ್ದವು. ಹಾಗಾಗಿ ಅಷ್ಟು ದೊಡ್ಡ ಗಾಜು ಒಂದೇ ಹಾಳೆಯಾಗಿ ಲಭ್ಯವಿರದ ಕಾರಣ ಅನೇಕ ಗಾಜಿನ ಹಾಳೆಗಳನ್ನು ಆಯ್ದುಕೊಂಡು ಬೇಕಾದ ರೇಖಾ ಚಿತ್ರ ಬರೆದು, ಅನೇಕ ತುಂಡುಗಳನ್ನಾಗಿ ವಿಭಜಿಸಿಕೊಂಡು ಸತುವನ್ನು ಬಳಸಿಕೊಂಡು ಅವುಗಳನ್ನು ಬಂದಿಸಿ ವರ್ಣಚಿತ್ರಗಳನ್ನು ತಯಾರು ಮಾಡುತ್ತಿದ್ದರೆಂದು ತೋರುತ್ತದೆ. ಸ್ಟೇನ್ಡ್ ಗ್ಲಾಸ್ ಚಿತ್ರಗಳ ಪ್ರಮುಖ ಅಂಶವೆನೆಂದರೆ ವರ್ಣ ಚಿತ್ರಗಳ ಮೂಲಕ ಬೆಳಕು ಬಂದಾಗ ಆ ಚಿತ್ರಗಳು ಅತ್ಯತ ಆಕರ್ಷಕವಾಗಿ ಕಂಡು ನೋಡುಗರನ್ನು ವಿಸ್ಮಿತರನ್ನಾಗಿಸುತ್ತವೆ.

ಸ್ಟೇನ್ಡ್ ಗ್ಲಾಸ್ ಚಿತ್ರಗಳನ್ನು ಗಾತಿಕ್ ಕಲೆಯ ವಾಸ್ತು ಶಿಲ್ಪಗಳಲ್ಲಿ ಹೆಚ್ಚು ಹೆಚ್ಚು ಸಂಖ್ಯೆಗಳಲ್ಲಿ ಬಳಸಲಾಗುತ್ತಿತ್ತು. ಗಾತಿಕ್ ವಾಸ್ತುಶಿಲ್ಪದ ಪ್ರಮುಖ ಲಕ್ಷಣವೆನೆಂದರೆ ಜ್ಯಾಮಿತಿಕ ಆಕಾರದ ಚೂಪು ಕಮಾನಿನ ಕಲೆ ಎಂದು ಅರ್ಥೈಸುವುದಾಗಿದೆ. ಹಾಗಾಗಿ ಇವರಿಂದಲೇ ಗಾಜನ್ನು ಆಕರ್ಷಕವಾಗಿ ಬಳಸಿಕೊಂಡಿರಬಹುದಾದ ಸಂಗತಿಯನ್ನು ತಿಳಿಸುತ್ತದೆ. ೧೨೨೦–೧೨೩೦ ರ ಕಾಲದಲ್ಲಿ ಆ್ಯಮನ್ಸ್ ಮತ್ತು ರೀಮ್ಸ್ ಕಟ್ಟಡಗಳಲ್ಲಿ ಸ್ಟೇನ್ಡ್ ಗ್ಲಾಸ್‌ಗಳು ಹೆಚ್ಚು ಪ್ರಮಾಣದಲ್ಲಿ ಕಂಡು ಬರುತ್ತವೆ. ಇದೇ ಅವಧಿಯಲ್ಲಿ ಗಾಜುಗಳ ಬಳಕೆ ಹೆಚ್ಚಾದಂತೆ ಅದರ ಬಣ್ಣಗಳಲ್ಲಿಯೂ ವೈವಿಧ್ಯತೆಯನ್ನು ತರಲಾಯಿತು. ಮೊದ ಮೊದಲು ಬಣ್ಣಗಳು ತಿಳಿಯಾಗಿರುತ್ತಿದ್ದವು ನಂತರ ದಟ್ಟವರ್ಣಗಳನ್ನು ಬಳಸಲಾಗುತ್ತಿತ್ತು. ಈ ಪದ್ಧತಿಯು ೧೩–೧೪ ನೆಯ ಶತಮಾನದಲ್ಲಿ ಸುಸ್ಥಿತಿಯಲ್ಲಿತ್ತು ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[೨೨]

ಗಾತಿಕ್ ಕಲೆಯಲ್ಲಿನ ಗಾಜಿನ ಚಿತ್ರಗಳನ್ನು ಫ್ರೆಂಚ್ ಕಲಾವಿದರು ರಚಿಸಿರುವುದನ್ನು ಬಹುತೇಕ ಆ ಕಾಲದ ಚರ್ಚುಗಳಲ್ಲಿನ ಗಾಜಿನ ಚಿತ್ರಗಳಿಂದ ತಿಳಿಯಬಹುದಾಗಿದೆ. ಅರೇಕಾಲಿನಂತಹ ತ್ರಿಜ್ಯ ಪಟ್ಟಿಗಳುಳ್ಳ ಗುಂಡು ಕಿಟಕಿಗಳು ೧೨–೧೩ನೇ ಶತಮಾನದ ಚರ್ಚದ ವಾಸ್ತು ಕಟ್ಟಡಗಳಲ್ಲಿ ಬಳಕೆಗೆ ಬಂದವು. ಇದಕ್ಕೆ ತಕ್ಕಂತೆ ಗಾಜನ್ನು ಅಳವಡಿಸಿ ಅದರ ಮೇಲೆ ವರ್ಣಚಿತ್ರಗಳನ್ನು ಬರೆಯಲಾಗುತ್ತಿತ್ತು.[೨೩]

೨೨. ಎ.ವಿ.ಎನ್ : (ಸಂ) ಕನ್ನಡ ವಿಶ್ವಕೋಶ (ಸಂಪುಟ–ಆರು), ಪುಟ ೨೧೩

೨೩. ಎ.ವಿ.ಎನ್ : (ಸಂ) ಕನ್ನಡ ವಿಶ್ವಕೋಶ (ಸಂಪುಟ–ಆರು), ಪುಟ ೨೧೩

ಗಾತಿಕ್ ಪೂರ್ವದ ರೋಮನೆಸ್ಕ್ ಕಲೆಯಲ್ಲಿಯೂ ಸ್ಟೇನ್ಸ್‌ಗ್ಲಾಸ್ ಚಿತ್ರಗಳು ಸಾಕಷ್ಟು ಸಂಖ್ಯೆಗಳಲ್ಲಿ ಸಿಗುತ್ತವಾದರೂ ಗಾತಿಕ್ ವಾಸ್ತು ಕಟ್ಟಡಗಳಲ್ಲಿ ಬಳಸಿದಷ್ಟು ಇಲ್ಲಿ ಕಂಡು ಬರುವುದಿಲ್ಲ. ರೋಮನೆಸ್ಕ್ ಸ್ಟೇನ್ಡ್ ಗ್ಲಾಸ್ ಚಿತ್ರಗಳ ರಚನೆಯಲ್ಲಿ ಅತೀಯಾದ ಅಲಂಕರಣೆ, ಓರಣವಾದ, ಡ್ರ್ಯಾಪರಿಯ ರಚನೆ ಸುತ್ತಲೂ ಹೂವಿನಂತಹ ಅಲಂಕಾರಿಕತೆ ಪ್ರಧಾನವಾಗಿ ರಚನೆಗೊಂಡಿವೆ. ಗಾತಿಕ್ ನಂತರದ ಬಾರೊಕೊ, ರೊಕೊಕೊ ಹಾಗೂ ಆಧುನಿಕ ಕಲೆಯ ವಾಸ್ತುಗಳಲ್ಲಿ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಸ್ಟೇನ್ಡ್ ಗ್ಲಾಸ್ ಚಿತ್ರಗಳು ಕರ್ನಾಟಕದಲ್ಲಿ ೧೮-೧೯ ನೆಯ ಶತಮಾನಗಳ ಚರ್ಚವಾಸ್ತುಶಿಲ್ಪಗಳಲ್ಲಿ ರಚನೆಗೊಂಡಿದ್ದನ್ನು ನೋಡಬಹುದಾಗಿದೆ.

ಬೆಂಗಳೂರಿನಲ್ಲಿ ವಿವಿಧ ಪಂಗಡಗಳಿಗೆ ಸೇರಿದ ಚರ್ಚುಗಳು ಕಾಣಸಿಗುತ್ತವೆ. ಇದರಲ್ಲಿ ಶಿವಾಜಿನಗರದ ಸಂತ ಮೇರಿಬೆಸಿಲಿಕಾ ಚರ್ಚು ಗಾತಿಕ್ ಮಾದರಿಯಲ್ಲಿದೆ. ಇಲ್ಲಿ ವೃತ್ತಾಕಾರದ ಹಾಗೂ ತ್ರಿಜ್ಯಾಕಾರವಾಗಿ ಬಾಗಿದ ಕಿಟಕಿಗಳಲ್ಲಿ ಸ್ಟೇನ್ಡ್ ಗ್ಲಾಸ್ ಚಿತ್ರಗಳು ರಚನೆಗೊಂಡಿವೆ. ಈ ಚಿತ್ರಗಳ ರಚನೆಯಲ್ಲಿ ಆಕೃತಿಗಳನ್ನು ತ್ರಿಕರಣ ರೂಪವಾಗಿ ವರ್ಣಗಳನ್ನು ಬಳಸಿರುವರು. ಬಹುತೇಕ ಪ್ರಾಥಮಿಕ ತೈಲವರ್ಣಗಳನ್ನು ಸಂಯೋಜಿಸಿರುವರು. ಫ್ರೆಂಚ್ ಕಲಾಕಾರರು ಈ ಚಿತ್ರಗಳನ್ನು ರಚಿಸಿರಬಹುದಾಗಿದೆ.

ಮಂಗಳೂರಿನಲ್ಲಿ ಹಲವಾರು ಚರ್ಚುಗಳು ಕಂಡು ಬರುತ್ತಿದ್ದು ಆ ಚರ್ಚುಗಳಲ್ಲಿಯ ಬಹುತೇಕ ಸ್ಟೇನ್ಡ್ ಗ್ಲಾಸ್ ಚಿತ್ರಗಳು ೧೯೦೦ ರ ಪ್ರಥಮಾರ್ಧದಲ್ಲಿ ರಚನೆಗೊಂಡಿವೆ ಎನ್ನಬಹುದು. ಇಲ್ಲಿಯ ಕ್ಲೋಯಿಸ್ಟ್ರೇಡ್ ಕಾರ್ಮೆಲ್ ಚರ್ಚು ಕಂಕನಾಡಿಯಲ್ಲಿ ೧೮೯೯ ರಲ್ಲಿ ಪ್ಯಾರಿಸ್ ಕಲಾಕಾರರು ರಚಿಸಿದ ಹಲವಾರು ಸ್ಟೇನ್ಡ್ ಗ್ಲಾಸ್ ಚಿತ್ರಗಳಿವೆ. ಈ ಚರ್ಚು ಕೂಡಾ ಗಾತಿಕ್ ಮಾದರಿಯಲ್ಲಿದೆ. ಕೆಂಪು, ನೀಲಿ, ಹಸಿರು, ಬಿಳಿ ವರ್ಣಗಳಿಂದ ಸಂಯೋಜನೆಗೊಳಿಸಲಾಗಿದ್ದು, ಆಕರ್ಷಕ ವರ್ಣವೈವಿಧ್ಯತೆಯನ್ನು ಕಾಣಬಹುದು. ಮಂಗಳೂರಿನ ಕುಲಶೇಖರದ ಚರ್ಚನಲ್ಲಿ ಕ್ರೈಸ್ತ ಧಾರ್ಮಿಕ ಪುರುಷರ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಹಳದಿ, ಕೆಂಪು, ಕಂದು, ಬಿಳಿ, ನೀಲಿ, ಹಸಿರು ವರ್ಣಗಳ ಸಂಯೋಜನೆಯಲ್ಲಿ ಆಕರ್ಷಕವಾಗಿ ರಚನೆಗೊಂಡಿವೆ. ತ್ರಿಕರಣ (೩ಡಿ) ರೂಪದಲ್ಲಿ ವರ್ಣಗಾರಿಕೆಯನ್ನು ತರಲಾಗಿದ್ದು ಈ ಚಿತ್ರಗಳನ್ನು ಕೂಡಾ ಫ್ರಾನ್ಸ್‌ದಿಂದ ತರಿಸಿ ಅಳವಡಿಸಿರಬಹುದು. ಯಾಕೆಂದರೆ ಫ್ರಾನ್ಸ್‌ದಲ್ಲಿ ಸ್ಟೇನ್ಡ್ ಗ್ಲಾಸ್ ಚಿತ್ರಗಳ ತಯಾರಿಕೆಯ ಅನೇಕ ಕಂಪನಿಗಳಿದ್ದವು. ಇವರು ಪ್ರಪಂಚದಾದ್ಯಂತ ಈ ಚಿತ್ರಗಳನ್ನು ರಫ್ತು ವಹಿವಾಟು ಮಾಡುತ್ತಿದ್ದರು. ಇವರು ಸ್ಟೇನ್ಡ್ ಗ್ಲಾಸ್ ಚಿತ್ರಗಳ ರಚನೆಯಲ್ಲಿ ಅತ್ಯಂತ ಪ್ರಬುದ್ಧತೆಯನ್ನು ಹೊಂದಿದವರಾಗಿದ್ದರು.

ಮಂಗಳೂರಿನ ಸಂತ ಎಲೋಸಿಯಸ್ ಚರ್ಚದಲ್ಲಿ ೧೮ನೇ ಶತಮಾನಕ್ಕೆ ಸಂಬಂಧಿಸಿದ ಸ್ಟೇನ್ಡ್ ಗ್ಲಾಸ್ ಚಿತ್ರಗಳಿವೆ. ಈ ಚಿತ್ರಗಳ ರಚನೆಯಲ್ಲಿ ಗಾಜನ್ನು ಆಕೃತಿಗೆ ತಕ್ಕಂತೆ ತುಂಡುಗಳನ್ನಾಗಿ ಮಾಡಿಕೊಂಡು ಚಿತ್ರರಚನೆ ಮಾಡಿದ್ದಾರೆ. ಚಿತಗಳ ಅಲಂಕರಣವೂ ಕೂಡಾ ಓರಣವಾಗಿದೆ ಎನ್ನಬಹುದು. ಮೈಸೂರಿನ ಸಂತ ಫಿಲೋಮಿನಾ ಚರ್ಚು ಗಾತಿಕ್ ಮಾದರಿಯ ಅಪರೂಪದ ವಾಸ್ತು ಕಟ್ಟಡಗಳಲ್ಲಿ ಒಂದಾಗಿದೆ. ಇಲ್ಲಿ ಗಾಜನ್ನು ಅತೀ ಚಿಕ್ಕ ಚಿಕ್ಕ ತುಂಡುಗಳನ್ನಾಗಿ ಕತ್ತರಿಸಿ ಸತುವಿನೊಂದಿಗೆ ಬಂದಿಸಿ ಜೋಡಣೆ ಮಾಡಲಾಗಿದೆ. ವರ್ಣ ಸಂಯೋಜನೆಯಲ್ಲಿ ಗಾಢ

ನೀಲಿ, ತಿಳಿನೀಲಿ, ಪರ್ಪಲ್, ಹಸಿರು, ಹಳದಿ, ಬಿಳಿವರ್ಣಗಳನ್ನು ಪ್ರಧಾನವಾಗಿ ಬಳಸಲಾಗಿದೆ. ಈ ವರ್ಣಗಳು ತೈಲಮಾಧ್ಯಮದಲ್ಲಿ ಸಂಯೋಜನೆಗೊಂಡಿವೆ. ಇದೇ ಚರ್ಚನಲ್ಲಿ ಏಕರೂಪದ ಗಾಜಿನ ಹಾಳೆಗಳಲ್ಲಿ ಅಪಾರದರ್ಶಕ ಟೆಂಪರಾ ವರ್ಣಗಳನ್ನು ಸಂಯೋಜಿಸಿದ ಗಾಜಿನ ಚಿತ್ರಗಳಿವೆ. ಇಲ್ಲಿ ಯಾವುದೇ ರೀತಿಯಾಗಿ ಗಾಜನ್ನು ಕತ್ತರಿಸದೇ ಚೌಕಾರವಾಗಿ ಕಿಟಕಿಯ ಸರಳುಗಳಿಗೆ ಬಂದಿಸಲಾಗಿದೆ. ನಂತರ ಪಾರದರ್ಶಕ ಪದ್ಧತಿಯಲ್ಲಿ ವರ್ಣ ಸಂಯೋಜನೆ ಮಾಡಲಾಗಿದೆ. ಈ ಚಿತ್ರಗಳಲ್ಲಿ ಕಂದುಗೆಂಪು, ಕಪ್ಪು, ನೀಲಿ, ಕಪ್ಪು ನೀಲಿ ಮಿಶ್ರಿತ, ಹಳದಿ ಹಾಗೂ ಬಿಳಿವರ್ಣಗಳು ಪ್ರಧಾನವಾಗಿವೆ. ಇವು ಜಲವರ್ಣದ ಪದ್ಧತಿಯಲ್ಲಿ ರಚನೆಗೊಂಡಿರಬಹುದು.

ಮೈಸೂರಿನ ಸಂತ ಬಾರ್ತೋಲೊಮಿವ್ ಚರ್ಚನಲ್ಲಿನ ಸ್ಟೇನ್ಡ್ ಗ್ಲಾಸ್ ಚಿತ್ರಗಳು ೧೯೧೦ ರ ದಶಕದಲ್ಲಿ ರಚನೆಗೊಂಡಿರುವುವು. ಇವುಗಳನ್ನು ಮೈಸೂರಿನ ಅರಸರು ಕೊಡುಗೆಯಾಗಿ ನೀಡಿದ್ದರು. ಈ ಚಿತ್ರಗಳ ರಚನೆಯಲ್ಲಿ ಗಾಜನ್ನು ಆಕೃತಿಗಳಿಗೆ ತಕ್ಕಂತೆ ಎಷ್ಟುಬೇಕೋ ಅಷ್ಟನ್ನು ಕತ್ತರಿಸಿ ಸತುವಿನೊಂದಿಗೆ ಬಂಧಿಸಿ ವರ್ಣ ಸಂಯೋಜನೆ ಮಾಡಿದ್ದಾರೆ. ಎರಡು ಚಿತ್ರಗಳನ್ನು ಇತ್ತೀಚೆಗೆ ಸ್ಥಳೀಯ ಕಲಾವಿದರು ರಚಿಸಿರುವರು. ಹಳದಿ, ನೀಲಿ, ಕೆಂಪು ಮತ್ತು ಹಸಿರು ವರ್ಣಗಳನ್ನು ಸಂಯೋಜಿಸಲಾಗಿದೆ. ಇಲ್ಲಿ ಸ್ಟ್ರಕ್ಚರ್ ಗ್ಲಾಸಗಳನ್ನು ಬಳಸಿದ್ದೂ ಒಂದು ವಿಶೇಷ ಎನ್ನಬಹುದು.

೧೯೦೦ ರ ಆಸುಪಾಸಿನಲ್ಲಿ ಮೈಸೂರು ಅರಮನೆಯ ನಿರ್ಮಾಣ ಕಾರ್ಯದಲ್ಲಿ ಸ್ಟೇನ್ಡ್ ಗ್ಲಾಸ್ ಚಿತ್ರಗಳನ್ನು ಬಳಸಿದ್ದಾರೆ. ಅರಮನೆಯ ಕಲ್ಯಾಣಮಂಟಪದ ಮೇಲ್ಛಾವಣಿ ಹಾಗೂ ಅಂಬಾವಿಲಾಸದ ಮೇಲ್ಛಾವಣಿ ಸಂಪೂರ್ಣ ಗಾಜಿನ ಚಿತ್ರಗಳಿಂದ ಆವರಿಸಿಕೊಂಡಿವೆ. ಈ ಕಾರ್ಯವನ್ನು ಗ್ಲಾಸ್ಗೋ ಕಂಪನಿಯವರು ನಿರ್ವಹಿಸಿರುವರು ಎಂದು ತಿಳಿದು ಬರುತ್ತದೆ. ಸ್ಥಳೀಯ ಕಲಾವಿದರು ಹಾಗೂ ವಿದೇಶಿಯ ಕರಕುಶಲ ಕಲಾವಿದರೂ ಸೇರಿ ಈ ಕಾರ್ಯವನ್ನು ನಿರ್ವಹಿಸಿದ್ದಾರೆ. ಈ ಸ್ಟೇನ್ಡ್ ಗ್ಲಾಸ್ ಚಿತ್ರಗಳಿಗೆ ಸ್ಥಳೀಯ ಕಲಾಕಾರರೇ ರೇಖಾ ಚಿತ್ರವನ್ನು ರಚಿಸಿರುವರು. ಜ್ಯಾಮಿತಿಕ ಗಾಜುಗಳನ್ನು ಬಳಸಿಕೊಂಡು ಲೋಹದ ಚೌಕಟ್ಟಿಗೆ ಹೊಂದಿಸಿ (ಬಂಧಿಸಿ) ನೀಲಿ, ಹಳದಿ, ಕೆಂಪುವರ್ಣಗಳನ್ನು ತಿಳಿಯಾಗಿ ಸಂಯೋಜನೆ ಮಾಡಿರುವರು. ಅರಮನೆಯ ಉತ್ತರ ಹಾಗೂ ದಕ್ಷಿಣದ ಕಿಟಕಿಗಳಲ್ಲಿ ಗಂಡಭೇರುಂಡ ಹಾಗೂ ಗಣಪತಿಯ ಚಿತ್ರಗಳನ್ನೊಳಗೊಂಡ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಮೆರಗು ವರ್ಣಗಳ ಸಂಯೋಜನೆಯಿಂದ ಕೂಡಿವೆ. ಈ ಚಿತ್ರಗಳನ್ನು ಸ್ಥಳೀಯ ಕಲಾಕಾರರು ನಿರ್ಮಾಣ ಮಾಡಿರಬಹುದಾಗಿದೆ.

ಮೈಸೂರಿನ ಹಾರ್ಡಿಂಜ್ ಸರ್ಕಲ್ ಹತ್ತಿರದ ಪಾರ್ಕ ಒಂದರಲ್ಲಿ ಗಾಜಿನ ಮಂಟಪವಿದೆ. ಇದರ ನಿರ್ಮಾಣ ಕಾರ್ಯವು ಅರಮನೆಯ ಕಟ್ಟಡ ಸಂದರ್ಭದಲ್ಲಿಯೇ ಎನ್ನಬಹುದು. ಅಷ್ಟ ಭುಜಾಕೃತಿಯನ್ನು ಹೊಂದಿರುವ ಈ ಮಂಟಪವು, ಗಾಜಿನ ಗುಮ್ಮಟವು ಮಾತ್ರ ವೃತ್ತಾಕಾರವಾಗಿದೆ. ಈ ಗಾಜಿನ ಗುಮ್ಮಟದಲ್ಲಿ ೧೨ ಚಿತ್ರಗಳನ್ನು ಅಳವಡಿಸಲಾಗಿದೆ. ಗುಮ್ಮಟ ಒಟ್ಟು ೫ ಭಾಗಗಳನ್ನಾಗಿ ವಿಂಗಡಿಸಲಾಗಿದ್ದು, ಗುಮ್ಮಟದ ಮೊದಲ ಭಾಗದಲ್ಲಿ ಅಲಂಕಾರಿಕ ನಕ್ಷೆಯನ್ನು ರಚಿಸಲಾಗಿದೆ. ಎರಡನೆ ಆವರಣದಲ್ಲಿ ದುಂಡು ಹೂವಿನ ಪಕಳೆಗಳಂತೆ ಗಾಜನ್ನು ಹೊಂದಿಸಲಾಗಿದೆ. ಮೂರನೆ

ಭಾಗದಲ್ಲಿ ಹನ್ನೆರಡು ಮೈಸೂರು ಸಂಪ್ರದಾಯಕ ಚಿತ್ರಗಳನ್ನು ರಚಿಸಲಾಗಿದೆ. ನಾಲ್ಕು ಮತ್ತು ಐದನೆಯ ಆವರಣಗಳಲ್ಲಿ ಅಲಂಕಾರಿಕವಾಗಿ ಗಾಜನ್ನು ಅರ್ಧ ವೃತ್ತಾಕಾರ ಕತ್ತರಿಸಿಕೊಡು ಹೊಂದಿಸಲಾಗಿದೆ. ಇಲ್ಲಿ ಕೆಂಪು, ಹಳದಿ, ಹಸಿರು, ಕಪ್ಪು ಕಂದುಗೆಂಪು, ಕಂದುಗುಲಾಬಿ, ಹಸಿರು ವರ್ಣಗಳ ಮಿಶ್ರಿತ ವರ್ಣಗಳನ್ನು ಸಂಯೋಜನೆ ಮಾಡಲಾಗಿದೆ. ರೇಖಾ ಪ್ರಧಾನವಾದ ಈ ಸ್ಟೇನ್ಡ್ ಗ್ಲಾಸ್ ಚಿತ್ರಗಳಿಗೆ ಆಮ್ಲ ವರ್ಣಗಳನ್ನು (ತಿಳಿಯಾದ ತೈಲವರ್ಣ) ಬಳಸಿರುವರು. ಹೊರಗಿನ ಬೆಳಕಿನಿಂದ ಈ ಚಿತ್ರಗಳು ಅತ್ಯಂತ ಆಕರ್ಷಕವಾಗಿ ಕಾಣುತ್ತಿವೆ. ಸ್ಥಳೀಯ ನಿಪುಣ ಕಲಾಕಾರರು ಈ ಚಿತ್ರಗಳನ್ನು ರಚನೆ ಮಾಡಿರುವರು. ಆಕೃತಿಯ ಮೈಬಣ್ಣ ಹಾಗೂ ಉಡುಪುಗಳ ವರ್ಣ ಸಂಯೋಜನೆಯೂ ಮೂರು ಆಯಾಮದಲ್ಲಿ ಮೂಡಿಬಂದಿದೆ.

ಈ ರಚನಾ ವಿಧಾನವನ್ನು ಹೊಂದಿದ ಗಾಜಿನ ಚಿತ್ರಗಳು ಮೈಸೂರು ಹಾಗೂ ಸುತ್ತಮುತ್ತಲಿನ ಕಟ್ಟಡಗಳಲ್ಲಿ ಕಾಣಸಿಗುತ್ತವೆ. ಬಹುತೇಕ ಈ ಸ್ಟೇನ್ಡ್ ಗ್ಲಾಸ್ ಚಿತ್ರಗಳನ್ನು ಸ್ಥಳೀಯ ಕಲಾಕಾರರೇ ರಚನೆ ಮಾಡಿರಬಹುದಾಗಿದೆ. ಚರ್ಚ ವಾಸ್ತು ಶಿಲ್ಪಗಳಲ್ಲಿನ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಮೈಸೂರು ಅರಮನೆಯಲ್ಲಿನ ಹಾಗೂ ಸುತ್ತಮುತ್ತಲಿನ ವಾಸ್ತುಕಟ್ಟಡಗಳಲ್ಲಿನ ಸ್ಟೇನ್ಡ್ ಗ್ಲಾಸ್ ಚಿತ್ರಗಳಲ್ಲಿನ ರಚನೆಯಲ್ಲಿ ಸಾಕಷ್ಟು ವೈವಿಧ್ಯತೆಗಳಿವೆ. ಚರ್ಚವಾಸ್ತು ಶಿಲ್ಪಗಳಲ್ಲಿನ ಸ್ಟೇನ್ಡ್ ಗ್ಲಾಸ್ ಚಿತ್ರಗಳನ್ನು ಪಾಶ್ಚಿಮಾತ್ಯ ಕಲಾವಿದರು ರಚಿಸಿರುವರು ಮೇಲಾಗಿ ಆ ಚಿತ್ರಗಳನ್ನು ವಿದೇಶಗಳಲ್ಲಿಯೇ ರಚಿಸಿ ಇಲ್ಲಿ ತಂದು ಅಳವಡಿಸಲಾಗಿದೆ. ಆ ಚಿತ್ರಗಳನ್ನು ಫ್ರಾನ್ಸ್‌ನ ಕಲಾಕಾರರು ರಚಿಸಿರಬಹುದಾಗಿದೆ. ಯಾಕೆಂದರೆ ಆ ಚಿತ್ರಗಳಲ್ಲಿ ದೇಶದ ಹೆಸರು, ಕಲಾಕಾರರ ಹೆಸರು ಮತ್ತು ರಚನೆಯ ಇಸ್ವಿಯನ್ನು ನಮೂದಿಸಿದ್ದು ಕೆಲವು ಚಿತ್ರಗಳಿಂದ ತಿಳಿದು ಬರುತ್ತದೆ. ಆದರೆ ಸ್ವದೇಶಿ ಕಲಾಕಾರರು ನಮ್ಮ ಸಾಂಪ್ರದಾಯಿಕ ಇತಿಮಿತಿಗಳಿಗೆ ಕುಂದು ಬಾರದಂತೆ ಸ್ಟೇನ್ಡ್ ಗ್ಲಾಸ್ ಚಿತ್ರಗಳನ್ನು ರಚಿಸಿದ್ದಾರೆಂದು ತೋರುತ್ತದೆ. ಸ್ಟೇನ್ಡ್ ಗ್ಲಾಸ್ ಚಿತ್ರಗಳು ಜನಪದ ಚಿತ್ರಕಲೆಯಾದ ತೊಗಲುಗೊಂಬೆ ಚಿತ್ರಕಲೆಯ ಪ್ರಕಾರವನ್ನು ಅನುಸರಿಸುತ್ತವೆ. ಇದು ಕೂಡಾ ತೆಳುವಾದ ಪಾರದರ್ಶಕ ಚರ್ಮದ ಮೇಲೆ ಚಿತ್ರಗಳ್ನು ರಚನೆ ಮಾಡುವುದಾಗಿದೆ. ತೊಗಲುಗೊಂಬೆ ಚಿತ್ರಗಳು ಹೊರಬೆಳಕಿನಿಂದ ಅದರ ರೇಖೆ, ವರ್ಣಗಳು ಅತ್ಯಾಕರ್ಷಕವಾಗಿ ಕಾಣುತ್ತವೆ. ಈ ಚಿತ್ರಗಳನ್ನು ಎರಡು ಮೈಪಾತಳಿ ಮೂಲಕ ನೋಡಬಹುದಾಗಿದೆ.

ಇತ್ತೀಚೆಗಿನ ಸ್ಟೇನ್ಡ್ ಗ್ಲಾಸ್ ಚಿತ್ರಗಳ ರಚನಾ ಪದ್ಧತಿಯೂ ಬಹಳ ವೈವಿಧ್ಯತೆಯಿಂದ ಕೂಡಿದೆ. ಇಲ್ಲಿ ಆಧುನಿಕ ರೀತಿಯ ತಂತ್ರಗಾರಿಕೆಯನ್ನು ಬಳಸಿಕೊಂಡು, ರಾಸಾಯನಿಕ ವರ್ಣಗಳನ್ನು ಸಂಯೋಜಿಸಲಾಗುತ್ತದೆ. ಈ ಕ್ರಮವು ೧೯೩೫ ರ ನಂತರದಲ್ಲಿ ಬೆಳೆದು ಬಂದುದಾಗಿದೆ. ಇಲ್ಲಿ ಸಮತಲವಾದ ಗಾಜಿಗೆ ಸ್ಟಿಕರ್ ಪೇಪರನ್ನು ಅಂಟಿಸಿ ಅದರ ಮೇಲೆ ರೇಖಾ ಚಿತ್ರ ಬರೆದು, ಓರಿಜನಲ್ ಸ್ಟೇನ್ಡ್ ಗ್ಲಾಸ್ ಪದ್ಧತಿಯಂತೆ ದಪ್ಪನೆಯ ರೇಖೆಯನ್ನು ಮಾರ್ಕ ಮಾಡಿಕೊಂಡು ಆ ರೇಖೆಯ ಅಳತೆಯಲ್ಲೇ ಸ್ಟಿಕರ್‌ನ್ನು ಹೊರತೆಗೆದು 'ಎಚ್' ಮಾಡಲಾಗುತ್ತದೆ. (Sand or Aciad frosting) ನಂತರ ಮಾರ್ಕ ಮಾಡಿದ ಇನ್ನುಳಿದ ಭಾಗವನ್ನು ಎಷ್ಟು ಬೇಕೋ ಅಷ್ಟು ಎಚ್ ಮಾಡಿ ಸ್ಪ್ರೇ ಮೂಲಕ ವರ್ಣ ಸಂಯೋಜನೆ ಮಾಡಲಾಗುತ್ತದೆ. ಕೆಲವು ಸಲ ಗಾಜಿನ ತುಂಡುಗಳನ್ನು

ಕೂಡಿಸಲು ಮೆದು ಸತುವನ್ನು ಉಪಯೋಗಿಸಲಾಗುತ್ತದೆ. ಇಲ್ಲಿ ರಾಸಾಯನಿಕ ಲಿಕ್ವಿಡ್ ಕಲರ್ಸ್‌ಗಳನ್ನು ಬಳಸಿಕೊಂಡು ಸ್ಟೇನ್ಡ್ ಗ್ಲಾಸ್ ಚಿತ್ರಗಳನ್ನು ತಯಾರಿಸಲಾಗುತ್ತದೆ. ಇಂಥ ಚಿತ್ರಗಳನ್ನು ಮಂಗಳೂರಿನ ಫಾದರ ಮುಲ್ಲರ್ ಮೆಡಿಕಲ್ ಕಾಲೇಜು ಆವರಣದ 'ಸಂತ ಜೋಸೆಫ್ ಛಾಪೆಲ್' ಚರ್ಚನಲ್ಲಿ ಯೇಸುವಿನ ಜನನದಿಂದ, ಮರಣದಂಡನೆವರೆಗೆ ಗುರಿಯಾಗಿ ಪುನರುತ್ಥಾನದ ಸನ್ನಿವೇಶಗಳನ್ನು ಸೂಚಿಸುವ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಈ ರಚನಾಕ್ರಮವನ್ನು ಅನುಸರಿಸಿದೆ.

ಮೈಸೂರಿನ ಆರ್.ಎಸ್. ನಾಯ್ಡು ನಗರದಲ್ಲಿರುವ ಬಾಲಯೇಸುವಿನ ಪುಣ್ಯಕ್ಷೇತ್ರ ಕಾರ್ಮೆಲ್ ಸಭೆ ಪುಷ್ಪಾಶ್ರಮದ ಕಟ್ಟಡದಲ್ಲಿ ಆಧುನಿಕ ರಚನಾ ಪದ್ಧತಿಯ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಮೂರು ಹಂತದಲ್ಲಿ ಕಾಣಸಿಗುತ್ತವೆ. ಮೊದಲ ಹಂತದ ಕಿಟಕಿಗಳಲ್ಲಿ ಯೇಸುವಿನ ಜನದಿಂದ ಪಡೆದು ಅವನ ಪುನರುತ್ಥಾನದ ಆವಸ್ಥೆಯ ಚಿತ್ರಗಳು ಕಂಡು ಬರುತ್ತವೆ. ಎರಡನೆಯ ಹಂತದ ಕಿಟಕಿಗಳಲ್ಲಿ ಕೈಯ ಚಿನ್ಹೆಗಳನ್ನು ಹೊಂದಿದ ಹಲವಾರು ಚಿತ್ರಗಳಿವೆ. ಮೂರನೆಯ ಹಂತದ ಕಿಟಕಿಗಳಲ್ಲಿ ಪ್ರಪಂಚದ ವಿವಿಧ ಧರ್ಮಗಳ ಸಂಕೇತದ ಚಿತ್ರಗಳನ್ನು ರಚಿಸಲಾಗಿದೆ. ಈ ಎರಡು ಚರ್ಚುಗಳು ೨೧ನೇ ಶತಮಾನದ ಪ್ರಾರಂಭದ ದಿನಗಳಲ್ಲಿ ರಚನೆಗೊಂಡ ಸ್ಟೇನ್ಡ್ ಗ್ಲಾಸ್ ಚಿತ್ರಗಳೆಂದು ಹೇಳಬಹುದು.

ಮಂಗಳೂರಿನ ಸಂತ ಸೆಬ್ಯಾಸ್ಟಿಯನ್ ಚರ್ಚದ (ಬೆಂದೂರು) ಕಿಟಕಿಗಳಲ್ಲಿ ಆರು ಆಧುನಿಕ ರೀತಿಯ ಸಂಕೇತ ಪ್ರಧಾನವಾದ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಕಂಡು ಬರುತ್ತವೆ. ಅಖಂಡ ಗಾಜಿನ ಮೇಲೆ ರೇಖಾ ಚಿತ್ರ ಬರೆದು 'ಎಚ್'ಮಾಡಿ 'ಸ್ಪ್ರೇ' ಮೂಲಕ ವರ್ಣಗಳನ್ನು ಸಂಯೋಜನೆ ಮಾಡಲಾಗಿದೆ. ಇಲ್ಲಿ ಯಾವುದೇ ರೀತಿಯ ರೇಖೆಗಳು ಕಾಣಸಿಗುವುದಿಲ್ಲ ಮತ್ತು ಸತುವನ್ನು ಬಳಸಿ ಗಾಜನ್ನು ಬಂಧಿಸಿಲ್ಲ. ಸ್ಟೇನ್ಡ್ ಗ್ಲಾಸ್ ಚಿತ್ರಗಳ ರಚನಾ ವಿಧಾನ ಒಂದೇ ರೀತಿಯಾಗಿದ್ದರೂ ಕಾಲದಿಂದ ಕಾಲಕ್ಕೆ ಬದಲಾಗುವ ತಾಂತ್ರಿಕ ಬದಲಾವಣೆಗಳನ್ನು ಮೈಗೂಡಿಸಿಕೊಂಡು ಇಂದು ಹೊಸ ಹೆಜ್ಜೆಯತ್ತ ಸಾಗಿದೆ.

**೦೨. ತೂಗುಹಾಕುವ ಗಾಜಿನ ಚಿತ್ರಗಳ ರಚನಾ ವಿಧಾನ**

ಕರ್ನಾಟಕದಲ್ಲಿ ಕಂಡು ಬರುವ ತೂಗುಹಾಕುವ ಗಾಜಿನ ಚಿತ್ರಗಳನ್ನು ವಿದೇಶಿ ಕಲಾವಿದರು ರಚಿಸಿದ ಗಾಜಿನ ಚಿತ್ರಗಳು, ಸ್ವದೇಶಿ ಕಲಾವಿದರು ರಚಿಸಿದ ಗಾಜಿನ ಚಿತ್ರಗಳೆಂದು ವಿಂಗಡಿಸಿಕೊಂಡು ಅವುಗಳ ರಚನೆಯ ವಿಧಾನವನ್ನು ಇಲ್ಲಿ ವಿವೇಚಿಸಲಾಗಿದೆ.

ಚಿತ್ರಕಲೆ ಕ್ಯಾನ್ವಾಸ, ಕಾಗದ, ಹಲಗೆ, ಭಿತ್ತಿ ಗಳಂತಹ ಫಲಕಗಳ ಮೇಲೆ ರೇಖಾ ಚಿತ್ರ ಬರೆದು ಪ್ರಾಥಮಿಕ ಹಂತ, ಮಧ್ಯಂತಹ ಹಂತ ಮತ್ತು ಕೊನೆಯ ಹಂತಗಳಾಗಿ ಯಥಾವತ್ತಾಗಿ ವರ್ಣಸಂಯೋಜನೆಗಳ ಮೂಲಕ ರೂಪ ತಾಳಿದರೆ, ಗಾಜಿನ ಮೇಲೆ ತದ್ವಿರುದ್ಧ ರಚನಾ ವಿಧಾನವನ್ನು ಅನುಸರಿಸಬೇಕಾಗುತ್ತದೆ. ಮೇಲಿನ ಫಲಕಗಳ ಮೇಲೆ ಪ್ರಾರಂಭದಿಂದ ಹಂತ ಹಂತವಾಗಿ ಪರಿಪೂರ್ಣಗೊಳಿಸಿದರೆ ಗಾಜಿನ ಮೇಲೆ ಕೊನೆಯ ಹಂತದಿಂದ ಪ್ರಾರಂಭವಾಗಿ ಮೊದಲ ಹಂತಗಳನ್ನು ತರಬೇಕಾಗುತ್ತದೆ. ಯಾಕೆಂದರೆ ಇಲ್ಲಿ ರೇಖಾ ಪ್ರಧಾನವಾದ ಸಾಂಪ್ರದಾಯಿಕ ಚಿತ್ರಗಳಾಗಿರಬಹುದು ಅಥವಾ ನೈಜ ಚಿತ್ರಗಳಾಗಿರಬಹುದು. ಗಾಜಿನ ಒಂದು ಮೈಪಾತಳಿಯ

ಮೇಲೆ ಚಿತ್ರ ಬರೆದು ಅದರ ಇನ್ನೊಂದು ಮೈಪಾತಳಿಯ ಮೂಲಕ ವೀಕ್ಷಿಸುವುದಾಗಿದೆ. ನಂತರ ಇದಕ್ಕೆ ಬೇಕಾದ ಚೌಕಟ್ಟನ್ನು ಹಾಕಿ ಅಲಂಕರಿಸುವುದಾಗಿದೆ.

ಈ ರೀತಿಯ ಚಿತ್ರಕಲೆಯನ್ನು ರಚನೆ ಮಾಡಲು ಕಲಾವಿದನ ತಾಳ್ಮೆಯನ್ನು ಹಾಗೂ ಅನುಭವವನ್ನು ಬೇಡುತ್ತದೆ. ಗಾಜಿನಲ್ಲಿ ವಿವಿಧ ರೀತಿಯ ಗಾಜುಗಳಿರುವುದರಿಂದ ಗಾಜಿನ ಆಯ್ಕೆಯು ಮುಖ್ಯವಾಗಿರುತ್ತದೆ. ಉತ್ತಮ ಗಾಜನ್ನು ಆಯ್ದುಕೊಂಡು ಅದರ ಮೇಲೆ ಚಿತ್ರ ಬರೆಯುವ ಕೌಶಲ್ಯತೆಯನ್ನು ಕಲಾವಿದನು ಕಂಡುಕೊಂಡು ಚಿತ್ರ ರಚನೆಯಲ್ಲಿ ತೊಡಗಬೇಕಾಗುತ್ತದೆ.

ಈ ಹಂತದ ಗಾಜಿನ ಮೇಲಿನ ಚಿತ್ರಕಲೆಯ ರಚನಾ ಪದ್ಧತಿಯು ಗಾಜಿನ ಹಿಮ್ಮುಖವಾಗಿ ಚಿತ್ರ ರಚಿಸಿ ಮುಮ್ಮುಖವಾಗಿ ನೋಡುವುದರಿಂದ, ಮೊದಲು ರೇಖಾ ಚಿತ್ರವನ್ನು ರಚಿಸಿಕೊಂಡು ನಂತರ ಆ ರೇಖಾಚಿತ್ರವನ್ನು ಪಾರದರ್ಶಕ ಕಾಗದ ಮೇಲೆ ಕರಡು ಚಿತ್ರವನ್ನು ರಚಿಸಬೇಕಾಗುತ್ತದೆ. ಆ ನಂತರ ನಿಗದಿ ಪಡಿಸಿದ ಪಾರದರ್ಶಕ ಚೌಕಾಕಾರದ ಗಾಜನ್ನು ಶುದ್ಧಗೊಳಿಸಿ ಪಾರದರ್ಶಕದ ಕರಡು ಚಿತ್ರವನ್ನು ಗಾಜಿನ ಹಾಳೆಯ ಕೆಳಗಿಟ್ಟು, ಗಾಜಿನ ಹಿಂಬದಿಯ ಮೇಲೆ ಮೃದುವಾದ ಲೇಖನಿಯಿಂದ ಕರಡು ಚಿತ್ರದ ರೇಖೆಗಳ ಮೇಲೆ ರೇಖಾ ಚಿತ್ರವನ್ನು ಬರೆದುಕೊಳ್ಳಬೇಕು. ನಂತರ ಗಾಜನ್ನು ಹೊರತೆಗೆದು ಹಿಂಬದಿಯಲ್ಲಿ ಹಾಕಿದ ರೇಖಾ ಚಿತ್ರದ ಮೇಲೆ ಪುನಃ ಕಪ್ಪು ಬಣ್ಣದಿಂದ ಸುಂದರವಾದ ರೇಖಾ ವಿನ್ಯಾಸವನ್ನು ರಚಿಸಿ, ನಂತರ ಬೇಕಾದ ವರ್ಣ ಸಂಯೋಜನೆ ಮಾಡಬಹುದು. ರೇಖಾರಹಿತ ಚಿತ್ರ ಬರೆಯಬೇಕಾದರೆ ಯಾವುದೇ ರೀತಿಯ ಅಂತಿಮ ಹಂತದ ರೇಖೆಯನ್ನು ಬರೆಯದೇ ಹಿಂಬದಿಯಲ್ಲಿ ಕಾಣುವ ರೇಖೆಯ ವಿನ್ಯಾಸದ ಸಹಾಯದಿಂದ ವರ್ಣ ಸಂಯೋಜನೆ ಮಾಡಬೇಕಾಗುತ್ತದೆ. ಪಾಶ್ಚಿಮಾತ್ಯ ಕಲಾವಿದರು ಬಹುತೇಕ ಈ ಪದ್ಧತಿಯ ಗಾಜಿನ ಚಿತ್ರಗಳನ್ನು ಬರೆದಿದ್ದಾರೆ. ಹೆಚ್ಚಾಗಿ ಭಾವಚಿತ್ರಗಳು, ನಿಸರ್ಗ ಚಿತ್ರಗಳು ರಚನೆಗೊಂಡಿವೆ. ರೇಖಾ ಪ್ರಧಾನವಾದ ಗಾಜಿನ ಚಿತ್ರಗಳು ಪೌರವಾತ್ಯ ಕಲಾವಿದರು ರಚಿಸಿದ ಸಾಂಪ್ರದಾಯಿಕ ಗಾಜಿನ ಚಿತ್ರಗಳು ಹೆಚ್ಚು ಸಂಖ್ಯೆಗಳಲ್ಲಿ ರಚನೆಗೊಂಡಿವೆ. ಈ ಚಿತ್ರಗಳು ಅಂದವಾಗಿ ಕಾಣಲು ಮೆರಗು ಕಾಗದಗಳನ್ನು, ಮೆರಗು ಬಣ್ಣಗಳನ್ನು ಹಾಗೂ ಬೆಳ್ಳಿ, ಚಿನ್ನದ ಲೇಪನದ ಕಾಗದಗಳನ್ನು ಬಳಸಿದ್ದಾರೆ.

ಇದೇ ರೀತಿ ಕ್ಯಾಲೆಂಡರ್ ಚಿತ್ರಗಳನ್ನು ಮತ್ತು ಛಾಯಾ ಚಿತ್ರಗಳನ್ನು ಬಳಸಿಕೊಂಡು ಗಾಜಿಗೆ ಕನ್ನಡಿಯ ಮೆರಗನ್ನು ನೀಡಿದ ಗಾಜಿನ ಚಿತ್ರಗಳೂ ರಚನೆಗೊಂಡಿವೆ. ಅದನ್ನು ಇಲ್ಲಿ ವಿವೇಚಿಸಲಾಗಿದೆ.





# ಅಧ್ಯಾಯ - ನಾಲ್ಕು

## ಗಾಜಿನ ಮೇಲಿನ ಚಿತ್ರಕಲೆಯ ವಸ್ತು, ವಿಷಯ

ಬಹುತೇಕ ನಮ್ಮ ಚಿತ್ರಕಲೆಯು ಒಂದು ಪ್ರಸಿದ್ಧ ಹಂತಕ್ಕೆ ತಲುಪಿದ್ದೇ ನಮ್ಮ ಸಂಪ್ರದಾಯ, ಸಂಸ್ಕೃತಿ, ಸಾಧುಸತ್ಪುರುಷರ ಜೀವನ ಚರಿತ್ರೆ, ಪುರಾಣಗಳು, ಶಾಸ್ತ್ರಗ್ರಂಥಗಳು ಹಾಗೂ ಧಾರ್ಮಿಕ ಚರಿತ್ರೆಗಳಿಂದಲೇ ಎನ್ನಬಹುದು. ಜೊತೆಗೆ ನಮ್ಮ ಸಾಮಾಜಿಕ ಹಾಗೂ ಐತಿಹಾಸಿಕ ಘಟನೆಗಳು ಕೂಡಾ ಚಿತ್ರಕಲೆಯನ್ನು ಪ್ರತಿಬಿಂಬಿಸುವಲ್ಲಿ ಸಶಕ್ತವಾಗಿವೆ.

ಕರ್ನಾಟಕದಲ್ಲಿ ಕಂಡುಬರುವ ಗಾಜಿನ ಮೇಲಿನ ಚಿತ್ರಗಳು ಈ ಹಿನ್ನೆಲೆಯಲ್ಲಿ ರಚನೆಗೊಂಡಿವೆ ಯಾದುದರಿಂದ ಅವುಗಳನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ವಿಂಗಡಿಸಿಕೊಂಡು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಒಂದು ಗಾಜಿನ ಮೇಲಿನ ಧಾರ್ಮಿಕ ಹಿನ್ನೆಲೆಯ ಚಿತ್ರಗಳು ಇನ್ನೊಂದು ಗಾಜಿನ ಮೇಲಿನ ಧಾರ್ಮಿಕೇತರ ಹಿನ್ನೆಲೆಯ ಚಿತ್ರಗಳೆಂದು ವಿಭಜಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ.

## I. ಗಾಜಿನ ಮೇಲಿನ ಧಾರ್ಮಿಕ ಹಿನ್ನೆಲೆಯ ಚಿತ್ರಗಳು

ನಮ್ಮ ದೇಶ ಸರ್ವಧರ್ಮ, ಮತ ಪಂಗಡಗಳಿಂದ ಕೂಡಿದ ವಿಶಾಲವಾದ ನಾಡಾಗಿದೆ. ಇಲ್ಲಿ ಹಿಂದೂ, ಕ್ರೈಸ್ತ, ಇಸ್ಲಾಂ ಹಾಗೂ ಇನ್ನೂ ಅನೇಕ ಧರ್ಮದ ಜನರು ವಾಸಿಸುತ್ತಿದ್ದಾರೆ. ಇವರ ಧರ್ಮ ಯಾವುದೇ ಇದ್ದರೂ ಸಹಿತ ಭಾರತೀಯರೇ ಆಗಿದ್ದಾರೆ. ಹೀಗಿರುವಾಗ ಇಲ್ಲಿನ ಅನೇಕ ಧರ್ಮಿಯರು ಆಯಾ ಧರ್ಮದ ಆಚಾರ, ವಿಚಾರಗಳನ್ನು ತಮ್ಮ ತಮ್ಮ ಪದ್ಧತಿಯಂತೆ ಅನುಸರಿಸಿ ಬದುಕುತ್ತಿದ್ದಾರೆ. ಹಿಂದೂ ಧರ್ಮದಲ್ಲಿಯೇ ಇನ್ನೂ ಅನೇಕ ಮತ ಪಂಗಡಗಳನ್ನು ಕಾಣಬಹುದು. ಶೈವರು, ವೈಷ್ಣವರು, ಜೈನರು, ಸಿಖ್‌ರು ಹಾಗೂ ಇತರರನ್ನು

ವರ್ಗೀಕರಿಸಬಹುದು. ಇಲ್ಲಿ ಮುಖ್ಯವಾಗಿ ವಿವೇಚನೆ ಮಾಡುವುದೆನೆಂದರೆ ಗಾಜಿನ ಚಿತ್ರಕಾರರು ಆಯಾ ಮತಗಳ, ಧರ್ಮದವರ ಆಶಯಗಳನ್ನು ಅಭಿವ್ಯಕ್ತ ಮಾಡಿದ್ದಾರೆ.

ಕರ್ನಾಟಕದಲ್ಲಿ ಕಂಡುಬರುವ ಗಾಜಿನ ಚಿತ್ರಗಳು ಹಿಂದೂ ಧರ್ಮಕ್ಕೆ ಸಂಬಂಧಿಸಿದ, ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದ, ಇಸ್ಲಾಂ ಧರ್ಮಕ್ಕೆ ಸಂಬಂದಿಸಿದ ವಿವರಣೆಗಳು ಸಿಗುತ್ತವೆ. ಹಿಂದೂ ಧರ್ಮವನ್ನು ಮತ್ತೇ ವರ್ಗೀಕರಿಸಿಕೊಂಡು ನೋಡಲಾಗಿ, ಶೈವ ಮತವನ್ನು ಪ್ರತಿನಿಧಿಸುವ, ವೈಷ್ಣವ ಮತವನ್ನು ಪ್ರತಿನಿಧಿಸುವ, ಜೈನಮತವನ್ನು ಪ್ರತಿನಿಧಿಸುವ ಹಾಗೂ ಇತರೆ ಹಿಂದೂ ಧರ್ಮದ ಮತ ಸಂಪ್ರದಾಯಗಳನ್ನು ಪ್ರತಿನಿಧಿಸುವ ಗಾಜಿನ ಚಿತ್ರಗಳು ರಚನೆಗೊಂಡಿವೆ.

ಶೈವ ಮತಕ್ಕೆ ಸಂಬಂಧಿಸಿದ ಗಾಜಿನ ಮೇಲಿನ ಚಿತ್ರಗಳು ಶಿವ, ಶಿವನ ಅವತಾರ, ಶಿವನ ಕುಟುಂಬ, ಗಣಪತಿ, ಸುಬ್ರಹ್ಮಣ್ಯ, ಇತ್ಯಾದಿ ಸನ್ನಿವೇಶಗಳು ರಚನೆಗೊಂಡಿವೆ. ವೈಷ್ಣವ ಮತಕ್ಕೆ ಸಂಬಂಧಿಸಿದ ಗಾಜಿನ ಮೇಲಿನ ಚಿತ್ರಗಳು ವಿಷ್ಣುವಿನ ದಶಾವತಾರಕ್ಕೆ ಸಂಬಂಧಿಸಿದ ಅದರಲ್ಲೂ ವಿಶೇಷವಾಗಿ ಕೃಷ್ಣಾವತಾರದ ಸನ್ನಿವೇಶಗಳು ಬಹಳಷ್ಟು ಚಿತ್ರಿತಗೊಂಡಿವೆ. ಅಲ್ಲದೇ ವೆಂಕಟೇಶ, ಬಾಲಾಜಿ, ಲಕ್ಷ್ಮೀ, ಸತ್ಯನಾರಾಯಣ, ಮಹಾವಿಷ್ಣು ಹಾಗೂ ಇತರ ವೈಷ್ಣವ ದೇವತೆಗಳ ಗಾಜಿನ ಚಿತ್ರಗಳು ರಚನೆಗೊಂಡಿವೆ. ಜೈನ ಮತಕ್ಕೆ ಸಂಬಂಧಿಸಿದಂತೆ ಶ್ವೇತಾಂಬರ ಹಾಗೂ ದಿಗಂಬರ ಮತ ಪುರುಷರ ಚಿತ್ರಗಳು ರೂಪಗೊಂಡಿವೆ. ಇದು ಅಲ್ಲದೇ ಇತರೆ ಹಿಂದೂ ಧರ್ಮದೇವತೆಗಳಾದ ಬ್ರಹ್ಮ, ಸರಸ್ವತಿ, ಶಾರದೆ ಯಂತಹ ದೇವರ ಸನ್ನಿವೇಶಗಳನ್ನು ಹೊಂದಿರುವ ಗಾಜಿನ ಮೇಲಿನ ಚಿತ್ರಗಳು ಚಿತ್ರಿತಗೊಂಡಿವೆ.

ಕ್ರೈಸ್ತ ಧರ್ಮವನ್ನು ಪ್ರತಿಸಿಧಿಸುವ ಗಾಜಿನ ಮೇಲಿನ ಚಿತ್ರಗಳು ಬಹುತೇಕ ವಾಸ್ತುಕಟ್ಟಡಗಳ ಕಿಟಕಿಗಳಲ್ಲಿ ಅಳವಡಿಸಿದ ಗಾಜಿನ ಮೇಲೆ ಚಿತ್ರಿತಗೊಂಡಿದ್ದನ್ನು ನೋಡುತ್ತೇವೆ. ಇದರ ಇತಿಹಾಸ ಬಹು ಪ್ರಾಚೀನವಾದುದಾದರಿಂದ ಕರ್ನಾಟಕದಲ್ಲಿಯೂ ಸಹಿತ ಅನೇಕ ಕ್ರೈಸ್ತ ಧಾರ್ಮಿಕ ಕಟ್ಟಡಗಳಲ್ಲಿ ವಿವಿಧ ಕಾಲ ಘಟ್ಟಗಳಲ್ಲಿ ರಚನೆಗೊಂಡಿದ್ದನ್ನು ನೋಡುತ್ತೇವೆ. ಇಲ್ಲಿ ಬಹುಮುಖ್ಯವಾಗಿ ಕ್ರಿಸ್ತ ಹಾಗೂ ಅವನ ಅನುಯಾಯಿಗಳ ಕಥಾಸನ್ನಿವೇಶಗಳನ್ನು ಹೊಂದಿರುವ ಹಾಗೂ ಕ್ರೈಸ್ತ ಧರ್ಮದ ಪ್ರಚಾರಕರ ವಿಷಯಗಳನ್ನು ಪ್ರತಿನಿಧಿಸುವ ಗಾಜಿನ ಮೇಲಿನ ಚಿತ್ರಗಳು ರಚನೆಗೊಂಡಿವೆ. ಇಲ್ಲಿ ಕ್ರಿಸ್ತ ಹಾಗೂ ಅವನ ಅನುಯಾಯಿಗಳಿಗೆ ಸಂಬಂಧಿಸಿದಂತೆ ಬಾಲ ಯೇಸುವಿನ ಜನ್ಮವೃತ್ತಾಂತ, ತಾಯಿ ಮೇರಿ ಹಾಗೂ ಅವನು ಮರಣದಂಡಣೆಗೆ ಗುರಿಯಾಗಿ ಮತ್ತೇ ಪುನರುತ್ಥಾನವಾಗಿ ಅವತರಿಸಿ ಲೋಕ ಕಲ್ಯಾಣವನ್ನು ಮಾಡುವ ಪ್ರಸಂಗದ ಚಿತ್ರಗಳು ರಚನೆಗೊಂಡಿವೆ ಹಾಗೂ ಅವನ ಅನುಯಾಯಿಗಳೂ ಸಹಿತ ಅವನಂತೆ ಹಿಂಬಾಲಕರಾಗಿ ಮಾನವ ಕಲ್ಯಾಣಕ್ಕೆ ಶ್ರಮಿಸಿದ ಪ್ರಸಂಗದ ಚಿತ್ರಗಳು ಇಲ್ಲಿ ರಚಿತಗೊಂಡಿವೆ. ಕ್ರೈಸ್ತ ಧರ್ಮದ ಪ್ರಚಾರಕ್ಕಾಗಿ ಶ್ರಮಿಸಿದ ಧರ್ಮ ಪ್ರಚಾರಕರ ಚಿತ್ರಗಳು ಗಾಜಿನ ಮೇಲೆ ರಚನೆಗೊಂಡಿದ್ದನ್ನು ಮನಗಾಣಬಹುದು.

ಇಸ್ಲಾಂ ಧರ್ಮವನ್ನು ಪ್ರತಿನಿಧಿಸುವ ಗಾಜಿನ ಚಿತ್ರಗಳು ಯಾವುದೇ ಮಾನವರೂಪಿತ ಕಲ್ಪನೆಯಚಿತ್ರಗಳು ಚಿತ್ರಿತಗೊಂಡಿದ್ದು ಸಿಗುವುದಿಲ್ಲ. ಅದರ ಬದಲಾಗಿ 'ಕ್ಯಾಲಿಗ್ರಾಫಿ' ಚಿತ್ರಗಳು ರಚನೆಗೊಂಡಿದ್ದನ್ನು ಕಾಣುತ್ತೇವೆ.

## II ಗಾಜಿನ ಮೇಲಿನ ಧಾರ್ಮಿಕೇತರ ಹಿನ್ನೆಲೆಯ ಚಿತ್ರಗಳು

ಪ್ರತಿಯೊಬ್ಬ ಮನುಷ್ಯನು ದೇವರು, ಧರ್ಮ, ಆಚಾರಣೆ, ಭಯ ಭಕ್ತಿ ಇತ್ಯಾದಿ ಧರ್ಮದ ಕಟ್ಟಳೆಗೆ ಬೀಳದೇ ತಮ್ಮ ವಯಕ್ತಿಕ ಬದುಕಿನಲ್ಲಿ ಅನುಭವಿಸುವ ಕಷ್ಟ ಸುಖಗಳನ್ನು, ಅಧಿಕಾರ ಅಂತಸ್ತನ್ನು ಸ್ಥಾಪಿಸುವಲ್ಲಿ ಅದನ್ನು ಕಾಪಾಡಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾನೆ. ತನ್ನ ವೈಯಕ್ತಿಕ ಸುಖದುಃಖಗಳೊಂದಿಗೆ ಸಾಮಾಜಿಕ ಕಾಳಜಿ ಹಾಗೂ ಪರಿಸರದ ಕಾಳಜಿಯ ಕುರಿತು ಧೋರಣೆ ತಳೆದಿದ್ದಾನೆ. ಇವನ್ನು ಪ್ರತಿಬಿಂಬಿಸುವಂತಹ ಗಾಜಿನ ಚಿತ್ರಗಳು ಸಾಕಷ್ಟು ಸಂಖ್ಯೆಯಲ್ಲಿ ಚಿತ್ರಿತಗೊಂಡಿದ್ದನ್ನು ಕಾಣುತ್ತೇವೆ. ಅದರ ಜೊತೆಗೆ ಅಧಿಕಾರ, ಅಂತಸ್ತಿಗೆ ಹೆಣಗಾಡಿದ ಐತಿಹಾಸಿಕ ಬದುಕನ್ನು ನಿರೂಪಿಸುವ ಗಾಜಿನಚಿತ್ರಗಳು ರಚನೆಗೊಂಡಿವೆ.

ಧಾರ್ಮಿಕೇತರ ಗಾಜಿನ ಮೇಲಿನ ಚಿತ್ರಗಳನ್ನು ಸಾಮಾಜಿಕ ಮಾನವ ಬದುಕನ್ನು ಪ್ರತಿನಿಧಿಸುವ, ಐತಿಹಾಸಿಕ ಘಟನೆಗಳನ್ನು ನೆನಪಿಸುವ ನಿಸರ್ಗದ ಸೌಂದರ್ಯವನ್ನು ಕಾಣುವ ಹಾಗೂ ನಿಸರ್ಗವನ್ನು ಪ್ರೀತಿಸುವ ದೃಶ್ಯಚಿತ್ರಗಳನ್ನು ಗಾಜಿನ ಚಿತ್ರಕಲಾವಿದರು ಅಭಿವ್ಯಕ್ತ ಮಾಡಿದ್ದಾರೆ. ಅಲ್ಲದೇ ಗೃಹಲಂಕಾರ ವಸ್ತುಗಳನ್ನು ಗಾಜಿನ ರೂಪದಲ್ಲಿ ಕಂಡುಕೊಂಡಿದ್ದನ್ನು ಇಲ್ಲಿ ವಿವೇಚಿಸಲಾಗಿದೆ.

ಸಾಮಾಜಿಕ ಗಾಜಿನ ಮೇಲಿನ ಚಿತ್ರಗಳಲ್ಲಿ ಮುಖ್ಯವಾಗಿ ಸ್ತ್ರಿ ಪುರುಷರ ಶೃಂಗಾರಮಯ ದೃಶ್ಯದ ಗಾಜಿನ ಚಿತ್ರಗಳು ನಿರೂಪಗೊಂಡಿವೆ. ಇಲ್ಲಿ ಆರ್ಥಿಕ ಹಾಗೂ ಅಧಿಕಾರದ ಮಧದಿಂದ ಮನುಷ್ಯ ವಿಲಾಸಿ ಬದುಕು ಕಳೆಯುವದನ್ನು ಹಿಂದಿನಿಂದ ಇಂದಿನವರೆಗೂ ನಡೆದು ಬಂದಿರುವುದನ್ನು ನೋಡುತ್ತೇವೆ. ಅದರಲ್ಲೂ ಹೆಣ್ಣು, ಹೆಂಡ, ಅಧಿಕಾರದಂತಹ ಮೋಜಿನ ಪಿಪಾಸೆಗೆ ಒಳಗಾಗುತ್ತಾನೆ. ಇಂಥ ಶ್ರೀಮಂತರು ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಸಿರಿವಂತರ ಶೃಂಗಾರಮಯ ದೃಶ್ಯಗಳನ್ನು ನಮ್ಮ ಗಾಜಿನ ಚಿತ್ರಕಾರರು ಗಾಜಿನ ಮೇಲೆ ಅಭಿವ್ಯಕ್ತ ಮಾಡಿದ್ದಾರೆ. ಈಚಿತ್ರಗಳ ಸಂಖ್ಯೆ ಅಪಾರ ಪ್ರಮಾಣದಲ್ಲಿವೆ. ಈ ಪರಂಪರೆಗೆ ಸೇರಿದ ಶ್ರೀಮಂತರು ತಮ್ಮ ಹಾಗೂ ತಮ್ಮ ಅರಸಿಯರ ಭಾವಚಿತ್ರಗಳನ್ನು ರಚಿಸಿಕೊಂಡಿದ್ದನ್ನು ನೋಡುತ್ತೇವೆ. ಇದನ್ನು ಕೂಡಾ ಗಾಜಿನ ಕಲಾವಿದರು ಗಾಜಿನ ಮೇಲೆ ಚಿತ್ರಿಸಿದ್ದಾರೆ.

ಐತಿಹಾಸಿಕ ಘಟನೆಗಳ ಸಂದರ್ಭಗಳನ್ನು ನಿರೂಪಿಸುವ ಗಾಜಿನ ಮೇಲಿನ ಚಿತ್ರಗಳು ರಚನೆಗೊಂಡಿರುವುದನ್ನು ನೋಡುತ್ತೇವೆ. ಇಲ್ಲಿ ಈ ಚಿತ್ರಗಳನ್ನು ವಿದೇಶಿ ಕಲಾವಿದರು ಚಿತ್ರಿಸಿದ್ದು ವಿಶೇಷವೆನ್ನಬಹುದು. ಅಂದಿನ ಕಾಲದ ರಾಜಮಹಾರಾಜರು ತಮ್ಮ ಅಧಿಕಾರದ ಅವಧಿಯಲ್ಲಿ ತಾವು ಗೆದ್ದುಕೊಂಡ ಪ್ರದೇಶದ ನೆನಪಿಗಾಗಿ, ರಾಜರನ್ನು ಸೋಲಿಸಿದ ನೆನಪಿಗಾಗಿ ಹಾಗೂ ಆಕ್ರಮಣದ ಸಂದರ್ಭ ಸೂಚಕದ ದೃಶ್ಯಗಳನ್ನು ಚಿತ್ರದ ರೂಪದಲ್ಲಿ ದಾಖಲಿಸುತ್ತಿದ್ದರೆಂದು ತೋರುತ್ತದೆ. ಆ ಕಾರಣಕ್ಕಾಗಿ ಅಂತಹ ಸನ್ನಿವೇಶವನ್ನು ಪ್ರತಿನಿಧಿಸುವ ಗಾಜಿನ ಚಿತ್ರಗಳು ಆಯಾ ಸಂದರ್ಭಗಳಲ್ಲಿ ರಚನೆಗೊಂಡಿದ್ದನ್ನು ಕಾಣುತ್ತೇವೆ. ಜೊತೆಗೆ ತಮ್ಮ ಪ್ರಸಿದ್ಧಿಯ ಪ್ರತೀಕವಾಗಿ ತಮ್ಮ ತಮ್ಮ ಭಾವಚಿತ್ರಗಳನ್ನು ಆಶ್ರಯಿತ ಕಲಾವಿದರಿಂದ ಚಿತ್ರಿಸಿಕೊಳ್ಳುತ್ತಿದ್ದರು. ಅವನ್ನು ಸಹಿತ ಗಾಜಿನ ಕಲಾವಿದರು ಸೆರೆ ಹಿಡಿದಿದ್ದಾರೆ.

ನಿಸರ್ಗದೃಶ್ಯದ ಗಾಜಿನ ಮೇಲಿನ ಚಿತ್ರಗಳು ಭೂದೃಶ್ಯ, ಜಲದೃಶ್ಯ ಹಾಗೂ ಗಿಡ, ಮರ, ಪ್ರಾಣಿ, ಪಕ್ಷಿಗಳು ವಾಸಿಸುವ ಮನೆ ಮಂದಿರಗಳ ಹಾಗೂ ಇತರೆ ಪ್ರಕೃತಿಯ ಸುಂದರ ಸನ್ನಿವೇಶಗಳನ್ನು ಪ್ರತಿನಿಧಿಸುತ್ತವೆ. ಇಲ್ಲಿ ಕಲಾವಿದರೂ ಪ್ರಕೃತಿಯನ್ನು ತಾವು ಕಂಡಂತೆ ಅದರ ಸೌಂದರ್ಯವನ್ನು ತಮ್ಮ ವರ್ಣ ಮತ್ತು ಕುಂಚಗಳಿಂದ ಭಾವ ಮುದ್ರಣವನ್ನು ಒತ್ತಿದ್ದಾರೆ. ಸುಂದರವಾದ ಸರೋವರದಲ್ಲಿ ನಾವೆ ಚಿತ್ರ, ಮೀನು ಹಿಡಿಯುವ ದೃಶ್ಯ, ಸೂರ್ಯಸ್ತ ಹಾಗೂ ಸುರ್ಯೋದಯದಲ್ಲಿ ಕಂಡು ಬರುವ ಆಕಾಶ ಹಾಗೂ ನೀರಿನ ಸಮ್ಮಿಲಣಗಳನ್ನು ಚಿತ್ರಿಸಿದ್ದಾರೆ. ಭೂದೃಶ್ಯದಲ್ಲಿ ಅದರ ಆಳ ಅಂತರಗಳನ್ನು ಸೆರೆಹಿಡಿದಿದ್ದಾರೆ. ಪ್ರಕೃತಿಯಲ್ಲಿ ನಿರ್ಮಲವಾಗಿ ಕಾಣುವ ಪಶು ಪಕ್ಷಿಗಳನ್ನು ಹಾಗೂ ಸುಂದರ ಹೂಗಿಡಗಳನ್ನು ಚಿತ್ರಿಸಿರುವರು. ಹಾಗೂ ತಾವು ವಾಸಿಸುವ ಮನೆ ಮಂದಿರಗಳು ಪ್ರಕೃತಿಯಲ್ಲಿ ಹೇಗೆ ಕಾಣಬೇಕು. ಅದನ್ನು ನೋಡಿ ಇತರರು ಆನಂದಿಸಬೇಕು ಎಂಬ ಆಶಯಗಳನ್ನು ಸಹಿತ ಚಿತ್ರಗಳ ಮೂಲಕ ಅಭಿವ್ಯಕ್ತ ಮಾಡಿದ್ದಾರೆ. ಇಂಥ ದೃಶ್ಯಗಳು ಗಾಜಿನ ಮೇಲೆ ಅಪಾರ ಸಂಖ್ಯೆಯಲ್ಲಿ ಚಿತ್ರಿತಗೊಂಡಿವೆ.

ಅಲಂಕಾರಿಕ ಗಾಜಿನ ಮೇಲಿನ ಚಿತ್ರಗಳು ಬಹುತೇಕ ಗೃಹಲಂಕಾರಕ್ಕಾಗಿ ಬಳಸಲಾದ ಗಾಜಿನ ವಸ್ತುಗಳು ಪ್ರಮುಖವೆನ್ನಬಹುದು. ಇವು ಸಹಿತ ಕರ್ನಾಟಕದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ರಚನೆಗೊಂಡಿದ್ದನ್ನು ನೋಡುತ್ತೇವೆ. ಜೊತೆಗೆ ಅನೇಕ ಕಟ್ಟಡಗಳಲ್ಲಿ ಅಲಂಕಾರಿಕವಾಗಿ ಅಳವಡಿಸಲಾದ ಗಾಜಿನ ಮೇಲೆ ಇಂಥ ಚಿತ್ರಗಳು ರಚನೆಗೊಂಡಿದ್ದು ತಿಳಿದು ಬರುತ್ತದೆ. ಇಲ್ಲಿ ಜಾಮಿತಿಕ ನೈಸರ್ಗಿಕ ಹಾಗೂ ಅಲಂಕಾರಿಕ ನಕ್ಷಾ ವಿನ್ಯಾಸಗಳು ರಚನೆಗೊಂಡಿವೆ.



ವರ್ಗೀಕರಣ
I. ಗಾಜಿನ ಮೇಲಿನ ಧಾರ್ಮಿಕ ಹಿನ್ನೆಲೆಯ ಚಿತ್ರಗಳು
೧. ಗಾಜಿನ ಮೇಲಿನ ಹಿಂದೂ ಧರ್ಮದ ಚಿತ್ರಗಳು
ಅ. ಶೈವ ಧರ್ಮದ ಚಿತ್ರಗಳು
ಬ. ವೈಷ್ಣವ ಧರ್ಮದ ಚಿತ್ರಗಳು
ಕ. ಜೈನ ಧರ್ಮದ ಚಿತ್ರಗಳು
ಡ. ಇತರೆ ಹಿಂದೂ ಧರ್ಮದೇವತೆಗಳ ಚಿತ್ರಗಳು
೨. ಗಾಜಿನ ಮೇಲಿನ ಕ್ರೈಸ್ತ ಧರ್ಮದ ಚಿತ್ರಗಳು
೩. ಗಾಜಿನ ಮೇಲಿನ ಇಸ್ಲಾಂ ಧರ್ಮದ ಚಿತ್ರಗಳು
ಕ್ಯಾಲಿಗ್ರಾಫಿ ಅಲಂಕಾರಿಕ ಚಿತ್ರಗಳು
II. ಗಾಜಿನ ಮೇಲಿನ ಧಾರ್ಮಿಕೇತರ ಹಿನ್ನೆಲೆಯ ಚಿತ್ರಗಳು
೧. ಗಾಜಿನ ಮೇಲಿನ ಸಾಮಾಜಿಕ ಚಿತ್ರಗಳು
ಅ. ಸ್ತ್ರೀ-ಪುರುಷರ ಶೃಂಗಾರ ಚಿತ್ರಗಳು
ಬ. ಸ್ತ್ರೀ-ಪುರುಷರ ಶೃಂಗಾರೇತರ ಚಿತ್ರಗಳು
೨. ಗಾಜಿನ ಮೇಲಿನ ಐತಿಹಾಸಿಕ ಚಿತ್ರಗಳು
ಅ. ಐತಿಹಾಸಿಕ ಸ್ತ್ರೀ-ಪುರುಷರ ಚಿತ್ರಗಳು
ಬ. ಐತಿಹಾಸಿಕ ಘಟನೆಯ ಚಿತ್ರಗಳು
೩. ಗಾಜಿನ ಮೇಲಿನ ನಿಸರ್ಗ ದೃಶ್ಯದ ಚಿತ್ರಗಳು
೪. ಗಾಜಿನ ಮೇಲಿನ ಅಲಂಕಾರಿಕ ಚಿತ್ರಗಳು

## I. ಗಾಜಿನ ಮೇಲಿನ ಧಾರ್ಮಿಕ ಹಿನ್ನೆಲೆಯ ಚಿತ್ರಗಳು

ಕರ್ನಾಟಕದಲ್ಲಿ ಕಂಡುಬರುವ ಗಾಜಿನ ಮೇಲಿನ ಧಾರ್ಮಿಕ ಹಿನ್ನೆಲೆಯ ಚಿತ್ರಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವೇಚಿಸಬಹುದು.

**೦೧. ಗಾಜಿನ ಮೇಲಿನ ಹಿಂದೂ ಧರ್ಮದ ಚಿತ್ರಗಳು**

**೦೨. ಗಾಜಿನ ಮೇಲಿನ ಕ್ರೈಸ್ತ ಧರ್ಮದ ಚಿತ್ರಗಳು**

**೦೩. ಗಾಜಿನ ಮೇಲಿನ ಇಸ್ಲಾಂ ಧರ್ಮದ ಚಿತ್ರಗಳು**

### ೦೧. ಗಾಜಿನ ಮೇಲಿನ ಹಿಂದೂ ಧರ್ಮದ ಚಿತ್ರಗಳು

ಹಿಂದೂ ಧರ್ಮದ ಗಾಜಿನ ಮೇಲಿನ ಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಮತ್ತೆ ನಾಲ್ಕು ರೀತಿಯಲ್ಲಿ ವಿಂಗಡಿಸಬಹುದು.

**ಅ. ಶೈವ ಧರ್ಮದ ಚಿತ್ರಗಳು.**

**ಬ. ವೈಷ್ಣವ ಧರ್ಮದ ಚಿತ್ರಗಳು.**

**ಕ. ಜೈನ ಧರ್ಮದ ಚಿತ್ರಗಳು.**

**ಡ. ಇತರೆ ಹಿಂದೂ ಧರ್ಮದೇವತೆಗಳ ಚಿತ್ರಗಳು.**

### ಅ. ಶೈವ ಧರ್ಮದ ಚಿತ್ರಗಳು

ಶೈವ ಪಂಥವು ಅತ್ಯಂತ ಪ್ರಾಚೀನವಾದ ಹಾಗೂ ವ್ಯಾಪಕ ಪ್ರಚಾರ ಪಡೆದುಕೊಂಡ ಮತ ಪಂಥವಾಗಿದೆ. ಇದರ ಮುಖ್ಯ ದೇವತೆ ಶಿವ. ಶಿವನೇ ಸತ್ಸಂಗ ಸಾಕಾರ ಮೂರ್ತಿ, ಪ್ರತಿಯೊಬ್ಬ ಜೀವನೂ ಆತ್ಮ, ಮಾಯೆ ಮತ್ತು ಕಾರ್ಮಿ ಎನ್ನುವ ಮೂರು ಮಲಗಳಿಂದ ಆವೃತನಾಗಿ ತನ್ನ ಸರ್ವಜ್ಞತ್ವವನ್ನು ಕಳೆದುಕೊಂಡು ಅನೇಕ ಜನ್ಮಗಳನ್ನು ಪಡೆಯುತ್ತಾನೆ. ಈ ಜೀವನೇ ಪಶು, ಇವನನ್ನು ಜನನ ಮರಣಗಳಿಂದ ರಕ್ಷಿಸುವವನೇ ಶಿವ. ಇಂಥ ಶಿವನ ಕುರಿತು ನಮ್ಮ ಗಾಜಿನ ಕಲಾವಿದರು ಅವನ ಸ್ವರೂಪ ಮತ್ತು ಶಕ್ತಿಯನ್ನು ವಿವಿಧ ರೂಪಗಳಲ್ಲಿ ಚಿತ್ರಿಸಲು ಪ್ರಯತ್ನಿಸಿದ್ದಾರೆ. ಮುಂದೆ ಹನ್ನೊಂದನೆಯ ಶತಮಾನದಲ್ಲಿ ಭಕ್ತಿ ಪಂಥದಲ್ಲಿ ಶರಣರು ತಮ್ಮ ವಚನಗಳ ಮೂಲಕ ಶಿವನ ಕುರಿತಾದ ಅವನ ಭಕ್ತಿ, ಶಕ್ತಿಯನ್ನು ಹಾಗೂ ಆರಾಧನೆಯನ್ನು ಹಾಡಿ ಹೊಗಳಿದ್ದಾರೆ.

**ಚಿತ್ರಸಂಖ್ಯೆ ೦೧. ಶಿವನ ಕುಟುಂಬ**

ಈ ಚಿತ್ರದಲ್ಲಿ ಕಲಾವಿದನು ಮುಕುಟಧಾರಿಯಾದ ಶಿವನನ್ನು ಪತ್ನಿ ಪಾರ್ವತಿಯೊಂದಿಗೆ ಸಿಂಹಾಸನದಲ್ಲಿ ಆಶೀನರಾಗಿರುವಂತೆ ಚಿತ್ರಿಸಿದ್ದಾನೆ. ಇಲ್ಲಿ ವಿಶೇಷವೆಂದರೆ ಶಿವನು ಪಾರ್ವತಿಯನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ಒಂದು ಕೈಯಿಂದ ಅವಳನ್ನು ಬಳಸಿ ಅಪ್ಪಿಕೊಂಡಿರುವಂತೆ ತೋರಿಸಿದ್ದಾನೆ. ಈ ಶಿವದಂಪತಿಗಳ ಪುತ್ರರಾದ ಗಣಪತಿ ಮತ್ತು ಷಣ್ಮುಗರ ಚಿತ್ರಗಳನ್ನು ಅವರ ಬಲಕ್ಕೆ ಮತ್ತು ಎಡಕ್ಕೆ ಪದ್ಮಾಸನದಲ್ಲಿ ಕುಳಿತಿರುವಂತೆ ಚಿತ್ರಿಸಿದ್ದಾನೆ. ಈ ದೇವತೆಗಳಿಗೆ ಅವರವರ ಸಂಕೇತದ ಆಯುಧಗಳನ್ನು ಕೊಟ್ಟಿದ್ದಾನೆ. ಶಿವನು ತನ್ನ ಜಡೆಯಲ್ಲಿ

ಗಂಗೆಯನ್ನು ಬಂಧಿಸಿ ಸರ್ಪಕಾವಲನ್ನು ಹಾಕಿರುವಂತೆ ಕಲಾವಿದನು ತೋರ್ಪಡಿಸಿದ್ದಾನೆ. ಶಿವನ ಒಂದು ಕೈಯಲ್ಲಿ ತ್ರಿಶೂಲವನ್ನೂ, ಇನ್ನೊಂದು ಕೈಯಲ್ಲಿ ಕೊಡಲಿಯನ್ನು ಇನ್ನೊಂದು ಬಲಗೈಯನ್ನು ಅಭಯ ಹಸ್ತ ಸಂಕೇತವನ್ನು ನಿರೂಪಿಸುವಂತೆ ಚಿತ್ರಿಸಿದ್ದಾನೆ. ಮಿತವಾದ ಆಭರಣಗಳನ್ನು, ಹೂವಿನ ಮಾಲೆಯನ್ನು ಶಿವನು ಧರಿಸಿದ್ದಾನೆ. ಹಳದಿ ಬಣ್ಣದ ಧೋತಿಯನ್ನು ಧರಿಸಿ ಹುಲಿ ಚರ್ಮಾಂಬರವನ್ನು ನಡುವಿಗೆ ಸುತ್ತಿಕೊಂಡಿದ್ದಾನೆ. ಅಲಂಕಾರಿಕ ನೀಲಿ ಶಲ್ಯವನ್ನು ಹೊದ್ದು ಕೊಂಡಿರುವಂತೆ ಕಲಾವಿದನು ಚಿತ್ರಿಸಿದ್ದಾನೆ. ಪಾರ್ವತಿಯನ್ನು ಒಬ್ಬ ಗೌರವಸ್ಥ, ಸಂಸ್ಕಾರವಂತಹ ಮಹಿಳೆಯಂತೆ ವೇಷಭೂಷಣಗಳನ್ನು ಹಾಕಲಾಗಿದೆ. ಕೆಂಪು ವರ್ಣದ ಹದಿನಾರು ಮೊಳದ ಸೀರೆಯನ್ನು ಧರಿಸಿ ಮರಾಠಿಮಹಿಳೆಯರ ಸಂಪ್ರದಾಯದಂತೆ ಸೀರೆಯನ್ನು ಕಚ್ಚೆಹಾಕಿ ಪತಿಯ ತೊಡೆಯ ಮೇಲೆ ಆಶೀನಳಾಗಿರುವಂತೆ ಚಿತ್ರಿಸಲಾಗಿದೆ. ಮಿತವಾದ ಆಭರಣಗಳನ್ನು ಧರಿಸಿರುವಂತೆ ಚಿತ್ರಿಸಿ ಒಂದು ಕೈಯಲ್ಲಿ ಕಮಲದ ಹೂವನ್ನು ಕೊಟ್ಟು ಪತಿ ಪತ್ನಿಯರ ಪ್ರೇಮದ ರಸಗಳಿಗೆಯನ್ನು ತೋರ್ಪಡಿಸುವಂತೆ ಚಿತ್ರಿಸಲಾಗಿದೆ. ಈ ದಂಪತಿಗಳು ಆಶೀನರಾದ ಸಿಂಹಾಸನವು ಅಲಂಕೃತವಾದ ಕುಸುರಿ ಕೆಲಸ ಹೊಂದಿದ ಚಿನ್ನದಿಂದ ಮಾಡಿದ ಆಸನದಂತೆ ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ಸೂರ್ಯಸ್ತದ ಆಕಾಶವನ್ನು ಮತ್ತು ಗಿಡಮರಗಳನ್ನು ಚಿತ್ರಿಸಲಾಗಿದೆ. ಮುನ್ನೆಲೆಯು ಗ್ರನೈಟ್ ಸಿಲೆಯಿಂದ ಕೂಡಿದ ಕಲ್ಲು ಹಾಸನ್ನು ಹೊಂದಿದೆ. ಈ ಚಿತ್ರವು ಸುಖಿ ಜೀವನವನ್ನು ಅನುಭವಿಸುತ್ತಿರುವ ಕುಟುಂಬವನ್ನು ಪ್ರತಿನಿಧಿಸುತ್ತಿರುವಂತೆ ಕಂಡು ಬರುತ್ತದೆ. ಇಲ್ಲಿ ಪ್ರಧಾನವಾಗಿ ನೀಲಿ, ಕೆಂಪು, ಹಸಿರು, ಕಪ್ಪು, ಕಂದು, ಬಿಳಿ ಹಾಗೂ ಹಳದಿ ವರ್ಣಗಳ ಸಮ್ಮಿಶ್ರಣದಿಂದ ವರ್ಣಗಳನ್ನು ಸಂಯೋಜನೆ ಮಾಡಲಾಗಿದೆ. ಇಲ್ಲಿ ಶಿವ ಮತ್ತು ಪಾರ್ವತಿಯರ ಭಾವ ಲಕ್ಷಣಗಳು ಸಾಮಾನ್ಯ ಗ್ರಹಸ್ತ ಸತಿಪತಿಗಳಂತೆ ನಿರೂಪಣೆಗೊಂಡಿವೆ. ಇಲ್ಲಿ ಕಲಾವಿದನು ತನ್ನ ಪರಿಸರದಲ್ಲಿ ಬದುಕಿನ ಜೀವನ ಶೈಲಿಯನ್ನು ತರಲು ಪ್ರಯತ್ನಿಸಿದ್ದಾನೆ ಎಂದು ತೋರುತ್ತದೆ.

**ಚಿತ್ರಸಂಖ್ಯೆ ೦೨. ಶಿವ, ಪಾರ್ವತಿ ಮತ್ತು ಗಣಪ**

ಈ ಚಿತ್ರದಲ್ಲಿ ಚತುರ್ಭುಜ ಧಾರಿಯಾದ ಶಿವನು ಪತ್ನಿ ಪಾರ್ವತಿ ಮತ್ತು ಪ್ರೇಮ ಪುತ್ರ ಗಣಪತಿಯೊಂದಿಗೆ ಸಿಂಹಾಸನದಲ್ಲಿ ಕುಳಿತಿರುವ ಕುಟುಂಬದ ದೃಶ್ಯವಾಗಿದೆ. ಗಂಗೆಯನ್ನು ಹೊತ್ತ ಜಟಾಧಾರಿ ಶಿವನು ಕೊರಳಲ್ಲಿ ರುದ್ರಾಕ್ಷಿ ಸರವನ್ನು ಹಾಗೂ ಆಭರಣಗಳನ್ನು ಧರಿಸಿದ್ದಾನೆ. ಹಳದಿ ವರ್ಣದ ಧೋತಿಯನ್ನು ಧರಿಸಿದ್ದು ನಡುವಿಗೆ ಹುಲಿಯ ಚರ್ಮವನ್ನು ಸುತ್ತಿಕೊಂಡಿದ್ದಾನೆ. ಇಲ್ಲಿ ಶಿವನಿಗೆ ಕಲಾವಿದ ಗೌರವ ವರ್ಣದ ಮೈಬಣ್ಣವನ್ನು ಸಂಯೋಜಿಸಿದ್ದಾನೆ. ಇಲ್ಲಿ ಪಾರ್ವತಿಯನ್ನು ಬಿಳಿಮಿಶ್ರಿತ ಕೆಂಪು ವರ್ಣದ ಸೀರೆಯನ್ನು, ಹಳದಿ ಮಿಶ್ರಿತ ಹಸಿರುವರ್ಣದ ಮೈಬಣ್ಣವನ್ನು ಸಂಯೋಜನೆಗೊಳಿಸಿದ್ದಾನೆ. ಚಿತ್ರ ೦೧ ರಲ್ಲಿ ಪಾರ್ವತಿಯು ಶಿವನ ತೊಡೆಯ ಮೇಲೆ ಆಶೀನಳಾಗಿದ್ದರೆ ಇಲ್ಲಿ ಅವನ ಪಕ್ಕದಲ್ಲಿ ಕುಳಿತು ಅವನ ಎದೆಗೆ ಆಸರೆಯಾಗಿ ಕುಳಿತಿರುವಂತೆ ಕಲಾವಿದನು ವ್ಯಕ್ತ ಪಡಿಸಿದ್ದಾನೆ. ಇಲ್ಲಿ ಶಿವನು ಅವಳನ್ನು ಒಂದು ಕೈಯಿಂದ ಬಳಸಿ ಹಿಡಿದಿರುವುದನ್ನು ಕಾಣಬಹುದು. ಕಿರೀಟಧಾರಿಯಾದ ಬಾಲ ಗಣಪನು ತಂದೆಯ ಎದೆಗೆ ಆಸರೆಯಾಗಿ ಕುಳಿತು ಬಾಲಕನ ಮುಗ್ಧತನವನ್ನು ವ್ಯಕ್ತಪಡಿಸುತ್ತಿದ್ದಾನೆ ಎಂಬಂತೆ ನಿರೂಪಣೆ ಮಾಡಲಾಗಿದೆ. ಶಿವನು ಒಂದು

ಬಲಗೈಯಲ್ಲಿ ತ್ರಿಶೂಲವನ್ನು ಹಿಡಿದರೆ ಇನ್ನೊಂದು ಬಲಗೈಯನ್ನು ಪುತ್ರ ಗಣಪತಿಯ ಭುಜದ ಮೇಲೆ ಇರಿಸಿದ್ದಾನೆ. ಒಂದು ಎಡಗೈಯಲ್ಲಿ ಕೊಡಲಿಯಂತಹ ಆಯುಧವನ್ನು ಹಿಡಿದರೆ ಇನ್ನೊಂದು ಎಡಗೈಯಿಂದ ಪತ್ನಿ ಪಾರ್ವತಿಯನ್ನು ಬಳಸಿದ್ದಾನೆ. ಶಿವನು ತನ್ನ ಎಡಗಾಲನ್ನು ವಾಹನವಾದ ನಂದಿಯ ಮೇಲೆ ಇರಿಸಿದ್ದಾನೆ. ಈ ಚಿತ್ರದಲ್ಲಿ ಕಲಾವಿದನು ಶಿವನನ್ನು ಒಬ್ಬ ಸಭ್ಯ ಗ್ರಹಸ್ತನಂತೆ ಚಿತ್ರಿಸಿದರೆ ಪಾರ್ವತಿಯನ್ನು ನಮ್ಮ ಸಂಪ್ರದಾಯಸ್ತ ಗೃಹಿಣಿಯಂತೆ ಚಿತ್ರಿಸಿದ್ದಾನೆ. ಇಲ್ಲಿ ಬಾಲ ಗಣಪನು ಸಾಮಾನ್ಯ ದಂಪತಿಗಳ ಪ್ರೇಮಪುತ್ರನಂತೆ ನಿರೂಪಣೆ ಗೊಂಡಿದ್ದಾನೆ. ಇಲ್ಲಿ ಕಲಾವಿದನು ವ್ಯಕ್ತಪಡಿಸಿದ ಸಾಂಪ್ರದಾಯಿಕ ಉಡುಪುಗಳು ಆಭರಣಗಳು ಮತ್ತು ಮುಖಭಾವ ಲಕ್ಷಣಗಳು, ಹಿನ್ನೆಲೆಯಲ್ಲಿ ಬಳಸಿದ ವಸ್ತುಗಳು ವರ್ಣಗಳು ಇಂಥ ವಿವೇಚನೆಗೆ ದಾರಿ ಮಾಡಿಕೊಡುತ್ತವೆ. ಈ ಎರಡು ಚಿತ್ರಗಳಲ್ಲಿ ಗಮನಿಸಬೇಕಾದುದು ಶಿವನ ಕೊರಳಲ್ಲಿ ಸರ್ಪಧಾರಣೆ ಇರಲಾರದು.

**ಚಿತ್ರಸಂಖ್ಯೆ ೦೩. ೦೪ ಶಿವಪಾರ್ವತಿ. (ವೃಷಭಾರೂಢ)**

'ವೃಷಭ' ಎಂದರೆ ಶಿವನ ವಾಹನವಾದ ನಂದಿ ಹೆಸರು. ಒಮ್ಮೆಶಿವನು ಇಡೀ ಬ್ರಹ್ಮಾಂಡದ ಭಾರವನ್ನು ಧರಿಸಿ, ತನ್ನ ಸರಿಸಾಟಿಯಾರು ಇಲ್ಲ ಎಂದು ಧರ್ಮವನ್ನು ನೆನೆಯಲು ತೇಜೋಮೂರ್ತಿಯಾಗಿ ಅಡಿಗೆರಗಿನಿಂತ ಈ ವೃಷಭನನ್ನು ತನ್ನ ವಾಹನವನ್ನಾಗಿ ಮಾಡಿಕೊಂಡನು. ಇವನನ್ನು ಆದಿ ವೃಷಭನೆಂದೂ ಕರೆಯುವರು. ಇಲ್ಲಿ ಶಿವನು ವೃಷಭನ ನಾಲ್ಕು ಕಾಲುಗಳನ್ನು ವೇದಗಳನ್ನಾಗಿ, ಶರೀರವನ್ನು ಷಟ್‌ಶಾಸ್ತ್ರಗಳನ್ನಾಗಿ, ತನುತ್ರಯವನ್ನು ನಾದಬಿಂದುಕಗಳನ್ನಾಗಿ, ಎರಡು ಕೊಂಬುಗಳನ್ನು ಆದಿ–ಅನಾದಿಗಳನ್ನಾಗಿ, ಶಿರಸ್ಸನ್ನು ಪ್ರಣವವನ್ನಾಗಿ, ಮುಖವನ್ನು ಪಂಚಾಕ್ಷರಿಯನ್ನಾಗಿ ಹಿಣಿಲನ್ನು ವೇದಾಂತವನ್ನಾಗಿ, ಕೂದಲುಗಳನ್ನು ತೀರ್ಥಸ್ಮೃತಿಮಂತ್ರಗಳಾಗಿ ಮಾಡಿಕೊಂಡನು. ಶಿವನು ಉಮೆಯೊಡನೆ ವೃಷಭವನ್ನು ಏರಿದುದಕ್ಕೆ ವೃಷಭವಾಹನ ಲೀಲೆ ಎಂತಲೂ ಕರೆಯುವರು.[೧] ಇದು ಪುರಾಣ ಕಥೆ.

ಇಲ್ಲಿ ಎರಡು ಗಾಜಿನ ಚಿತ್ರಗಳು ಈ ಕಥೆಗೆ ಸಂಬಂಧಿಸಿದಂತೆ ಚಿತ್ರಿತಗೊಂಡಿವೆ. ಎರಡು ಚಿತ್ರಗಳ ಅಳತೆಗಳು ವಿಭಿನ್ನವಾಗಿದ್ದು, ರಚನಾ ವಿನ್ಯಾಸ, ವರ್ಣವಿನ್ಯಾಸ ಮತ್ತು ಆಕೃತಿಗಳ ರೂಪಲಕ್ಷಣಗಳು ವೈವಿಧ್ಯತೆಯಿಂದ ಕೂಡಿವೆ ಮತ್ತು ಇಬ್ಬರು ಕಲಾವಿದರ ಆಶಯಗಳು ಒಂದೇ ರೀತಿಯಲ್ಲಿ ವ್ಯಕ್ತವಾಗುತ್ತವೆ.

ಚಿತ್ರ ೦೩ ರಲ್ಲಿ ವೃಷಭನಾದ ನಂದಿಯ ಮೇಲೆ ಚತುರ್ಭುಜಧಾರಿಯಾದ ಶಿವನು ಉಮೆಯನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡಿದ್ದು, ಉಮೆಯನ್ನು ಮಹೇಶ್ವರನಿಗಿಂತಲೂ ಚಿಕ್ಕವಳನ್ನಾಗಿ ಚಿತ್ರಿಸಲಾಗಿದೆ. ಶಿವನನ್ನು ತಿಳಿಗುಲಾಬಿ ಮಿಶ್ರಿತ ಬಿಳಿವರ್ಣದಿಂದ ಲೇಪನಮಾಡಿದ್ದರೆ, ಉಮೆಯನ್ನು ಹಸಿರು ವರ್ಣದಿಂದ ಸಂಯೋಜನೆಗೊಳಿಸಲಾಗಿದೆ. ವೃಷಭನನ್ನು ಬಿಳಿವರ್ಣದಿಂದ ಸಂಯೋಜನೆಗೊಳಿಸಿ ಸ್ವರ್ಣಾಭರಣಗಳಿಂದ ಅಲಂಕೃತಗೊಳಿಸಲಾಗಿದೆ. ಶಿವನು ಸಾಂಪ್ರದಾಯಿಕ ಧೋತಿಯನ್ನು, ಉಮೆಯು ಸೀರೆಯನ್ನು ಮತ್ತು ಕುಪ್ಪಸವನ್ನು ಧರಿಸಿರುವಳು. ಇಬ್ಬರೂ ದೇವತೆಗಳು ಸ್ವರ್ಣಮುಕುಟಗಳನ್ನು ಹೊಂದಿರುವರು. ಚಿತ್ರದ ಹಿನ್ನೆಲೆಗೆ ವೃತ್ತಾಕಾರದ

---

೧. ಯಜ್ಞ ನಾರಾಯಣ ಉಡುಪ ; ಪುರಾಣ ಭಾರತಕೋಶ, ಪುಟ ೫೯೭

ಪ್ರಭಾವಳಿಯನ್ನು ಚಿತ್ರಿಸಲಾಗಿದ್ದು, ಬಿಳಿ ಮತ್ತು ನೀಲಿ ವರ್ಣಗಳಿಂದ ಅಲಂಕರಣ ಮಾಡಲಾಗಿದೆ. ಈ ಚಿತ್ರದ ರೇಖಾ ವಿನ್ಯಾಸವು ಲಾವಣ್ಯತೆಯಿಂದ, ಚೈತನ್ಯತೆಯಿಂದ, ಮತ್ತು ತೂಕಮಯದಿಂದ ಕೂಡಿದೆ. ಚಿತ್ರದ ಹಿನ್ನೆಲೆಯನ್ನು ಕೇಸರಿ ವರ್ಣದಿಂದ ಏಕರೂಪವಾಗಿ ಲೇಪನ ಮಾಡಲಾಗಿದೆ.

ಚಿತ್ರ ೦೪ ರಲ್ಲಿ ಶಿವ ಮತ್ತು ಉಮೆಯನ್ನು ಚಿತ್ರ ೦೩ ರಲ್ಲಿರುವಂತೆ ಭಾವ ಭಂಗಿಯಲ್ಲಿ ಚಿತ್ರಿಸಿದ್ದರೂ ವಸ್ತ್ರಾಭರಣಗಳಲ್ಲಿ ವೈವಿಧ್ಯತೆ ಇದೆ. ಇಲ್ಲಿ ಶಿವನನ್ನು ಹಳದಿ ವರ್ಣದ ಧೋತಿಯಿಂದ ಅಲಂಕರಿಸಿದ್ದು, ಶಿರ ಮತ್ತು ಕರ್ಣಾಭರಣಗಳಿಂದ ವೈಭವೀಕರಿಸಲಾಗಿದೆ. ಇಲ್ಲಿ ಶಿವನು ಜಡೆಯನ್ನು ಹೊಂದಿದ್ದರೂ ಸಹಿತ ಕೂದಲುಗಳು ಅಲೆ ಅಲೆಯಾಗಿ ಹಾರಾಡುತ್ತಿರುವಂತೆ ಚಿತ್ರಿಸಲಾಗಿದೆ. ಶಿವನನ್ನು ಕೆಂಪು ಮಿಶ್ರಿತ ಬಿಳಿವರ್ಣದಿಂದ ಸಂಯೋಜನೆ ಗೊಳಿಸಲಾಗಿದೆ.

ಶಿವನು ಕೆಂಪು ಶಲ್ಯವನ್ನು ಭುಜದ ಮೇಲೆ ಹೊಂದಿದ್ದು, ಜಟವನ್ನು ಕೆಂಪು ವರ್ಣದಿಂದ ಪೂರ್ಣಗೊಳಿಸಲಾಗಿದೆ. ಉಮೆಯ ಮೈಬಣ್ಣವನ್ನು ಹಳದಿ ಮಿಶ್ರಿತ ಹಸಿರುವರ್ಣದಿಂದ ಸಂಯೋಜನೆಗೊಳಿಸಲಾಗಿದ್ದು, ಕೆಂಪು ವರ್ಣದ ಸೀರೆ ಕಪ್ಪು ವರ್ಣದ ಕುಪ್ಪಸವನ್ನು ಸಂಯೋಜಿಸಿದೆ. ಸ್ವರ್ಣಾಭರಣ ಮತ್ತು ಸ್ವರ್ಣ ಮುಕುಟಗಳಿಂದ ಸಂಯೋಜಿಸಲಾಗಿದೆ. ಇಲ್ಲಿ ವೃಷಭನನ್ನು ಬಿಳಿಬಣ್ಣದಿಂದ ಲೇಪನಮಾಡಿ, ಆಭರಣಗಳಿಂದ ಅಲಂಕರಿಸಲಾಗಿದೆ. ವೃಷಭನ ಎಡಕ್ಕೆ ಮತ್ತು ಬಲಕ್ಕೆ ಬಾವುಟ ಹಿಡಿದ ಸೇವಕರನ್ನು ಚಿತ್ರಿಸಲಾಗಿದೆ. ಹಿನ್ನೆಲೆಯನ್ನು ಬಿಳಿವರ್ಣದಿಂದ ಏಕರೂಪವಾಗಿ ಲೇಪನ ಮಾಡಲಾಗಿದೆ. ಶಿವ ಮತ್ತು ಉಮೆಯರ ಆಸರೆಗೆ ಅಲಂಕೃತ ದಿಂಬನ್ನು ವೃತ್ತಾಕಾರದ ಪ್ರಭಾವಳಿಯನ್ನು ಮತ್ತು ಛತ್ರಿಯನ್ನು ಚಿತ್ರಿಸಲಾಗಿದೆ. ಆಕೃತಿಗಳ ದೈಹಿಕ ಲಕ್ಷಣಗಳು ಅತ್ಯಂತ ಚಲನೆಯಿಂದ ಕೂಡಿದ್ದರೂ ಸಹಿತ ಆಕೃತಿಗಳ ಸಂಯೋಜನೆಯಲ್ಲಿ ಕೇವಲ ಸಾಂಕೇತ ರೂಪದೃಶ್ಯಗಳು ಚಿತ್ರಿತಗೊಂಡಿವೆ. ಈ ಎರಡು ಚಿತ್ರಗಳು ಸಾಂಪ್ರದಾಯಿಕ ಚಿತ್ರಗಳ ಪ್ರತಿರೂಪವಾದುದರಿಂದ ಇಲ್ಲಿ ಕೇವಲ ಕಲಾವಿದನ ಅಲಂಕಾರಿಕ ಪ್ರಜ್ಞೆಯನ್ನು ಕಾಣಬಹುದೇ ಹೊರತು ಸಾಂಪ್ರದಾಯ ಚಿತ್ರದಲ್ಲಿರುವ ನಿರ್ಧಿಷ್ಟತೆಯನ್ನು ಕಾಣಲಾಗುವುದಿಲ್ಲ.

**ಚಿತ್ರಸಂಖ್ಯೆ ೦೫, ೦೬, ೦೭, ೦೮ ಸಂಧ್ಯಾ ತಾಂಡವ**

ಶಿವ ತಾಂಡವಗಳಲ್ಲಿ ಸಂಧ್ಯಾತಾಂಡವವು ಒಂದು. ಅಂದರೆ ಶಿವನ ನಾಟ್ಯಭಂಗಿಯಲ್ಲಿ ಇದು ಒಂದಾಗಿದೆ. ಸಂಧ್ಯಾ ತಾಂಡವದಲ್ಲಿ ಮಯಮತದ ಪ್ರಕಾರ ವಟವೃಕ್ಷದ ಕೆಳಗೆ ಅಭಿನಯಿಸಲ್ಪಟ್ಟಿತು. ಬಲಗೈಗಳಲ್ಲಿ ಒಂದು ಅಭಯಹಸ್ತ, ಇನ್ನೊಂದು, ಡಮರುವನ್ನು ಹಿಡಿದಿರಬೇಕು. ಎಡಗೈಗಳ ಪೈಕಿ ಒಂದು ವಿಸ್ಮಯ ಹಸ್ತ ಇನ್ನೊಂದು ಬರ್ಹಿಪಿಂಛ ವನ್ನು ತಳೆದಿರಬೇಕು. ಅಪಸ್ಮಾರ ಪುರಷನು ವಿನಾಪೀಠನಾಗಿರಬೇಕು.[೨]

ಈ ಪ್ರಕಾರ ಇಲ್ಲಿ ನಾಲ್ಕು ಬಗೆಯ ತೂಗುಹಾಕುವ ಗಾಜಿನ ಚಿತ್ರಗಳು ರಚನೆಗೊಂಡಿವೆ. ಈ ನಾಲ್ಕೂ ಚಿತ್ರಗಳ ಆಶಯಗಳು ಒಂದೇಯಾಗಿದ್ದು ಆಕೃತಿಗಳ ಸಂಯೋಜನೆಯಲ್ಲಿ ವರ್ಣಗಳ ಸಂಯೋಜನೆಯಲ್ಲಿ, ಚಿತ್ರಗಳ ಅಳತೆಯಲ್ಲಿ ಹಾಗೂ ಹಿನ್ನೆಲೆಯ ನಕ್ಷಾವಿನ್ಯಾಸಗಳಲ್ಲಿ ವೈಪರೀತ್ಯತೆಯನ್ನು ಕಾಣಬಹುದಾಗಿದೆ.

---

೨. ಸಿ.ಬಿ. ಸೀತಾರಾಂ ; (ಸಂ) ಶಿಲ್ಪಕಲಾ ಪ್ರಪಂಚ, ಪುಟ ೨೬೭

ಚಿತ್ರ ಸಂಖ್ಯೆ ೦೫ ರಲ್ಲಿ ಶಿವನು ಚತುರ್ಭುಜಧಾರಿಯಾಗಿದ್ದು ಎರಡು ಬಲಗೈಗಳಲ್ಲಿ ಒಂದು ಕೈ ಅಭಯಹಸ್ತ ಸೂಚಕವಾಗಿದ್ದು, ಇನ್ನೊಂದು ಕೈಯಲ್ಲಿ ಡಮರನ್ನು ಹಿಡಿದಿರುವನು. ಎಡಗೈಗಳಲ್ಲಿ ಒಂದು ಕೈಯನ್ನು ವಿಸ್ಮಯ ಹಸ್ತವನ್ನಾಗಿರಿಸಿದ್ದು, ಇನ್ನೊಂದು ಕೈಯಲ್ಲಿ ಅಗ್ನಿಕುಂಡಲವನ್ನು ಹಿಡಿದಿರುವನು. ಬಲಪಾದದಿಂದ ಅಪಸ್ಮಾರ ಪುರುಷನ ಮೇಲೆ ಮೆಟ್ಟನಿಂತಿರುವ ಶಿವನು ನಡುವಿಗೆ ವ್ಯಾಘ್ರಚರ್ಮವನ್ನು ಧರಿಸಿರುವನು. ಜಟೆಯಲ್ಲಿ ಗಂಗೆಯನ್ನು, ಜಟೆಯ ಬಲ ಪಾರ್ಶ್ವದಲ್ಲಿ ಚಂದ್ರನನ್ನು ಹೊಂದಿದ್ದು, ಜಟೆಯ ಎಡಕ್ಕೆ ಮತ್ತು ಬಲಕ್ಕೆ ಕೂದಲುಗಳು ಹಾರಾಡುತ್ತಿವೆ. ಮುತ್ತುನಾಗ, ಬಕುಳಪುಷ್ಪ, ಶಂಖ, ವರಾಹದಂಷ್ಟ್ರ, ವ್ಯಾಘ್ರನಖ, ಮಣಿ ಮುಂತಾದ ಆಭರಣಗಳು ಮತ್ತು ಮೂಲೆಗಳನ್ನು ಚಿತ್ರಿಸಲಾಗಿದ್ದು ಭುಜದ ಮೇಲೆ ಹಸಿರು ವರ್ಣದ ದಿವ್ಯಾಂಬರವನ್ನು ಹೊಂದರದೆ.

ಅಪಸ್ಮಾರ ಪುರುಷನು ವಿಶಾಲಫಣಗಳುಳ್ಳ ಸರ್ಪವನ್ನು ಎಡಗೈಯಿಂದ ಹಿಡಿದಿರುವನು. ಇವನನ್ನು ಕಂದುಗೆಂಪು ಬಣ್ಣದಿಂದ ಸಂಯೋಜನೆ ಮಾಡಲಾಗಿದೆ. ಇವನ ಮುಂದೆ ಮತ್ತು ಹಿಂದೆ ನಾಗದೇವತೆಗಳಿದ್ದಾರೆ. ಇವರು ಧುರ್ಧುರ ಮತ್ತು ಆರ್ಕಪುಷ್ಪ ಎಂಬ ನಾಗದೇವತೆಗಳಾಗಿರ ಬಹುದು. ಶಿವನ ಪದ್ಮ ಪೀಠದ ವಾಮಪಾರ್ಶ್ವದಲ್ಲಿ ಪಾರ್ವತಿಯು ನಿಂತಿರುವಳು. ಬಲಪಾರ್ಶ್ವದಲ್ಲಿ ಒಬ್ಬ ಯುವತಿಯನ್ನು ಚಿತ್ರಿಸಲಾಗಿದೆ. ಪಾರ್ವತಿಯು ನೀಲಿ ಮಿಶ್ರಿತ, ಹಸಿರುವರ್ಣದ ಮೈಬಣ್ಣವನ್ನು ಹೊಂದಿದ್ದು, ಮೈಗೆ ವಿಭೂತಿ ಭಸ್ಮವನ್ನು ಬಳಿದು ಕೊಂಡಿರುವಳು. ಶಿವನ ಹಿನ್ನೆಲೆಯಲ್ಲಿ ವೃತ್ತಾಕಾರದ ಪ್ರಭಾವಳಿಯನ್ನು ಚಿತ್ರಿಸಲಾಗಿದೆ. ಇದು ಬಿಳಿಮಿಶ್ರಿತ ನೀಲಿ ಬಣ್ಣದಿಂದ ಲೇಪನಗೊಂಡಿದೆ. ಪೀಠಕ್ಕೆ ಆಸರೆಯಾಗಿ ವರ್ಣರಂಜಿತ ಶಾಮಿಯಾನನ್ನು ಚಿತ್ರಿಸಲಾಗಿದೆ. ಚಿತ್ರದ ಸುತ್ತಲೂ ಕೆಂಪು ಮತ್ತು ಹಸಿರು ವರ್ಣಗಳ ಹೂವು, ಎಲೆಗಳ ನಕ್ಷಾವಿನ್ಯಾಸವನ್ನು ಚಿತ್ರಿಸಲಾಗಿದೆ. ಚಿತ್ರವು ಸುಸ್ಪಷ್ಟವಾಗಿ ಕಾಣುವಂತೆ ಕಪ್ಪು ಬಣ್ಣದಿಂದ ಏಕರೂಪವಾಗಿ ಲೇಪನ ಮಾಡಲಾಗಿದೆ.

ಚಿತ್ರಸಂಖ್ಯೆ ೦೬, ೦೭, ೦೮ ರಲ್ಲಿ ಶಿವನ ನೃತ್ಯ ಭಂಗಿಯು ಚಿತ್ರಸಂಖ್ಯೆ ೦೫ ರಂತೆ ಇದ್ದು, ಚಿತ್ರ ೦೬ ರಲ್ಲಿ ಅಪಸ್ಮಾರ ಪುರುಷನ ಮೈಬಣ್ಣವು ತಿಳಿಗುಲಾಬಿ ವರ್ಣದಿಂದ ಕೂಡಿದೆ. ಚಿತ್ರಸಂಖ್ಯೆ ೦೭ ಮತ್ತು ೦೮ ರಲ್ಲಿ ಅಪಸ್ಮಾರ ಪುರುಷರ ಮೈಬಣ್ಣವು ಬಿಳಿ ಮಿಶ್ರಿತ ನೀಲಿ ಬಣ್ಣವನ್ನು ಹೊಂದಿವೆ. ಜೊತೆಗೆ ವಿಭೂತಿ ಭಸ್ಮವನ್ನು ಬಳಿಯಲಾಗಿದೆ. ಈ ಮೂರು ಚಿತ್ರಗಳಲ್ಲಿನ ಪದ್ಮಪೀಠಗಳ ಶಿವನ ವಾಮಪಾರ್ಶ್ವಗಳಲ್ಲಿ ಪಾರ್ವತಿಯರು ಚಿತ್ರಿತಗೊಂಡಿರುವರು ಮತ್ತು ಬಲಪಾರ್ಶ್ವಗಳಲ್ಲಿ ವೃಷಭರು ನಿಂತಿರುವರು. ಚಿತ್ರಸಂಖ್ಯೆ ೦೬ ರಲ್ಲಿ ವೃಷಭ ದೇವನು ಚರ್ಮವಾದ್ಯವಾದ ಡೋಲನ್ನು ಬಡಿಯುತ್ತಿದ್ದರೆ, ಚಿತ್ರಸಂಖ್ಯೆ ೦೭ ರಲ್ಲಿ ಡಮರನ್ನು ಬಾರಿಸುತ್ತಿದ್ದಾನೆ. ಚಿತ್ರಸಂಖ್ಯೆ ೦೮ ರಲ್ಲಿ ಭಕ್ತಿಯಿಂದ ಕೈಜೋಡಿಸಿ ನಮಿಸುತ್ತಿರುವನು.

ಚಿತ್ರಸಂಖ್ಯೆ ೦೬ ಮತ್ತು ೦೭ ರಲ್ಲಿ ಪಾರ್ವತಿಯ ಮೈಬಣ್ಣವನ್ನು ಹಳದಿ ಮಿಶ್ರಿತ ಹಸಿರು ವರ್ಣದಿಂದ ಲೇಪನ ಮಾಡಲಾಗಿದೆ. ಆದರೆ ಚಿತ್ರಸಂಖ್ಯೆ ೦೮ ರಲ್ಲಿ ನೀಲಿ ಬಣ್ಣವನ್ನು ಸಂಯೋಜಿಸಲಾಗಿದೆ. ಚಿತ್ರಸಂಖ್ಯೆ ೦೮ ರಲ್ಲಿನ ಹಿನ್ನೆಲೆಯ ಮಂಟಪದ ವಿನ್ಯಾಸವು ಚಿತ್ರಸಂಖ್ಯೆ ೦೫ ರಲ್ಲಿರುವಂತೆ ಸಂಯೋಜನೆಗೊಳಿಸಲಾಗಿದೆ. ಆದರೆ ಚಿತ್ರಸಂಖ್ಯೆ ೦೮ ರಲ್ಲಿ ಶಿವನ ಹಿಂದಿನ ವೃತ್ತಾಕಾರದ ಪ್ರಭಾವಳಿಯನ್ನು ತಿಳಿಕೆಂಪು ವರ್ಣದಿಂದ ಲೇಪನ ಮಾಡಲಾಗಿದೆ. ಚಿತ್ರಸಂಖ್ಯೆ

೦೭ ರಲ್ಲಿ ಹಿನ್ನೆಲೆ ಮಂಟಪವನ್ನು ಕೆಂಪು ಮತ್ತು ಹಸಿರು ವರ್ಣಗಳ ನಕ್ಷಾ ವಿನ್ಯಾಸವನ್ನು ರಚಿಸಲಾಗಿದೆ ಹಿನ್ನೆಲೆಗೆ ಹಳದಿ ಮಿಶ್ರಿತ ಕೆಂಪು ಬಣ್ಣವನ್ನು ಏಕರೂಪವಾಗಿ ಬಳಿದು ಚಿತ್ರವು ಸುಸ್ಪಷ್ಟವಾಗಿ ಕಾಣುವಂತೆ ಕಲಾವಿದನು ಪ್ರಯತ್ನಿಸಿದ್ದಾನೆ. ಚಿತ್ರಸಂಖ್ಯೆ ೦೮ ರಲ್ಲಿ ಹಿನ್ನೆಲೆಯಲ್ಲಿ ವಿವಿಧ ವರ್ಣಮಯ ಪರದೆಗಳನ್ನು ಚಿತ್ರಿಸಿದ್ದು, ಶಿವನ ಹಿಂದಿನ ಪ್ರಭಾವಳಿಗೆ ಕಪ್ಪು ಬಣ್ಣವನ್ನು ಬಳಿಯಲಾಗಿದೆ.

ಈ ನಾಲ್ಕು ಚಿತ್ರಗಳಲ್ಲಿ ನಾಲ್ಕು ರೀತಿಯ ಕಲಾವಿದರು ವಿಭಿನ್ನ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಿದ್ದು, ಅವರವರ ಅನುಭವದಿಂದ ಸೌಂದರ್ಯಪ್ರಜ್ಞೆ, ಅಲಂಕಾರ ಪ್ರಜ್ಞೆ, ವರ್ಣಪ್ರಜ್ಞೆ ಮತ್ತು ರೇಖಾ ಪ್ರಜ್ಞೆಯನ್ನು ಅಭಿವ್ಯಕ್ತ ಪಡಿಸಿದ್ದಾರೆ. ಈ ಚಿತ್ರಗಳು ಬಹುಶಃ ಸಂಪ್ರದಾಯದ ಚೌಕಟ್ಟನ್ನು ಮಿರಿ ಜನರ ಆಶಯದ ಮೇರೆಗೆ ಸಿದ್ಧಗೊಂಡಿರಬಹುದೆಂದು ತೋರುತ್ತದೆ. ಯಾಕೆಂದರೆ ಈ ಕಲಾವಿದರು ಬೇರೆ ಬೇರೆ ಶೈಲಿಯ ಸಾಂಪ್ರದಾಯಿಕ ಚಿತ್ರಗಳನ್ನು ಪ್ರತಿಕೃತಿ ಮಾಡಿ ಗಾಜಿನ ಚಿತ್ರಗಳನ್ನು ರಚನೆ ಮಾಡುತ್ತಿದ್ದಿರಬಹುದು. ಆ ಕಾರಣಕ್ಕಾಗಿ ಇಲ್ಲಿ ಸಾಕಷ್ಟು ವೈವಿಧ್ಯತೆಗಳನ್ನು ಕಾಣುತ್ತೇವೆ.

**ಚಿತ್ರಸಂಖ್ಯೆ ೦೯. ಶಿವತಾಂಡವ**

ಈ ಗಾಜಿನ ಚಿತ್ರವು ೧೫ ೧/೨ x ೨೦ ೧/೨ ಸೆಂ.ಮೀ ಅಳತೆ ಹೊಂದಿದೆ. ಇಲ್ಲಿ ಕಲಾವಿದನು ಶಿವನ ನಾಟ್ಯಭಂಗಿಯನ್ನು, ಅಪಸ್ಮಾರ ಪುರುಷನನ್ನು ಮತ್ತು ಪಾರ್ವತಿಯ ಚಿತ್ರವನ್ನು ಚಿತ್ರಿಸಿದ್ದು ಕೆಳಗೆ ಆಧಾರವಾಗಿ ಯಾವುದೇ ಪೀಠವನ್ನು ಚಿತ್ರಿಸಿಲ್ಲ. ಕಲಾವಿದನು ತನಗೆ ಚಿತ್ರಿಸಲು ಸಾಧ್ಯವಿರುವ ಭಾಗವನ್ನು ಮಾತ್ರ ಆಯ್ದುಕೊಂಡು ಆಕೃತಿಗಳನ್ನು ಮತ್ತು ವರ್ಣಗಳನ್ನು ಸಂಯೋಜನೆಗೊಳಿಸಿದ್ದಾನೆ. ಸಂಧ್ಯಾತಾಂಡವದಲ್ಲಿ ಶಿವನು ನಾಟ್ಯ ಮಾಡುವ ಸಂದರ್ಭಗಳನ್ನು ಪ್ರಸ್ತುತವಿರುವ ಸ್ತ್ರೀ ಪುರುಷ ದೇವತೆಗಳು, ಬಳಸುವ ಪರಿಕರಗಳು, ಸಂಕೇತಗಳನ್ನು ಬಳಸಿಕೊಂಡು ಶಿಲ್ಪವಾಗಲಿ, ಚಿತ್ರವಾಗಲಿ ನಿರ್ಮಾಣ ಮಾಡುವುದು ಸಂಪ್ರದಾಯಿಕ ವಾಡಿಕೆ. ಆದರೆ ಗಾಜಿನ ಕಲಾವಿದನು ಇಲ್ಲಿ ಆ ಸಾಂಪ್ರದಾಯದ ಅರಿವನ್ನು ತೋರಿಲ್ಲ. ಇವರು ತಮಗೆ ಎನು ತೋರಿಸಬೇಕು ಹೇಗೆ ತೋರಿಸಬೇಕು ಎಂಬುದನ್ನು ಮಾತ್ರ ಗಣನೆಗೆ ತೆಗೆದುಕೊಂಡು ಚಿತ್ರಗಳನ್ನು ರಚನೆ ಮಾಡಿದ್ದಾರೆ. ಈ ಚಿತ್ರದಲ್ಲಿ ಶಿವನನ್ನು ಗುಲಾಬಿ ಮಿಶ್ರಿತ ಬಿಳವರ್ಣದಿಂದ ಲೇಪನ ಮಾಡಲಾಗಿದೆ. ಶಿವನ ಜಟೆಯು ಕಪ್ಪು ವರ್ಣದಿಂದ ಕೂಡಿದ್ದು, ಜಟೆಯ ಮಧ್ಯದಲ್ಲಿ ಗಂಗಾದೇವಿಯ ಮೂರ್ತಿಇದೆ. ಇದು ಶಿವನ ಮುಖಕ್ಕೆ ಸಮಾಂತರವಿದೆ. ಇದು ಭರತನಾಟ್ಯ ಶಾಸ್ತ್ರದ ಭುಜಂಗ ತ್ರಾಸ ನಟನೆಯ ಲಕ್ಷಣಗಳು ಹೋಲಿಕೆಯಾಗುತ್ತದೆ.[೩]

ಇಲ್ಲಿ ಶಿವನ ಎಡಪಾರ್ಶ್ವದಲ್ಲಿ ಸ್ವರ್ಣ ಮುಕುಟಧಾರಿಯಾದ ಪಾರ್ವತಿಯೂ ನಿಂತಿರುವಳು. ಇವಳ ಮೈಬಣ್ಣವು ನೀಲಿ ಮಿಶ್ರಿತ ಹಸಿರು ವರ್ಣವನ್ನು ಹೊಂದಿದ್ದು, ಭಾರತೀಯ ಸಾಂಪ್ರದಾಯಿಕ ಉಡುಗೆಯಾದ ಸೀರೆ ಮತ್ತು ಶ್ವೇತ ವರ್ಣದ ಕುಪ್ಪಸವನ್ನು ಧರಿಸಿರುವಳು. ರೇಖಾ ಪ್ರಧಾನವಾದ ಈ ಚಿತ್ರದ ಆಕೃತಿಗಳ ದೈಹಿಕ ಲಕ್ಷಣಗಳು ಚಲನೆಯಿಂದ ಕೂಡಿವೆ.

---

೩. ವಿವರಕ್ಕೆ ನೋಡಿ. (ಸಂ), ಶಿಲ್ಪಕಲಾ ಪ್ರಪಂಚ, ಪುಟ ೨೬೪–೨೬೫

ಹಿನ್ನೆಲೆಯನ್ನು ಕೇಸರಿ ಬಣ್ಣದಿಂದ ಪೂರ್ಣಗೊಳಿಸಲಾಗಿದೆ. ಚಿತ್ರವು ಪರಿಪೂರ್ಣವಾಗಿ ಸಂಯೋಜನೆಗೊಳ್ಳದಿದ್ದರೂ ಸಹಿತ ಆಕೃತಿಗಳಲ್ಲಿ ಸ್ಪಷ್ಟ ವಿವರಗಳನ್ನು ತರಲು ಕಲಾವಿದನು ಪ್ರಯತ್ನಿಸಿದ್ದಾನೆ. ಈ ಚಿತ್ರವು ಧರ್ಮಸ್ಥಳದ 'ಮಂಜುಷಾ'ದಲ್ಲಿ ಸಂಗ್ರಹವಿದೆ.

**ಚಿತ್ರ ಸಂಖ್ಯೆ ೧೦ ಶಿವನ ಶಿರಭಾವ ಚಿತ್ರ**

ಈ ಗಾಜಿನ ಚಿತ್ರವು ನವಲಗುಂದ ತಾಲೂಕು ನಾಯಕನೂರಿನ ಮೌನ ಪತಸ್ವಿನಿ ಶರಣಮ್ಮನವರ ಶಕ್ತಿಮಂದಿರದಲ್ಲಿ ಸಂಗ್ರಹವಿದೆ. ಇದು ೪೫ x ೬೦ ಸೆಂ. ಮೀ. ಅಳತೆಯನ್ನು ಹೊಂದಿದ ತೂಗುಹಾಕುವ ಚಿತ್ರವಾಗಿದೆ. ಗಾಜಿನ ಮೇಲೆ ರಚನೆಗೊಂಡ ಅಪರೂಪದ ಶಿವನ ಶಿರಭಾವ ಚಿತ್ರ ಇದಾಗಿದೆ. ಇಲ್ಲಿ ವಿಶೇಷವೆನೆಂದರೆ ಶಿವನು ದ್ವಿಭುಜದಾರಿಯಾಗಿದ್ದು ಸಾಮಾನ್ಯ ಮನುಷ್ಯನ ಮೈ ಬಣ್ಣದಂತೆ ತಿಳಿ ಗುಲಾಬಿ ವರ್ಣದಿಂದ ಲೇಪನ ಮಾಡಲಾಗಿದೆ. ದೇಹ ಹಾಗೂ ಮುಖ ಲಕ್ಷಣಗಳನ್ನು ನೆರಳು ಬೆಳಕುಗಳಿಂದ ದುಂಡುತನವನ್ನು ತರಲಾಗಿದೆ. ಕಣ್ಣುಗಳಲ್ಲಿ ಸುಭ್ರತೆ, ಚೂಪಾದ ಕಪ್ಪು ಬಣ್ಣದ ಕೋರೆ ಮೀಸೆ, ಬಾಗಿದ ಹುಬ್ಬುಗಳು ಮತ್ತು ಗುಲಾಬಿ ವರ್ಣದ ತುಟಿಗಳನ್ನು ಕಲಾವಿದನು ಅತ್ಯಂತ ತಾಳ್ಮೆಯಿಂದ ನೈಜತೆಯನ್ನು ತಂದಿದ್ದಾನೆ. ಕಪ್ಪು ಬಣ್ಣದ ಜಟಾಮುಕುಟವನ್ನು ಹೊಂದಿದ ಶಿವನು, ಜಟೆಯ ತುಟ್ಟತುದಿಯಲ್ಲಿ ಗಂಗೆಯ ಶಿರಭಾವ ಚಿತ್ರವನ್ನು ರಚಿಸಿ ಆಕೆಯ ಬಾಯಿಯ ಮೂಲಕ ಜಲಧಾರೆಯನ್ನು ಹರಿಯುವಂತೆ ಕಲಾವಿದನು ಕಲ್ಪಿಸಿದ್ದಾನೆ. ಹಣೆಯ ಮೇಲೆ ಎರಡು ಬೆರಳಿನ ಭಸ್ಮ, ನಡುವೆ ಸಿಂಧೂರ, ಸ್ವಲ್ಪ ಮೇಲೆ ಶಿವನ ಮೂರನೆಯ ಕಣ್ಣನ್ನು ಮತ್ತು ಅರ್ಧಚಂದ್ರನನ್ನು ರಚಿಸಲಾಗಿದೆ. ಕೊರಳಲ್ಲಿ ವಿಷ ತುಂಬಿದ ನಾಗರ, ಅಪಾರ ಪ್ರಮಾಣದ ರುದ್ರಾಕ್ಷಿ ಮಾಲೆಯನ್ನು ಮತ್ತು ಸ್ವರ್ಣಾಭರಣಗಳನ್ನು ಚಿತ್ರಿಸಲಾಗಿದೆ. ಈ ಚಿತ್ರವು ಕಲಾವಿದನ ಅಲಂಕಾರ ದೃಷ್ಠಿ ಹೊಂದಿದ್ದು, ಶಿವನನ್ನು ಒಬ್ಬಯುವ ಸನ್ಯಾಸಿಯಂತೆ ರೂಪ ಭಾವಗಳನ್ನು ತರಲಾಗಿದೆ.

ಚಿತ್ರದ ಹಿನ್ನೆಲೆಯಲ್ಲಿ ಕೆಂಪು ವರ್ಣದ ಅಲಂಕಾರಿಕ ಪರದೆಗಳನ್ನು ಸಂಯೋಜಿಸಲಾಗಿದ್ದು, ಅದಕ್ಕೆ ಹೊಂದಿಕೊಂಡಂತೆ ಚಿತ್ರದ ಎರಡೂ ಬದಿಯಲ್ಲಿ ಅಲಂಕಾರಿಕ ಕಂಬಗಳನ್ನು ಚಿತ್ರಿಸಿ ಬಿಳಿ ಮತ್ತು ನೀಲಿವರ್ಣಗಳನ್ನು ಲೇಪನಮಾಡಲಾಗಿದೆ. ಚಿತ್ರವು ಸ್ಪಷ್ಟವಾಗಿ ಮೂಡಿ ಬರುವಂತೆ ಹಿನ್ನೆಲೆಗೆ ಕಪ್ಪು ಬಣ್ಣವನ್ನು ಏಕರೂಪವಾಗಿ ಲೇಪಿಸಲಾಗಿದೆ. ಈ ಚಿತ್ರದ ವೈಶಿಷ್ಟ್ಯತೆಯೆನೆಂದರೆ ಶಿವನ ತ್ವಚೆಯ ವರ್ಣದಲ್ಲಿ ಬಳಸಲಾದ ಕೆಂಪು ಮತ್ತು ಬಿಳಿವರ್ಣಗಳ ಮಿಶ್ರಣದ ರೀತಿ ಹಾಗೂ ಕುಂಚದಿಂದ ಆ ಎರಡು ಬಣ್ಣಗಳ ಮಿಲನದಿಂದ ಉಂಟಾದ ನೈಜತೆಯನ್ನು ಮೆಚ್ಚುವಂತದ್ದು. ಯಾಕೆಂದರೆ ಇಲ್ಲಿ ಗಾಜಿನ ಹಿಮ್ಮುಖವಾಗಿ ವರ್ಣವನ್ನು ಲೇಪಿಸಿ ಮುಮ್ಮುಖವಾಗಿ ನೋಡುವುದರಿಂದ ಎರಡು ಮತ್ತು ಅದಕ್ಕಿಂತ ಹೆಚ್ಚಿನ ವರ್ಣಗಳ ಮಿಶ್ರಣವನ್ನು ತರುವುದು ಕಷ್ಟದ ಕೆಲಸ. ಇಲ್ಲಿ ಕಲಾವಿದನ ಜಾಣ್ಮೆ ಮತ್ತು ತಾಳ್ಮೆಯನ್ನು ಪರಿಕ್ಷಿಸುತ್ತದೆ. ಆ ಕೆಲಸವನ್ನು ಈ ಚಿತ್ರದಲ್ಲಿ ಕಾಣಬಹುದು. ಕೇವಲ ಬಣ್ಣ ಹಚ್ಚುವುದು ಮುಖ್ಯವಲ್ಲ ಅದರ ನೈಜತೆ, ಶುಭ್ರತೆ, ಪ್ರಖರತೆಯನ್ನು ತರುವುದು ಮುಖ್ಯವಾಗುತ್ತದೆ.

ರೇಖಾ ಪ್ರಧಾನವಾದ ಈ ಭಾವಚಿತ್ರವು ಅಲ್ಪ ಪ್ರಮಾಣದ ವರ್ಣಗಳಿಂದ,

ಸ್ವರ್ಣಕಾಗದಗಳಿಂದ ರಚನೆಗೊಂಡಿದ್ದು ಇಂಥ ಭಾವಚಿತ್ರವು ಅಪರೂಪವಾದುದು ಎನ್ನಬಹುದು. ಇದನ್ನು ಒಬ್ಬ ಪ್ರಬುದ್ಧ ಚಿತ್ರಕಲಾವಿದನು ರಚನೆ ಮಾಡಿರಬಹುದು ಎಂದು ತೋರುತ್ತದೆ.

**ಚಿತ್ರ ಸಂಖ್ಯೆ ೧೧ ಕಿರೀಟಧಾರಿ ಶಿವ**

ಮೈಸೂರಿನ ಹಾರ್ಡಿಂಜ್ ಸರ್ಕಲ್ ಪಕ್ಕದಲ್ಲಿರುವ ನಿಷಾದ್‌ಬಾಗ್ ಪಾರ್ಕನಲ್ಲಿ ಗಾಜಿನ ಮಂಟಪವಿದ್ದು, ಈ ಗಾಜಿನ ಗುಮ್ಮಟದಲ್ಲಿ ಸಂಪೂರ್ಣ ಮೈಸೂರು ಸಾಂಪ್ರದಾಯಿಕ ದೇವಾನು ದೇವತೆಗಳ ಚಿತ್ರಗಳು ಚಿತ್ರಿತಗೊಂಡಿವೆ. ಆ ಚಿತ್ರಗಳಲ್ಲಿ ಈ ಕಿರೀಟಧಾರಿ ಶಿವನ ಚಿತ್ರವೂ ಒಂದು. ಇಲ್ಲಿ ಶಿವನು ಚತುರ್ಭುಜಧಾರಿಯಾಗಿದ್ದು, ಎರಡು ಬಲಗೈಗಳಲ್ಲಿ ಒಂದು ಕೈಯಲ್ಲಿ ಜಪಮಾಲೆ ಇನೊಂದು ಕೈಯಲ್ಲಿ ತ್ರಿಶೂಲವನ್ನು ಹೊಂದಿರುವನು. ಎಡಗೈಗಳ ಪೈಕಿ ಒಂದು ಕೈಯಲ್ಲಿ ಬಿಲ್ಲು ಬಾಣವನ್ನು ಇನ್ನೊಂದು ಕೈಯಲ್ಲಿ ಹರಿಣಿ ಆಯುಧವನ್ನು ಹಿಡಿದಿರುವನು. ಸ್ವರ್ಣಮುಕುಟ ಧರಿಸಿದ್ದು, ಗಂಗೆಯನ್ನು ಅಲಂಕರಿಸಿದ್ದಾನೆ. ಇಲ್ಲಿ ಶಿವನನ್ನು ಹಳದಿ ವರ್ಣದ ಧೋತಿಯನ್ನು, ದಟ್ಟನೀಲಿ ಮಿಶ್ರಿತ ಕೆಂಪುವರ್ಣದ ಶಲ್ಯವನ್ನು ಚಿತ್ರಿಸಲಾಗಿದೆ. ಅವನ ಮೈಬಣ್ಣವು ತಿಳಿ ಗುಲಾಬಿ ವರ್ಣದಿಂದ ಸಂಯೋಜಿಸಲಾಗಿದೆ. ಬೆನ್ನಿಗೆ ಬಾಣದ ಬತ್ತಳಿಕೆಯನ್ನು ಚಿತ್ರಿಸಲಾಗಿದೆ. ದಟ್ಟಕಪ್ಪು ವರ್ಣದಿಂದ ಅಲಂಕಾರಿಕ ರೇಖಾ ಲಾವಣ್ಯದಿಂದ ಕೂಡಿದ ಈ ಸ್ಟೇನ್ಡ್ ಗ್ಲಾಸ್ ಚಿತ್ರವು ಹೊರ ಬೆಳಕಿನಿಂದ ಅತ್ಯಂತ ಪ್ರಕಾಶಮಾನವಾಗಿ ಹಾಗೂ ಸುಂದರವಾಗಿ ಕಾಣುತ್ತದೆ. ಚಿತ್ರದ ಅಂಚು ಅರ್ಧ ಚಂದ್ರಾಕೃತಿಯ ಕಮಾನು ಹೊಂದಿದ್ದು, ನಡುವೆ ನೈಸರ್ಗಿಕ ನಕ್ಷೆಯನ್ನು ಹಳದಿ ವರ್ಣದಿಂದ ಸಂಯೋಜಿಸಲಾಗಿದೆ. ಶಿವನ ಆಕೃತಿಯಲ್ಲಿ ವರ್ಣ ಸಂಯೋಜನೆಯ ಮೂಲಕ ದುಂಡುತನವನ್ನು ಮತ್ತು ಆಕರ್ಷಕ ಭಾವನಾ ನಿರೂಪಣೆಯನ್ನು ತರಲಾಗಿದೆ.

**ಚಿತ್ರ ಸಂಖ್ಯೆ ೧೨ ಪಾರ್ವತಿ**

ಈ ಗಾಜಿನ ಚಿತ್ರವು ಕೂಡಾ ಮೈಸೂರಿನ ನಿಷಾದ್‌ಬಾಗ್ ಪಾರ್ಕನ ಗಾಜಿನ ಮಂಟಪದಲ್ಲಿ ಸಂಗ್ರಹಗೊಂಡಿದೆ. ಸ್ವರ್ಣ ಕಿರೀಟಧಾರಿಣಿಯಾದ ಪಾರ್ವತಿಯು ಕಪ್ಪು ಮಿಶ್ರಿತ ಹಸಿರು ವರ್ಣದ ಮೈ ಬಣ್ಣವನ್ನು ಹೊಂದಿರುವಳು. ಆಭರಣಗಳಿಂದ ಸರ್ವಾಲಂಕೃತಳಾಗಿದ್ದು ಕಪ್ಪು ಮಿಶ್ರಿತ ಗುಲಾಬಿ ವರ್ಣದ ಸೀರೆಯನ್ನು. ಖಡು ಕಪ್ಪು ಮಿಶ್ರಿತ ಕೆಂಪು ಬಣ್ಣದ ಕುಪ್ಪಸವನ್ನು ಧರಿಸಿರುವಳು. ಈ ಉಡುಪುಗಳ ಅಂಚು ಅಲಂಕಾರಿಕ ನಕ್ಷೆ ಹಾಗೂ ಸ್ವರ್ಣವರ್ಣದಿಂದ ಕಲಾವಿದನು ವಿನ್ಯಾಸಗೊಳಿಸಿದ್ದಾನೆ. ಕಪ್ಪು ಬಣ್ಣದ ರೇಖಾ ವಿನ್ಯಾಸದಿಂದ ಕೂಡಿದ ಈ ಚಿತ್ರವು ಹೊರ ಬೆಳಕಿನಿಂದ ಪ್ರಕಾಶಾನಮಾನವಾಗಿ ಕಾಣುತ್ತದೆ. ಈ ಚಿತ್ರದಲ್ಲಿ ಕಲಾವಿದನ ಅಲಂಕಾರಿಕ ಹಾಗೂ ಸೌಂದರ್ಯ ಪ್ರಜ್ಞೆಯೂ ಒಡಮೂಡಿರುವುದನ್ನು ಕಾಣಬಹುದು. ಈ ಚಿತ್ರದ ಸುತ್ತಲಿನ ಅಂಚು ಚಿತ್ರಸಂಖ್ಯೆ ೧೧ರ ಚಿತ್ರದಲ್ಲಿರುವಂತೆ ರಚನೆಗೊಂಡಿದೆ. ಎಡಗೈಯಲ್ಲಿ ದೊಡ್ಡದಾದ ಲತೆಯನ್ನು ಹಿಡಿದಿದ್ದು ನಡುವಿನಲ್ಲಿ ಒಡ್ಯಾಣದ ಆಭರಣಗಳನ್ನು, ಕೈ, ಕಾಲುಗಳಲ್ಲಿ ಮತ್ತು ಕಿವಿಗಳಲ್ಲಿ ಆಭರಣಗಳನ್ನು ಧರಿಸಿದ್ದಾಳೆ. ಕಿರೀಟದ ಎಡಪಾರ್ಶ್ವದಲ್ಲಿ ಅರ್ಧಚಂದ್ರನನ್ನು ಹೊಂದಿದ್ದು ಹಣೆಯಲ್ಲಿ ಅಡ್ಡವಾದ ಕೆಂಪುಗೆರೆಯನ್ನು ಅದರ ಮೇಲೆ ಚಿಕ್ಕದಾದ ಸಿಂಧೂರವನ್ನು ಅಲಂಕರಿಸಿದ್ದಾಳೆ. ಇಲ್ಲಿ ಕಲಾವಿದನು ರೇಖೆ, ವರ್ಣದ ಮೂಲಕ ಉತ್ತಮ ಭಾವನಾ ನಿರೂಪಣೆಯನ್ನು ತಂದಿದ್ದಾನೆ.

**ಚಿತ್ರ ಸಂಖ್ಯೆ ೧೩ ಕಾಲಾಂತಕ (ಕಾಲ ಸಂಹಾರ, ಮಾರ್ಕಂಡೆಯ)**

ಈ ಚಿತ್ರವನ್ನು ಬಾಗಲಕೋಟೆಯ ಶ್ರೀ ಕೃಷ್ಣದಾಸ್ ಹನುಮನದಾಸ್ ಗೋಣಿಯವರ ಮನೆಯಿಂದ ಸಂಗ್ರಹಿಸಲಾಗಿದ್ದು, ಚಿತ್ರವು ೪೫ x ೬೦ ಸೆಂ. ಮೀ. ಅಳತೆಯನ್ನು ಹೊಂದಿದೆ. ಅಲ್ಪಾಯುಷ್ಯವನ್ನು ಪಡೆದುಕೊಂಡು ಜನ್ಮ ತಾಳಿದ ಮಾರ್ಕಂಡೆಯನು ತನ್ನ ಅಪಾರ ಶಿವಭಕ್ತಿಯಿಂದ ಶಿವನನ್ನು ಮೆಚ್ಚಿ ಮೃತ್ಯುವನ್ನು ಜಯಿಸಿದ ಪ್ರಸಂಗವನ್ನು ಈ ಚಿತ್ರವು ಸೂಚಿಸುತ್ತದೆ. ಮಾರ್ಕಂಡೆಯನು ಮೃಕಂಡು ಮುನಿಯ ಪುತ್ರ. ಇವನು ಬ್ರಹ್ಮ ಮಾನಸ ಪುತ್ರನಾದ ಭೃಗುಮಹರ್ಷಿಯ ವಂಶದವನು. ಇವನ ಪತ್ನಿಯ ಹೆಸರು ಧೂಮೋರ್ಣೆ ಇಂಥ ಮಹಾನ ಪುರುಷನಾದ ಮಾರ್ಕಂಡೆಯನು ಶಿವನೆಂದರೆ ಪ್ರಾಣ. ಅವನನ್ನು ನಿತ್ಯ ಪೂಜೆಗೈದು. ಅವನ ಮೆಚ್ಚುಗೆಗೆ ಪಾತ್ರರಾಗಿ ತನಗೆ ಒದಗಿದ ಮರಣವನ್ನು ಜಯಿಸಿ ಶಿವನಿಂದ ಬದುಕಿದವನು.

ಇಲ್ಲಿ ಕಲಾವಿದನು ಈ ದೃಶ್ಯದ ಸಂಯೋಜನೆಯನ್ನು ಅತ್ಯಂತ ಭಾವನಾತ್ಮಕವಾಗಿ ನಿರೂಪಣೆ ಮಾಡಿದ್ದಾನೆ. ಚತುರ್ಭುಜಧಾರಿಯಾದ ಯಮನು (ಅಂತಕನು) ತನ್ನ ವಾಹನವಾದ ಕೋಣದ ಮೇಲೆ ಚಲಿಸುತ್ತಿದ್ದು ತನ್ನ ಪಾಶಾನದಿಂದ ಮಾರ್ಕಂಡೆಯನನ್ನು ಎಳೆಯುತ್ತಿದ್ದು, ಮಾರ್ಕಂಡೆಯನು ಶಿವಲಿಂಗವನ್ನು ಅಪ್ಪಿಕೊಂಡು ಶಿವನನ್ನು ನೆನೆಯುತ್ತಿದ್ದಾನೆ. ಈ ಪರಮ ಭಕ್ತನನ್ನು ಕಾಪಾಡುವ ಸಲುವಾಗಿ ಲಿಂಗದಿಂದ ತನ್ನ ಸ್ವರೂಪವನ್ನು ಧರಿಸಿ ಭರ್ಚಿಯಿಂದ ಕೋಣವನ್ನು ಮರ್ದಿಸುತ್ತಿದ್ದಾನೆ. ಇಲ್ಲಿ ಶಿವನ ಭಾವಾವೇಶವು ಉತ್ತಮವಾಗಿ ನಿರೂಪಣೆಗೊಂಡಿದೆ. ಕಿರೀಟಧಾರಿ ಶಿವನು, ಚತುರ್ಭುಜಗಳ ಪೈಕಿ ಬಲಗಳಲ್ಲಿ ಡಮರು ಮತ್ತು ಭರ್ಚಿಯನ್ನು ಹೊಂದಿದ್ದು ಎಡಗೈಗಳಲ್ಲಿ ಒಂದು ಕೈಯನ್ನು ಹರಿಣಿಯನ್ನು ಹಿಡಿದಿರುವನು, ಇನ್ನೊಂದು ಕೈಯಿಂದ ಭರ್ಚಿಯನ್ನು ಹಿಡಿದು ಮರ್ದನ ಮಾಡುತ್ತಿರುವನು, ನಡುವಿಗೆ ವ್ಯಾಘ್ರ ಚರ್ಮವನ್ನು ಧರಿಸಿದ್ದಾನೆ, ಕೆಂಪು ಬಣ್ಣದ ಶಲ್ಯವನ್ನು ಭುಜಕ್ಕೆ ಧರಿಸಿದ್ದಾನೆ, ಶಿವ ಮತ್ತು ಮಾರ್ಕಂಡೇಯನನ್ನು ತಿಳಿಗುಲಾಬಿ ವರ್ಣದಿಂದ, ಶಿವಲಿಂಗ ಮತ್ತು ಅಂತಕನನ್ನು ನೀಲಿ ಬಣ್ಣದಿಂದ, ಕೋಣನ ಬಣ್ಣವನ್ನು ಕಂದು ಬಣ್ಣದಿಂದ ಸಂಯೋಜನೆ ಮಾಡಲಾಗಿದೆ. ಕೋಣವನ್ನು ಮತ್ತು ಅಂತಕನನ್ನು ವಿವಿಧ ಆಭರಣಗಳಿಂದ ಅಲಂಕೃತಗೊಳಿಸಲಗಿದೆ. ಯಮನು ಎರಡು ಕೈಗಳಲ್ಲಿ ಮೃತ್ಯುಪಾಶನವನ್ನು ಎರಡು ಕೈಗಳಲ್ಲಿ ಗದೆ ಮತ್ತು ಶಂಖವನ್ನು ಹಿಡಿದಿರುವನು.

ಕೆಂಪು ವರ್ಣದಿಂದ ಭೂ ದೃಶ್ಯವನ್ನು ಹಳದಿ ಬಣ್ಣದಿಂದ ಆಕಾಶವನ್ನು ಚಿತ್ರಿಸಿದ್ದು ಇಲ್ಲಿ ಕಲಾವಿದನು ಯಥಾದರ್ಶನಕ್ಕೆ ಗಮನ ಕೊಡದೆ ಸನ್ನಿವೇಶಕ್ಕೆ ಒಲವು ತೋರಿದ್ದಾನೆ. ಹಿನ್ನೆಲೆಯಲ್ಲಿ ಹಸಿರು ಬಣ್ಣದಿಂದ ಎರಡು ಮರಗರಳನ್ನು ಚಿತ್ರಿಸಿದ್ದು ಅದರಲ್ಲಿ ಕೆಂಪು ವರ್ಣದ ಹೂವುಗಳನ್ನು ಸಂಯೋಜಿಸಲಾಗಿದೆ. ಈ ಚಿತ್ರದಲ್ಲಿ ಬಳಸಲಾದ ಬಣ್ಣಗಳು ಚಪ್ಪಟೆಯಾಗಿ ಲೇಪನಗೊಂಡಿದೆ. ಉತ್ತಮ ರೇಖಾ ಸಂಯೋಜನೆ ಹೊಂದಿದ್ದು, ಆಕೃತಿಗಳಲ್ಲಿ ಉತ್ತಮವಾಗಿ ಭಾವ ಲಕ್ಷಣಗಳು ಮೂಡಿಬಂದಿವೆ. ಇದು ಸಾಂಪ್ರದಾಯಿಕ ವಿಷಯವನ್ನು ಒಳಗೊಂಡ ಸಂಯೋಜನಾ ಚಿತ್ರವಾಗಿದೆ.





೦೧. ಶಿವನ ಕುಟುಂಬ



೦೨ ಶಿವ.ಪಾರ್ವತಿ.ಗಣಪ

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು





೧೩. ಶಿವಪಾರ್ವತಿ
(ವೃಷಭಾರೂಢ)



೧೪. ಶಿವಪಾರ್ವತಿ
(ವೃಷಭಾರೂಢ)

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು





೧೫. ಸಂಧ್ಯಾ ತಾಂಡವ



೧೬. ಸಂಧ್ಯಾ ತಾಂಡವ



೧೭. ಸಂಧ್ಯಾ ತಾಂಡವ

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು





೧೮. ಸಂಧ್ಯಾ ತಾಂಡವ



೧೯. ಸಂಧ್ಯಾ ತಾಂಡವ

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು





೧೦. ಶಿವನ ಶಿರಭಾವ ಚಿತ್ರ



೧೨. ಪಾರ್ವತಿ



೧೧. ಕಿರೀಟಧಾರಿ ಶಿವ

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು

## ಚಿತ್ರ ಸಂಖ್ಯೆ ೧೪, ೧೫, ೧೬ ಸುಬ್ರಹ್ಮಣ್ಯ ಸ್ವಾಮಿ

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನಲ್ಲಿ ಬರುವ ಸುಪ್ರಸಿದ್ಧ ಕ್ಷೇತ್ರವಾದ ಸುಬ್ರಹ್ಮಣ್ಯವು ಇಲ್ಲಿನ ಅಧಿದೇವತೆಯಾದ ಮಯೂರವಾಹನರೂಢ ಸುಬ್ರಹ್ಮಣ್ಯಸ್ವಾಮಿಯ ಚರಿತ್ರೆಯು ಪ್ರಸಿದ್ಧವಾದುದು. ಸುಬ್ರಹ್ಮಣ್ಯಸ್ವಾಮಿಯ ಇನ್ನೊಂದು ಹೆಸರು ಕುಮಾರಸ್ವಾಮಿ ಎಂದು ಕರೆಯಲಾಗುತ್ತದೆ. ಸ್ವಾಹಾದೇವಿಯು ಸಪ್ತಋಷಿಗಳ ಪತ್ನಿಯರಲ್ಲಿ ಅರುಂಧತಿಯನ್ನು ಬಿಟ್ಟು ಉಳಿದ ಮುನಿಪತ್ನಿಯರ ರೂಪದಿಂದ ಅಗ್ನಿಯೊಡನೆ ವಿಹರಿಸಿದಳು ಆಗ ಅಗ್ನಿಗೆ ರೇತಸ್ಸು ಸ್ಖಲನವಾಗಲು ಸ್ವಾಹಾದೇವಿಯು ಅದನ್ನು ಚಿನ್ನದ ಕುಂಭದಲ್ಲಿ ಆರು ಭಾಗ ಮಾಡಿ ಹಾಕಲು ಅದರಿಂದ ಕುಮಾರಸ್ವಾಮಿ ಹುಟ್ಟಿದನು, ಈತನು ಬ್ರಹ್ಮಚಾರಿ(ಕುಮಾರ) ಎಂದೂ ಗೃಹಸ್ಥನೆಂದೂ ಇದೆ. ಇವನು ದೇವತೆಗಳಲ್ಲಿ ಶ್ರೇಷ್ಠನೆನಿಸಿ ಇಂದ್ರನು ಸೂಚಿಸಿದ ದಕ್ಷಬ್ರಹ್ಮನ ಮಗಳಾದ ದೇವಸೇನೆಯನ್ನು ಷಷ್ಠಿಯ ದಿವಸ ಮದುವೆಯಾದನು. ಕುಮಾರಸ್ವಾಮಿ ಮತ್ತು ದೇವಸೇನೆಯ ದಿನವನ್ನು ಸುಬ್ರಹ್ಮಣ್ಯ ಷಷ್ಠಿ ಎಂದೂ ಕರೆಯಲಾಗುತ್ತದೆ.

ಇನ್ನೊಂದು ಕಥೆಯ ಪ್ರಕಾರ ಯುದ್ಧದೇವತೆಯಾದ ಸುಬ್ರಹ್ಮಣ್ಯನು ಬ್ರಹ್ಮನ ಶಾಪದಿಂದ ಭಯಂಕರ ವಿಷವುಳ್ಳ ಘಟಸರ್ಪವಾದನು. ಪಾರ್ವತಿ ತನ್ನ ಮಗನನ್ನು ಮೊದಲಿನ ರೂಪ ಪಡೆಯಲು ೧೦೮ ಷಷ್ಠಿಗಳನ್ನು ಉಪವಾಸ ವ್ರತಗಳನ್ನು ಆಚರಿಸಿದಳು. ಈ ವ್ರತದ ಉದ್ಯಾಪನಕ್ಕೆ ವಿಷ್ಣು ಮೊದಲ್ಗೊಂಡು ಎಲ್ಲ ದೇವತೆಗಳೂ ಬಂದಿದ್ದರು. ಸ್ಕಂದನೂ ಅಲ್ಲಿಗೆ ಘಟಸರ್ಪದ ರೂಪದಿಂದಲೇ ಬಂದಿದ್ದು, ಅಲ್ಲಿ ಅವನು ವಿಷ್ಣುವಿನ ಸ್ಪರ್ಷದಿಂದ ಮೊದಲಿನ ರೂಪವನ್ನು ಪಡೆದನು. ಈ ರೀತಿಯಾಗಿ ಪಾರ್ವತಿಯು ಆಚರಿಸಿದ ಷಷ್ಠಿಯನ್ನು ಸುಬ್ರಹ್ಮಣ್ಯ ಷಷ್ಠಿ ಎಂದೂ ಕರೆಯಲಾಗುತ್ತದೆ.[೪]

ಈ ಕಥೆಗೆ ಸಂಬಂಧಿಸಿದಂತೆ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಿಂದ ಲಭ್ಯವಾದ ಮಯುರವಾಹನ ರೂಢನಾದ ಸುಬ್ರಹ್ಮಣ್ಯ ಸ್ವಾಮಿಯ ಗಾಜಿನ ಚಿತ್ರಗಳು ಕಂಡುಬರುತ್ತವೆ. ಇಲ್ಲಿ ಮೂರು ಚಿತ್ರಗಳು ಲಭ್ಯವಿದ್ದು ಅವು ವಿಭಿನ್ನ ಅಳತೆ ಹಾಗೂ ರಚನೆಯನ್ನು ಹೊಂದಿವೆ. ಚಿತ್ರ ಸಂಖ್ಯೆ ೧೪ ಈ ಚಿತ್ರವು ಹುಬ್ಬಳ್ಳಿಯ ಹರಕ್‌ಚಂದ್ ಚಂದನ್‌ಲಾಲ್ ಜೈನ್ ಇವರ ಮನೆಯಲ್ಲಿ ಲಭ್ಯವಿದೆ. ಇದು ೩೮ x ೪೮ ಸಂ.ಮೀ ಅಳತೆಯನ್ನು ಹೊಂದಿದೆ. ಈ ಚಿತ್ರದಲ್ಲಿ ಚತುರ್ಭುಜಧಾರಿಯಾದ ಸುಬ್ರಹ್ಮಣ್ಯಸ್ವಾಮಿಯು ತನ್ನ ವಾಹನವಾದ ನವಿಲಿನ ಮೇಲೆ ಆಶೀನನಾಗಿದ್ದಾನೆ. ಎರಡು ಕೈಗಳಲ್ಲಿ ಸಂಕೇತದ ಆಯುಧಗಳನ್ನು ಹೊಂದಿದ್ದು ಇನ್ನೆರಡು ಕೈಗಳನ್ನು ಅಭಯ ಹಸ್ತ ಸೂಚಕವಾಗಿ ಚಿತ್ರಿಸಲಾಗಿದೆ. ಕಿರಿಟಧಾರಿಯಾದ ಸುಬ್ರಹ್ಮಣ್ಯಸ್ವಾಮಿಯು ವಿಶಿಷ್ಟ ಆಭರಣಗಳಿಂದ ಅಲಂಕೃತಗೊಂಡಿರುವನು.

ಸಾಂಪ್ರದಾಯಿಕ ಧೋತಿ ಹಾಗೂ ಭುಜದ ಮೇಲೆ ಶಲ್ಯವನ್ನು ಧರಿಸಿದ್ದು ಎದೆಯ ಬಲಪಾರ್ಶ್ವದಲ್ಲಿ ಆಸರೆಯಾಗಿ ಭರ್ಚಿಯಂತಹ ಚೂಪಾದ ಆಯುಧವನ್ನು ಹೊಂದಿರುವನು. ಇಲ್ಲಿ ನವಿಲು ತನ್ನ ವಿಶಾಲವಾದ ಗರಿಗಳನ್ನು ಬಿಚ್ಚಿ ಸರ್ಪದ ಮೇಲೆ ಕುಣಿಯುತ್ತದೆ ಎಂಬಂತೆ ಚಿತ್ರಕಲಾವಿದನು ಚಿತ್ರಿಸಿದ್ದಾನೆ. ಸುಬ್ರಹ್ಮಣ್ಯಸ್ವಾಮಿಯ ಎಡ ಮತ್ತು ಬಲ ಪಾರ್ಶ್ವಗಳಲ್ಲಿ ದೇವಸೇನೆ

೪. ಯಜ್ಞ ನಾರಾಯಣ ಉಡುಪ ; ಪುರಾಣ ಭಾರತಕೋಶ, ಪುಟ ೭೦೯-೧೦

ಮತ್ತು ವಲ್ಲಿಯರೆಂಬ ಅವನ ಹೆಂಡತಿಯರು ಆಶೀನರಾಗಿದ್ದು ಒಬ್ಬಳು ಹಸಿರುವರ್ಣದಿಂದ ಇನ್ನೊಬ್ಬಳು ಬಿಳಿವರ್ಣಗಳಿಂದ ರೂಪಲಕ್ಷಣಗಳನ್ನು ಹೊಂದಿರುವರು. ಇಬ್ಬರು ಕೆಂಪು ಬಣ್ಣದ ರವಿಕೆ, ಕೆಂಪು ವರ್ಣದ ಸೀರೆಯನ್ನು ಧರಿಸಿದ್ದು ಇಬ್ಬರೂ ಸ್ವರ್ಣಮುಕುಟಧಾರಿಗಳಾಗಿದ್ದಾರೆ. ಕ್ರಮವಾಗಿ ವಿಶಿಷ್ಠ ಆಭರಣಗಳನ್ನು ಧರಿಸಿ ಕೈಯಲ್ಲಿ ಹೂವುಗಳನ್ನು ಹಿಡಿದು ಪ್ರೇಮಾಲಾಪಣೆ ಮಾಡುತ್ತಿರುವರು. ಈ ಚಿತ್ರದಲ್ಲಿ ಪೀಠದ ಕೆಳಗೆ ಎಡ ಮತ್ತು ಬಲಭಾಗಗಳಲ್ಲಿ ಜಟಾಧಾರಿಗಳಾದ ನಾಗದೇವತೆಗಳಿದ್ದು ಇಬ್ಬರೂ ಕುಬ್ಜರಾಗಿದ್ದಾರೆ. ಅದೇ ಪೀಠದ ಎರಡೂ ಬದಿಗಳಲ್ಲಿ ಹಳದಿ ಬಣ್ಣದ ಬಾವುಟಗಳನ್ನು ಹಿಡಿದುಕೊಂಡು ನಿಂತಿರುವ ವ್ಯಕ್ತಿಗಳಿದ್ದಾರೆ. ಇಲ್ಲಿ ರೂಪಗೊಂಡಿರುವ ಈ ಚಿತ್ರವು ಕಪ್ಪು, ಹಳದಿ, ಗುಲಾಬಿ ಹಾಗೂ ನೀಲಿವರ್ಣಗಳಿಂದ ಚಪ್ಪಟೆಯಾಗಿ ಲೇಪನ ಗೊಂಡಿದೆ.

ಇದೇ ಪ್ರತಿಕೃತಿ ಹೊಂದಿದ ಚಿತ್ರಸಂಖ್ಯೆ ೧೫ ಮತ್ತು ೧೬ರಲ್ಲಿ ಮೂಲ ಕೃತಿಯೂ ಒಂದೆಯಾಗಿದೆ. ಇಲ್ಲಿ ವ್ಯತ್ಯಾಸಗಳು ಕಂಡುಬರುವುದು ಗಾಜಿನ ಅಳತೆಗೆ ತಕ್ಕಂತೆ ಆಕೃತಿಗಳನ್ನು ಸಂಯೋಜನೆ ಮಾಡಿದ್ದು, ವರ್ಣವಿನ್ಯಾಸವನ್ನು ಕಲಾವಿದರು ತಮ್ಮ ಆಶಯಕ್ಕೆ ತಕ್ಕಂತೆ ನಿರೂಪಣೆ ಮಾಡಿದ್ದಾರೆ. ಚಿತ್ರಸಂಖ್ಯೆ ೧೫, ಇದು ೩೫ x ೪೦ ಸೆಂ.ಮೀ ಅಳತೆಯನ್ನೂ ಹೊಂದಿದೆ. ಇಲ್ಲಿಯೂ ಸಹ ಸುಬ್ರಹ್ಮಣ್ಯ ಸ್ವಾಮಿಯು ಚತುರ್ಭುಧಾರಿಯಾಗಿದ್ದಾನೆ. ನವಿಲು ಗರಿಬಿಚ್ಚಿ ಸರ್ಪದ ಮೇಲೆ ಕುಣಿಯುತ್ತಿದೆ ಸ್ವಾಮಿಯ ಎಡ ಮತ್ತು ಬಲ ಪಾರ್ಶ್ವಗಳಲ್ಲಿ ಅವನ ಹೆಂಡತಿಯರಾದ ದೇವಸೇನೆ ಮತ್ತು ವಲ್ಲಿಯರಿದ್ದಾರೆ. ಇದು ಚಿತ್ರ ಸಂಖ್ಯೆ ೧೫ರಂತೆ ಕಂಡು ಬರುತ್ತಿದ್ದರೂ ಸಹಿತ ರೇಖಾ ಸಂಯೋಜನೆಯಲ್ಲಿ ಪರಿಪೂರ್ಣತೆ, ಲಾವಣ್ಯತೆ ಹಾಗೂ ನಾವಿಣ್ಯತೆಯು ಮೂಡಿಬಂದಿಲ್ಲ ಇಲ್ಲಿ ಈ ಚಿತ್ರದ ಕಲಾವಿದನು ಸೌಂದರ್ಯತೆಗೆ ಪ್ರಾಧಾನ್ಯತೆ ನೀಡಿಲ್ಲವೆನ್ನಬಹುದು. ಇದಕ್ಕೆ ಅವನ ಅನುಭವದ ಕೊರತೆಯೂ ಕಾರಣವಾಗಿರಬಹುದು.

ಈ ಚಿತ್ರದಲ್ಲಿ ಕಲಾವಿದನು ಚಪ್ಪಟೆಯಾದ ವರ್ಣಗಳನ್ನು ಬಳಸಿದ್ದು ಮುಖ್ಯದೇವತೆಯಾದ ಸ್ವಾಮಿಯನ್ನು ತೈಲ ಬಣ್ಣದಿಂದ ಲೇಪನಮಾಡಿ ಗುಲಾಬಿ ಬಣ್ಣದಿಂದ ದುಂಡುತನ ತರಲು ಪ್ರಯತ್ನ ಮಾಡಿದ್ದಾನೆ. ಮಯೂರವನ್ನು ನೀಲಿವರ್ಣದಿಂದ ಲೇಪಸಿ ಅದರ ಗರಿಗಳನ್ನು ಹಸಿರು ಮಿಶ್ರಿತ ನೀಲಿಬಣ್ಣದಿಂದ ಸಂಯೋಜನೆಗೊಳಿಸಲಾಗಿದೆ. ಚಿತ್ರದ ಹಿನ್ನೆಲೆಯನ್ನು ಹಳದಿ ಮಿಶ್ರಿತ ಕೆಂಪು ವರ್ಣವನ್ನು ಏಕವರ್ಣವಾಗಿ ಲೇಪಿಸಿ ಬಿಳಿಬಣ್ಣದ ಹೂವುಗಳನ್ನು ಸಂಯೋಜನೆ ಮಾಡಲಾಗಿದೆ.

ಚಿತ್ರ ಸಂಖ್ಯೆ ೧೬ ಕೂಡಾ ೩೫ x ೪೦ ಸೆಂ.ಮೀ ಅಳತೆಯನ್ನು ಹೊಂದಿದೆ ಇದು ಗುಳೇದಗುಡ್ಡದ ಬನ್ಸಿಲಾಲ್ ಕಾಬ್ರಾ ಇವರ ಮನೆಯಲ್ಲಿ ಲಭ್ಯವಿದೆ. ಈ ಕೃತಿಯು ಶಿಷ್ಟರೂಪದಲ್ಲಿ ರಚನೆಗೊಂಡಿದ್ದು ಒಬ್ಬ ಅನುಭವಿಕ ಕಲಾವಿದನಿಂದ ಜನ್ಮತಳೆದಂತೆ ಕಾಣುತ್ತದೆ. ಈ ಚಿತ್ರದಲ್ಲಿ ಮುಖ್ಯವಾಗಿ ರೇಖಾ ಲಾವಣ್ಯ, ಆಕೃತಿಗಳ ಹೊಂದಾನಿಕೆ ಭಾವಲಕ್ಷಣಗಳು, ವರ್ಣಗಾರಿಕೆ, ಚಿತ್ರದ ಹಿನ್ನೆಲೆಯಲ್ಲಿ ಎಲೆ ಮತ್ತು ಹೂವುಗಳಿಂದ ಕೂಡಿದ ಅಂಚನ್ನು ಹೊಂದಿದೆ. ಈ ಚಿತ್ರದಲ್ಲಿ ಸುಬ್ರಹ್ಮಣ್ಯಸ್ವಾಮಿಯನ್ನು ಬಿಳಿಮಿಶ್ರಿತ ಗುಲಾಬಿ ವರ್ಣದಿಂದ ಪೂರ್ಣಗೊಳಿಸಿ ಅಂಗಾಂಗಳಲ್ಲಿ

ದುಂಡುತನ ತರಲಾಗಿದೆ. ಮಯೂರವನ್ನು ಹಳದಿ, ಹಸಿರು ಮತ್ತು ಕೆಂಪು ಬಣ್ಣಗಳಿಂದ ಸಂಯೋಜನೆಗೊಳಿಸಲಾಗಿದೆ.

ಇಲ್ಲಿ ದೇವಸೇನೆ ಮತ್ತು ವಲ್ಲಿಯನ್ನು ಕ್ರಮವಾಗಿ ಹಸಿರು ಮತ್ತು ಗುಲಾಬಿ ವರ್ಣದಿಂದ ಲೇಪನ ಮಾಡಲಾಗಿದ್ದು ಸ್ವರ್ಣಮುಕುಟ ಮತ್ತು ಆಭರಣಗಳನ್ನು ರಚಿಸಲಾಗಿದೆ. ಚಿತ್ರದಲ್ಲಿ ಅಲಂಕಾರಿಕ ಸ್ವರ್ಣಪೀಠವನ್ನು ಚಿತ್ರಿಸಲಾಗಿದೆ. ಹಿನ್ನೆಲೆಗೆ ಬಿಳಿ ಮಿಶ್ರಿತ ನೀಲಿ ಬಣ್ಣವನ್ನು ಏಕರೂಪವಾಗಿ ಲೇಪನ ಮಾಡಲಾಗಿದೆ. ಈ ಚಿತ್ರವು ಹೆಚ್ಚು ಅಲಂಕೃತ ಆಶಯವನ್ನು ಹೊಂದಿದ್ದು ಉತ್ತಮ ಭಾವಲಕ್ಷಣಗಳಿಂದ ವರ್ಣಗಳ ಸಂಯೋಜನೆಗಳಿಂದ ಹಾಗೂ ರೇಖಾ ಲಾವಣ್ಯತೆಯಿಂದ ಅನಾವರಣಗೊಂಡಿದೆ. ಈ ಮೂರು ಚಿತ್ರಗಳು ಒಂದೇ ಆಶಯದಲ್ಲಿ ಕೂಡಿದ್ದರೂ ಸಹಿತ ಬೇರೆ ಬೇರೆ ಕಲಾವಿದರ ಸೃಜನಶೀಲತೆ ಹಾಗೂ ಅನುಭವದ ಹಿನ್ನೆಲೆಯಲ್ಲಿ ಸಿದ್ಧಗೊಂಡಿವೆ.

**ಚಿತ್ರ ಸಂಖ್ಯೆ ೧೭ ಸುಬ್ರಹ್ಮಣ್ಯಸ್ವಾಮಿ**

ಈ ಚಿತ್ರವು ಮೈಸೂರಿನ ಜಗನ್ಮೋಹನ ಅರಮನೆ ಆವರಣದಲ್ಲಿರುವ ಶ್ರೀವಿಷ್ಣು ಆರ್ಟ್ ಸೆಂಟರನಲ್ಲಿ ಲಭ್ಯವಿದೆ. ಈ ಚಿತ್ರದಲ್ಲಿ ಚತುರ್ಭುಜಧಾರಿಯಾದ ಸುಬ್ರಹ್ಮಣ್ಯಸ್ವಾಮಿಯು ತಾವರೆಯ ಮೇಲೆ ನಿಂತಿರುವನು. ಎರಡು ಕೈಗಳಲ್ಲಿ ಆಯುಧ ಸಂಕೇತವಾಗಿ ಹಿಡಿದಿದ್ದು ಇನ್ನೆರಡು ಕೈಗಳನ್ನು ಅಭಯಹಸ್ತವನ್ನಾಗಿ ರೂಪಿಸಲಾಗಿದೆ. ಸ್ವರ್ಣ ಮುಕುಟಧಾರಿಯಾದ ಸುಬ್ರಹ್ಮಣ್ಯಸ್ವಾಮಿಯು ಸ್ವರ್ಣಾಭರಣಗಳಿಂದ ಅಲಂಕೃತಗೊಂಡಿರುವನು. ಹಳದಿ ಬಣ್ಣದ ಧೋತಿಹಾಗೂ ಒಡ್ಯಾಣದಲ್ಲಿ ಕಪ್ಪುಬಣ್ಣದ ಅಂಗವಸ್ತ್ರವನ್ನು ಅಲಂಕಾರಿಕವಾಗಿ ಕಲಾವಿದನು ರೂಪಗೊಳಿಸಿದ್ದಾನೆ. ಭುಜದ ಮೇಲೆ ಕಪ್ಪುಬಣ್ಣದ ಶಲ್ಯವನ್ನೂ ಎಡ ಮತ್ತು ಬಲಭುಜದ ಎದೆಗೆ ಆಸರೆಯಾಗಿ ಭರ್ಚಿ ಹಾಗೂ ಬಾವುಟಗಳನ್ನು ಕಲ್ಪಿಸಲಾಗಿದೆ. ಸ್ವಾಮಿಯ ಪಾದದ ಸಮಾಂತರವಾಗಿ ಚಿಕ್ಕದಾದ ಅವನ ವಾಹನ ಮಯೂರವನ್ನು ಕುಳಿತಿರುವಂತೆ ಚಿತ್ರಿಸಲಾಗಿದೆ.

ಸುಬ್ರಹ್ಮಣ್ಯಸ್ವಾಮಿಯ ಎಡ ಮತ್ತು ಬಲ ಪಾರ್ಶ್ವಗಳ ಗೂಡುಗಳಲ್ಲಿ ಅವನ ಎದೆ ಮಟ್ಟವಾಗಿ ದೇವಸೇನೆ ಮತ್ತು ವಲ್ಲಿಯರು ತಾವರೆಯನ್ನು ಹಿಡಿದು ನಿಂತಿರುವರು. ಇವರನ್ನು ಸಹಿತ ಕಲಾವಿದನು ಶ್ವೇತವರ್ಣದ ತಾವರೆಗಳ ನೇಲೆ ನಿಂತಿರುವಂತೆ ಚಿತ್ರಿಸಿದ್ದಾನೆ. ಒಬ್ಬಳು ಹಸಿರು ಮೈಬಣ್ಣ ಹೊಂದಿದ್ದರೆ, ಇನ್ನೊಬ್ಬಳು ಬಿಳಿಮಿಶ್ರಿತ ಗುಲಾಬಿ ವರ್ಣದ ಮೈಬಣ್ಣ ಹೊಂದಿದ್ದಾಳೆ, ಇಲ್ಲಿ ಬಳಸಲಾಗಿರುವ ಹಸಿರು ಮೈಬಣ್ಣವು ಕೃಷ್ಣ ವರ್ಣದ ಸಂಕೇತವಾಗಿರಬಹುದೆಂದು ತೋರುತ್ತದೆ. ಬಹುತೇಕ ಅನೇಕ ಗಾಜಿನ ಚಿತ್ರಗಳ ಆಕೃತಿಗಳಲ್ಲಿ ಈ ಬಣ್ಣ ಬಳಕೆ ಹೆಚ್ಚಿನ ರೀತಿಯಲ್ಲಿ ಕಂಡು ಬರುತ್ತದೆ. ಈ ಚಿತ್ರದಲ್ಲಿ ಕಲಾವಿದನು ಒಬ್ಬಳನ್ನು ಕಪ್ಪು ಬಣ್ಣದ ಸೀರೆ ಕಂದುಗೆಂಪು ಬಣ್ಣದ ಕುಪ್ಪಸವನ್ನು ನಿರೂಪಿಸಿದರೆ, ಇನ್ನೊಬ್ಬಳನ್ನು ಕಂದುಗೆಂಪು ಬಣ್ಣದ ಸೀರೆ ಮತ್ತು ಕಪ್ಪು ಬಣ್ಣದ ಕುಪ್ಪಸವನ್ನು ಚಿತ್ರಿಸಿದ್ದಾನೆ. ಇಲ್ಲಿ ಕಲಾವಿದನ ವರ್ಣಗಳ ಸಂಯೋಜನೆಯ ಪರಿಕಲ್ಪನೆಯನ್ನು ಗ್ರಹಿಸಬಹುದು. ಆಕೃತಿಗಳನ್ನು ಬಿಂಬಿಸುವಲ್ಲಿ ಕಲಾವಿದನು ಜಾಣ್ಮೆಯನ್ನು ತೋರಿದ್ದಾನೆ. ಮುಖ್ಯ ದೇವತೆಯಾದ ಸುಬ್ರಹ್ಮಣ್ಯಸ್ವಾಮಿಯನ್ನು ದೊಡ್ಡ ಆಕೃತಿಯಲ್ಲಿ ಬಿಂಬಿಸಿದರೆ ಇನ್ನುಳಿದ ಆಕೃತಿಗಳನ್ನು ಹಾಗೂ ವಸ್ತುಗಳನ್ನು ಪ್ರಮಾಣಾಕ್ಕನುಸಾರವಾಗಿ ನಿರೂಪಣೆ ಮಾಡಿದ್ದಾನೆ.

ಚಿತ್ರದ ಹಿನ್ನೆಲೆಯಾಗಿ ತಿರುಪತಿಯ ದೇವಸ್ಥಾನದ ಗೂಡುಗಳ ಮಾದರಿಯ ಮಂಟಪವನ್ನು ಕೆಂಪುಮಿಶ್ರಿತ ಹಳದಿ ಮೆರಗು ಕಾಗದಗಳಿಂದ ಚಿತ್ರಿಣ ಮಾಡಿದ್ದಾನೆ. ಮಂಟಪದ ಎಡ ಮತ್ತು ಬಲ ಪಾರ್ಶ್ವಗಳಲ್ಲಿ ಮಯೂರಗಳನ್ನು ಅಲಂಕರಿಸಲಾಗಿದೆ. ಜೊತೆಗೆ ಶ್ವೇತಬಣ್ಣದಿಂದ ಆಕಾಶದಲ್ಲಿ ಬಾಲದೇವತೆಗಳು ಹೂವುಗಳನ್ನು ಅರ್ಪಿಸುವಂತೆ ಕಲಾವಿದನು ಕಲ್ಪನೆ ಮಾಡಿದ್ದಾನೆ. ರೇಖಾ ಪ್ರಧಾನವಾದ ಈ ಸಾಂಪ್ರದಾಯಿಕ ಚಿತ್ರವು ಉತ್ತಮ ಭಾವಲಕ್ಷಣಗಳಿಂದ, ವರ್ಣಸಂಯೋಜನೆಗಳಿಂದ, ಅಲಂಕಾರ ಪ್ರಜ್ಞೆಯಿಂದ ಮತ್ತು ಯಥಾದರ್ಶನದ ದೃಷ್ಟಿಯಿಂದ ಉತ್ತಮವಾಗಿ ನಿರೂಪಿತಗೊಂಡಿದೆ.

**ಚಿತ್ರ ಸಂಖ್ಯೆ ೧೮, ೧೯ ಮೂಷಕ ವಾಹನ ರೂಢ ಗಣಪತಿ**

ಪಾರ್ವತಿ ಹಾಗೂ ಪರಶಿವನ ಪ್ರೀತಿಯ ಪುತ್ರ ಗಣಪತಿಯು ವಿದ್ಯಾದೇವತೆಯಾಗಿ ಹಾಗೂ ಉಗ್ರತಪಸ್ಸು ಮಾಡಿ ಶಿವನ ಆತ್ಮಲಿಂಗವನ್ನು ಗೆದ್ದುಕೊಂಡು ಹೊತ್ತೊಯ್ಯುವ ರಾವಣನನ್ನು ಭಂಗಗೊಳಿಸುವಲ್ಲಿ ಪ್ರಮುಖ ರೂವಾರಿಯೂ ಆಗಿದ್ದಾನೆ. ಶಿವನನ್ನು ವಿಘ್ನನಾಶಕ, ವಿನಾಯಕ, ಗಜಾನನ, ಲಂಬೋದರ ಹಾಗೂ ಗೌರಿಯ ಗಣೇಶನೆಂದು ಪುರಾಣ ಪ್ರಸಿದ್ಧನಾದ ಈ ದೇವತೆಯು ಪ್ರಮುಖವಾಗಿ ಎಲ್ಲ ಸ್ಥಳಗಳಲ್ಲಿ ಕಾಣಸಿಗುತ್ತಾನೆ. ಇವನು ಬಹುಸಂಖ್ಯಾ ಜನರ ಆರಾಧ್ಯ ದೇವತೆಯಾಗಿದ್ದಾನೆ. ಈ ದೇವತೆಯನ್ನು ಕಲಾಕಾರರು ಬೇರೆ ಬೇರೆ ಸಂದರ್ಭಗಳಲ್ಲಿ ಲಭ್ಯವಿರುವ ಫಲಕಗಳ ಮೇಲೆ ಪ್ರತಿಬಿಂಬಿಸಿದ್ದಾರೆ. ಈ ದೇವತೆಯ ಕುರಿತು ಅನೇಕ ಕಥೆಗಳು ಸೃಷ್ಟಿಗೊಂಡಿರುವುದನ್ನು ನೋಡುತ್ತೇವೆ.

ಇಲ್ಲಿ ಚಿತ್ರಿತಗೊಂಡಿರುವ ಮೂಷಕನ ಮೇಲೆ ಕುಳಿತಿರುವ ಗಣಪತಿಯ ಎರಡು ಗಾಜಿನ ಚಿತ್ರಗಳು ಕ್ರಮವಾಗಿ ೩೮ x ೪೮ ಸೆಂ. ಮೀ ಅಳತೆಯನ್ನು ಹೊಂದಿವೆ. ಚಿತ್ರಸಂಖ್ಯೆ ೧೮ ಈ ಚಿತ್ರವು ಹುಬ್ಬಳ್ಳಿಯ ಹರಕ್‌ಚಂದ್ ಜೈನರವರ ಮನೆಯಲ್ಲಿ ಲಭ್ಯವಿದ್ದರೆ, ಚಿತ್ರಸಂಖ್ಯೆ ೧೯ ಈ ಚಿತ್ರವು ಬಾಗಲಕೋಟೆಯ ಎಸ್. ಬಿ. ಹೊಕ್ರಾಣಿಯವರ ಮನೆಯಲ್ಲಿ ಲಭ್ಯವಿದೆ. ಈ ಎರಡೂ ಚಿತ್ರಗಳ ಆಶಯಗಳೂ ಒಂದೇ ಆಗಿದ್ದರೂ ಸಹಿತ ರಚನಾ ಕ್ರಮವು ವೈವಿಧ್ಯತೆಯಿಂದ ಕೂಡಿವೆ. ಎರಡೂ ಚಿತ್ರಗಳಲ್ಲಿ ಚತುರ್ಭುಜಧಾರಿಯಾದ ಗಣಪತಿಯು ವಾಹನವಾದ ಮೂಷಕನ ಮೇಲೆ ಆಶೀನನಾಗಿದ್ದಾರೆ. ಎರಡೂ ಚಿತ್ರಗಳ ಮೂಲ ಕೃತಿಯು ಒಂದೇ ಆಗಿರುವುದರಿಂದ ಗಾಜಿನ ಕಲಾಕಾರರು ತಮಗೆ ಬೇಕಾದಂತೆ ಪ್ರತಿಕೃತಿಯನ್ನು ಮಾಡಿಕೊಂಡು ಚಿತ್ರಣ ಮಾಡಿದ್ದರೆಂದು ತೋರುತ್ತದೆ. ಈ ಎರಡೂ ಚಿತ್ರಗಳಲ್ಲಿ ಇಲಿಯನ್ನು ಅದರ ಆ ಮೂಲ ಸ್ವರೂಪಕ್ಕಿಂತ ಭಿನ್ನತೆಯಿಂದ ಚಿತ್ರಿಸಲಾಗಿದೆ. ಅವುಗಳ ಶರೀರ ರಚನೆಯಲ್ಲಿ ಸ್ಥೂಲತೆ ಹಾಗೂ ಬಲಿಷ್ಠತೆಯನ್ನು ತರಲು ಕಲಾವಿದರು ಪ್ರಯತ್ನಿಸಿದ್ದಾರೆ. ಚಿತ್ರಸಂಖ್ಯೆ ೧೮ ರಲ್ಲಿ ಮೂಷಕನು ಭೂ ಪ್ರದೇಶದಲ್ಲಿ ಚಲಿಸುತ್ತಿರುವಂತೆ ಚಿತ್ರಿತಗೊಂಡರೆ ಚಿತ್ರಸಂಖ್ಯೆ ೧೯ ರಲ್ಲಿ ನಿರ್ಮಿತ ಪೀಠದ ಮೇಲೆ ಸ್ಥಿರ ಸ್ಥಿತಿಯಲ್ಲಿ ನಿರೂಪಿತಗೊಂಡಿದ್ದಾನೆ.

ಎರಡೂ ಚಿತ್ರಗಳಲ್ಲಿ ಗಣಪತಿ ಕುಳಿತಿರುವ ಭಂಗಿಯೂ ಒಂದೇ ರೀತಿಯಿದ್ದು ಚಿತ್ರ ೧೮ ರಲ್ಲಿ ಬಲಗಾಲು ಒಳಮುಖವಾಗಿ ನಿರೂಪಿತಗೊಂಡರೆ ಚಿತ್ರ ೧೯ರಲ್ಲಿ ಬಲಗಾಲು

ಹೊರ ಮುಖವಾಗಿ ಚಿತ್ರಿತಗೊಂಡಿದೆ. ಚಿತ್ರ ೧೮ ರಲ್ಲಿ ಎರಡು ಕೈಗಳಲ್ಲಿ ಆಯುಧಗಳನ್ನು ನೀಡಿದ್ದರೆ ಚಿತ್ರ ೧೯ ರಲ್ಲಿ ನಾಲ್ಕು ಕೈಗಳಲ್ಲಿ ಆಯುಧ ಮತ್ತು ಫಲಪುಷ್ಪಗಳನ್ನು ಬಿಂಬಿಸಿದ್ದಾರೆ. ಎರಡೂ ಚಿತ್ರಗಳಲ್ಲಿ ಆಭರಣ ಹಾಗೂ ಉಡುಗೆಗಳಲ್ಲಿ ಅಲಂಕರಣ ಎದ್ದು ತೋರುತ್ತದೆ. ಗಣಪತಿಯ ಎಡ ಮತ್ತು ಬಲ ಪಾರ್ಶ್ವಗಳಲ್ಲಿ ತಾವರೆ ಹಿಡಿದು ಕುಳಿತಿರುವ ಇಬ್ಬರು ಸ್ತ್ರೀ ದೇವತೆಗಳಿದ್ದಾರೆ. ಇವರು ಸಾಂಪ್ರದಾಯಿಕವಾಗಿ ಸೀರೆ ಹಾಗೂ ಕುಪ್ಪಸಗಳನ್ನು ಧರಿಸಿದ್ದಾರೆ. ಕಿರೀಟಾಭರಣಗಳಿಂದ ಅಲಂಕಾರಭೂಷಿತರಾಗಿದ್ದಾರೆ. ಈ ಕ್ರಮ ಎರಡೂ ಚಿತ್ರಗಳಲ್ಲಿ ಒಂದೇ ರೀತಿಯಲ್ಲಿ ಕಂಡು ಬರುತ್ತಿದ್ದರೂ ವರ್ಣಸಂಯೋನೆಯಲ್ಲಿ ವ್ಯತ್ಯಾಸವಿದೆ. ಚಿತ್ರ ೧೮ ರಲ್ಲಿ ಹಸಿರುವರ್ಣದ ಕುಪ್ಪಸ, ಸ್ವರ್ಣ ವರ್ಣದ ಸೀರೆಯನ್ನು ಸಂಯೋಜಿಸಿದ್ದರೆ, ಚಿತ್ರ ೧೯ ರಲ್ಲಿ ಕಪ್ಪು ಬಣ್ಣದ ಕುಪ್ಪಸ, ಕೆಂಪು ಮಿಶ್ರಿತ ಸ್ವರ್ಣವರ್ಣದ ಸೀರೆಯನ್ನು ಅನಾವರಣಗೊಳಿಸಿದ್ದಾರೆ.

ಚಿತ್ರ ೧೮ ರಲ್ಲಿ ಇಲಿಯ ಬಣ್ಣವನ್ನು ಆನಂದ ವರ್ಣದಿಂದ ಚಪ್ಪಟೆಯಾಗಿ ಲೇಪನಮಾಡಿದ್ದಾರೆ. ಚಿತ್ರ ೧೯ ರಲ್ಲಿ ಕೆಂಪು ಛಾಯೆಯ ಮೆರಗು ಬಣ್ಣದಿಂದ ಸಂಯೋಜನೆಗೊಳಿಸಿದ್ದಾರೆ. ಎರಡೂ ಚಿತ್ರಗಳಲ್ಲಿ ವೃತ್ತಾಕಾರದ ಪ್ರಭಾವಳಿಯನ್ನು ಚಿತ್ರಿಸಿದ್ದು, ಅದರಲ್ಲಿ ಅಲಂಕಾರಿಕ ಬಟ್ಟೆಯನ್ನು ಸಂಯೋಜಿಸಿದ್ದಾರೆ. ಒಂದರಲ್ಲಿ ಬಿಳಿವರ್ಣದಿಂದ ಅಲಂಕರಿಸಿದರೆ ಇನ್ನೊಂದರಲ್ಲಿ ಕೆಂಪು ವರ್ಣವನ್ನು ಅಲಂಕರಿಸಿದ್ದಾರೆ. ಎರಡೂ ಚಿತ್ರಗಳ ಕೆಳಭಾಗದಲ್ಲಿ ಮೂಷಕನ ಎಡ ಮತ್ತು ಬಲ ಪಾರ್ಶ್ವಗಳಲ್ಲಿ ಬಾವುಟಗಳನ್ನು ಹಿಡಿದು ಭಕ್ತಿಪರವಶರಾಗಿ ಕೈಮುಗಿದು ಆರಾಧನೆ ಮಾಡುತ್ತಿರುವಂತೆ ಧೂತರವನ್ನು ಚಿತ್ರಿಸಿದ್ದಾರೆ. ಇಲ್ಲಿಯೂ ಸಹಿತ ವರ್ಣ ವೈವಿದ್ಯತೆಯಲ್ಲಿ ಹಾಗೂ ಆಕೃತಿಗಳ ಸ್ವರೂಪಗಳಲ್ಲಿ ವೈಪರೀತ್ಯತೆಯು ವ್ಯಕ್ತಗೊಂಡಿದೆ. ಚಿತ್ರ ೧೮ ರಲ್ಲಿ ಶ್ವೇತವರ್ಣದ ಮೈಬಣ್ಣ ಹಾಗೂ ಧೋತಿಯನ್ನು ಸಂಯೋಜಿಸಿದರೆ ಚಿತ್ರ ೧೯ ರಲ್ಲಿ ಕೆಂಪು ಮಿಶ್ರಿತ ಬಿಳಿವರ್ಣದ ಮೈಬಣ್ಣ ಹಾಗೂ ಕಂದು, ಹಳದಿ ಮಿಶ್ರಿತ ಬಿಳವರ್ಣದ ಧೋತಿಯನ್ನು ಸಂಯೋಜಿಸಿದ್ದಾರೆ.

ಚಿತ್ರಸಂಖ್ಯೆ ೧೮, ರೇಖಾ ಸಂಯೋಜನೆಯಲ್ಲಿ ಚಲನೆ, ಪ್ರಮಾಣ ಹಾಗೂ ರಭಸತೆಯನ್ನು ಕಾಣುತ್ತೇವೆ. ಇಲ್ಲಿ ಕಲಾವಿದನು ಚಪ್ಪಟೆಯಾಗಿ ವರ್ಣಸಂಯೋಜನೆ ಮಾಡಿದ್ದಾನೆ. ಕೆಲವು ಸಂದರ್ಭಗಳಲ್ಲಿ ದ್ವಿವರ್ಣಗಳಿಂದ ದುಂಡುತನ ತರಲು ಪ್ರಯತ್ನಿಸಿದ್ದಾನೆ. ಗಣಪತಿಯ ಧೋತಿಯಲ್ಲಿ ನಿರಿಗೆಗಳನ್ನು ತರಲು ತ್ರಿಕರಣ ಚಿತ್ರಕ್ರಮವನ್ನು ಅನುಸರಿಸಿದ್ದಾನೆ. ಅದೇ ರೀತಿ ಚಿತ್ರ ೧೯ ರಲ್ಲಿಯೂ ಸಹಿತ ಚಿತ್ರದ ಚಿತ್ರಕಾರನೂ ಆಯಾಮರೂಪ ತರಲು ಪ್ರಯತ್ನಿಸಿದ್ದಾನೆ. ಎರಡೂ ಚಿತ್ರಗಳಲ್ಲಿ ಅಲಂಕಾರಿಕ ಛತ್ರಿಗಳನ್ನು ಚಿತ್ರಿಸಲಾಗಿದ್ದು, ಕಲಾವಿದರು ತಮ್ಮ ವಿವೇಚನೆಯಂತೆ ವರ್ಣ ಸಂಯೋಜನೆ ಮಾಡಿದ್ದಾರೆ. ಈ ಎರಡೂ ಚಿತ್ರಗಳಲ್ಲಿ ಸಂಯೋಜಿಸಲಾದ ವಸ್ತುಗಳನ್ನು ಯಥಾದೃಷ್ಟಿರೂಪಕ್ಕೆ ಗಮನ ಕೊಡದೇ ಇರುವದನ್ನು ಗಮನಿಸಬಹುದು. ಬಾವುಟಗಳು ಹಾರಾಡುವ ದಿಕ್ಕನ್ನು ಗಮನಿಸಿದರೆ, ಎರಡೂ ಬಾವುಟಗಳನ್ನೂ ತದ್ವಿರುದ್ಧ ಚಲನೆಯಲ್ಲಿ ಚಿತ್ರಿಸಲಾಗಿದೆ. ಈ ಕಲೆಯ ಕಲಾವಿದನು ಕೇವಲ ಸಂಯೋಜನೆಗೆ ಆದ್ಯತೆ ನಿಡಿದ್ದಾನೆ. ಹೊರತು ವೈಜ್ಞಾನಿಕ ಕಲ್ಪನೆಗೆ ಮಹತ್ವ ನೀಡಿಲ್ಲವೆಂದು ಹೇಳಬಹುದು.

ಎರಡು ಚಿತ್ರಗಳ ಹಿನ್ನೆಲೆಯನ್ನು ಕ್ರಮವಾಗಿ ಕಂದುಗೆಂಪು ಮತ್ತು ನೀಲಿ ಮಿಶ್ರಿತ

ಬಿಳಿ ವರ್ಣಗಳಿಂದ ಏಕರೂಪವಾಗಿ ಲೇಪನ ಮಾಡಲಾಗಿದೆ. ಇಲ್ಲಿ ಚಿತ್ರಿತಗೊಂಡಿರುವ ಎರಡೂ ಚಿತ್ರಗಳಲ್ಲಿ ರೇಖಾ ಸಂಯೋಜನೆ, ವರ್ಣಸಂಯೋಜನೆ, ಆಕೃತಿ ಮತ್ತು ವಸ್ತುಗಳ ಸಂಯೋಜನೆ ಜೊತೆಗೆ ಭಾವಲಕ್ಷಣಗಳು ಕಲಾವಿದನ ಅಲಂಕಾರಿಕ ಹಾಗೂ ಸೌಂದರ್ಯಪೂರಕ ಪ್ರಜ್ಞೆಯು ವ್ಯಕ್ತಗೊಂಡಿದೆ.

**ಚಿತ್ರಸಂಖ್ಯೆ ೨೦ ಗಣಪತಿ (ಸಿಂಹಾಸನರೂಢ)**

ಚತುರ್ಭುಜಧಾರಿಯಾದ ಗಣಪತಿಯು ಸಸಜ್ಜಿತವಾದ ಅಲಂಕೃತ ಸಿಂಹಾಸನದ ಮೇಲೆ ಆಶೀನನಾಗಿದ್ದಾನೆ. ಎರಡು ಬಲಗೈಗಳ ಪೈಕಿ ಒಂದು ಕೈಯಲ್ಲಿ ಲೇಖನಿ ಇನ್ನೊಂದು ಕೈಯಲ್ಲಿ ಶಂಖವನ್ನು ಹಿಡಿದಿರುವನು ಎಡಗೈಗಳ ಪೈಕಿ ಒಂದು ಕೈಯಲ್ಲಿ ಅಂಕುಶ ಇನ್ನೊಂದು ಕೈಯಲ್ಲಿ ಫಲಪುಷ್ಪವನ್ನು ಹಿಡಿದಿರುವಂತೆ ಕಲಾವಿದನು ಚಿತ್ರಿಸಿದ್ದಾನೆ. ಹಳದಿ ವರ್ಣದ ಧೋತಿಯನ್ನು ಧರಿಸಿದ್ದು, ಅಲಂಕೃತ ಚಿತ್ತಾರವನ್ನೊಳಗೊಂಡ ಕಪ್ಪು ಬಣ್ಣದ ಉತ್ತರಿಯವನ್ನು ಭುಜದ ಮೇಲೆ ಹೊದ್ದಿರುವನು. ತಲೆಯ ಮೇಲೆ ಸ್ವರ್ಣಕಿರೀಟ ಕೈಕಾಲು ಕೊರಳುಗಳಿಗೆ ಸ್ವರ್ಣಾಭರಣಗಳನ್ನು ಅಲಂಕೃತಗೊಳಿಸಲಾಗಿದೆ. ಧಾರ್ಮಿಕ ಪರಂಪರೆಯನ್ನು ಬಿಂಬಿಸುವಂತಹ ಭಕ್ತಿ ಭಾವವನ್ನು ಹುಟ್ಟಿಸುವಂತಹ ಸಂಯೋಜನೆಯನ್ನು ಕಲಾವಿದನು ಈ ಮೂರ್ತಿಯ ಮೂಲಕ ಅಭಿವ್ಯಕ್ತ ಮಾಡಿದ್ದಾನೆ. ಉತ್ತಮ ಶರೀರ ರಚನೆಯನ್ನು ರೇಖೆಯ ಮೂಲಕ ಸಂಯೋಜನೆಗೊಳಿಸಿದ್ದಾನೆ. ಈ ಚಿತ್ರವು ಸಾಂಪ್ರದಾಯಿಕವಾಗಿದ್ದರೂ ಸಹಿತ ಪಾಶ್ಚಿಮಾತ್ಯ ರಚನಾ ನಿರೂಪಣೆಯನ್ನು ತರಲಾಗಿದೆ. ಗಣಪತಿಯ ಮುಖ ಭಾವವನ್ನು ಶಾಂತತೆ, ಪ್ರಸನ್ನತೆ ಎದ್ದು ಕಾಣುವಂತೆ ನಿರೂಪಣೆ ಮಾಡಲಾಗಿದೆ. ಬಲ ಮುರಿ ಸೊಂಡಿಲಿನಲ್ಲಿ ಕುಂಬವನ್ನು ಹಿಡಿದಿದ್ದು ಅವನ ವಾಹನವಾದ ಮೂಷಕನನ್ನು ಬಿಳಿವರ್ಣದಿಂದ ಅತೀ ಚಿಕ್ಕದಾಗಿ ಸಿಂಹಾಸನದ ಪೀಠದ ಕೆಳಗೆ ಚಿತ್ರಿಸಲಾಗಿದೆ. ಅದು ಚಲನೆಯುಕ್ತವಾಗಿದೆ.

ಎತ್ತರವಾದ ಚೌಕಾಕಾರದ ಸಿಂಹಾಸನದ ಪೀಠದ ಹಿಂಬದಿಯಲ್ಲಿ ಅಂಡಾಕಾರದ ಅಲಂಕಾರಯುತವಾದ ಪ್ರಭಾವಳಿಯನ್ನು ತಿಳಿಗುಲಾಬಿ ಬಣ್ಣದಿಂದ ಚಿತ್ರಣಮಾಡಲಾಗಿದೆ. ಪ್ರಭಾವಳಿಯ ಎಡ ಮತ್ತು ಬಲ ಪಾರ್ಶ್ವಗಳಲ್ಲಿ ಮೊಸಳೆಯ ಅಲಂಕಾರಿಕ ನಕ್ಷಾವಿನ್ಯಾಸವನ್ನು ಸಂಯೋಜನೆಗೊಳಿಸಲಾಗಿದ್ದೂ ಇನ್ನೂ ವಿಶೇಷವೆಂದರೆ ದುಂಡಾದ ಕ್ಯಾಂಡಲ್ ಬಲ್ಬಗಳ ಗುಚ್ಚವನ್ನು ಚಿತ್ರಿಸಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಸುಸಜ್ಜಿತ ಅಲಂಕೃತ ಮಂಟಪವನ್ನು ಅದಕ್ಕೆ ತಕ್ಕದಾದ ಎರಡೂ ಬದಿಗಳಲ್ಲಿ ಆಧಾರ ಸ್ತಂಭಗಳನ್ನು ಚಿತ್ರಿಸಲಾಗಿದೆ. ಮಂಟಪದಲ್ಲಿ ಬಣ್ಣ ಬಣ್ಣದ ಬಟ್ಟೆಗಳನ್ನು ಸಂಯೋಜಿಸಿದೆ.

ಚಿತ್ರದ ಒಟ್ಟಾರೆ ಸಂಯೋಜನೆಯಲ್ಲಿ ರೇಖೆಯ ಅಲಂಕರಣ ವಿಪುಲವಾಗಿ ಅನಾವರಣಗೊಂಡಿದ್ದನ್ನು ಮನಗಾಣಬಹುದು. ವರ್ಣ ಸಂಯೋಜನೆಯಲ್ಲಿ ಮಿತವಾದ ಬಣ್ಣಗಳನ್ನು ಬಳಸಿದ್ದರೂ ಸಹಿತ ಚಿತ್ರವು ಆಕರ್ಷಕವಾಗಿ ಎದ್ದು ತೋರುವಂತೆ ಕಲಾವಿದನು ಪ್ರಯತ್ನಿಸಿದ್ದಾನೆ. ಇಲ್ಲಿ ಕಲಾವಿದನು ಭಕ್ತಿಭಾವವನ್ನು, ಗಣಪತಿಯ ದೇವತೆಯನ್ನು ತನ್ನ ಕಲ್ಪನೆಯಂತೆ ಚಿತ್ರಿಸಿ ಅವನನ್ನು ಸ್ವರ್ಣಪೀಠದ ಮೇಲೆ ಆಶೀನಗೊಳಿಸಿ ಅಲಂಕೃತ ಮಂಟಪ ನಿರ್ಮಿಸಿ ಫಲ ಪುಷ್ಪಗಳಿಂದ

ಅಲಂಕಾರಗೊಳಿಸಿ ಆ ಮೂಲಕ ಭಕ್ತಿಯ ರಸವನ್ನು ಉಕ್ಕಿಸಿದ್ದಾನೆ. ಇದನ್ನು ತಾನು ಅನುಭವಿಸಿದ್ದಲ್ಲದೇ ಇತರರು ಸಹಿತ ಭಕ್ತಿಭಾವನೆಗಳನ್ನು ಕಂಡುಕೊಳ್ಳುವಂತೆ ಈ ದೇವತೆಯನ್ನು ಚಿತ್ರಿಸಿದ್ದಾನೆ ಎಂದು ಹೇಳಬಹುದು.

ಚಿತ್ರದಲ್ಲಿ ಕಲಾವಿದನು ಆಕೃತಿಗಳ ಶರೀರ ಸಂಯೋಜನೆ, ವಸ್ತುಗಳ ಸಂಯೋಜನೆಯಲ್ಲಿ ಪ್ರಮಾಣದ ಕಡೆಗೆ ಹೆಚ್ಚು ಒತ್ತು ಕೊಡದೆ ಚಿತ್ರವನ್ನು ಯಾಂತ್ರಿಕವಾಗಿ ನಿರೂಪಣೆ ಮಾಡಿದ್ದಾನೆಂದು ಹೇಳಬಹುದು. ವರ್ಣ ವೈವಿಧ್ಯತೆಯಲ್ಲಿಯೂ ಸಹ ಸಾಕಷ್ಟು ಭಿನ್ನತೆಯನ್ನು ವ್ಯಕ್ತಪಡಿಸಿದ್ದನ್ನು ಇಲ್ಲಿ ಅರಿಯಬಹುದಾಗಿದೆ. ರೇಖೆ, ಆಕೃತಿ, ವಸ್ತು ಹಾಗೂ ವರ್ಣಗಳ ಯಥಾದೃಷ್ಠಿಯಲ್ಲಿ ಸಮತೋಲನ ಕಾಪಾಡುವಲ್ಲಿ ಇಲ್ಲಿ ಕಲಾವಿದನು ಪ್ರಯತ್ನ ಪಟ್ಟಿದ್ದಾನೆ.

**ಚಿತ್ರಸಂಖ್ಯೆ ೨೧ ಪದ್ಮಾಸನದ ಗಣಪತಿ**

ಈ ಚಿತ್ರವು ಮೈಸೂರು ಅರಮನೆಯ ಉತ್ತರದ ಗೋಡೆಯ ಕಿಟಕಿಯ ಗಾಜಿನ ಮೇಲೆ ಚಿತ್ರಿತಗೊಂಡಿದೆ. ಚತುರ್ಭುಜಧಾರಿಯಾದ ಗಣಪತಿಯು ಪದ್ಮಾಸನದಲ್ಲಿ ವೃತ್ತಾಕಾರದ ಪೀಠದ ಮೇಲೆ ಆಶೀನನಾಗಿದ್ದಾನೆ. ಎರಡು ಕೈಗಳಲ್ಲಿ ಅಂಕುಶ, ಪಾಶಗಳನ್ನು ಹೊಂದಿದ್ದು ಇನ್ನೆರಡು ಕೈಗಳನ್ನು ತೊಡೆಗಳ ಆಧಾರವಾಗಿ ಇರಿಸಿ ಫಲ ಪುಷ್ಪಗಳನ್ನು ಹಿಡಿದಿರುವಂತೆ ಚಿತ್ರಿಸಲಾಗಿದೆ. ಕೊರಳಲ್ಲಿ ಗುಲಾಬಿ ಹೂವಿನ ಮಾಲೆಯನ್ನು ಧರಿಸಿದ್ದು, ಕೊರಳು ಕೈ ಕಾಲುಗಳಲ್ಲಿ ಮಿತವಾದ ಆಭರಣಗಳನ್ನು ಅಲಂಕರಿಸಲಾಗಿದೆ. ಇಲ್ಲಿ ಕಲಾವಿದ ವಿನಾಯಕನನ್ನು ಧ್ಯಾನಮಗ್ನನಾಗಿ ಕುಳಿತಿರುವಂತೆ ಭಾವಲಕ್ಷಣಗಳನ್ನು ಅಭಿವ್ಯಕ್ತಪಡಿಸಿದ್ದಾನೆ. ಗಣಪತಿಯ ಉದರವನ್ನು ಸರ್ಪವು ಬಿಗಿದುಕೊಂಡಿದೆ. ಗಣಪತಿಯ ಪೀಠದ ಮುಂಭಾಗದಲ್ಲಿ ಚಿಕ್ಕದಾಗಿ ವಾಹನವಾದ ಮೂಷಕನನ್ನು ಚಿತ್ರಿಸಲಾಗಿದೆ. ಈ ವರ್ಣ ಸಂಯೋಜನೆಯಲ್ಲಿ ತ್ರಿಕರಣ ರೂಪವನ್ನು ವ್ಯಕ್ತಪಡಿಸಲಾಗಿದೆ.

ಈ ಚಿತ್ರವು ಸಾಂಪ್ರದಾಯಿಕವಾಗಿ ಚಿತ್ರಿತಗೊಂಡಿದ್ದರೂ ಚಿತ್ರಷಡಂಗಳ ಪ್ರಕಾರ ಅನೇಕ ಲೋಪಗಳು ಬಿಂಬಿತವಾಗಿದ್ದನ್ನು ನೋಡುತ್ತೇವೆ. ಇದಕ್ಕೆ ಕಾರಣ ಕಲಾವಿದನು ಚಿತ್ರ ರಚನೆಯ ಕ್ರಮವನ್ನು ಸರಿಯಾಗಿ ತಿಳಿಯದೇ ಇರುವುದು. ರೂಪದಲ್ಲಿ ದೇಹದ ಅಂಗಾಂಗ, ಉಪಾಂಗಗಳು, ಆಯುಧಗಳು ಹಾಗೂ ಆಭರಣಗಳು ರೂಪ ಲಕ್ಷಣಗಳಿಂದ ಕೂಡಿರಬೇಕು. ಅಂದರೆ ಸರಿಯಾದ ಚಿತ್ರಮಾನಗಳನ್ನು ಅರೀತಿರಬೇಕು. ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಚಿತ್ರವನ್ನು ಸತ್ಯ, ವೈಣಿಕ, ನಾಗರ ಮತ್ತು ಮಿಶ್ರಣಗಳೆಂದು ವಿಂಗಡಿಸಿಕೊಂಡು ವಿವೇಚಿಸಿದ್ದಾರೆ. ಇಲ್ಲಿ ಕಲಾವಿದನು 'ಸತ್ಯ'ದ ಪ್ರಕಾರವನ್ನು ನಿರೂಪಣೆ ಮಾಡುವಲ್ಲಿ ಪ್ರಯತ್ನಿಸಿದ್ದಾನೆ. ಇಲ್ಲಿ ಸತ್ಯವೆಂದರೆ ವಸ್ತು ನಿಷ್ಠವಾದ ನಿರೂಪಣೆ : ಅಂದರೆ ಇದನ್ನು ಇದ್ದಂತೆಯೇ ಕಾಣಿಸುವುದು ಎಂದರ್ಥ. ಕಲಾವಿದನು ಹೆಚ್ಚು ಆಡಂಬರವಿಲ್ಲದೇ ಭಾವ ನಿರೂಪಣೆಯನ್ನು ಮಾಡಿದ್ದಾನೆ. ಗಣಪತಿಯ ಶಿರದ ಹಿಂಭಾಗದಲ್ಲಿ ಹಳದಿ ವರ್ಣದ ಕಿರಣಗಳನ್ನು ರಚಿಸಿದ್ದು, ಹಿನ್ನೆಲೆಯಾಗಿ ಅಲಂಕಾರಿಕ ಮಂಟಪವನ್ನು ಸಂಯೋಜನೆಗೊಳಿಸಲಾಗಿದೆ. ಜೊತೆಗೆ ಏಕರೂಪವಾಗಿ ನೀಲಿ ಬಣ್ಣವನ್ನು ಲೇಪನ ಮಾಡಲಾಗಿದೆ. ಈ ಚಿತ್ರವು ಮಿತವರ್ಣಗಳಿಂದ ಪರಿಪೂರ್ಣಗೊಂಡಿದೆ





೧೪. ಸುಬ್ರಹ್ಮಣ್ಯ ಸ್ವಾಮಿ



೧೫. ಸುಬ್ರಹ್ಮಣ್ಯ ಸ್ವಾಮಿ



೧೬. ಸುಬ್ರಹ್ಮಣ್ಯ ಸ್ವಾಮಿ

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು





೧೮ ಮೂಷಿಕ ವಾಹನರೂಢ ಗಣಪತಿ

೨೦. ಗಣಪತಿ



೨೧. ಪದ್ಮಾಸನ ಗಣಪತಿ





೧೯. ಮೂಷಿಕ ವಾಹನರೂಢ ಗಣಪತಿ

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು

## ಚಿತ್ರಸಂಖ್ಯೆ ೨೨, ೨೩ ಕಾಮಧೇನು

ಸ್ವರ್ಗಲೋಕದ ದನ : ಇದು ಬ್ರಹ್ಮನ ಮುಖದಿಂದ ಜನಿಸಿತು. ಇದು ರಸಾತಲದಲ್ಲಿ ವಾಸಿಸುತ್ತದೆ. ಇದಕ್ಕೆ ಸುರೂಪಾ, ಹಂಸಿಕಾ, ಸುಭದ್ರಾ, ಸರ್ವಕಾಮಧಘ ಎಂಬ ನಾಲ್ವರು ಮಕ್ಕಳು.

ಅಮೃತ ಮಥನ ಕಾಲದಲ್ಲಿ ಕಲ್ಪವೃಕ್ಷ ಮೊದಲಾದವುಗಳೊಡನೆ ಇದು ಜನಿಸಿ ದೇವೇಂದ್ರನ ಸ್ವಾಧೀನವಾಯಿತು. ನಂದಿನಿ ಎಂಬ ಹೆಸರುಳ್ಳ ವಸಿಷ್ಠನ ದನ ; ಇದು ದಿಲೀಪ' ಮಹಾರಾಜನಿಗೆ ಪುತ್ರನಾಗುವಂತೆ ಅನುಗ್ರಹಿಸಿತು. ವಿಶ್ವಾಮಿತ್ರನು ಈ ಆಕಳನ್ನು ತನ್ನ ಪಟ್ಟಣಕ್ಕೆ ಬಲತ್ಕಾರದಿಂದ ಒಯ್ಯಲೆತ್ನಿಸಿ ವಸಿಷ್ಠನಿಂದ ಪರಾಜಿತನಾದನು.

ಶಿವನ ಆದಿ – ಅಂತ್ಯವನ್ನು ವಿಷ್ಣು ಬ್ರಹ್ಮರಿಗೆ ನೋಡುವ ಆಸೆಯಾಗಿ ಹೊರಟರು. ಬ್ರಹ್ಮನು ತಾನು ಶಿವನ ಶಿರಸ್ಸನ್ನು ಕಂಡಿದ್ದೇನೆಂದು ಹೇಳಿದುದಲ್ಲದೇ ಕಾಮಧೇನುವಿನಿಂದ ಸಾಕ್ಷಿ ಹೇಳಿಸಿದನು. ಇದರಿಂದ ಸುಳ್ಳು ಹೇಳಿದ ಬ್ರಹ್ಮನಿಗೆ, 'ನಿನ್ನನ್ನು ಯಾರೂ ಪೂಜಿಸದಿರಲಿ' ಎಂದೂ, ಕಾಮಧೇನುವಿಗೆ ನೀನು ಸುಳ್ಳು ಹೇಳಿದುದರಿಂದ ನಿನ್ನ ಸಂತತಿಯು ಅಮೇಧ್ಯವನ್ನು ತಿನ್ನಲಿ ಎಂದು ಶಾಪ ಕೊಟ್ಟನು.[೩] ಹೀಗೆ ಕಾಮಧೆನುವಿನ ಕುರಿತಾಗಿ ಅನೇಕ ಕಥಾ ಪ್ರಸಂಗಗಳು ಗೋಚರವಾಗುತ್ತವೆ. ಇಲ್ಲಿ ಇಬ್ಬರೂ ಕಲಾವಿದರೂ ಅದರ ರೂಪ, ಲಕ್ಷಣಗಳನ್ನು ಚಿತ್ರದ ಮೂಲಕ ಅಭಿವ್ಯಕ್ತ ಮಾಡಿದ್ದಾರೆ.

ಚಿತ್ರಸಂಖ್ಯೆ ೨೨ ಮತ್ತು ೨೩ ಈ ಎರಡೂ ಚಿತ್ರಗಳನ್ನು ಹೊಸಪೇಟೆ ತಾಲ್ಲೂಕಿನ ಮಲಪನಗುಡಿಯ ಶ್ರೀ ವೀರಾಚಾರ್ ಬಡಿಗೇರ ಎಂಬ ಕಲಾವಿದರು ರಚಿಸಿದ್ದು, ಇವು ಕ್ರಮವಾಗಿ ೪೧ x ೪೯ ಸೆಂ. ಮೀ ಅಳತೆಯನ್ನು ಹೊಂದಿವೆ. ಎರಡೂಚಿತ್ರಗಳ ಆಶಯಗಳೂ ಒಂದೇಯಾಗಿದ್ದರೂ ರಚನಾ ವಿಧಾನದಲ್ಲಿ ಹಾಗೂ ಆಕೃತಿಗಳ ಸಂಯೋಜನೆಯಲ್ಲಿ ವೈವಿಧ್ಯತೆಯನ್ನು ಹೊಂದಿವೆ. ಈ ಎರಡೂ ಚಿತ್ರಗಳು ಜನಪದೀಯ ಸೊಗಡನ್ನು ಪ್ರತಿಬಿಂಬಿಸುತ್ತವೆ. ಅಂದರೆ ರೇಖಾ ವಿನ್ಯಾಸದಲ್ಲಿ ವರ್ಣ ಸಂಯೋಜನೆಯಲ್ಲಿ, ಭಾವಲಕ್ಷಣಗಳಲ್ಲಿ ಯಥಾಸಾದೃಶ್ಯಗಳಲ್ಲಿ ಶಿಷ್ಠತೆ ಕಾಣಸಿಗುವುದಿಲ್ಲ. ಇಲ್ಲಿ ಧಾರ್ಮಿಕ ಹಾಗೂ ಭಕ್ತಿಯ ಶ್ರದ್ಧೆಯನ್ನು ತೋರುತ್ತವೆ. ಎರಡೂ ಚಿತ್ರಗಳಲ್ಲಿ ಶ್ವೇತವರ್ಣದಲ್ಲಿ ಕಾಮಧೇನುವನ್ನು ಸಂಯೋಜಿಸಿದ್ದು ಮಯೂರದ ರೆಕ್ಕೆಯನ್ನು ಸಾಂಕೇತವಾಗಿ ಸಂಯೋಜನೆ ಮಾಡಲಾಗಿದೆ.

ಸ್ತ್ರೀ ಮುಖ ಭಾವಗಳನ್ನು ಹೊಂದಿದ ಕಾಮಧೇನು ಕಿರೀಟ ಹಾಗೂ ಆಭರಣಗಳಿಂದ ಅಲಂಕೃತಗೊಂಡಿದೆ. ಜೋಡು ಬಾಲಗಳನ್ನು ಹೊಂದಿದ ಕಾಮಧೇನು ಬಾಲವು ಅಲಂಕಾರಿಕ ನಕ್ಷಾ ವಿನ್ಯಾಸದಿಂದ ಕೂಡಿದ ಮಯೂರನ ಗರಿಗಳನ್ನು ಪಡೆದುಕೊಂಡಿದೆ. ಈ ಚಿತ್ರಗಳ ರಚನೆ ಯಾವುದೇ ಒಂದು ಸಾಂಪ್ರದಾಯಿಕ ನಿರ್ದಿಷ್ಠ ಚಿತ್ರಶೈಲಿಯನ್ನು ಹೊಂದಿಲ್ಲವಾದರೂ ಜನಪದರ ಆಶಯದ ಸಂಯೋಜನಾ ಚಿತ್ರ ಶೈಲಿಯಲ್ಲಿ ರೂಪಗೊಂಡಿವೆ. ಎರಡೂ ಚಿತ್ರಗಳಲ್ಲಿ ಕಾಮಧೇನುವನ್ನು ಅಲಂಕಾರಿಕ ನಕ್ಷಾ ವಿನ್ಯಾಸಗಳಿಂದ ಸಂಯೋಜನೆಗೊಳಿಸಲಾಗಿದ್ದು. ನಂದಿಸಿಯು ಕರುಪಿಗೆ ಹಾಲುನಿಸುತ್ತಿರುವ ದೃಶ್ಯ ಅತ್ಯಂತ ಚಲನಾತ್ಮಕವಾಗಿ ಕೂಡಿದೆ. ಎರಡೂ ಚಿತ್ರಗಳಲ್ಲಿ ಶಿವಪಾರ್ವತಿಯರನ್ನು

---

೩. ಯಜ್ಞ ನಾರಾಯಣ ಉಡುಪ : ಪುರಾಣ ಭಾರತಕೋಶ, ಪುಟ ೧೦೯-೧೧೦

ಚಿತ್ರಿಸಿದ್ದು, ನಂದಿಯನ್ನು ಆಶೀರ್ವದಿಸುವಂತೆ ಅಭಿವ್ಯಕ್ತ ಮಾಡಲಾಗಿದೆ. ಎರಡೂ ಚಿತ್ರಗಳಲ್ಲಿ ಶಿವಪಾರ್ವತಿಯರ ಅಂಗಾಂಗಗಳ ಸಂಯೋಜನೆಯಲ್ಲಿ ಕಲಾವಿದನು ಪ್ರಧಾನ್ಯತೆ ಕೊಟ್ಟಿದ್ದು ಕಂಡು ಬಂದಿರುವುದಿಲ್ಲ.

ಚಿತ್ರ ೨೨ ರಲ್ಲಿ ಕತ್ತೆಕಿರುಬ, ನವಿಲು ಹಾಗೂ ಹಿನ್ನೆಲೆಯ ಪ್ರಕೃತಿಯಲ್ಲಿ ಪರ್ವತಗಳ ಸಾಲು, ನದಿಯ ಹರಿವು, ಅದರಲ್ಲಿ ಹಂಸಪಕ್ಷಿಗಳ ಸಂಯೋಜನೆ, ಪುಷ್ಪಗಳಿಂದ ಅರಳಿದ ಮರಗಳು ಮತ್ತು ಹುಲ್ಲು ಹಾಸುಗಳನ್ನು ಚಿತ್ರಿಸಿದ್ದಾರೆ. ಚಿತ್ರ ೨೩, ಹಿನ್ನೆಲೆಯಲ್ಲಿ ಬೆಟ್ಟದ ಸಾಲು, ನೀರಿನ ಝುರಿ ಅದರಲ್ಲಿ ಹಂಸಪಕ್ಷಿಗಳು, ಹುಲ್ಲು ಹಾಸು, ನವಿಲುಗಳು, ಹುತ್ತು, ಜಿಂಕೆ ಹಾಗೂ ಶಿವನ ಮುಂದೆ ನಂದಿ ಹಾಗೂ ಲಿಂಗವನ್ನು ಸಂಯೋಜನೆ ಮಾಡಲಾಗಿದೆ. ಜೊತೆಗೆ ನದಿಯ ತಟದಲ್ಲಿ ದೇವಸ್ಥಾನದ ವಾಸ್ತು ಕಟ್ಟಡವನ್ನು ಚಿತ್ರಿಸಿದ್ದಾರೆ. ಇಲ್ಲಿ ಕಲಾವಿದನು ಆಕೃತಿಗಳ ಅಂಗಾಂಗಗಳಿಗೆ, ವಸ್ತುಗಳ ಸಂಯೋಜನೆಗೆ, ಭಾವ ನಿರೂಪನೆಗೆ, ಯಥಾದೃಶ್ಯಕ್ಕೆ, ಬಣ್ಣಗಳ ಹೊಂದಾನಿಕೆಗೆ ಯಾವುದೇ ಪ್ರಾಧಾನ್ಯತೆ ಕೊಟ್ಟಿಲ್ಲ. ಇವೆಲ್ಲವನ್ನು ಕೇವಲ ಸಾಂಕೇತಿಕವಾಗಿ ನಿರೂಪನೆಗೊಳಿಸಿದ್ದಾನೆ. ಚಿತ್ರ ೨೨ ರಲ್ಲಿಯೂ ಇದೆ ರೀತಿಯ ವಿವರಣೆಯನ್ನು ನೀಡಿದ್ದಾನೆ. ಬಣ್ಣಗಳ ಮಿಶ್ರಣ ಮಾಡುವ ರೀತಿಯಾಗಲಿ, ರೇಖಾ ಸೌಂದರ್ಯದ ಕುರಿತಾಗಲಿ ಕಲಾವಿದನ ಅನನುಭವವೂ ಎದ್ದು ತೋರುತ್ತದೆ.

ಎರಡೂ ಚಿತ್ರಗಳಲ್ಲಿ ಶಿವನ ಹಾಗೂ ಪಾರ್ವತಿಯರ ಉಡುಗೆ-ತೊಡುಗೆ, ಆಭರಣಗಳ ಅಲಂಕಾರ ಹಾಗೂ ಭಾವನಾ ನಿರೂಪಣೆಯು ಸಾಂಪ್ರದಾಯಿಕವಾಗಿ ರೂಪಗೊಂಡಿರುವುದಿಲ್ಲ. ಚಿತ್ರ ೨೩ ರಲ್ಲಿ ಚಿತ್ರದ ಸುತ್ತಲೂ ಹೂವು ಎಲೆಗಳಿಂದ ಕೂಡಿದ ನಕ್ಷಾ ವಿನ್ಯಾಸದ ಅಂಚನ್ನು ರಚಿಸಿದೆ. ಈ ಎರಡೂ ಚಿತ್ರಗಳು ಪ್ರಾಥಮಿಕ ವರ್ಣಗಳಿಂದ ಸಂಯೋಜನೆಗೊಂಡಿದ್ದು, ಅಲಂಕಾರಿಕ ಪ್ರಜ್ಞಾ ಮನೋಭಾವನೆಯಲ್ಲಿ ಸಿದ್ಧಗೊಂಡಿವೆ.

**ಚಿತ್ರಸಂಖ್ಯೆ ೨೪ ಕಾಮಧೇನು**

ಕಾಮಧೇನುವಿನ ಚಿತ್ರವು ಮೈಸೂರು, ತಂಜಾವೂರು ಚಿತ್ರಶೈಲಿಯಲ್ಲಿ ಹಾಗೂ ಇತರ ಭಿತ್ತಿ ಹಾಗೂ ಕಿರುರೂಪ ಚಿತ್ರಗಳಲ್ಲಿ ರೂಪಗೊಂಡಿದೆಯಾದರೂ ಇಲ್ಲಿ ಗಾಜಿನ ಕಲಾವಿದರು ತಮ್ಮ ಕಲಾತ್ಮಕ ವಿವೇಚನೆಯಲ್ಲಿ ಅವುಗಳನ್ನು ಪ್ರತಿರೂಪಗೊಳಿಸಿಕೊಂಡು ಚಿತ್ರಣ ಮಾಡಿದ್ದು ಅನೇಕ ಚಿತ್ರಗಳಿಂದ ತಿಳಿದು ಬರುತ್ತದೆ. ಅವು ಶಿಷ್ಟ ಹಾಗೂ ಜನಪದ ರೂಪದಲ್ಲಿ ರಚನೆಗೊಂಡಿವೆ. ಇಲ್ಲಿ ರೂಪಗೊಂಡಿರುವ ಕಾಮಧೇನುವಿನ ಗಾಜಿನ ಚಿತ್ರಗಳು ಸಾಂಪ್ರದಾಯಿಕ ಚೌಕಟ್ಟನ್ನು ಮೀರಿ ತಮ್ಮದೇ ತತ್ವ ಸಿದ್ಧಾಂತದ ಮೇರೆಗೆ ರಚಿತಗೊಂಡಿವೆ. ಅಂದರೆ ಇಲ್ಲಿ ಕಲಾವಿದನು ಸ್ವತಂತ್ರ ವಿವೇಚನಾ ಸಿದ್ಧಾಂತವನ್ನು ವ್ಯಕ್ತಪಡಿಸಿದ್ದಾನೆ. ಈ ಚಿತ್ರವನ್ನು ಹೂವಿನ ಹಡಗಲಿ ತಾಲೂಕಿನ ಇಟಗಿಯ ಗಂಗಾಧರ ಇಟಗಿ ಎಂಬ ಕಲಾವಿದನು ರಚಿಸಿದ್ದಾನೆ. ಇದು ೪೮ x ೬೩ ಸೆಂ. ಮೀ ಅಳತೆಯನ್ನು ಹೊಂದಿದೆ. ಇದು ಪಿಕ್ಟೋರಿಯಲ್ ಸಂಯೋಜನಾ ಚಿತ್ರವಾಗಿದ್ದು, ಶರೀರ ವಿನ್ಯಾಸದಲ್ಲಿ ಕ್ರಮಬದ್ಧತೆ, ಚಲನೆಯುಕ್ತ ಭಾವವೂ ಮೂಡಿಬಂದಿದೆ. ಕಾಮಧೇನುವಿನ ಸ್ತ್ರೀಮುಖಿಭಾವವು ಯೌವ್ವನಯುಕ್ತವಾಗಿ ಪ್ರಸನ್ನತೆಯಿಂದ ಕೂಡಿದೆ. ನವಿಲಿನ ಗರಿಯೂ ವಸ್ತುನಿಷ್ಠವಾಗಿ ರಚನೆಗೊಂಡಿದ್ದು, ಜೋಡುಬಾಲಗಳಿಂದ ಕಾಮಧೇನು ಕಂಗೊಳಿಸುತ್ತಿದೆ.

ಈ ಚಿತ್ರದಲ್ಲಿ ಕಾಮಧೇನು ಕಪ್ಪು ಕೂದಲು ಭುಜದ ಮೇಲೆ ಹರಡಿದ್ದು, ಮಿತವಾದ ಪುಷ್ಪಾಭರಣಗಳನ್ನು ಹೊಂದಿದೆ. ಇಲ್ಲಿ ಕಲಾವಿದನು ಹೆಚ್ಚು ಅಲಂಕಾರಿಕತೆಗೆ ಒತ್ತು ಕೊಡದೆ ಸಹಜ ಸೌಂದರ್ಯತೆಯನ್ನು ತರಲು ಪ್ರಯತ್ನಿಸಿದ್ದಾನೆ. ಈ ಚಿತ್ರದಲ್ಲಿ ಶಿವನನ್ನು ಕೇವಲ ಸಾಂಕೇತಿಕವಾಗಿ ಚಿತ್ರಿಸಿದ್ದು, ಅವನ ರೂಪ, ಭೇದಗಳು ತುಂಬಾ ಗೌಣವಾಗಿವೆ. ಹಿನ್ನೆಲೆಯ ಮರವು ಕೂಡಾ ತನ್ನ ಸ್ವರೂಪವನ್ನು ಕಳೆದುಕೊಂಡಿದೆ. ಇಲ್ಲಿ ಶಿವನನ್ನು ಎತ್ತರವಾದ ಕಟ್ಟೆಯ ಮೇಲೆ ಪದ್ಮಾಸನದಲ್ಲಿ ಕಮಂಡಲಕ್ಕೆ ಆಸರೆಯಾಗಿ ಕೈಯಿಟ್ಟು ಕುಳಿತಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ಹಳದಿ, ಕೆಂಪು, ಕೆಂಪುಹಳದಿ, ಹಸಿರು, ಕಪ್ಪು, ಬಿಳಿ ಹಾಗೂ ನೀಲಿ ಬಣ್ಣಗಳಿಂದ ಚಪ್ಪಟೆಯಾಗಿ ಸಂಯೋಜನೆ ಗೊಳಿಸಲಾಗಿದೆ. ಚಿತ್ರದ ಹಿನ್ನೆಲೆಗೆ ನೀಲಿ ಬಣ್ಣದಿಂದ ಏಕರೂಪವಾಗಿ ಲೇಪನ ಮಾಡಲಾಗಿದೆ. ಭೂ ಕಲ್ಪನೆಯೇ ಇಲ್ಲಿ ಮೂಡಿಬಂದಿಲ್ಲ.

ಈ ಚಿತ್ರದಲ್ಲಿ ಸುತ್ತಲೂ ಅಲಂಕಾರಿಕ ನಕ್ಷಾ ವಿನ್ಯಾಸಗಳ ಅಂಚನ್ನು ಚಿತ್ರಿಸಿದ್ದು, ನೈಸರ್ಗಿಕ ಹೂವು, ಎಲೆ, ಹಣ್ಣುಗಳನ್ನು ಸಂಯೋಜನೆಗೊಳಿಸಲಾಗಿದೆ. ಈ ಚಿತ್ರವು ಆಧುನಿಕ ರಚನಾ ಶೈಲಿಯಲ್ಲಿ ರಚನೆಗೊಂಡಿದೆ. ಚಿತ್ರವು ರೇಖಾ ಲಾಲಿತ್ಯದಲ್ಲಿ, ಭಾವನಾ ನಿರೂಪಣೆಯಲ್ಲಿ ವಸ್ತುಗಳ ಹೊಂದಾಣಿಕೆಯಲ್ಲಿ, ವರ್ಣ ಸಂಯೋಜನೆಯಲ್ಲಿ ಹಾಗೂ ವಿಷಯ ಸಾದೃಶ್ಯದಲ್ಲಿ ಕೆಲವು ಲೋಪದೋಷಗಳಿಂದ ಕೂಡಿದ್ದು, ಕಲಾವಿದನ ಸಹಜ ಕಲ್ಪನಾ ಸೌಂದರ್ಯವು ಒಡಮೂಡಿದೆ. ಅಂದರೆ ನಮ್ಮ ಸಾಂಪ್ರದಾಯಿಕ ಚಿತ್ರಕಲೆಗಳು ಅನೇಕ ಚಿತ್ರಕರ್ಮಗಳನ್ನು ಹೇಳಿಕೊಡುತ್ತವೆ. ಇಲ್ಲಿ ಆ ಕರ್ಮ ಪದ್ಧತಿಯನ್ನು ಕಲಾವಿದನು ಅರಿಯದೇ ಅಭಿವ್ಯಕ್ತ ಮಾಡಿದ್ದಾನೆ. ಈ ಮೂರು ಚಿತ್ರಗಳು ಇದೇ ಹಿನ್ನೆಲೆಯಲ್ಲಿ ರಚನೆಗೊಂಡಿವೆ.

**ಚಿತ್ರಸಂಖ್ಯೆ ೨೫, ೨೬ ವೀರಭದ್ರ**

ವೀರಭದ್ರನು ಶಿವನ ರುದ್ರಾವತಾರ, ಇವನು ನರಸಿಂಹನ ಗರ್ವವನ್ನು ಅಡಗಿಸಿದನು. ದಾಕ್ಷಾಯಿಣಿಯು ದಕ್ಷಯಜ್ಞ ಕುಂಡದಲ್ಲಿ ದೇಹಬಿಟ್ಟ ಸಮಾಚಾರವನ್ನು ನಾರದನಿಂದ ಕೇಳಿ ಶಿವನು ಸಿಟ್ಟಿನಿಂದ ತನ್ನ ಜಟೆಯಿಂದ ಒಂದು ಹಿಡಿ ಕೂದಲನ್ನು ಚೆಲ್ಲಲು ಒಂದು ಭಯಂಕರ ಶಕ್ತಿಯು ಅಲ್ಲಿ ಜನಿಸಿತು. ಆ ಶಕ್ತಿಯೇ ವೀರಭದ್ರ. ಇವನು ಶಿವನ ಆಜ್ಞೆಯಂತೆ ದಕ್ಷನ ಯಜ್ಞಶಾಲೆಯನ್ನು ಹೊಕ್ಕು ಆತನ ತಲೆಯನ್ನು ಕತ್ತಿರಿಸಿ, ದಕ್ಷಿಣಾಗ್ನಿಯಲ್ಲಿ ಚೆಲ್ಲಿದನು. ಇವನು ಆ ಯಜ್ಞಶಾಲೆಯಲ್ಲಿ ಭಗನ ಕಣ್ಣುಗಳನ್ನು ಕಿತ್ತನು. ಸೂರ್ಯನ ಹಲ್ಲುಗಳನ್ನು ಉದುರಿಸಿದನು. ಚಂದ್ರನನ್ನು ಕಾಲಿನಿಂದ ಒದೆದು ಪುಡಿ ಪುಡಿ ಮಾಡಿದನು. ಇಂದ್ರನ ಶಾಲೆಯನ್ನು ಕೆಡವಿದನು. ಯಮನ ದಂಡಾಯುಧವನ್ನು ಮುರಿದನು. ಅಗ್ನಿಯ ನಾಲಿಗೆಯನ್ನು ಕಿತ್ತು, ಕೈಗಳನ್ನು ಮುರಿದನು. ಮೂರು ಸಾವಿರದ ಮುನ್ನೂರು ದೇವತೆಗಳನ್ನು ಸುಲಭವಾಗಿ ಕೊಂದು ವಿಷ್ಣುವಿನ ಬಿಲ್ಲನ್ನು ಮುರಿದು, ಆತನ ರುಂಡವನ್ನು ಕತ್ತರಿಸಿದನು. ಕೊನೆಗೆ ಚತುರ್ಮುಖನ ಪ್ರಾರ್ಥನೆಯಂತೆ ಎಲ್ಲರೂ ಬದುಕಿದರು.[೬] ವೀರಭದ್ರನು ದೈವಶಕ್ತಿಯೂ ಆಗಿದ್ದಾನೆ ಹಾಗೂ ಕ್ಷೇತ್ರಪಾಲನಂತೆ ದೇವಿಯ ಭಕ್ತನೂ ಆಗಿದ್ದಾನೆ.

---

೬. ಯಜ್ಞ ನಾರಾಯಣ ಉಡುಪ : ಪುರಾಣ ಭಾರತಕೋಶ, ಪುಟ ೫೯೧

ಇಲ್ಲಿ ಚಿತ್ರಿತಗೊಂಡಿರುವ ಎರಡೂ, 'ವೀರಭದ್ರ' ದೇವತೆಯ ಚಿತ್ರಗಳು ಮೈಸೂರು ಹಾಗೂ ತಂಜಾವೂರು ಸಂಪ್ರದಾಯ ಶೈಲಿಯ ಪ್ರತಿಕೃತಿಗೊಂಡ ಚಿತ್ರಗಳಾಗಿವೆ. ಎರಡೂ ಚಿತ್ರಗಳ ರಚನೆಕಾರರು ಬೇರೆ ಬೇರೆ ಯಾಗಿದ್ದರೂ ಇಬ್ಬರ ಆಶಯಗಳು ಒಂದೇಯಾಗಿವೆ. ಚಿತ್ರಸಂಖ್ಯೆ ೨೫, ೨೮ x ೩೨ ೧/೨ ಸೆಂ. ಮೀ. ಅಳತೆಯನ್ನು ಹೊಂದಿದ್ದು, ಇದು ಗುಳೇದಗುಡ್ಡದ ಬಸವಪ್ರಭು ಗಂಗಾವತಿಯವರ ಮನೆಯಲ್ಲಿ ಲಭ್ಯವಿದೆ. ಚಿತ್ರಸಂಖ್ಯೆ ೨೬, ೨೫ ೧/೨ x ೩೦ ೧/೨ ಸೆಂ.ಮಿ ಅಳತೆಯನ್ನು ಹೊಂದಿದ್ದು, ಇದು ಧರ್ಮಸ್ಥಳದ 'ಮಂಜುಷಾ' ವಸ್ತು ಸಂಗ್ರಹಾಲಯದಲ್ಲಿದೆ.

ಚಿತ್ರಸಂಖ್ಯೆ ೨೫ ರಲ್ಲಿ ವೀರಭದ್ರನು ಆರು ಕೈಗಳನ್ನು ಹೊಂದಿದ್ದು, ಆರು ಕೈಗಳ ಪೈಕಿ ಬಲಗೈಗಳಲ್ಲಿ ಕತ್ತಿ, ತ್ರಿಶೂಲ, ಪರಶು, ಎಡಗೈಗಳಲ್ಲಿ ಗುರಾಣಿ, ಡಮರು, ಗದೆಗಳನ್ನು ಹಿಡಿದು ಶಕ್ತಿಯನ್ನು ವ್ಯಕ್ತಪಡಿಸುತ್ತಿರುವಂತೆ ಬಿಂಬಿತವಾಗಿದ್ದಾನೆ. ಇಲ್ಲಿ ಸಾಮಾನ್ಯವಾಗಿ ಕ್ರೋಧವನ್ನು ಹುಟ್ಟಿಸುವಂತಹ ರಕ್ತ ಕೆಂಪು ವರ್ಣವನ್ನು ವೀರಭದ್ರನಿಗೆ ಲೇಪನಮಾಡಿದ್ದು, ಅವನು ಸಂಹಾರಕ್ಕೆ ಹೊರಟು ನಿಂತಿರುವ ಭಾವ ಭಂಗಿಯಲ್ಲಿ ಕಲಾವಿದನು ಚಿತ್ರಿಸಿದ್ದಾನೆ. ವೀರಭದ್ರನ ಇಡೀ ಮೈಗೆ ವಿಭೂತಿಯನ್ನು ಬಳಿಯಲಾಗಿದ್ದು, ಅವನ ಕಣ್ಣು ಹಾಗೂ ಹುರಿಮೀಸೆಯಿಂದ ಕೋಪವು ಅಗ್ನಿ ಜ್ವಾಲೆಯಾಗಿ ಹೊರಹೊಮ್ಮುತ್ತಿರುವಂತೆ ಅಭಿವ್ಯಕ್ತ ಪಡಿಸಲಾಗಿದೆ. ಕಿರೀಟಾಭರಣಗಳಿಂದ ಭೂಷಿತನಾಗಿದ್ದು, ಹಸಿರು ವರ್ಣದ ಉತ್ತರಿಯವನ್ನು ಧರಿಸಿರುವನು. ವೀರಭದ್ರನ ಶಿರದ ಹಿಂದೆ ಅಗ್ನಿಯು ಉರಿಯುತ್ತಿದ್ದು, ಅವನ ಕೋಪ ಹಾಗೂ ಶಕ್ತಿಯನ್ನು ಪ್ರತಿನಿಧಿಸುತ್ತಿವೆ.

ಚಿತ್ರ ೨೬ ರಲ್ಲಿ ವೀರಭದ್ರನನ್ನು ಶ್ವೇತವರ್ಣದಿಂದ ಸಂಯೋಜನೆಗೊಳಿಸಲಾಗಿದ್ದು, ಇಲ್ಲಿ ಚತುರ್ಭುಜಧಾರಿಯಾಗಿದ್ದಾನೆ. ನಾಲ್ಕೂ ಕೈಗಳಲ್ಲಿ ಖಡ್ಗ, ಗದೆ, ಗುರಾಣಿ ಹಾಗೂ ಪರಶುಗಳನ್ನು ಹಿಡಿದು ಅಧರ್ಮವನ್ನು ದಮನ ಮಾಡಲು ಹೊರಟಿರುವಂತೆ ಕಲಾವಿದನು ಅಭಿವ್ಯಕ್ತಪಡಿಸಿದ್ದಾನೆ. ಈ ಚಿತ್ರದಲ್ಲಿ ಶ್ವೇತವರ್ಣವೂ ಶಾಂತವನ್ನು ಸೂಚಿಸುವ ವರ್ಣವಾಗಿದ್ದರೂ ಅದನ್ನು ವೀರಭದ್ರನಿಗೆ ಕಲಾವಿದನು ಲೇಪನ ಮಾಡಿದ್ದಾನೆ. ಅಂದರೆ ಇವನು ವರ್ಣಗಳ ಪರಿಕಲ್ಪನೆಯನ್ನು ಕಂಡುಕೊಳ್ಳದೇ ಸೌಂದರ್ಯದ ದೃಷ್ಟಿಯಲ್ಲಿ ಸಂಯೋಜನೆ ಮಾಡಿದ್ದಾನೆ. ಅವನ ಹಿನ್ನೆಲೆಯಲ್ಲಿ ರಕ್ತವರ್ಣವನ್ನು ಲೇಪನ ಮಾಡಿದ್ದಾನೆ. ಮುಖದಲ್ಲಿ ಮಂದಹಾಸ, ಕಣ್ಣುಗಳಲ್ಲಿ ಪ್ರಸನ್ನತೆಯನ್ನು ಹೊರಸೂಸುತ್ತಿರುವಂತೆ ಶಾಂತ ಚಿತ್ತಸ್ವರೂಪವನ್ನು ಕಲಾವಿದನು ಈ ಮೂಲಕ ಅಭಿವ್ಯಕ್ತ ಮಾಡಿದ್ದಾನೆ. ಚಿತ್ರದಲ್ಲಿ ವೀರಭದ್ರನ ಸ್ವರೂಪವು ಮೂಡಿ ಬರದಿದ್ದರೂ ಸಹಿತ ರೇಖೆ, ವರ್ಣ ಹಾಗೂ ಸಂಯೋಜನೆಯಲ್ಲಿ ವೀರ ರಸವು ಒಡಮೂಡಿದೆ. ಅವನ ದಪ್ಪ ಮೀಸೆ ಹಾಗೂ ಹೊರಟಿರುವ ಭಂಗಿಯು ಶಕ್ತಿಯುತ, ಬಲಾಢ್ಯ ದೇವರೆಂದು ತಿಳಿಯಬಹುದಾಗಿದೆ. ಎರಡು ಚಿತ್ರಗಳಲ್ಲಿ ವೀರಭದ್ರನನ್ನು ಏಕವ್ಯಕ್ತಿಯಾಗಿ ರೂಪಿಸಿದ್ದು, ಇಲ್ಲಿ ಶಿವನ ರೌದ್ರವತಾರದ ಇತರೆ ಸನ್ನಿವೇಶವನ್ನು ಸಂಯೋಜನೆಗೊಳಿಸಿರುವುದಿಲ್ಲ. ಇಲ್ಲಿ ಈ ಇಬ್ಬರೂ ಕಲಾವಿದರೂ ಆ ದೇವತೆಯ ಶಕ್ತಿ ಸ್ವರೂಪವನ್ನು ಮಾತ್ರ ತೋರಿಸಲು ಪ್ರಯತ್ನಿಸಿದ್ದಾರೆ. ಎರಡೂ ಚಿತ್ರಗಳಲ್ಲಿ ದೇವತೆಯ ಸುತ್ತಲೂ ಹೂವು ಮತ್ತು ಎಲೆಗಳನ್ನೊಳಗೊಂಡ ನಕ್ಷೆಯ ಅಂಚನ್ನು ಚಿತ್ರಿಸಿದ್ದಾರೆ. ಈ ಎರಡೂ ಚಿತ್ರಗಳಲ್ಲಿ ರೇಖೆ ಹಾಗೂ ವರ್ಣವಿಧಾನದಲ್ಲಿ ಸೂಕ್ಷ್ಮತೇ. ಸಾವಿಣ್ಯತೆ ಪ್ರದರ್ಶನವಾಗದಿದ್ದರೂ ಅಲಂಕಾರ ಭಾವನೆಯು ಸೃಜನಗೊಂಡಿದೆ.

**ಚಿತ್ರಸಂಖ್ಯೆ ೨೭ ಮೀನಾಕ್ಷಿ ಶಿವ (ಲಿಂಗರೂಪ)**

ಇಲ್ಲಿ ಕಲಾವಿದರು ತಂಜಾವೂರು ಸಾಂಪ್ರದಾಯ ಶೈಲಿಯ ಚಿತ್ರವನ್ನು ಕರಡು ಮಾಡಿಕೊಂಡು ಮಿತವರ್ಣಗಳಿಂದ ಈ ಗಾಜಿನ ಚಿತ್ರವನ್ನು ಸಂಯೋಜನೆ ಮಾಡಿದ್ದಾರೆ. ಚಿತ್ರದಲ್ಲಿ ಶಿವನು ಲಿಂಗರೂಪಿಯಾಗಿದ್ದು ಆ ಲಿಂಗ ಪೀಠದ ಕೆಳಭಾಗದಲ್ಲಿ ನಂದಿಯ ಚಿತ್ರವಿದೆ. ಶಿವಲಿಂಗವನ್ನು ಫಲಪುಷ್ಪಗಳಿಂದ ಅಲಂಕರಿಸಿದ್ದು, ಪಂಚ ಹೆಡೆಯುಳ್ಳ ಶೇಷವು ಛತ್ರಿಯಂತೆ ರಕ್ಷಣೆಯನ್ನು ನೀಡಿದೆ. ಮೀನಾಕ್ಷಿಯು ಚತುರ್ಭುಜ ಹೊಂದಿದ್ದು ಸಾಂಪ್ರದಾಯಿಕ ಸೀರೆ, ಕಿರೀಟ, ಆಭರಣಗಳಿಂದ ಸರ್ವಭೂಷಿತಳಾಗಿ ನಿಂತಿರುವಳು. ಹಸಿರು ವರ್ಣದ ಮೈಬಣ್ಣ ಹಾಗೂ ಗುಲಾಬಿ ವರ್ಣದ ಉಡುಪುಗಳಿಂದ ಸಂಯೋಜನೆ ಗೊಂಡಿರುವಳು.

ಮೀನಾಕ್ಷಿಯು ಎರಡು ಕೈಗಳಲ್ಲಿ ತಾವರೆಯನ್ನು ಹಿಡಿದಿದ್ದು ಇನ್ನೆರಡು ಕೈಗಳನ್ನು ಅಭಯ ಹಸ್ತ ಸೂಚಕವಾಗಿ ಹಿಡಿದಿರುವಳು. ಶಿವನನ್ನು ಲಿಂಗ ರೂಪದಲ್ಲಿ ಚಿತ್ರಿಸಿದ್ದರೂ ಸಹಿತ ಕಣ್ಣು, ಮೂಗು, ಬಾಯಿ, ಹಣೆಯ ಮೇಲೆ ವಿಭೂತಿ ಹಾಗೂ ಸಿಂಧೂರವನ್ನು ನೀಡಿ ಶಿವ ಸ್ವರೂಪವನ್ನು ತರಲಾಗಿದೆ. ಶಿವಲಿಂಗವನ್ನು ನೀಲಿ ಬಣ್ಣದಿಂದ ಲೇಪನ ಮಾಡಲಾಗಿದೆ. ಶಿವನು ಲಿಂಗರೂಪದಲ್ಲಿದ್ದರೂ ಅವನ ಉಗ್ರತೆ, ಶಕ್ತಿ ಹಾಗೂ ಸಮಚಿತ್ತ ಭಾವವನ್ನು ಇಲ್ಲಿ ಕಲಾವಿದನು ಕಲ್ಪಿಸಿದ್ದಾನೆ.

ಚಿತ್ರದ ಹಿನ್ನೆಲೆಯಲ್ಲಿ ಅರ್ಧ ಚಂದ್ರಾಕೃತಿಯ ಮಂಟಪದ ಅಲಂಕಾರ ವಿನ್ಯಾಸವನ್ನು ಚಿತ್ರಿಸಲಾಗಿದೆ. ಇದು ಏಕವರ್ಣದಿಂದ ಕೂಡಿದ್ದರೂ ಬಟ್ಟೆಯ ವಿನ್ಯಾಸವು ಎದ್ದು ತೋರುತ್ತದೆ. ಚಿತ್ರವು ಎದ್ದು ಬರುವಂತೆ ಕಪ್ಪು ವರ್ಣವನ್ನು ಹಿನ್ನೆಲೆಯಾಗಿ ಲೇಪನ ಮಾಡಲಾಗಿದೆ. ಚಿತ್ರವು ಜನಪದಿಯ ಅಂಶಗಳನ್ನು ಮೈಗೂಡಿಸಿಕೊಂಡು ಸಿದ್ಧಗೊಂಡಿದೆ. ಇಲ್ಲಿ ವರ್ಣಗಳ ಪರಿಜ್ಞಾನ, ಹಿನ್ನೆಲೆಯ ವಸ್ತುಗಳ ಸಂಯೋಜನೆ, ರೇಖಾ ವಿನ್ಯಾಸ, ಅದರ ಸೂಕ್ಷ್ಮತೆ, ದಟ್ಟತೆ ಅತ್ಯಂತ ಗೌಣವಾಗಿ ಮೂಡಿಬಂದಿವೆ. ಇದು ಒಬ್ಬ ವೃತ್ತಿಪರ ಕಲಾವಿದನಿಂದ ರಚನೆಗೊಂಡಿರುವಂತೆ ತೋರುವುದಿಲ್ಲ. ಒಬ್ಬ ಹವ್ಯಾಸಿ ಕಲಾವಿದನಿಂದ ರೂಪಗೊಂಡಿದೆ ಎನ್ನಬಹುದು. ಇಲ್ಲಿ ಬಳಸಿರುವ ರೇಖೆ ಹಾಗೂ ವಿಷಯ ಸಂಯೋನೆಯೂ ಅಷ್ಟೊಂದು ಪ್ರಬುದ್ಧವಾಗಿ ಮೂಡಿಬಂದಿಲ್ಲ.

**ಚಿತ್ರಸಂಖ್ಯೆ ೨೮, ೨೯, ೩೦, ೩೧ ಮದುರೈವೀರ/ ಮೈಲಾರಲಿಂಗ/ ಮಾಲತೇಶ/ ಖಂಡೋಬ**

ಇಲ್ಲಿ ರಚನೆಗೊಂಡಿರುವ ಗಾಜಿನ ಚಿತ್ರಗಳು ಶೈವ ಸಂಪ್ರದಾಯದ ಪ್ರಸಿದ್ಧ ದೇವತೆಯ ವಿಷಯವನ್ನು (ವೃತ್ತಾಂತವನ್ನು) ತಿಳಿಸುತ್ತವೆ. ಈ ಚಿತ್ರಗಳನ್ನು ಆಧರಿಸಿ ಕರ್ನಾಟಕ, ಮಹಾರಾಷ್ಟ್ರ ಹಾಗೂ ತಮಿಳುನಾಡು ಪ್ರದೇಶಗಳಲ್ಲಿ ಪ್ರಸ್ತುತವಿರುವ ಪುರಾಣ ಪ್ರಸಂಗಗಳನ್ನು ಅರಿಯಬಹುದಾಗಿದೆ. ಕರ್ನಾಟಕದಲ್ಲಿ ಮೈಲಾರ ದೇವರು, ಮಹಾರಾಷ್ಟ್ರದಲ್ಲಿ ಖಂಡೋಬಾ ದೇವರು ಹಾಗೂ ತಮಿಳುನಾಡಿನ ಮದುರೈನ ಪ್ರಸಿದ್ಧ ವ್ಯಕ್ತಿಯ ಕಥೆಗಳು ಗೋಚರವಾಗುತ್ತದೆ. (ಕಥೆಗಳನ್ನು ತಿಳಿಸಿ ಕೊಡುತ್ತವೆ) ಕರ್ನಾಟಕದಲ್ಲಿರುವ ಮಣ್ಣು ಮೈಲಾರ ದೇವತೆಯ ಹೆಂಡತಿಯರನ್ನು ಗಂಗಿ ಮಾಳವ್ವ ಮತ್ತು ತುಪ್ಪದ ಮಾಳವ್ವ ಎಂದು ಕರೆಯುತ್ತಿದ್ದರೆ, ಮಹಾರಾಷ್ಟ್ರದ ಖಂಡೋಬಾ ದೇವರ ಹೆಂಡತಿಯರನ್ನು ಮಾಳಸಾ ಹಾಗೂ ಬಾನುಬಾಯಿ ಎಂದು ಕರೆಯುತ್ತಾರೆ. ಖಂಡೋಬಾ ಎಂದರೆ ಶಂಕರ,

ಭೈರವ, ಮಾರ್ತಂಡ, ಮಲ್ಲಾರಿ, ಮ್ಹಾಳಸಾಕಾಂತ ಹೀಗೆ ಹಲವಾರು ಹೆಸರುಗಳಿಂದ ಕರೆಯಲಾಗುತ್ತಿದೆ. ಈ ದೇವರ ಕುರಿತು ಮಹಾರಾಷ್ಟ್ರದಲ್ಲಿ ಅನೇಕ ಜಾನಪದ ಕಥೆಗಳು , ಹಾಡುಗಳು, ಒಗಟುಗಳು ಸಿಗುತ್ತವೆ.[೭] ಕರ್ನಾಟಕದಲ್ಲಿಯೂ ಸಹ ಮೈಲಾರ ದೇವರ ಕುರಿತು ಸಾಕಷ್ಟು ವಿವರಗಳು ದೊರೆಯುತ್ತವೆ. ಈ ದೇವರ ಕುರಿತು ಪ್ರಸಂಗಗಳು ಏನೇ ಇದ್ದರೂ ಆಶಯಗಳು ಒಂದೇಯಾಗಿವೆ. ಇಲ್ಲಿ ಲಭ್ಯವಿರುವ ಈ ಚಿತ್ರಗಳು ಆಯಾ ಪ್ರದೇಶದ ಜನರ ದೈಹಿಕ ಲಕ್ಷಣಗಳು ಹಾಗೂ ಉಡುಪುಗಳನ್ನು ಆಧರಿಸಿಕೊಂಡು ವಿವೇಚನೆ ಮಾಡಲಾಗಿದೆ. ಎಲ್ಲ ಚಿತ್ರಗಳ ವಿಷಯಗಳ ಮುಖ್ಯ ಉದ್ದೇಶ ಆ ದೇವತೆಯ ದಿಗ್ವಿಜಯದ ಸಂಕೇತವನ್ನು ಸೂಚಿಸುತ್ತವೆ. ಈ ದೇವರುಗಳ ಕಥೆಗಳನ್ನಾಧರಿಸಿ ಗಾಜಿನ ಚಿತ್ರಗಳು ಸಾಕಷ್ಟು ಸಂಖ್ಯೆಗಳಲ್ಲಿ ಪ್ರತಿರೂಪಗೊಂಡಿರುವುದಾದರೂ ನನಗೆ ಲಭ್ಯವಾದ ಈ ನಾಲ್ಕು ಕೃತಿಗಳನ್ನು ಕುರಿತು ವಿವೇಚನೆ ಮಾಡಲು ಪ್ರಯತ್ನಿಸುತ್ತೇನೆ.

ಚಿತ್ರ ಸಂಖ್ಯೆ ೨೮ ಇದು ಅಮೀನಗಡದ ಮುತ್ತಣ್ಣ ಗರಡಿಯವರ ಮನೆಯಲ್ಲಿ ಲಭ್ಯವಿದೆ. ಚಿತ್ರ ಸಂಖ್ಯೆ ೨೯ ಇದು ಬಾಗಲಕೋಟೆಯ ಹೊಕ್ರಾಣಿಯವರ ಮನೆಯಲ್ಲಿ ಲಭ್ಯವಿದೆ. ಚಿತ್ರಸಂಖ್ಯೆ ೩೦, ಈ ಚಿತ್ರವು ಹುಮನಾಬಾದದ ಬಾಲಾಜಿ ಮಂದಿರದಲ್ಲಿ ಲಭ್ಯವಿದೆ ಹಾಗೂ ಚಿತ್ರಸಂಖ್ಯೆ ೩೧ ಇದು ಮೈಸೂರು ವಿಶ್ವವಿದ್ಯಾಲಯ ಜನಪದ ವಸ್ತು ಸಂಗ್ರಹಾಲಯದಲ್ಲಿರುವ ಶಿವಮೊಗ್ಗಾ ಪ್ರದೇಶದಿಂದ ಸಂಗ್ರಹಿಸಲಾದ ಗೊಂಬೆ ಮಂಟಪದ ಚೌಕಾನೆಯಲ್ಲಿ ಅಳವಡಿಸಲಾಗಿದೆ. ಈ ನಾಲ್ಕೂ ಚಿತ್ರಗಳು ವಿಭಿನ್ನ ಅಳತೆಯನ್ನು ಹೊಂದಿವೆ ಹಾಗೂ ರಚನಾ ವಿಧಾನದಲ್ಲಿ ವೈರುಧ್ಯತೆಯನ್ನು ತರಲಾಗಿದೆ.

ಚಿತ್ರ ಸಂಖ್ಯೆ : ೨೮ ಇಲ್ಲಿ ದ್ವಿಭುಜಧಾರಿಯಾದ ಮೈಲಾರ ಅಥವಾ ಖಂಡೋಬನು ಆಕರ್ಷಕ ದೇಹ ಸಿರಿಯನ್ನು ಹೊಂದಿದ್ದು, ತಲೆಯ ಮೇಲೆ ರುಮಾಲು ಚೂಪು ಮೀಸೆ(ಕೋರೆ ಮೀಸೆ), ಬಟ್ಟಲು ಕಂಗಳಲ್ಲಿ ದಿಟ್ಟತನ ಹಾಗೂ ಸರ್ವಾಭರಣಗಳಿಂದ ಭೂಷಿತನಾಗಿದ್ದಾನೆ. ಇಬ್ಬರೂ ಹೆಂಡಿರ ಪೈಕಿ ಒಬ್ಬಳನ್ನು ಎಡಗೈ ಬಾಹುಗಳಿಂದ ಬಂಧಿಸಿ ತನ್ನ ತೊಡೆಯ ಮೇಲೆ ಕೂಡಿಸಿಕೊಂಡಿದ್ದು ಇನ್ನೊಬ್ಬಳನ್ನು ತನ್ನ ಮುಂದೆ ಕೂಡಿಸಿಕೊಂಡಿದ್ದಾನೆ. ಇಬ್ಬರನ್ನೂ ಶ್ವೇತವರ್ಣದ ವಿಶಿಷ್ಟ ಕುದುರೆಯ ಮೇಲೆ ಕೂಡಿಸಿಕೊಂಡು ಹೊರಟಿರುವನು, ಇಲ್ಲಿ ಈ ವೀರನು ಇಬ್ಬರನ್ನೂ ಗೆದ್ದುಕೊಂಡು ದಿಗ್ವಿಜಯ ಸಾಧಿಸಿದಂತೆ ಕಲಾವಿದನು ಅಭಿವ್ಯಕ್ತಗೊಳಿಸಿದ್ದಾನೆ. ಮೈಲಾರನು ಅನೇಕ ವೇಳೆ ವೇಷಮರೆಸಿಕೊಂಡು ಹೆಣ್ಣುಮಕ್ಕಳನ್ನು ಗೆದ್ದು ತಂದಿರುವ ಕಥೆಗಳು ಇವನ ಚರಿತ್ರೆಯಿಂದ ಸಿಗುತ್ತವೆ.

ಈ ಚಿತ್ರದಲ್ಲಿ ಮೈಲಾರನು ದೊಗಳೆ ಅಂಗಿ ಹಾಗೂ ಹಳದಿ ವರ್ಣದ ಧೋತಿಯನ್ನು ಧರಿಸಿದ್ದು, ಗುಲಾಬಿ ವರ್ಣದ ಮೈಬಣ್ಣವನ್ನು ಹೊಂದಿರುವನು. ಇವನ ಹೆಂಡತಿಯರು ಬಂಗಾರ ಹಾಗೂ ಕೆಂಪು ಬಣ್ಣಗಳ ಮಿಶ್ರಿತ ಪಟ್ಟಿಗಳನ್ನು ಹೊಂದಿರುವ ಮರಾಠ ಸಂಪ್ರದಾಯ ಶೈಲಿಯ ಸೀರೆಯನ್ನು ಧರಿಸಿದ್ದಾರೆ. ಇಲ್ಲಿ ಕುದುರೆಯ ಚಲನೆಯನ್ನೂ, ಅದರ ಶಕ್ತಿಯನ್ನು ಕಣ್ಣು ಹಾಗೂ ಮೂಗುಗಳಿಂದ ಕೆರಳುವ ಭಾವವನ್ನು ಕಲಾವಿದನು ಉತ್ತಮವಾಗಿ ನಿರೂಪಿಸಿದ್ದಾನೆ. ಕುದುರೆಯನ್ನು ಆಭರಣಗಳಿಂದ ಅಲಂಕಾರಗೊಳಿಸಲಾಗಿದೆ. ಇಲ್ಲಿ ಇಬ್ಬರು ಸೇವಕರು ಚಿತ್ರಿತಗೊಂಡಿದ್ದು, ಒಬ್ಬನು

---

೭. ಶರೋಜಿನಿ ಬಾಬರ್ , ಮಹಾರಾಷ್ಟ್ರದ ಜನಪದ ಸಾಹಿತ್ಯ, ಪುಟ ೪೫-೪೬ (ಹೆಚ್ಚಿನ ವಿವರಣೆಗಾಗಿ ನೋಡಿ)

ಕಹಳೆಯನ್ನು ಊದುತ್ತಿದ್ದು ಇನ್ನೊಬ್ಬನು ವೃತ್ತಾಕಾರದ ಬಾವುಟವನ್ನು ಹಿಡಿದು ಕೊಂಡಿರುವನು. ಇವರೂ ಸಹಿತ ದೈಹಿಕವಾಗಿ ಸದೃಢರಾಗಿದ್ದು ಕೆಂಪು ಬಣ್ಣದ ವಸ್ತ್ರವನ್ನು ಸುತ್ತಿಕೊಂಡಿರುವರು. ಮಿತವಾದ ಆಭರಣ ಧರಿಸಿ, ಅರೆನಗ್ನರಾಗಿದ್ದಾರೆ. ಇವರ ಮುಖ ಲಕ್ಷಣಗಳಲ್ಲಿ ದಿಟ್ಟತನ ಎದ್ದು ತೋರುತ್ತದೆ. ಚಿತ್ರದ ಹಿನ್ನೆಲೆಯಲ್ಲಿ ಇವರನ್ನು ಹಿಂಬಾಲಿಸುತ್ತಿರುವ ಜೋಡು ಶ್ವಾನಗಳು ನೀಲಿ ಮಿಶ್ರಿತ ಶ್ವೇತ ವರ್ಣದಿಂದ ಸಂಯೋಜನೆಗೊಂಡಿವೆ. ಜೊತೆಗೆ ಖಾದ್ಯ ತುಂಬಿದ ಬಾಟಲಗಳು ಹಾಗೂ ಬೆಟ್ಟಗಳ ಕಲ್ಪನೆಯಂತೆ ಕೆಂಪು ವರ್ಣದ ಭೂ ದೃಶ್ಯವನ್ನು ಚಿತ್ರಿಸಲಾಗಿದೆ. ಹಿನ್ನೆಲೆಯ ಪರಿಸರವನ್ನು ಕಪ್ಪು ವರ್ಣದಿಂದ ಲೇಪನ ಮಾಡಲಾಗಿದೆ. ಇದರ ಜೊತೆಗೆ ಕೆಂಪು ಬಾವುಟ ಹಾಗೂ ಅಲಂಕೃತ ಛತ್ರಿಯು ಸಹ ಕಂಗೊಳಿಸುವಂತೆ ಚಿತ್ರಕಲಾವಿದನು ಸಂಯೋಜಿಸಿದ್ದಾನೆ.

ಈ ಚಿತ್ರದ ಒಟ್ಟಾರೆ ಆಕೃತಿಗಳ ದೈಹಿಕ ಲಕ್ಷಣಗಳು ಉಡುಗೆ, ತೊಡುಗೆಗಳು, ವಸ್ತುಗಳ ಸಂಯೋಜನೆಗಳು, ಆಭರಣ ವಿನ್ಯಾಸಗಳು ಮರಾಠಿಗರ ಸಂಪ್ರದಾಯ ಹಾಗೂ ಸಂಸ್ಕೃತಿಯನ್ನು ಸಾರುತ್ತವೆ. ಇದು ಅವರ ಕಾಲಾವಧಿಯಲ್ಲೆ ನಿರ್ಮಾಣಗೊಂಡಿರಬಹುದು. ರೇಖೆಯಲ್ಲಿ ಚಲನೆ, ಮಿತವಾದ ವರ್ಣಗಳ ಬಳಕೆ, ವಸ್ತುಗಳ ಜೋಡಣೆ, ಭಾವ ನಿರೂಪಣೆಯೂ ಭಾರತೀಯ ಚಿತ್ರಷಡಂಗಳಂತೆ ರಚನೆಗೊಳ್ಳದಿದ್ದರೂ ಆಕರ್ಷಕವಾಗಿ ನೋಡುಗರನ್ನು ಮುಗ್ಧಗೊಳಿಸುತ್ತದೆ.

ಚಿತ್ರ ೨೯ ಇಲ್ಲಿ ಮುಖ್ಯ ವ್ಯಕ್ತಿಯಾದ ಮೈಲಾರನು ಜಟಾಯುಕ್ತನಾಗಿದ್ದು, ಕೆಂಪು ಬಣ್ಣದ ಬಟ್ಟೆಯನ್ನು ಬಿಗಿದಿರುವನು. ಅದಕ್ಕೆ ಆಭರಣಗಳ ಅಲಂಕಾರವು ಇದೆ. ಹಳದಿ ಬಣ್ಣದ ಧೋತಿಯನ್ನು ಧರಿಸಿ, ನಡುವಿಗೆ ಕೆಂಪು ಶಲ್ಯವನ್ನು ಕಟ್ಟಿಕೊಂಡಿದ್ದಾನೆ, ಜೊತೆಗೆ ಗೆಜ್ಜೆ ಸರವನ್ನು ನಡುಪಟ್ಟಿಯಾಗಿ ಬಿಗಿದು ಕೊಂಡಿರುವನು. ಇವನು ಮೈಮೇಲೆ ಯಾವುದೇ ಬಟ್ಟೆಯನ್ನು ಧರಿಸಿಲ್ಲ, ಹೆಗಲ ಮೇಲೆ ಹಸಿರು ಬಣ್ಣದ ಉತ್ತರಿಯವನ್ನು ಹಾಕಿಕೊಂಡಿದ್ದಾನೆ. ಒಂದು ಕೈಯಲ್ಲಿ ಕುದುರೆಯ ಲಗಾಮು ಇನ್ನೊಂದು ಕೈಯಲ್ಲಿ ಭರ್ಚಿಯನ್ನು ಹಿಡಿದು ಚಲನೆ ಮಾಡುತ್ತಿರುವಂತೆ ಕಲಾವಿದನು ಚಿತ್ರಿಸಿದ್ದಾನೆ. ಆರೋಗ್ಯಕರ ಹಾಗೂ ಬಲಿಷ್ಠ ಮೈಕಟ್ಟುನ್ನು ಹೊಂದಿದ್ದು, ದೊಡ್ಡ ಕಣ್ಣುಗಳಲ್ಲಿ ತೀಕ್ಷ್ಣನೊಟ, ಕೆಂದುಟಿ, ಖಡು ಕಪ್ಪು ವರ್ಣದ ದಪ್ಪ ಮೀಸೆ (ಸುರಳಿ ಸುತ್ತಿದ ಮೀಸೆ) ಕೆಂಪು ಬಣ್ಣದ ಅಡ್ಡಡ್ಡವಾಗಿ ಎಳೆಯಲಾದ ಸಿಂಧೂರವು ಅವನ ಶಕ್ತಿ ಸಾಹಸವನ್ನು ಹೊರಹಾಕುತ್ತವೆ.

ಈ ಚಿತ್ರದಲ್ಲಿಯೂ ಸಹಿತ ಒಬ್ಬ ಪತ್ನಿಯನ್ನು ಎಡಗೈ ಬಾಹವಿನಿಂದ ಬಿಗಿಯಾಗಿ ಬಂಧಿಸಿದ್ದು, ಇನ್ನೊರ್ವ ಪತ್ನಿಯನ್ನು ಕುದುರೆಯ ಶಿರದ ಮೇಲೆ ಕುಳ್ಳಿರಿಸಿರುವನು. ಈ ಚಿತ್ರದಲ್ಲಿ ಚಿತ್ರಿತಗೊಂಡಿರುವ ಕುದುರೆಯು ಚಿತ್ರ ೨೮ ರಲ್ಲಿರುವ ಕುದುರೆಗಿಂತ ಚಲನೆಯುಕ್ತವಾಗಿದೆ. ಚಿತ್ರದಲ್ಲಿ ಕುದುರೆಯನ್ನು ವಿಭಿನ್ನವಾಗಿ ಅಲಂಕರಿಸಿದ್ದು, ವಿಶೇಷವಾಗಿ, ಅದರ ಕಾಲುಗಳಿಗೆ ಕೆಂಪು ವರ್ಣದ ಕಾಲುಚೀಲಗಳಂತೆ ಪಟ್ಟಿಯನ್ನು ರಚಿಸಿದೆ. ಇದೇ ವಿವರಣೆಯನ್ನು ಚಿತ್ರಸಂಖ್ಯೆ ೩೧ ರಲ್ಲಿನ ಕುದುರೆಯಲ್ಲಿ ಕಾಣುತ್ತೇವೆ. ಎರಡು ಚಿತ್ರಗಳಲ್ಲಿ ಕುದುರೆಯು ನೆಲಮಟ್ಟದಿಂದ ನೆಗೆಯುತ್ತಿರುವಂತೆ ಬಿಂಬಿತವಾಗಿವೆ. ಕುದುರೆಗಳನ್ನು ನೀಲಿ ಮಿಶ್ರಿತ ಬಿಳಿವರ್ಣದಿಂದ ಸಂಯೋಜನೆ ಗೊಳಿಸಲಾಗಿದ್ದು ಆ ಎರಡು ವರ್ಣಗಳ ಮಿಳಿತವೂ ವೈವಿಧ್ಯತೆಯಿಂದ ಕೂಡಿದೆ. ಚಿತ್ರ ೨೯ ರಲ್ಲಿನ ಕುದುರೆಯನ್ನು ಕೊರಳು ಪಟ್ಟಿ, ಗೆಜ್ಜೆಗಳ ಪಟ್ಟಿ, ಕೆಂಪು ತುರಾಯಿ, ಬಟ್ಟೆಯ ಅಲಂಕರಣ ಹಾಗೂ ಇನ್ನಿತರ

ಆಭರಣಗಳನ್ನು ವಿಶೇಷವಾಗಿ ಅಲಂಕರಿಸಲಾಗಿದೆ. ಮೈಲಾರನ ನೆತ್ತಿಯ ಮೇಲೆ ಅಲಂಕೃತ ವಿನ್ಯಾಸ ಹೊಂದಿದ ಛತ್ರಿಯೂ ಕಂಡು ಬರುತ್ತದೆ. ಮತ್ತು ಅವನ ಹಿಂಬಾಲಕರಾದ ಇಬ್ಬರೂ ಸೇವಕರು ಹಾಗೂ ಜೋಡು ಶ್ವಾನಗಳು ಚಲಿಸುತ್ತಿವೆ. ಇಬ್ಬರು ಸೇವಕರು ಬಾವುಟಗಳನ್ನು ಹಿಡಿದಿದ್ದು, ನಡುವಿಗೆ ಹಾಗೂ ತಲೆಗೆ ಬಟ್ಟೆಯನ್ನು ಸುತ್ತಿಕೊಂಡಿದ್ದಾರೆ. ಇಬ್ಬರೂ ಅರೆನಗ್ನರಾಗಿದ್ದು ಬಲಿಷ್ಠ ದೇಹ ಸಿರಿಯನ್ನು ಹೊಂದಿರುವರು. ಈ ಚಿತ್ರದಲ್ಲಿಯೂ ಸಹ ಕೆಂಪು ಹಾಗೂ ನೀಲಿ ಮಿಶ್ರಿತ ಬಣ್ಣಗಳಿಂದ ಭೂದೃಶ್ಯವನ್ನು ಚಿತ್ರಿಸಿದ್ದು, ಹಿನ್ನೆಲೆ ಕಪ್ಪು ಬಣ್ಣದಿಂದ ಲೇಪನಗೊಂಡಿದೆ. ಈ ಚಿತ್ರದಲ್ಲಿ ಆಕೃತಿಗಳ ಜೋಡಣೆ, ಪರಸ್ಪರ ಸಂಬಂಧಗಳಲ್ಲಿ ಪ್ರಬುದ್ಧತೆ ಇರದಿದ್ದರೂ ಇಲ್ಲಿ ಕಲಾವಿದನು ತನಗೆ ತಿಳಿದಂತೆ ಆಕೃತಿ, ವಸ್ತುಗಳು ಹಾಗೂ ವರ್ಣಗಳನ್ನು ಸಂಯೋಜನೆ ಮಾಡಿರುವನು. ಇಲ್ಲಿ ಸಾಮಾನ್ಯರು ಆಕರ್ಷಣೆಗೊಳ್ಳುವಂತೆ ರೂಪಗೊಳಿಸಲಾಗಿದೆ.

ಚಿತ್ರಸಂಖ್ಯೆ ೩೦ ಇಲ್ಲಿ ಮೈಲಾರನು ಸಾಂಪ್ರದಾಯಿಕ ಧೋತಿ, ಕೆಂಪು ಬಣ್ಣದ ಶಲ್ಯವನ್ನು ನಡುವಿಗೆ ಕಟ್ಟಿಕೊಂಡಿದ್ದು, ಜಟಾಮುಕುಟಕ್ಕೆ ಅಲಂಕೃತ ಕೆಂಪು ಬಟ್ಟೆಯನ್ನು ಕಟ್ಟಿಕೊಂಡಿರುವನು. ಇವನು ಅರೆನಗ್ನನಾಗಿದ್ದು ಗುಲಾಬಿ ಬಣ್ಣದ ಮೈಬಣ್ಣವನ್ನು ಹೊಂದಿರುವನು. ಜೊತೆಗೆ ಕೆಂಪು ಉತ್ತರಿಯವನ್ನು ಹೊದ್ದಿರುವನು. ಎಡಗೈ ಬಾಹುಗಳಲ್ಲಿ ಒಬ್ಬ ಪತ್ನಿಯನ್ನು ಬಿಗಿಯಾಗಿ ಬಂಧಿಸಿದ್ದು ಬಲಗೈಯಿಂದ ಭರ್ಚಿಯನ್ನು ಹಿಡಿದು ನುಗ್ಗುತ್ತಿರುವಂತೆ ಭಾವಭಂಗಿಯನ್ನು ಹೊಂದಿರುವನು. ಒಬ್ಬ ಪತ್ನಿಯನ್ನು ಕುದುರೆಯ ಮೇಲೆ ಕೂಡಿಸಿದ್ದು ಇವಳನ್ನು ಚಿಕ್ಕ ರೂಪದಲ್ಲಿ ಕಲಾವಿದನು ಚಿತ್ರಿಸಿರುವನು. ಈ ಕ್ರಮ ನಾಲ್ಕೂ ಚಿತ್ರಗಳಲ್ಲಿಯೂ ಮೂಡಿಬಂದಿದೆ. ಇಲ್ಲಿರುವ ಸ್ತ್ರೀಯು ಏನೋ ಸಂಭಾಷಣೆಯಲ್ಲಿ ತೊಡಗಿರುವಂತೆ ಕಲಾವಿದನು ಸೃಷ್ಟಿಸಿದ್ದಾನೆ. ಇಲ್ಲಿ ರೂಪಿತಗೊಂಡಿರುವ ಮೈಲಾರನ ವ್ಯಕ್ತಿತ್ವ ಹಾಗೂ ಬಹು ಗಾಂಭೀರ್ಯದಿಂದ ಮೂಡಿಬಂದಿದೆ. ಅಗಲ ಕಣ್ಣುಗಳ ನೋಟ, ಕೆಂದುಟಿ, ದಪ್ಪ ಮೀಸೆಯನ್ನು ಚಿತ್ರಿಸಿ, ಸೂಕ್ಷ್ಮವಾದ ಬಿಡಿ ಕೂದಲುಗಳನ್ನು ಹಾರಾಡುವಂತೆ ಜೀವಂತಿಕೆಯನ್ನು ತಂದಿರುವನು. ತೋಳ್ಬಂಧಿಗಳು, ಕಡಗಗಳು, ಕಿವಿಯೋಲೆಗಳು ಹಾಗೂ ಇತರ ಆಭರಣಗಳು ಮೂರು ಚಿತ್ರಗಳಂತೆ ಇಲ್ಲಿಯೂ ಉತ್ತಮ ರೀತಿಯಲ್ಲಿ ಒಡಮೂಡಿವೆ.

ರೇಖೆ ಮತ್ತು ವರ್ಣಗಳಿಂದ ಈ ಚಿತ್ರದಲ್ಲಿ ಮೈಲಾರನ ಪತ್ನಿಯರು ಸಾಂಪ್ರದಾಯಿಕ ಸೀರೆ, ಕುಪ್ಪಸ ಹಾಗೂ ಆಭರಣಗಳಿಂದ ಕಂಗೊಳಿಸುವಂತೆ ಕಲಾವಿದನು ಪ್ರಯತ್ನಿಸಿದ್ದಾನೆ. ಇಲ್ಲಿ ಚಿತ್ರ ಸಂಖ್ಯೆ ೨೮ ರಲ್ಲಿರುವಂತೆ ವರ್ಣವಿಧಾನವು ಸಂಯೋಜನೆಗೊಂಡಿದೆ. ಕುದುರೆಯು ನೆಗೆಯುತ್ತಿರುವಂತೆ ತೋರಿಸಲು ಅದನ್ನು ಭೂಮಟ್ಟದಿಂದ ಮೇಲಕ್ಕೆ ಚಿತ್ರಿಸಿ, ದಷ್ಟಪುಷ್ಟ ಅವಯವಗಳಿಂದ ಅದರ ಶಕ್ತಿಯನ್ನು ಅಭಿವ್ಯಕ್ತಿಗೊಳಿಸಲಾಗಿದೆ. ಇದರ ಚಲನೆ ಉಳಿದ ಚಿತ್ರಗಳಲ್ಲಿರುವಂತೆ ಭಿನ್ನವಾಗಿ ಮೂಡಿಬಂದಿದೆ. ಇಲ್ಲಿಯೂ ಸಹಿತ ಅದನ್ನು ಮಿತವಾಗಿ ಆಭರಣಗಳನ್ನು ಅಲಂಕರಿಸಿ, ರೇಖಾ ಸೂಕ್ಷ್ಮತೆಯನ್ನು ತರಲಾಗಿದೆ.

ಈ ಚಿತ್ರ ಸಂಯೋಜನೆಯಲ್ಲಿ ನಾಲ್ವರು ಸೇವಕರು, ವಿವಿಧ ಚಲನೆಯಲ್ಲಿದ್ದಾರೆ. ಇವರು ಒಂದೇ ವಯೋಮಾನದವರಿದ್ದರೂ ಅವರ ದೈಹಿಕ ಲಕ್ಷಣಗಳನ್ನು ಕಲಾವಿದನು ಹೆಚ್ಚು ಕಡಿಮೆಯಾಗಿರುವಂತೆ ಸಂಯೋಜನೆಗೊಳಿಸಿರುವನು. ಹಾಗೂ ಅವರ ನೋಟವೂ ಕೂಡಾ

ವೈರುಧ್ಯತೆಯಿಂದ ಮೂಡಿಬಂದಿವೆ. ಸೇವಕರ ವೇಷ ಭೂಷಣಗಳು ಉಳಿದ ಚಿತ್ರಗಳಲ್ಲಿರುವಂತೆಯೇ ರಚನೆಗೊಂಡಿವೆ. ಕುದುರೆಯ ಕೆಳಗೆ ಕಂಡು ಬರುವ ಜೋಡು ಸ್ವಾನಗಳನ್ನು ಒಬ್ಬ ಸೇವಕನು ನಿಯಂತ್ರನ ಮಾಡುತ್ತಿರುವಂತೆ ತೋರಿಸಲಾಗಿದ್ದು ಇಲ್ಲಿ ಆ ವ್ಯಕ್ತಿಯನ್ನು ಚಿಕ್ಕವನನ್ನಾಗಿ ಚಿತ್ರಿಸಲಾಗಿದೆ. ಇಲ್ಲಿ ಕಲಾವಿದನ ಉದ್ದೇಶ ಮುಖ್ಯ ವ್ಯಕ್ತಿಗಿಂತ ದೂರವಿದ್ದಾನೆ ಎಂಬುದನ್ನು ತೋರಿಸಲು ಈ ಆಕೃತಿಯನ್ನು ಹೀಗೆ ಸಂಯೋಜನೆಗೊಳಿಸಿರುವುದೆಂದೆನಿಸುತ್ತದೆ. ಈ ವಿವೇಚನೆಯು ಚಿತ್ರ ೨೯ ರಲ್ಲಿಯೂ ಕಂಡು ಬರುತ್ತದೆ. ಚಿತ್ರದಲ್ಲಿ ಕುದುರೆಯ ಹಿಂದಿರುವ ವ್ಯಕ್ತಿಯೊಬ್ಬ ಬಾವುಟವನ್ನು ಹಿಡಿದಿರುವನು ಇವನ ದೇಹ ಮುಖ್ಯ ದೇವತೆಯಷ್ಟೇ ಆಕಾರ ಹೊಂದಿದವನಾಗಿದ್ದಾನೆ. ಇದನ್ನು ಗಮನಿಸಿದರೆ ಕಲಾವಿದನು ಆಕೃತಿಗಳ ಜೋಡಣೆ, ವಿಷಯ ಹೊಂದಾಣಿಕೆಗೆ ಮಹತ್ವ ಕೊಟ್ಟಿಲ್ಲವೆಂದೆನಿಸುತ್ತದೆ ಅಥವಾ ಅದರ ತಿಳುವಳಿಕೆ ಗೌಣವಾಗಿರಬಹುದು.

ಈ ಚಿತ್ರದಲ್ಲಿಯೂ ಸಹ ಬೆಟ್ಟಗಳ ಕಲ್ಪನೆ ತರಲು ಅರ್ಧ ಚಂದ್ರಾಕೃತಿಯ ರೇಖೆಗಳಿಂದ ಹಾಗೂ ಕೆಂಪು ವರ್ಣದಿಂದ ಭೂದೃಶ್ಯವನ್ನು ದೃಶ್ಯೀಕರೀಸಲಾಗಿದೆ. ಇಲ್ಲಿಯೂ ಸಹ ಖ್ಯಾದ್ಯ ತುಂಬಿದ ಬಾಟಲಗಳನ್ನು ಸಂಯೋಜಿಸಲಾಗಿದ್ದು, ಹಿನ್ನೆಲೆಯನ್ನು ಕಪ್ಪು ಬಣ್ಣದಿಂದ ಲೇಪನಮಾಡಲಾಗಿದೆ. ಬಹುತೇಕ ನಾಲ್ಕು ಚಿತ್ರಗಳಲ್ಲಿ ಬಳಸಲಾಗಿರುವ ಈ ಬಣ್ಣವೂ ಬಹುಶಃ ರಾತ್ರಿಯನ್ನು ಸಂಕೇತಿಸುತ್ತವೆ ಎಂದೆನಿಸುತ್ತದೆ. ಈ ಚಿತ್ರವೂ ಸಹ ಚಿತ್ರ ೨೮ ರಂತೆ ಮರಾಠಿ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಚಿತ್ರದ ಲಕ್ಷಣಗಳೂ ಇಲ್ಲಿಯೂ ಯಥಾವತ್ತಾಗಿ ಮೂಡಿಬಂದಿವೆ ಹಾಗೂ ಎರಡೂ ಚಿತ್ರಗಳ ಆಶಯಗಳು ಒಂದೇ ರೀತಿಯಲ್ಲಿವೆ.

ಚಿತ್ರ ಸಂಖ್ಯೆ-೩೧ ಇದು ಗೊಂಬೆ ಮಂಟಪದಲ್ಲಿ ಅಳವಡಿಸಲಾದ ಗಾಜಿನ ಚಿತ್ರವಾಗಿದ್ದು, ಇಲ್ಲಿ ಸಂಯೋಜನೆಗೊಂಡ ಈ ಚಿತ್ರವು ಅಪೂರ್ಣವಾಗಿ ಚಿತ್ರಿತಗೊಂಡಿದೆ. ಮೈಲಾರನು ಜಟಾಧಾರಿಯಾಗಿದ್ದು ಅದನ್ನು ಹಸಿರು ಬಟ್ಟೆಯಿಂದ ಕಟ್ಟಲಾಗಿದೆ. ಮೈಲಾರನು ಬರಿಮೈಯಿಂದ ಕೂಡಿದ್ದು ನಡುವಿಗೆ ಹಸಿರು ಬಣ್ಣದ ಶಲ್ಯವನ್ನು ಕಟ್ಟಿಕೊಂಡಿದ್ದಾನೆ. ಕಪ್ಪು ಬಣ್ಣದ ದಪ್ಪ ಮೀಸೆಯನ್ನು, ಬಟ್ಟಲು ಕಣ್ಣುಗಳನ್ನು ಹಾಗೂ ಬಲಿಷ್ಠ ಶರೀರ ಸಂಪತ್ತಿನಿಂದ ಮೈಲಾರನ ವ್ಯಕ್ತಿತ್ವವು ಗಾಂಬೀರ್ಯದಿಂದ ಕೂಡಿದೆ. ಎಡಗೈ ಬಾಹುವಿನಿಂದ ಪತ್ನಿಯನ್ನು ಬಿಗಿಯಾಗಿ ಬಳಸಿ ಕುದುರೆಯ ಲಗಾಮನ್ನು ನಿಯಂತ್ರಿಸುತ್ತಿರುವನು. ಇವಳು ಕೆಂಪು ಬಣ್ಣದ ಸೀರೆ, ಕುಪ್ಪಸ ಹಾಗೂ ಹಳದಿ ಬಣ್ಣದ ಮೈಬಣ್ಣವನ್ನು ಹೊಂದಿರುವಳು. ಒಂದು ಕೈಯಲ್ಲಿ ತಾವರೆಯನ್ನು ಹಿಡಿದು ಪ್ರೇಮವನ್ನು ವ್ಯಕ್ತಪಡಿಸುತ್ತಿರುವಂತೆ ನಿರೂಪಗೊಂಡಿರುವಳು. ಇನ್ನೊಬ್ಬ ಪತ್ನಿಯನ್ನು ಕುದುರೆಯ ಶಿರದ ಮೇಲೆ ಕುಳ್ಳಿರಿಸಲಾಗಿದೆ, ಆ ಆಕೃತಿಯು ಚಿಕ್ಕದಾಗಿ ಅಸ್ಪಷ್ಟವಾಗಿ ಮೂಡಿಬಂದಿದೆ. ನಾಲ್ಕೂ ಚಿತ್ರಗಳಲ್ಲಿ ಮೈಲಾರನು ಕತ್ತಿ ಮತ್ತು ಗುರಾಣಿಯನ್ನು ಹೊಂದಿರುವುದು ವಿಶೇಷ. ಚಿತ್ರ ಸಂಖ್ಯೆ ೩೧ ಮತ್ತು ೨೯ ರಲ್ಲಿ ಸ್ಪಷ್ಟವಾಗಿ ಮೂಡಿಬಂದಿವೆ, ಇನ್ನೆರಡು ಚಿತ್ರಗಳಲ್ಲಿ ಅಸ್ಪಷ್ಟವಾಗಿ ಗೋಚರಿಸುತ್ತವೆ.

ಚಿತ್ರ ೩೧ರಲ್ಲಿ ಒಬ್ಬ ಸೇವಕನು ಕೆಂಪು ಬಾವುಟವನ್ನು ಹಿಡಿದಿರುವನು ಹಾಗೂ ಒಂದು ಸ್ವಾನವು ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತಿದೆ. ಇಲ್ಲಿ ಅದರ ಮುಖ ಮಾತ್ರ ಗೋಚರಿಸುತ್ತದೆ. ಕುದುರೆಯು ಅತ್ಯಂತ ಚಲನೆಯಿಂದ ಕೂಡಿದ್ದು, ನೀಲಿ ಮಿಶ್ರಿತ ಬಿಳಿಬಣ್ಣಗಳ ಸಂಯೋಜನೆ

ಉತ್ತಮವಾಗಿ ಮೂಡಿಬಂದಿದೆ. ಚಿತ್ರ ೨೯ರಲ್ಲಿರುವಂತೆಯೇ ಇದು ರಚನೆಗೊಂಡಿದೆ. ಮಿತವಾದ ಕೊರಳು ಪಟ್ಟಿಗಳು, ಅಲಂಕೃತ ಬಟ್ಟೆಗಳು ಹಾಗೂ ಆಭರಣಗಳಿಂದ ಅಲಂಕರಿಸಲಾಗಿದೆ, ನೆತ್ತಿಯ ಮೇಲೆ ಶ್ವೇತವರ್ಣದ ತುರಾಯಿಯನ್ನು ಚಿತ್ರಿಸಲಾಗಿದ್ದು ಚಲನಯುಕ್ತವಾಗಿದೆ.

ಇಲ್ಲಿ ರೂಪಿತಗೊಂಡಿರುವ ಕುದುರೆಯು ಮೈಲಾರನ ಕೃತಿಗಿಂತ ಚಿಕ್ಕದಾಗಿದೆ, ಸೇವಕನ ಆಕೃತಿಯ ಕುದುರೆ ಹಿಂದೆ ಇದ್ದರೂ ದೊಡ್ಡದಾಗಿ ಚಿತ್ರಿಸಲಾಗಿದೆ, ಮೈಲಾರನ ನೆತ್ತಿಯ ಮೇಲಿರುವ ಛತ್ರಿಯು ಚಿಕ್ಕದಾಗಿದೆ. ಹಾಗೂ ಕೆಲವು ವಸ್ತುಗಳಲ್ಲಿ ಹೊಂದಾನಿಕೆಯೂ ಇರುವದಿಲ್ಲ. ಇವೆಲ್ಲವುಗಳಿಂದ ಚಿತ್ರವು ಅ ಸಮತೋಲನದಿಂದ ಕೂಡಿದೆ ಎನ್ನಬಹುದು. ಇಲ್ಲಿ ಕೆಂಪು, ನೀಲಿ ಕಪ್ಪು, ಹಸಿರು ಮತ್ತು ಬಿಳಿ ಬಣ್ಣಗಳನ್ನು ಪ್ರಧಾನವಾಗಿ ಸಂಯೋಜನೆಗೊಳಿಸಲಾಗಿದೆ.

ಚಿತ್ರ ಸಂಖ್ಯೆ ೨೯ ಮತ್ತು ೩೧ ಈ ಎರಡೂ ಚಿತ್ರಗಳು ಕರ್ನಾಟಕದ ಕೆಳದಿ ನಾಯಕ ಅರಸರ ಸಾಂಸ್ಕೃತಿಕ ಪರಿಸರವನ್ನು ಅನುಕರಿಸುತ್ತವೆ. ಏಕೆಂದರೆ ಇಲ್ಲಿ ರೂಪಿತಗೊಂಡಿರುವ ಆಕೃತಿಗಳ ದೈಹಿಕ ಲಕ್ಷಣಗಳು, ವೇಷಭೂಷಣಗಳು ಹಾಗೂ ಶಿವಮೊಗ್ಗ ಭಾಗದಲ್ಲಿ ಈ ಚಿತ್ರಗಳು ದೊರೆತಿರುವುದನ್ನು ಗಮನಿಸಬಹುದು. ಒಟ್ಟಾರೆ ಈ ನಾಲ್ಕು ಚಿತ್ರಗಳ ಮೂಲ ರಚನೆ ಮತ್ತು ಮೂಲ ಆಶಯ ಒಂದೇ ಆಗಿದೆ. ಜೊತೆಗೆ ತಂಜಾವೂರು ಹಾಗೂ ಮೈಸೂರು ಚಿತ್ರಶೈಲಿಯನ್ನು ಅನುಕರಿಸುತ್ತಿವೆ.

**ಚಿತ್ರಸಂಖ್ಯೆ ೩೨. ಬಸವೇಶ್ವರರು**

ಹನ್ನೆರಡನೆಯ ಶತಮಾನದ ಕ್ರಾಂತಿಕಾರ ಪುರುಷರಾದ ಬಸವೇಶ್ವರರು ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಅನೇಕ ಸುಧಾರಣೆಗಳ್ನು ತಂದವರು. ಇವರು ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಗಳಾಗಿದ್ದರು. ತಮ್ಮ ವಚನ ಸಾಹಿತ್ಯದ ಮೂಲಕ ಜನರ ಸಾಮಾಜಿಕ ಹಾಗೂ ಧಾರ್ಮಿಕ ಮೌಢ್ಯಗಳನ್ನು ಸುಧಾರಣೆ ತರುವುದರ ಮೂಲಕ, ಮಾನವ ಕಲ್ಯಾಣಕಕ್ಕಾಗಿ ಶ್ರಮಿಸಿದ ಇವರು ವಿಶ್ವಗುರುವೆಂದೇ ಮನೆಮಾತಾಗಿದ್ದಾರೆ. ಇಂಥ ಮಹಾನ ಪುರುಷನ ಕುರಿತು ಅನೇಕ ಸಂಶೋಧನೆಗಳು ನಡೆದಿವೆ. ಇವರು ಜಾತಿ, ಕಂದರಗಳನ್ನು ತೊಡೆದು ಹಾಕಿ ಜೈನ ಹಾಗೂ ವೈಷ್ಣವ ಧರ್ಮಗಳ ಪ್ರಾಬಲ್ಯದ ವಿರುದ್ಧ "ವೀರಶೈವ"ವೆಂಬ ಪ್ರತ್ಯೇಕ ಧರ್ಮವನ್ನು ಹುಟ್ಟು ಹಾಕಿದರು. ಈ ಮೂಲಕ ಅನೇಕ ಸುಧಾರಣೆಗಳನ್ನು ತಂದರು.

ಇಂಥ ಚಾರಿತ್ರಿಕ ಹಿನ್ನೆಲೆಯ ಪುರುಷನ ಚಿತ್ರವು ಗಾಜಿನ ಮೇಲೆ ಬಿಂಬಿತವಾಗಿದೆ. ಈ ಚಿತ್ರದಲ್ಲಿ ಕಿರೀಟಧಾರಿಯಾದ ಬಸವೇಶ್ವರರು ಶ್ವೇತವರ್ಣದ ಕುದುರೆಯ ಮೇಲೆ ಸವಾರಿ ಮಾಡುತ್ತಿರುವಂತೆ ಕಲಾವಿದನು ಚಿತ್ರಿಸಿದ್ದಾನೆ. ಇಲ್ಲಿ ಬಸವೇಶ್ವರರು ಕೆಂಪು ಬಣ್ಣದ ಧೋತಿ ಕೆಂಪುವರ್ಣದ ದೊಗಳೆ ಅಂಗಿ ಇದರ ಅಂಚು ಸ್ವರ್ಣ ವರ್ಣದ ಚಿತ್ರ ವಿನ್ಯಾಸಹೊಂದಿದ್ದು, ಕೊರಳಲ್ಲಿ ಲಿಂಗವನ್ನು ಧರಿಸಿದ್ದಾರೆ. ನಡುವಿಗೆ ಕತ್ತಿಯನ್ನು ಸಿಕ್ಕಿಸಿಕೊಂಡು, ಲಗಾಮನ್ನು ಹಿಡಿದು ಕುದುರೆಯನ್ನು ನಿಯಂತ್ರಿಸುತ್ತಿರುವರು. ಇಲ್ಲಿ ಕುದುರೆಯ ಶರೀರವು ದಷ್ಟಪುಷ್ಟವಾಗಿದ್ದು ಚಲನೆಯಲ್ಲಿರುವಂತೆ ಕಲಾವಿದನು ಚಿತ್ರಿಸಿದ್ದಾನೆ. ಕುದುರೆಯನ್ನು ಮಿತವಾಗಿ ಅಲಂಕರಿಸಲಾಗಿದೆ. ಅದರ ಕತ್ತಿನ ಮೇಲೆ ಇರುವ ಕೂದಲನ್ನು ಹಾಗೂ ಬಾಲದ ಜವೆಯನ್ನು ಕಪ್ಪು ವರ್ಣದಿಂದ

ಚಿತ್ರಿಸಲಾಗಿದೆ. ಇಲ್ಲಿ ಕಲಾವಿದನು ತನ್ನ ನೀರಿಕ್ಷಣೆಯಲ್ಲಿ ವಾಸ್ತವತೆಯನ್ನು ಮರೆತು ಕೇವಲ ಅಲಂಕಾರ ಪ್ರಜ್ಞೆಯನ್ನು ತಳೆದಿದ್ದಾನೆ ಎಂದು ತೋರುತ್ತದೆ. ಕುದುರೆಯ ಭಾವಲಕ್ಷಣಗಳಲ್ಲಿ ಮಂದಹಾಸವಿದ್ದು, ಕಂದು ಬಣ್ಣದ ದಾರಿಯ ಮೇಲೆ ಬಸವೇಶ್ವರರನ್ನು ಹೊತ್ತೊಯ್ಯುತ್ತಿದೆ.

ಚಿತ್ರದ ಹಿನ್ನೆಲೆಯಲ್ಲಿ ನೀಲಿ, ಬಿಳುಪಿನಿಂದ ಕೂಡಿದ ಆಕಾಶ, ಹಸಿರು ವರ್ಣದಿಂದ ಪೊದೆ ಹಾಗೂ ಕಂದು ಬಣ್ಣದ ಭೂದೃಶ್ಯವನ್ನು ಚಿತ್ರಿಸಲಾಗಿದೆ. ದೂರದಲ್ಲಿ ದೇವಸ್ಥಾನದ ಚಿತ್ರವು ಕಂಡು ಬರುತ್ತಿದ್ದು, ಇದು ಮಸುಕಾಗಿ ರೂಪಗೊಂಡಿದೆ. ಈ ಚಿತ್ರವು ಯಥಾದೃಷ್ಟಿಯಿಂದ, ವರ್ಣ ಸಂಯೋಜನೆಯಿಂದ, ರೇಖಾ ಲಾವಣ್ಯದಿಂದ ಗಮನಿಸಿದರೆ ಕಲಾವಿದನ ಅನುಭವ ತೀರಾ ಸಾಧಾರಣ ಮಟ್ಟದೆಂದು ಹೇಳಬಹುದು. ಚಿತ್ರವು ಯಾವುದೇ ಸಾಂಪ್ರದಾಯಿಕ ಚಿತ್ರಕಲೆಯನ್ನು ಹೋಲುತ್ತಿಲ್ಲ. ಇಲ್ಲಿ ಕಲಾವಿದನು ರೇಖೆ, ಆಕೃತಿ, ವರ್ಣಗಳನ್ನು ಹಾಗೂ ಹಿನ್ನೆಲೆಯನ್ನು ಯಾಂತ್ರಿಕವಾಗಿ ಸಂಯೋಜನೆಗೊಳಿಸಿದ್ದಾನೆ.

**ಚಿತ್ರಸಂಖ್ಯೆ ೩೩, ೩೪ ನೀಲಾಂಬಿಕೆ**

ಬಸವಣ್ಣನವರ ಧರ್ಮಪತ್ನಿಯಾದ ನೀಲಾಂಬಿಕೆಯ, ದೃಶ್ಯಕಲ್ಪನೆಯ ಈ ಎರಡು ಗಾಜಿನ ಚಿತ್ರಗಳು ಒಂದೇ ಆಶಯವನ್ನು ಹೊಂದಿವೆ. ಚಿತ್ರಸಂಖ್ಯೆ ೩೩ ಇದು ಹುಬ್ಬಳ್ಳಿಯ ಗುರುಸಿದ್ಧಪ್ರಭು ಕರವೀರ ಶಟ್ಟರ ಮನೆಯಲ್ಲಿ ಸಂಗ್ರಹಗೊಂಡಿದೆ. ಚಿತ್ರಸಂಖ್ಯೆ ೩೪ ಇದು ಗುಡುಗೇರಿಯ ಹುತಗೊಣ್ಣನವರ ಮನೆಯಲ್ಲಿ ಸಂಗ್ರಹಗೊಂಡಿದೆ. ಎರಡೂ ಚಿತ್ರಗಳು ೫೦ x ೬೩ ಸೆಂ. ಮೀ. ಅಳತೆಯನ್ನು ಹೊಂದಿದ್ದು ಈ ಚಿತ್ರಗಳ ಪೋಷಕರು ವೀರಶೈವ ಲಿಂಗಾಯತ ಮತಕ್ಕೆ ಸೇರಿದ್ದಾರೆ.

ಚಿತ್ರಸಂಖ್ಯೆ ೩೩ ರಲ್ಲಿ ನೀಲಾಂಬಿಕೆಯು ಹಳದಿ ವರ್ಣದ ಸೀರೆ, ಹಸಿರು ವರ್ಣದ ರವಿಕೆ ತೊಟ್ಟು, ಎಡಗೈಯಲ್ಲಿ ಲಿಂಗವನ್ನು ಇಟ್ಟುಕೊಂಡು ಶಿವಪೂಜೆ (ಲಿಂಗ) ಯಲ್ಲಿ ನಿರತಳಾಗಿದ್ದಾಳೆ. ಕೊರಳಲ್ಲಿ ರುದ್ರಾಕ್ಷಿಸರ, ಮುತ್ತಿನ ಸರ, ಕಿವಿಗಳಲ್ಲಿ ಓಲೆ, ಹಸಿರು ಬಳೆಗಳು ಹಾಗೂ ಮುತ್ತಿನ ಬಳೆಗಳನ್ನು ಧರಿಸಿದ್ದು, ಗುಲಾಬಿ ವರ್ಣದ ಮೈಬಣ್ಣ ಹೊಂದಿರುವಳು ಮತ್ತು ಹಣೆ ಮತ್ತು ಮೈಕೈಗಳಿಗೆ ವಿಭೂತಿಯನ್ನು ಹಚ್ಚಿಕೊಂಡಿರುವಳು. ಇದೇ ಯಥಾಸ್ಥಿತಿ ದೃಶ್ಯವು ಚಿತ್ರ ೩೪ ರಲ್ಲಿ ರೂಪಗೊಂಡಿದೆ. ಎರಡೂ ಚಿತ್ರಗಳ ರಚನಾ ವಿಧಾನವನ್ನು ಗಮನಿಸಿದರೆ ಇವನ್ನು ಒಬ್ಬನೇ ಕಲವಿದನು ರಚಿಸಿದಂತೆ ತೋರುತ್ತದೆ. ಎರಡು ಚಿತ್ರಗಳಲ್ಲಿ ಬಳಸಿರುವ ಪೂಜಾ ಪರಿಕರಗಳು ಸಾಮಾನ್ಯವಾಗಿ ಒಂದೇ ಹೋಲಿಕೆಯನ್ನು ನಿರೂಪಿಸುತ್ತವೆ. ಕಳಸ, ಸಮೆ, ಬುಟ್ಟಿ, ಮಣೆ, ಅಡ್ಡಣಿಗೆ, ಛಾಪೆ, ಬೆನ್ನಿಗಿರುವ ಪೀಠಗಳು ಒಂದೇ ರೀತಿಯಲ್ಲಿ ರೂಪಗೊಂಡಿವೆ. ವರ್ಣ ಹಾಗೂ ಆಕಾರಗಳಲ್ಲಿ ವಿಭಿನ್ನತೆಯನ್ನು ಹೊರತು ಪಡಿಸಿದರೆ, ಮಿಕ್ಕೆಲ್ಲವೂ ಪ್ರತಿಕೃತಿಗೊಂಡಿವೆ.

ಚಿತ್ರಗಳ ಹಿನ್ನೆಲೆ ಹಾಗೂ ಮುನ್ನೆಲೆಯಲ್ಲಿ ಸ್ವಲ್ಪ ಬದಲಾವಣೆಯನ್ನು ತರಲು ಕಲಾವಿದನು ಪ್ರಯತ್ನಿಸಿದ್ದಾನೆಂದು ತೋರುತ್ತದೆ. ನೆಲಹಾಸು ಟೈಲ್ಸ್‌ಗಳಿಂದ ಸಂಯೋಜನೆಗೊಳಿಸಿದ್ದು ಚಿತ್ರಸಂಖ್ಯೆ ೩೩ ರಲ್ಲಿ ಹಿನ್ನೆಲೆಯನ್ನು ಬೃಹತ್ ಕಂಬಗಳಿಂದ, ಮಂಟಪಗಳಿಂದ ರೂಪಗೊಳಿಸಲಾಗಿದೆ, ಮತ್ತು ಕಂದು ಬಣ್ಣದ ಬೃಹತ್ ಬಟ್ಟೆಯ ಪರದೆಯನ್ನು ಚಿತ್ರಿಸಲಾಗಿದೆ. ಚಿತ್ರ ೩೪ರಲ್ಲಿ ದೊಡ್ಡದಾದ ಶ್ವೇತವರ್ಣದ ಅಲಂಕಾರ ವಿನ್ಯಾಸ ಹೊಂದಿದ ಕಂಬಗಳಿದ್ದು, ಕೆಂಪು ಬಣ್ಣದ ಪರದೆಯನ್ನು





೨೨. ಕಾಮಧೇನು



೨೩. ಕಾಮಧೇನು



೨೪. ಕಾಮಧೇನು

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು





೨೫. ವೀರಭದ್ರ



೨೬. ವೀರಭದ್ರ

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು





೨೭. ಮೀನಾಕ್ಷೀ-ಶಿವ (ಲಿಂಗರೂಪಿ)



೨೮. ಮದುರೈ ವೀರ

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು





೨೯. ಮದುರೈ ವೀರ



೩೦. ಮದುರೈ ವೀರ



೩೧. ಮದುರೈ ವೀರ

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು





೩೨. ಬಸವೇಶ್ವರು



೩೪. ನೀಲಾಂಬಿಕೆ



೩೩. ನೀಲಾಂಬಿಕೆ

ಗಾಜಿನ ಮೇಲಿನ ಶೈವ ಧರ್ಮದ ಚಿತ್ರಗಳು

ಸಂಯೋಜನೆಗೊಳಿಸಲಾಗಿದೆ. ಚಿತ್ರಗಳ ಹಿನ್ನೆಲೆಯು ಅರಮನೆಯ ಕಲ್ಪನೆಯನ್ನು ತರುವಂತೆ ಕಲಾವಿದನು ವಿವೇಚಿಸಿದ್ದಾನೆ. ಚಿತ್ರಸನ್ನಿವೇಶಗಳನ್ನು ಇಂದಿನ ನಾಟಕ ರಂಗಸಜ್ಜಿಕೆಯ ಪರದೆಯ ಚಿತ್ರಗಳಲ್ಲಿ ಕಾಣುತ್ತೇವೆ. ಬಹುಃಶ ಆ ಕಲಾವಿದರೆ ಈ ಚಿತ್ರಗಳನ್ನು ಬರೆದಿರಬೇಕೆಂದು ತಿಳಿಯಲುಬಹುದು, ಯಾಕೆಂದರೆ ಹುಬ್ಬಳ್ಳಿಯಲ್ಲಿ ನಾಟಕದ ಪರದೆಯ ಚಿತ್ರಗಳನ್ನು ಬರೆಯುವ ಕಲಾವಿದರನ್ನು ಕಾಣುತ್ತೇವೆ.

ಆಧುನಿಕ ರಚನಾ ಪದ್ಧತಿಯನ್ನು ಹೋಂದಿರುವ ಈ ಗಾಜಿನ ಚಿತ್ರಗಳು ರೇಖೆ, ವರ್ಣ ಹಾಗೂ ಆಕೃತಿಗಳ ಸಂಯೋಜನೆಯಲ್ಲಿ ಯಥಾದರ್ಶನದಲ್ಲಿ ಕಲಾವಿದನ ಪ್ರಬುದ್ಧತೆ, ಸೌಂದರ್ಯಪ್ರಜ್ಞೆ ಸನ್ನಿವೇಶದ ಚಿಂತನೆ ಅಷ್ಟೇನು ಉತ್ತಮವಾಗಿ ಮೂಡಿಬಂದಿಲ್ಲ. ಇಲ್ಲಿ ನೀಲಾಂಬಿಕೆಯನ್ನು ಸಂಸ್ಕಾರಯುತ, ಸಂಪ್ರದಾಯದಿಂದ ಕೂಡಿದ ಅಪ್ಪಟ ಭಾರತೀಯ ಮಹಿಳೆಯಂತೆ ಚಿತ್ರಿಸಲು ಪ್ರಯತ್ನಿಸಿದ್ದಾರೆ. ಅದರಂತೆ ಕಲಾವಿದನು ನೀಲಾಂಬಿಕೆಯನ್ನು ಸನ್ನಿವೇಶಕ್ಕೆ ತಕ್ಕಂತೆ ಅವುಗಳ ಮುಖಭಾವವನ್ನು ನಿರೂಪಿಸಿಲ್ಲ, ಒಟ್ಟಾರೆ ಎರಡೂ ಚಿತ್ರಗಳು ಪ್ರಾಥಮಿಕ ವರ್ಣಗಳಿಂದ ರೂಪಗೊಂಡಿದ್ದು ಕೆಲವು ಕಡೆ ತ್ರಿಕರಣರೂಪವನ್ನು ಕೊಡಲು ಕಲಾವಿದನು ಯತ್ನಿಸಿದ್ದಾನೆ.

**ಬ. ವೈಷ್ಣವ ಧರ್ಮದ ಚಿತ್ರಗಳು**

ಭಾರತವು ಅನೇಕ ಮತಧರ್ಮಗಳಿಂದ ಕೂಡಿದ ಬಹುದೊಡ್ಡ ದೇಶವಾಗಿದೆ. ಪ್ರಪಂಚದಲ್ಲಿಯೇ ಧರ್ಮ, ಸಂಸ್ಕೃತಿ, ಆಚಾರ ವಿಚಾರಗಳಿಂದ ಶ್ರೀಮಂತ ಪರಂಪರೆಯನ್ನು ಹೊಂದಿದೆ. ಹಿಂದೂ ಧರ್ಮದಲ್ಲಿಯೇ ಶೈವ, ವೈಷ್ಣವ, ಜೈನ್ ಇತ್ಯಾದಿ ಪಂಗಡಗಳನ್ನು ಕಾಣಬಹುದು. ಶೈವ ಸಂಸ್ಕೃತಿಯಂತೆ ವೈಷ್ಣವ ಸಂಸ್ಕೃತಿಯು ಭಾರತೀಯ ಧರ್ಮಗಳಲ್ಲಿ ಮಹತ್ತರವಾಗಿದೆ. ಇಲ್ಲಿ ಈ ಧರ್ಮದ ಬಗ್ಗೆ ಹಾಗೂ ಅದರ ಹಿನ್ನೆಲೆಯನ್ನು ಕುರಿತು ಚರ್ಚಿಸಲು ಹೋಗುವುದಿಲ್ಲ. ಈ ಪಂಥಕ್ಕೆ ಸಂಬಂಧಿಸಿದಂತೆ ಅನೇಕ ಗಾಜಿನ ಚಿತ್ರಗಳು ಚಿತ್ರಿತಗೊಂಡಿವೆ. ಈ ಚಿತ್ರಗಳನ್ನು ಮುಖ್ಯವಾಗಿಟ್ಟುಕೊಂಡು ವೈಷ್ಣವ ಗಾಜಿನ ಚಿತ್ರಗಳೆಂದು ಉಪವಿಭಾಗವಾಗಿ ವಿಂಗಡಿಸಿಕೊಂಡು ಚರ್ಚೆ ಮಾಡಲು ಪ್ರಯತ್ನಿಸಲಾಗಿದೆ.

ಈ ವೈಷ್ಣವ ಗಾಜಿನ ಚಿತ್ರಗಳಲ್ಲಿ, ಚಿತ್ರಕಾರರು ವಿಷ್ಣುವಿಗೆ ಸಂಬಂಧಿಸಿದಂತೆ ಹಾಗೂ ಅವನ ಅವತಾರಗಳಿಗೆ ಸಂಬಂಧಿಸಿದಂತೆ ಚಿತ್ರಗಳನ್ನು ರಚನೆ ಮಾಡಿದ್ದಾರೆ. ಅವನ್ನು ಇಲ್ಲಿ ವಿವರಿಸಲು ಪ್ರಯತ್ನ ಮಾಡಲಾಗಿದೆ. ಇಲ್ಲಿ ರೂಪಿತಗೊಂಡಿರುವ ವೈಷ್ಣವ ಗಾಜಿನ ಚಿತ್ರಗಳು ಬಹುತೇಕ ಪ್ರತಿಕೃತಿಗೊಂಡಿದ್ದು, ಕೆಲವು ತೂಗುಹಾಕುವ ಚಿತ್ರಗಳು, ಕೆಲವು ವಿವಿಧ ವಸ್ತುಗಳಲ್ಲಿ ಅಳವಡಿಸಿದ ಗಾಜಿನ ಚಿತ್ರಗಳಾಗಿ ಕಂಡು ಬರುತ್ತಿವೆ. ಇಲ್ಲಿ ವಿವರಣೆಗೊಳಪಡುವ ಗಾಜಿನ ಚಿತ್ರಗಳು ವಿವಿಧ ಕಾಲ ಘಟ್ಟಗಳಲ್ಲಿ ರಚನೆಗೊಂಡಿವೆ. ೧೮ ಮತ್ತು ೧೯ ನೆಯ ಶತಮಾನಗಳಿಂದ ಹಿಡಿದು ಇಂದಿನವರೆಗೆ ರಚನೆಗೊಂಡಿರುವ ಸಾಂಪ್ರದಾಯಿಕ ಹಾಗೂ ಸಂಯೋಜನಾ ಚಿತ್ರಗಳನ್ನು ವಿವರಿಸಲಾಗಿದೆ.

**ಚಿತ್ರಸಂಖ್ಯೆ ೦೧ ಶೇಷಾಯನ ಮಹಾವಿಷ್ಣು / ಶ್ರೀ ರಂಗನಾಥಸ್ವಾಮಿ**

ಸೃಷ್ಟಿಕರ್ತನಾದ ವಿಷ್ಣು ಸಪ್ತಕ್ಷೀರ ಸಾಗರದಲ್ಲಿ ಅನಂತನೆಂಬ ಶೇಷನನ್ನು ಹಾಸಿಗೆಯಾಗಿ

ಮಾಡಿಕೊಂಡು ವಿಶ್ರಮಿಸುತ್ತಿರುವ, ದೇವಾಣು ದೇವತೆಗಳು ಅವನನ್ನು ಕುರಿತು ನಾನಾ ರೀತಿಯಲ್ಲಿ ಸ್ತುತಿಸುತ್ತಿರುವ ಪ್ರಸಂಗದ ಚಿತ್ರಗಳು ವಿವಿಧ ಮಾಧ್ಯಮಗಳಲ್ಲಿ ರೂಪಗೊಂಡಿರುವುದನ್ನು ಕಾಣುತ್ತೇವೆ. ಅದರಂತೆ ನಮ್ಮ ಗಾಜಿನ ಕಲಾವಿದರು ಗಾಜಿನ ಮೇಲೆ ಈ ಸನ್ನಿವೇಶವನ್ನು ಚಿತ್ರಿಸಿದ್ದಾರೆ. ಅವು ಆಯಾ ಕಲಾವಿದನ ಆಶಯದ ಮೇರೆಗೆ ಚಿತ್ರಿತಗೊಂಡಿವೆ.

ಈ ಚಿತ್ರವು ಬಾಗಲಕೋಟೆಯ ಶ್ರೀ ಮಹೇಂದ್ರ ಸರಾಫ್‌ರ ಮನೆಯಲ್ಲಿ ಸಂಗ್ರಹಗೊಂಡಿದ್ದು ವಿಷ್ಣು ದಿಂಬಿನ ಮೇಲೆ ಆಸೀನನಾಗಿದ್ದಾನೆ. ಹೂವಿನ ಚಿತ್ತಾರವನ್ನೊಳಗೊಂಡ ನೀಲಿ ಬಣ್ಣದ ಉತ್ತರಿಯವನ್ನು ಹೂವಿನ ಚಿತ್ತಾರದಿಂದ ಕೂಡಿದ ಹಳದಿ ಬಣ್ಣದ ಪಿತಾಂಬರವನ್ನು ಧರಿಸಿದ್ದು, ಶ್ರೀದೇವಿ ಅವನ ಪಾದಕಮಲಗಳಲ್ಲಿ ಕುಳಿತು ಸೇವೆ ಮಾಡುತ್ತಿರುವಳು. ಇವಳಿಗೆ ಕಲಾವಿದನು ಆಧುನಿಕ ಸ್ತ್ರೀಯಂತೆ ವೇಷಭೂಷಣಗಳನ್ನು ಚಿತ್ರಿಸಿದ್ದಾನೆ. ಗುಲಾಬಿ ವರ್ಣದ ಮೈಬಣ್ಣವನ್ನು ಹೊಂದಿರುವ ಇವಳು, ಕಪ್ಪು ಬಣ್ಣದ ರವಿಕೆ, ಹೂವಿನ ನಕ್ಷೆಗಳಿಂದ ಕೂಡಿದ ಕೆಂಪು ಬಣ್ಣದ ಸೀರೆಯನ್ನು ಧರಿಸಿದ್ದಾಳೆ. ನೀರಾಭರಣ ಹೊಂದಿಲ್ಲವಾದರೂ ಇವಳ ಕಾಲಿಗೆ ಹಾಗೂ ಕೈಗಳಿಗೆ ಒಂದೊಂದೇ ಬಳೆಗಳನ್ನು ಮಾತ್ರ ಕಲಾವಿದನು ಚಿತ್ರಿಸಿದ್ದಾನೆ. ಕೊರಳಲ್ಲಿ ಒಂದೇ ಎಳೆಯ ಸರ, ಬಿಗಿದು ಕಟ್ಟಿದ ಕಪ್ಪು ತುರುಬು, ಅದಕ್ಕೆ ಮುತ್ತಿನ ಸರವನ್ನು ಅಲಂಕರಿಸಲಾಗಿದೆ. ಇಲ್ಲಿ ಕಲಾವಿದನು ಇವಳನ್ನು ಒಬ್ಬ ಸಾಮಾನ್ಯ ಮಹಿಳೆಯಂತೆ ಕಲ್ಪಿಸಿದ್ದಾನೆ.

ಅನಂತನೆಂಬ ಶೇಷನು ಏಕರೂಪದ ಹೆಡೆಯನ್ನು ಹೊಂದಿದ್ದು, ವಿಷ್ಣುವಿನ ಶಿರದ ಮೇಲೆ ನೆರಳಾಗಿ ಸೇವೆ ಮಾಡುತ್ತಿರುವನು. ಸೂಕ್ಷ್ಮರೇಖಾವಿನ್ಯಾಸದಿಂದ ಕಂದು, ಹಳದಿ, ಬಿಳಿ, ನೀಲಿ ವರ್ಣಗಳಿಂದ ಸರ್ಪ ಸ್ವರೂಪವನ್ನು ನೀಡಿದ್ದಾನೆ. ಇದನ್ನು ತ್ರಿಕರಣ ರೂಪ ಕಲ್ಪನೆಯನ್ನು ಕೊಡಲು ಪ್ರಯತ್ನಿಸಿದ್ದಾನೆಯಾದರೂ ನೈಜತೆಯನ್ನು ತರುವಲ್ಲಿ ವಿಫಲನಾಗಿದ್ದಾನೆ. ವಿಷ್ಣುವಿನ ನಾಭಿಯಿಂದ ಹೊರಟ ಕಮಲದ ಮೇಲೆ ಚತುರ್ಮುಖ ಬ್ರಹ್ಮನನ್ನು ಚಿತ್ರಿಸಿದ್ದು, ಇವನು ಚತುರ್ಭುಜಧಾರಿಯಾಗಿದ್ದು ಪದ್ಮಾಸನದಲ್ಲಿ ತಾವರೆಯ ಮೇಲೆ ಕುಳಿತಿದ್ದಾನೆ. ಕೆಂಪು ಬಣ್ಣದ ಉತ್ತರಿಯವನ್ನು ನೀಲಿ ಬಣ್ಣದ ಪಿತಾಂಬರವನ್ನು ಧರಿಸಿದ್ದಾನೆ.

ಕಿರೀಟಧಾರಿಯಾದ ಬ್ರಹ್ಮನು ದೊಡ್ಡದಾದ ಹೂವಿನ ಮಾಲೆ, ಕೆಂಪು ಹಾಗೂ ಹಳದಿ ಬಣ್ಣದ ಆಭರಣಗಳನ್ನು ಧರಿಸಿದ್ದಾನೆ. ತಲೆಯ ಹಿಂದೆ ವೃತ್ತಾಕಾರದ ವಿನ್ಯಾಸವನ್ನು ಕಲಾವಿದನು ಚಿತ್ರಿಸಿದ್ದಾನೆ. ಇದನ್ನು ಸಂಯೋಜನಾ ದೃಷ್ಟಿಯಿಂದ ಚಿತ್ರಿಸಿರಬಹುದೆಂದು ತೋರುತ್ತದೆ. ವಿಷ್ಣುವಿನ ಎಡಪಾರ್ಶ್ವದಲ್ಲಿ ವಾಹನವಾದ ಗರುಡನು, ಬಲಪಾರ್ಶ್ವದಲ್ಲಿ ಹನುಮಂತನನ್ನು ಚಿತ್ರಿಸಿದ್ದು, ಇವರಿಬ್ಬರನ್ನು ಲತೆಯ ಮೇಲೆ ಒಂಟಿಗಾಲಿನಿಂದ ನಿಂತು ವಿಷ್ಣುವನ್ನು ಸ್ತುತಿಸುತ್ತಿರುವಂತೆ ಚಿತ್ರಿಸಲಾಗಿದೆ. ಇಲ್ಲಿ ಹನುಮ ಮತ್ತು ಗರುಡರು ಗುಲಾಬಿ ಮೈಬಣ್ಣ ಹೊಂದಿದ್ದು, ಶ್ವೇತವರ್ಣದ ಬಟ್ಟೆಯನ್ನು ಧರಿಸಿದ್ದಾರೆ. ಜೊತೆಗೆ ಕೆಂಪು ಹಾಗೂ ನೀಲಿ ಬಣ್ಣಗಳ ಶಲ್ಯಗಳನ್ನು ನಡುವಿಗೆ ಕಟ್ಟಿಕೊಂಡಿರುವರು. ಇಬ್ಬರೂ ಕಿರೀಟಧಾರಿಗಳಾಗಿದ್ದು, ಮುತ್ತಿನ ಸರವನ್ನು ಧರಿಸಿರುವರು. ಗರುಡನು ಕೆಂಪು ಹಾಗೂ ನೀಲಿ ಬಣ್ಣದ ರೆಕ್ಕೆಗಳನ್ನು ಹೊಂದಿದ್ದು, ರೆಕ್ಕೆ ಬಿಚ್ಚಿ ಹಾರುತ್ತಿರುವಂತೆ ಚಿತ್ರಿಸಲಾಗಿದೆ.

ಚಿತ್ರದ ಹಿನ್ನೆಲೆಯಲ್ಲಿ ನೀಲಿ ಬಣ್ಣದ ಬೆಟ್ಟ ಪರ್ವತಗಳು, ತಿಳಿ ಗುಲಾಬಿ ಹಾಗೂ

ತಿಳಿ ನೀಲಿ ಬಣ್ಣಗಳ ಮಿಶ್ರಿತ ಆಕಾಶ, ಕಪ್ಪು, ನೀಲಿ, ಬಿಳಿ ಬಣ್ಣಗಳಿಂದ ನೀರನ್ನು ಚಿತ್ರಿಸಲಾಗಿದೆ. ಆಕಾಶದಲ್ಲಿ ಬಿಳಿ ವರ್ಣದ ದೇಗುಲ, ನೀಲಿ ಬಣ್ಣದ ಭೂದೃಶ್ಯವನ್ನು ಚಿತ್ರಿಸಲಾಗಿದೆ. ಹಿನ್ನೆಲೆಯಲ್ಲಿ ಒಂದು ಕಲ್ಪವೃಕ್ಷವನ್ನು ಚಿತ್ರಿಸಿದ್ದು, ಹಸಿರು ವರ್ಣದ ಗರಿಗಳನ್ನು ಹೊಂದಿದೆ. ಭಾರತೀಯ ಸಾಂಪ್ರದಾಯಿಕ ಕಲ್ಪನೆಯ ಈ ಚಿತ್ರವು, ವಿದೇಶಿ ಕಲಾವಿದನ ಕಲ್ಪನೆಯಲ್ಲಿ ಸಾಮಾನ್ಯ ಮಾನವ ಬದುಕು ಬಿಂಬಿತವಾಗಿದೆ. ಮಿತವಾದ ಪ್ರಾಥಮಿಕ ವರ್ಣಗಳಾದ ಸಂಯೋಜನೆಗೊಳಿಸಿದ್ದಾನೆ. ಚಿತ್ರವು ಅತೀಯಾದ ಅಲಂಕಾರದಿಂದ ರೂಪಿತವಾಗಿಲ್ಲವಾದರೂ ಧಾರ್ಮಿಕ ಪ್ರಜ್ಞೆಯೂ ಮೂಡಿ ಬಂದಿರುತ್ತದೆ. ರೇಖೆ, ಆಕೃತಿ ಹಾಗೂ ಭಾವ ಲಕ್ಷಣಗಳಲ್ಲಿ ಕಲಾವಿದನ ಸಾಧಾರಣ ಅನುಭವವು ಮೂಡಿಬಂದಿದೆ. ಚಿತ್ರ ಸಂಯೋಜನೆ ಹಾಗೂ ಯಥಾದರ್ಶನವು ಸಾಧಾರಣ ಮಟ್ಟದಲ್ಲಿ ರೂಪಿತಗೊಂಡಿದೆ.

**ಚಿತ್ರ ಸಂಖ್ಯೆ ೦೨, ೦೩, ೦೪, ೦೫, ೦೬, ೦೭, ೦೮ / ವಿಷ್ಣು, ಶ್ರೀದೇವಿ-ಭೂದೇವಿ**

ತ್ರಿಮೂರ್ತಿಗಳಲ್ಲಿ ಮನುಕುಲದ ರಕ್ಷಕನಾದ ವಿಷ್ಣು ದೇವನು ಅನೇಕ ಅವತಾರಗಳನ್ನು ತಾಳಿದ ಶ್ರೇಷ್ಠ ದೇವತೆಯಾಗಿದ್ದಾನೆ. ವಿಷ್ಣು ಪುರಾಣಗಳಲ್ಲಿ ಈ ದೇವತೆಯ ಕುರಿತು ಇವನ ಅವತಾರಗಳ ಕುರಿತು ಅನೇಕ ವಿಷಯಗಳು ದೊರೆಯುತ್ತವೆ. ಪರಾಶರ ಮುನಿಗಳು ಮೈತ್ರೇಯ ಮುನಿಗಳಿಗೆ ವಿಷ್ಣುವಿನ ಪುರಾಣ ಕುರಿತು ಕಥೆಯ ಮೂಲಕ ವರ್ಣಿಸಿರುವುದನ್ನು ಆ ಪುರಾಣದಲ್ಲಿ ಕಾಣುತ್ತೇವೆ. ಈ ಪುರಾಣವು ಸುಮಾರು ಇಪ್ಪತ್ತಮೂರು ಸಾವಿರ ಶ್ಲೋಕಗಳಿಂದ ಕೂಡಿದೆ.

ಇಲ್ಲಿ ಚಿತ್ರಿತಗೊಂಡಿರುವ ಗಾಜಿನ ಚಿತ್ರಗಳು ಒಂದೇ ಆಶಯವನ್ನು ಹೊಂದಿವೆ. ಇದೇ ಸನ್ನಿವೇಶಗಳ ಚಿತ್ರಗಳು ಮೈಸೂರು ಹಾಗೂ ತಂಜಾವೂರು ಸಾಂಪ್ರದಾಯಿಕ ಭಿತ್ತಿ ಹಾಗೂ ಕಿರುರೂಪಗಳಲ್ಲಿ ಚಿತ್ರಿತಗೊಂಡಿವೆ. ಆ ಮಾದರಿಯನ್ನೇ ಗಾಜಿನ ಕಲಾವಿದರು ಅನುಸರಿಸಿ ಪ್ರತಿಕೃತಿ ಮಾಡಿರಬಹುದೆಂದು ತೋರುತ್ತದೆ. ಇದೇ ಚಿತ್ರಗಳು ಸಾಕಷ್ಟು ಸಂಖ್ಯೆಯಲ್ಲಿ ಪ್ರತಿರೂಪಗೊಂಡಿರುವುದನ್ನು ನಾವು ಕಾಣುತ್ತೇವೆ. ಇಲ್ಲಿ ನನಗೆ ಎಂಟು ಚಿತ್ರಗಳು ಲಭ್ಯವಿರುವುದನ್ನು ಮಾತ್ರ ಯೋಚಿಸಲಾಗುತ್ತಿದೆ. ಇಲ್ಲಿ ಚಿತ್ರಿತಗೊಂಡಿರುವ ಎಂಟು ಚಿತ್ರಗಳಲ್ಲಿ ರೇಖೆ, ವರ್ಣ, ಆಕೃತಿ, ವೇಷ ಭೂಷಣ, ಹಿನ್ನೆಲೆ ಹಾಗೂ ಮುನ್ನೆಲೆಯಲ್ಲಿ ಬಳಸಿರುವ ವಸ್ತುಗಳಲ್ಲಿ ಸ್ವಲ್ಪ ವೈರುಧ್ಯತೆ ಕಂಡು ಬರುತ್ತವೆ ಮತ್ತು ಚಿತ್ರಗಳ ಆಕಾರಗಳಲ್ಲಿ ಹೆಚ್ಚು ಕಡಿಮೆ ಅಳತೆಗಳನ್ನು ಹೊಂದಿವೆ. ಆದರೆ ಈ ಚಿತ್ರಗಳ ಒಟ್ಟಾರೆ ಆಶಯ ಒಂದೇ ಆಗಿದೆ.

ಚಿತ್ರ ಸಂಖ್ಯೆ ೦೨ ರಲ್ಲಿ ಚತುರ್ಭುಜಧಾರಿಯಾದ ವಿಷ್ಣುವು ತಿಳಿಗುಲಾಬಿ ತಾವರೆಯ ಮೇಲೆ ನಿಂತಿರುವನು. ಇದೇ ಸ್ಥಿತಿಯನ್ನು ಏಳು ಚಿತ್ರಗಳಲ್ಲಿ ಕಾಣುತ್ತೇವೆ. ಇಲ್ಲಿ ಕಲಾವಿದನು ವಿಷ್ಣುವಿನ ಮುಖವನ್ನು ಬಿಳಿ ಮತ್ತು ನೀಲಿ ಬಣ್ಣದಿಂದ ಸಂಯೋಜನೆಗೊಳಿಸಿದ್ದು, ನೈಜತೆಯನ್ನು ತರುವುದರ ಜೊತೆಗೆ ಆಕರ್ಷಕವಾಗಿ ದುಂಡುತನವನ್ನು ತಂದಿದ್ದಾನೆ. ಮುಖ ಲಕ್ಷಣವು ಅತ್ಯಂತ ತೇಜಸ್ಸಿನಿಂದ ಕೂಡಿರುವಂತೆ ಕುಂಚದ ಕೈಚಳಕವನ್ನು ತೋರಿಸಿದ್ದಾನೆ. ಈ ವರ್ಣನೆಯನ್ನು ಉಳಿದ ಚಿತ್ರಗಳಲ್ಲಿಯೂ ಕಾಣುತ್ತೇವೆ. ಚಿತ್ರಕ್ಕೆ ಮುಕ್ಕಾಲು ಭಾಗ ಚಿನ್ನದ ರೇಖೆನ್ನು ಕೆಂಪು ಬಣ್ಣದ ಮೆರಗನ್ನು ಬಳಸಿರುವುದರಿಂದ ಈ ದೇವತೆಗಳ ವೇಷಭೂಷಣಗಳು ಹಿನ್ನೆಲೆಯ ಪರದೆಗಳು

ಕಣ್ಣಿಗೆ ರಂಜಿಸುತ್ತಿವೆ. ಈ ವರ್ಣಗಳ ಸಂಯೋಜನೆಯಿಂದ ಅಲಂಕಾರ ನಕ್ಷೆಯ ಮೆರಗನ್ನು ತರಲಾಗಿದೆ. ಚಿತ್ರದಲ್ಲಿ ವಿಷ್ಣುವನ್ನು ಅತೀಯಾದ ಸ್ವರ್ಣಾಭರಣಗಳಿಂದ ಅಲಂಕರಿಸಿದ್ದು, ಇವುಗಳಿಗೆ ಬೆಳ್ಳಿಯ ಹಾಳೆಯನ್ನು ಗಾಜಿನ ಹಿನ್ನೆಲೆಯಲ್ಲಿ ಬಳಸಿ ಆಭರಣಗಳು ಬಹು ಆಕರ್ಷಕವಾಗಿ ಕಾಣುವಂತೆ ಕಲಾಕಾರನು ಪ್ರಯತ್ನಿಸಿದ್ದಾನೆ. ಹಳದಿ ಧೋತಿ ಹಾಗೂ ಕೆಂಪು ಉತ್ತರಿಯವನ್ನು ಹೊಂದಿದ್ದು, ಕೆಂಪು ಬಟ್ಟೆಯನ್ನು ನಡುವಿಗೆ (ಸೊಂಟಕ್ಕೆ) ಅಲಂಕಾರಿಕವಾಗಿ ಕಟ್ಟಲಾಗಿದೆ. ಈ ಭೂಷಣವನ್ನು ನೃತ್ಯಪಟುಗಳಲ್ಲಿ ಕಾಣುತ್ತೇವೆ.

ವಿಷ್ಣುವಿನ ಎಡ ಮತ್ತು ಬಲಪಾರ್ಶ್ವಗಳಲ್ಲಿ ಶ್ರೀದೇವಿ ಮತ್ತು ಭೂದೇವಿಯರು ಚಿತ್ರಿತಗೊಂಡಿರುವರು. ಇದೇ ವಿವರಗಳನ್ನು ಉಳಿದ ಏಳು ಚಿತ್ರಗಳಲ್ಲಿ ಕಾಣುತ್ತೇವೆ. ಶ್ರೀದೇವಿಯು ಸಮುದ್ರ ಮಂಥನ ಸಂದರ್ಭದಲ್ಲಿ ಹುಟ್ಟಿದವಳು. ಈ ದೇವತೆಯ ಕುರಿತು ಕಥೆಯು ಇದೆ. ದೂರ್ವಾಸರಿಂದ ಶಾಪಗ್ರಸ್ತನಾದ ದೇವೇಂದ್ರನು ಬ್ರಹ್ಮನ ಮೊರೆಹೋಗಲು, ಬ್ರಹ್ಮನು ಸೇರಿ ವಿಷ್ಣುವನ್ನು ಕುರಿತು ಪ್ರಾರ್ಥಿಸಲು, ವಿಷ್ಣು ಪ್ರಸನ್ನನಾಗಿ ದೇವತೆಗಳೇ ನಿಮ್ಮ ಶಕ್ತಿಯನ್ನು ವೃದ್ಧಿಸಿಕೊಳ್ಳಲು ದಾನವರೊಡಗೂಡಿ ಸಕಲ ಗಿಡ ಮೂಲಿಕೆಗಳನ್ನು ತಂದು ಕ್ಷೀರ ಸಾಗರದಲ್ಲಿ ಹಾಕಿ, ಮಂದರ ಪರ್ವತವನ್ನು ಕಡಗೋಲನ್ನಾಗಿಸಿ ವಾಸುಕಿಯನ್ನು ಹಗ್ಗವಾಗಿ ಮಾಡಿಕೊಂಡು ಅಮೃತವನ್ನು ಪಡೆಯಬೇಕು ಎಂದು ಹೇಳಿದನು. ಈ ಮಂಥನ ಕಾಲದಲ್ಲಿಯೇ ಶ್ರೀದೇವಿಯು ಹುಟ್ಟಿದವಳು. ಈ ಸಂದರ್ಭದಲ್ಲಿ ಇವಳಲ್ಲದೇ ಇನ್ನು ಅನೇಕ ದೇವತೆಗಳು ಹುಟ್ಟಿಬಂದರು. ಶ್ರೀದೇವಿಯ ಹುಟ್ಟುವಾಗಲೇ ಕೈಯಲ್ಲಿ ಕಮಲವನ್ನು ಹಿಡಿದುಕೊಂಡು ಬಂದವಳು. ಇಂಥ ದೇವತೆಯು ಹರಿಯ ವೃಕ್ಷಸೇರಿದಳು.[೮] ಅಸುರನಿಂದ ಅಪಹೃಗೊಂಡ ಭೂದೇವಿಯನ್ನು ವಿಷ್ಣು, ವರಹಾವತಾರ ಧರಿಸಿ, ಜಲ ಪಾತಾಳದಲ್ಲಿದ್ದ ಈ ದೇವತೆಯನ್ನು ಮೇಲಕ್ಕೆ ತಂದ ಕಥೆಯು ಪುರಾಣದಿಂದ ತಿಳಿಯುತ್ತದೆ. ಗಾಜಿನ ಚಿತ್ರಗಳಲ್ಲಿ ಇಬ್ಬರೂ ದೇವತೆಗಳನ್ನು ಸಂಯೋಜನೆಗೊಳಿಸಿದ್ದಾರೆ. ಇಬ್ಬರ ಕೈಯಲ್ಲಿ ತಾವರೆಯ ಹೂವಿದ್ದು, ವಿಷ್ಣು ವಿನೊಡನೆ ಪ್ರೇಮಾಲಾಪನೆ ಮಾಡುತ್ತಿರುವಂತೆ ಕಲಾವಿದನು ಸೃಜಿಸಿದ್ದಾನೆ. ಸ್ವರ್ಣ ಕಿರೀಟಧಾರಿಗಳಾದ ಈ ದೇವತೆಗಳು ಸಾಂಪ್ರದಾಯಿಕ ಸೀರೆ ಮತ್ತು ಕುಪ್ಪಸಗಳನ್ನು ಧರಿಸಿರುವರು. ಇವು ನಮ್ಮ ಸಂಸ್ಕೃತಿಯನ್ನು ಬಿಂಬಿಸುತ್ತವೆ. ಇದೇ ವಿವರದ ಚಿತ್ರಗಳು ಉಳಿದ ಏಳು ಚಿತ್ರಗಳಲ್ಲಿ ಬಿಂಬಿತಗೊಂಡಿವೆ.

ಚಿತ್ರದ ಹಿನ್ನೆಲೆಯಲ್ಲಿ ವಿವಿಧ ಬಣ್ಣಗಳ ಪರದೆಗಳನ್ನು ಅಲಂಕರಿಸಿದ್ದು, ಚಿತ್ರದ ಸುತ್ತಲೂ ಆಕರ್ಷಕ ಕಂಬಗಳನ್ನು ರಚಿಸಿ, ಅಲಂಕರಿಸಿದ್ದಾರೆ. ಚಿತ್ರವು ಎದ್ದು ತೋರುವಂತೆ ಏಕರೂಪವಾಗಿ ಕಪ್ಪು ಬಣ್ಣವನ್ನು ಲೇಪನಮಾಡಲಾಗಿದೆ. ವಿಷ್ಣುವಿನ ಶಂಖ ಮತ್ತು ಚಕ್ರಗಳನ್ನು ಹಾಗೂ ಕಿರೀಟವನ್ನು ಆಕರ್ಷಕವಾಗಿ ಅಲಂಕರಿಸಲಾಗಿದೆ. ಈ ಚಿತ್ರವು ರೇಖೆ, ವರ್ಣ ಹಾಗೂ ಸಂಯೋಜನಾ ದೃಷ್ಟಿಯಿಂದ ಪ್ರಬುದ್ಧವಾಗಿ ಮೂಡಿಬಂದಿದೆ ಎನ್ನಬಹುದು. ಯಾಕೆಂದರೆ ಗಾಜಿನ ಮೇಲ್ಮೈ ಅತ್ಯಂತ ನುಣುಪಾಗಿರುತ್ತದೆ ಮತ್ತು ಹಿಮ್ಮುಖವಾಗಿ ಚಿತ್ರರಚನೆ ಮಾಡುವ ಕ್ರಮವಾಗಿರುವುದರಿಂದ ಇಲ್ಲಿ ಕಲಾವಿದನ ತಾಳ್ಮೆ ಮತ್ತು ಜಾಣ್ಮೆಯನ್ನು ಪರೀಕ್ಷೆಗೊಡ್ಡುತ್ತದೆ.

---

೮. ರಾಘವೇಂದ್ರ ಆಚಾರ್ಯ ; ವಿಷ್ಣು ಪುರಾಣ, ಪುಟ ೧೮

ಚಿತ್ರ ಸಂಖ್ಯೆ ೦೩ ಇಲ್ಲಿ ವಿಷ್ಣುವನ್ನು ಬಿಳಿ ಮತ್ತು ನೀಲಿ ಬಣ್ಣಗಳಿಂದ ಲೇಪನಮಾಡಲಾಗಿದ್ದು ಸರ್ವಾಭರಣಗಳಿಂದ ಭೂಷಿತಗೊಳಿಸಲಾಗಿದೆ. ಇಲ್ಲಿ ಧರಿಸಿದ ಕೆಂಪು ಉತ್ತರಿಯ, ನಡುವಿಗೆ ಸುತ್ತಿದ ಕೆಂಪು ಶಲ್ಯಗಳು ಹೂವಿನ ಚಿತ್ತಾರಗಳನ್ನು ಒಳಗೊಂಡಿವೆ. ಶಂಖ ಚಕ್ರಗಳು ಹಾಗೂ ಕಿರೀಟಾಭರಣಗಳು ಸ್ವರ್ಣಕಾಗದದಿಂದ ಅಲಂಕರಿಸಿದ್ದಾರೆ. ವಿಷ್ಣುವಿನ ಎಡ-ಬಲದಲ್ಲಿ ನಿಂತ ಶ್ರೀದೇವಿ-ಭೂದೇವಿಯರು ಸಾಂಪ್ರದಾಯಿಕ ಸೀರೆ, ಕುಪ್ಪಸಗಳನ್ನು ಧರಿಸಿರುವರು. ಈ ಚಿತ್ರದ ವರ್ಣ ಸಂಯೋಜನೆಯು ಚಿತ್ರ ೦೨ ರಂತೆ ರೂಪಗೊಂಡಿದೆ. ಎರಡು ಚಿತ್ರಗಳಲ್ಲಿ ದೇವತೆಗಳು ಪಾರ್ಶ್ವಮುಖ ಹೊಂದಿದ್ದು, ವರ್ಣ ವಿಧಾನವು ಒಂದೇ ರೀತಿಯಲ್ಲಿದೆ. ಚಿತ್ರದ ಹಿನ್ನೆಲೆಯಲ್ಲಿ ಬಳಸಿದ ಅಲಂಕಾರಿಕ ಪರದೆಗಳನ್ನು ಉತ್ತಮವಾಗಿ ಸಂಯೋಜಿಸಿದ್ದಾರೆ. ಇವು ಸ್ವರ್ಣರೇಖೆ ಹಾಗೂ ಕೆಂಪು ಮೆರಗು ಬಣ್ಣವನ್ನು ಹೊಂದಿವೆ. ಚಿತ್ರವು ಎದ್ದು ತೋರುವಂತೆ ಕಪ್ಪು ಬಣ್ಣವನ್ನು ಏಕರೂಪ ರೂಪವಾಗಿ ಲೇಪನ ಮಾಡಲಾಗಿದೆ. ಈ ಚಿತ್ರದಲ್ಲಿಯೂ ಸಹಿತ ಚಿತ್ರ ೦೨ ರಂತೆ ಆಕೃತಿಗಳಲ್ಲಿ ಭಾವನಾನಿರೂಪಣೆ ಮಾಡಲಾಗಿದೆ.

ಚಿತ್ರ ಸಂಖ್ಯೆ ೦೪ ಇದು ಮೈಸೂರು ಚಿತ್ರ ಸಂಪ್ರದಾಯವನ್ನು ಹೋಲುವ ಈ ಚಿತ್ರವು ೪೦ x ೪೫ ಸೆಂ.ಮೀ. ಅಳತೆಯನ್ನು ಹೊಂದಿದೆ. ಇದು ಧರ್ಮಸ್ಥಳದ ಮಂಜುಷಾ ದಲ್ಲಿ ಲಭ್ಯವಿದೆ. ಇಲ್ಲಿ ವಿಷ್ಣುವನ್ನು ಖಡುನೀಲಿ ಬಣ್ಣದಿಂದ ರೂಪಿತಗೊಳಿಸಿದ್ದು, ವಿವಿಧ ವರ್ಣಗಳ ಉತ್ತರಿಯವನ್ನು, ಬಿಳಿ ಬಣ್ಣದ ಧೋತಿಯನ್ನು, ನಡುವಿಗೆ ಹೂವಿನ ಚಿತ್ತಾರದ ಕೆಂಪು ಶೆಲ್ಯವನ್ನು ಚಿತ್ರಿಸಲಾಗಿದೆ. ಇಲ್ಲಿ ವಿಷ್ಣುವಿನ ದೇಹ ರಚನೆಯಲ್ಲಿ ಶಾರೀರಿಕವಾಗಿ ಪ್ರಬುದ್ಧತೆ ತರಲಾಗಿದೆ. ವಿಷ್ಣುವಿನ ಅಕ್ಕಪಕ್ಕ ನಿಂತ ದೇವತೆಗಳನ್ನು ಪಾರ್ಶ್ವಮುಖವಾಗಿ ಚಿತ್ರಿಸಿದ್ದಾರೆ. ಚಿನ್ನದ ಹಾಳೆಯಿಂದ ಲೇಪಿತವಾದ ಇವರ ಉಡುಗೆ-ತೊಡುಗೆಗಳು ಅತೀಯಾದ ಅಲಂಕರಣದಿಂದ ಬಿಂಬಿಸಲಾಗಿದೆ, ಇದರಿಂದ ಇವರ ವೇಷಭೂಷಣಗಳಲ್ಲಿ ಸ್ಪಷ್ಟತೆ ಕಂಡು ಬರುವದಿಲ್ಲ, ಈ ಚಿತ್ರದಲ್ಲಿ ವಿಶೇಷವಾಗಿ ಅಲಂಕೃತ ಪ್ರಭಾವಳಿಯು ಕಂಡುಬರುತ್ತಿದ್ದು, ಶ್ವೇತವರ್ಣದ ತಾವರೆಯ ಮಾಲೆಯಿಂದ ಸಂಯೋಜನೆಗೊಳಿಸಲಾಗಿದೆ. ಚಿತ್ರದ ಸುತ್ತಲೂ ಹೂವು ಮತ್ತು ಎಲೆಗಳಿಂದ ಕೂಡಿದ ಅಂಚನ್ನು ಚಿತ್ರಿಸಲಾಗಿದೆ, ಅಂಚಿನಲ್ಲಿ ಕಂಡುಬರುವ ರೇಖಾ ವಿನ್ಯಾಸವು ಕಲಾವಿದನು ಅಲಂಕಾರಕ್ಕಾಗಿ ಈ ರೀತಿ ಚಿತ್ರಿಸಿದ್ದಾನೆಂದು ತೋರುತ್ತದೆ, ಇಲ್ಲಿ ಚಿತ್ರವು ಎದ್ದು ತೋರುವಂತೆ ಏಕರೂಪವಾಗಿ ಹಿನ್ನೆಲೆಯಲ್ಲಿ ಕೆಂಪುವರ್ಣವನ್ನು ಬಳಸಿದ್ದಾನೆ. ಚಿತ್ರದಲ್ಲಿ ಕೆಲವು ಕಡೆ ರೇಖೆ ಮತ್ತು ವರ್ಣಗಾರಿಕೆಯಲ್ಲಿ ಸೂಕ್ಷ್ಮತೆಯು ಕಂಡುಬರುತ್ತದೆ.

ಚಿತ್ರಸಂಖ್ಯೆ-೦೫ ಈ ಚಿತ್ರವು ಅಮೀನಗಡದ ಬಸವೇಶ್ವರ ದೇವಸ್ಥಾನದಲ್ಲಿ ಸಂಗ್ರಹಗೊಂಡಿದೆ, ಚಿತ್ರದಲ್ಲಿ ವಿಷ್ಣುವನ್ನು ಚಿತ್ರಸಂಖ್ಯೆ ೦೧ ರಂತೆ ಚಿತ್ರಿಸಿದ್ದು ಉತ್ತರಿಯವನ್ನು ಬಹು ವಿಶಿಷ್ಟವಾಗಿ ಚಿತ್ರಿಸಲಾಗಿದೆ, ಇಲ್ಲಿ ವಿಷ್ಣುವನ್ನು ಸರ್ವಾಭರಣಗಳಿಂದ, ಪುಷ್ಪಮಾಲೆಗಳಿಂದ ಅಲಂಕರಿಸಲಾಗಿದೆ, ಇನ್ನೂ ವಿಶೇಷವೆಂದರೆ ದೇವತೆಗಳು ನಿಂತಿರುವ ಪೀಠವನ್ನು ಅಲಂಕಾರಿಕವಗಿ ರಚಿಸಲಾಗಿದೆ, ವಿಷ್ಣುವಿನ ಅಕ್ಕಪಕ್ಕದಲ್ಲಿರುವ ಶ್ರೀದೇವಿ-ಭೂದೇವಿಯರೂ ಸಹಿತ ಸರ್ವಾಭರಣಗಳಿಂದ ಭೂಷಿತರಾಗಿದ್ದು, ಇಲ್ಲಿ ವಿಶೇಷವೆಂದರೆ ಇಬ್ಬರೂ ಬಣ್ಣಬಣ್ಣದ ಪುಷ್ಪಮಾಲೆಗಳಿಂದ ಭೂಷಿತರಾಗಿದ್ದಾರೆ.

ಮತ್ತು ಎದುರು ಮುಖವಾಗಿ ನಿಂತು ತಾವರೆಯನ್ನು ಹಿಡಿದುಕೊಂಡು ಶೋಭಿಸುತ್ತಿದ್ದಾರೆ. ಚಿತ್ರದ ಹಿನ್ನೆಲೆಯಲ್ಲಿ ಅಲಂಕಾರಯುತವಾದ ಕಂಬಗಳನ್ನು ಚಿತ್ರಿಸಿ, ಬಣ್ಣದ ಪರದೆಗಳನ್ನು ಸಂಯೋಜಿಸಿದ್ದಾರೆ. ಇಲ್ಲಿ ಸಂಯೋಜನೆಗೊಂಡಿರುವ ವರ್ಣವಿನ್ಯಾಸವು ಚಿತ್ರಸಂಖ್ಯೆ-೦೧ ರಂತೆ ವ್ಯಕ್ತಗೊಂಡಿದೆ.

ಚಿತ್ರದ ಹಿನ್ನೆಲೆಯನ್ನು ಹಸಿರು ಬಣ್ಣದಿಂದ ಏಕರೂಪವಾಗಿ ಲೇಪನಮಾಡಲಾಗಿದೆ. ಚಿತ್ರದ ರೇಖಾವಿನ್ಯಾಸ, ವರ್ಣವಿನ್ಯಾಸ, ಆಕೃತಿಗಳ ಸಂಯೋಜನೆ, ಯಥಾದರ್ಶನವೂ ಶಿಷ್ಟರೂಪದಲ್ಲಿ ರಚನೆಗೊಂಡಿದೆ. ಇದರಲ್ಲಿ ಕಲಾವಿದನು ಅಲಂಕಾರ ಪ್ರಜ್ಞೆಯನ್ನು ಮೆರೆದಿದ್ದಾನೆ.

ಚಿತ್ರಸಂಖ್ಯೆ – ೦೬ ಇದು ಸುರಪುರದ ತಾರಾಚಂದರ ಮನೆಯಲ್ಲಿ ಸಂಗ್ರಹಗೊಂಡಿದೆ. ಇಲ್ಲಿ ಚತುರ್ಭುಜಧಾರಿಯಾದ ವಿಷ್ಣು, ಸ್ವರ್ಣಾಭರಣಗಳಿಂದ ಭೂಷಿತನಾಗಿದ್ದಾನೆ. ಇಲ್ಲಿ ಆಭರಣಗಳನ್ನು ವಿಶಿಷ್ಟ ರೀತಿಯಲ್ಲಿ ಕಲಾವಿದನು ಸಂಯೋಜನೆಗೊಳಿಸಿದ್ದಾನೆ. ವಿಷ್ಣು ವಿನ್ಯಾಸವು ಮತ್ಸ್ಯ ರೂಪದಲ್ಲಿ ಗೋಚರವಾಗುವಂತೆ ವ್ಯಕ್ತಗೊಂಡಿದೆ. ದೊಡ್ಡದಾದ ಪುಷ್ಪಮಾಲೆಯುನ್ನು ವಿಶಿಷ್ಟವಾಗಿ ಸಂಯೋಜನೆಗೊಳಿಸಲಾಗಿದ್ದು, ವಿಷ್ಣುವಿನ ಎಡ ಮತ್ತು ಬಲಪಾರ್ಶ್ವದಲ್ಲಿ ಶ್ರೀದೇವಿ-ಭೂದೇವಿಯರು ಶ್ವೇತವರ್ಣದ ತಾವರೆಯನ್ನು ಹಿಡಿದು ನಿಂತಿರುವರು. ಈ ಹೂವುಗಳಲ್ಲಿ ಸ್ಪಷ್ಟ ಆಕಾರ ಗೋಚರಿಸುತ್ತಿಲ್ಲ. ಇಬ್ಬರೂ ದೇವತೆಗಳು ಬಿಳಿಬಣ್ಣದ ಸೀರೆ, ಹಸಿರು ಬಣ್ಣದ ರವಿಕೆಯನ್ನು ಧರಿಸಿರುವರು. ಈ ವೇಷಭೂಷಣಗಳಲ್ಲಿ ಆಧುನಿಕ ರೀತಿಯ ವರ್ಣವಿಧಾನವು ಮೂಡಿಬಂದಿದೆ.

ಚಿತ್ರದ ಹಿನ್ನೆಲೆಯಲ್ಲಿ ಬೃಹತ್ತ ಕಂಬಗಳ ಮಂಟಪವಿದ್ದು, ನಡುವೆ ಪರದೆಯನ್ನು ಅಲಂಕರಿಸಲಾಗಿದೆ. ಚಿತ್ರವು ಎದ್ದು ತೋರುವಂತೆ ಕಪ್ಪು ಬಣ್ಣದಿಂದ ಹಿನ್ನೆಲೆಯನ್ನು ಲೇಪನ ಮಾಡಲಾಗಿದೆ. ಚಿತ್ರವು ರೇಕೆಮ ವರ್ಣವಿನ್ಯಾಸ, ಆಕೃತಿಗಳ ಸಂಯೊಜನೆ ಹಾಗೂ ಯಥಾದೃಷ್ಟಿ ರೂಪವು ತೂಕಬದ್ಧವಾಗಿ, ಪ್ರಮಾಣಬದ್ಧವಾಗಿ ಮೂಡಿಬಂದಿಲ್ಲವಾದರೂ ಆಕರ್ಷಕವಾಗಿ ಕಂಡುಬರುತ್ತದೆ.

ಚಿತ್ರಸಂಖ್ಯೆ-೦೭ ಈ ಚಿತ್ರವು ಹೊಸಪೇಟೆ ತಾಲ್ಲೂಕು ಮಲಪನ ಗುಡಿಯ ಕೆ. ಶ್ರೀನಿವಾಸಶೆಟ್ಟಿ ಇವರ ಮನೆಯಲ್ಲಿ ಲಭ್ಯವಿದೆ. ಇದು ೫೫ x ೪೯ಸೆಂ.ಮೀ. ಅಳತೆಯನ್ನು ಹೊಂದಿದೆ. ಇಲ್ಲಿ ಶ್ವೇತ ವಸ್ತ್ರಧಾರಿಯಾದ ವಿಷ್ಣು ಆಭರಣಗಳಿಂದ ಭೂಷಿತನಾಗಿದ್ದಾನೆ. ಇಲ್ಲಿ ವಿಷ್ಣುವಿನ ಮುಖಭಾವವು ಹಸನ್ಮುಖಿಯಗಿದ್ದು ಆ ಬಟ್ಟಲು ಕಣ್ಣುಗಳಲ್ಲಿ ಪ್ರಸನ್ನತೆ ಎದ್ದು ತೊರುವಂತೆ ಕಲಾವಿದನು ಶ್ರಮಿಸಿದ್ದಾನೆ. ಕೆಂಪು ಹಾಗೂ ಸ್ವರ್ಣರೇಖೆಯನ್ನು ಬಳಸಿಕೊಂಡು ಉತ್ತರೀಯವನ್ನು ಹಾಗೂ ನಡುವಿನ ಬಟ್ಟೆಯನ್ನು ಧರಿಸಿದ್ದಾನೆ. ವಿಶಿಷ್ಟವಾದ ವೈಜಯಂತಮಾಲೆಯನ್ನು ಕಲಾವಿದನು ನಿರೂಪಿಸಿದ್ದಾನೆ. ವಿಷ್ಣುವಿನ ಎಡ. ಬಲಗಳಲ್ಲಿರುವ ಶ್ರೀದೇವಿ ಹಾಗೂ ಭೂದೇವಿಯರ ಉಡುಪುಗಳು ಆಕರ್ಷಕ ಚಿತ್ರವಿನ್ಯಾಸಗಳಿಂದ ಕೂಡಿದೆ. ಉಳಿದೆಲ್ಲ ಚಿತ್ರಗಳಿಗಿಂತ ಇಲ್ಲಿ ವಿಶಿಷ್ಟವಾಗಿ ಚಿತ್ರಿತಗೊಂಡಿವೆ. ಇಬ್ಬರೂ ವೈವಿಧ್ಯಮಯವಾದ ಮಾಲೆಗಳನ್ನು ಧರಿಸಿರುವರು. ಚಿತ್ರದ ಹಿನ್ನೆಲೆಯಲ್ಲಿ ಅಲಂಕಾರ ಪ್ರಭಾವಳಿಯನ್ನು ಚಿತ್ರಿಸಿದ್ದು ಅದಕ್ಕೆ ಬಿಳಿಬಣ್ಣದ ಪುಷ್ಪಮಾಲೆಯನ್ನು ಸಂಯೋಜನೆಗೊಳಿಸಲಾಗಿದೆ. ಚಿತ್ರದ ಅಂಚುಗಳಲ್ಲಿ ಕಂಬಗಳನ್ನು ಚಿತ್ರಿಸಿದ್ದು ಅವುಗಳ ಮೇಲೆ ಗಂಧರ್ವ ಕನ್ಯೆಯರನ್ನು ವಿನ್ಯಾಸಗೊಳಿಸಲಾಗಿದೆ. ಈ ಚಿತ್ರವು ಉತ್ತಮ ರೇಖಾವಿನ್ಯಾಸ ಹೊಂದಿದ್ದು, ವರ್ಣ ಮತ್ತು

ಆಕೃತಿಗಳ ಹೊಂದಾಣಿಕೆ ಉತ್ತಮವಾಗಿ ಮೂಡಿಬಂದಿದೆ. ಇಲ್ಲಿ ಮುಕ್ಕಾಲು ಭಾಗ ಚಿನ್ನದ ಹಾಳೆ ಹಾಗೂ ಕೆಂಪು ಮೆರಗು ಬಣ್ಣಗಳಿಂದ ಮಿಳಿತಗೊಂಡಿವೆ. ಚಿತ್ರವು ಸ್ಪಷ್ಟವಾಗಿ ಗೋಚರವಾಗುವಂತೆ ಕೆಂಪು ಮಿಶ್ರಿತ ಬಿಳಿಬಣ್ಣವನ್ನು ಏಕರೂಪವಾಗಿ ಲೇಪನಮಾಡಲಾಗಿದೆ.

ಚಿತ್ರ ಸಂಖ್ಯೆ-೦೮ ಈ ಚಿತ್ರವು ಗುಲ್ಬರ್ಗದ ಶ್ರೀಹನ್ಸರಾಜ್ ಮುಂದಡಾ ಇವರ ಮನೆಯಲ್ಲಿ ಸಂಗ್ರಹವಿದೆ. ನೀಲಿ ಹಾಗೂ ಬಿಳಿವರ್ಣಗಳ ಮಿಶ್ರಣದಲ್ಲಿ ವಿಷ್ಣು ರೂಪಗೊಂಡು ಆಭರಣಗಳಿಂದ ಅಲಂಕೃತಗೊಂಡಿದ್ದಾನೆ. ಈ ಆಭರಣ ವಿನ್ಯಾಸವು ಚಿತ್ರಸಂಖ್ಯೆ ೦೭ರಲ್ಲಿರುವಂತೆಯೇ ಸಂಯೋಜನೆಗೊಂಡಿದೆ, ಶ್ರೀದೇವಿ ಹಾಗೂ ಭೂದೇವಿಯರ ವೇಷಭೂಷಣಗಳು ಆಭರಣ ವಿನ್ಯಾಸಗಳು ಅಲಂಕಾರಿಕವಾಗಿ ರೂಪಗೊಂಡಿದ್ದು, ಉತ್ತಮ ರೇಖಾವಿನ್ಯಸದಿಂದ ಅನಾವರಣಗೊಂಡಿದೆ. ಇವರ ವೇಷಭುಷಣಗಳಲ್ಲಿ ಅಲಂಕಾರ ಪ್ರಜ್ಞೆಯೂ ಒಡಮೂಡಿದೆ, ಹಿನ್ನೆಲೆಯಲ್ಲಿ ಚಿತ್ರಿತಗೊಂಡ ಪ್ರಭಾವಳಿ ಅದಕ್ಕೆ ಪುಷ್ಪಮಾಲೆಯನ್ನು ಸಂಯೋಜಿಸಿದ್ದು, ಪುಷ್ಪಗಳ ಸ್ಪಷ್ಟತೆ ಕಾಣುವುದಿಲ್ಲ ಚಿತ್ರದ ಅಂಚು ಅಲಂಕಾರಿಕ ಕಂಬಗಳಿಂದ ರೂಪಗೊಂಡಿದ್ದು, ಅದಕ್ಕೆ ಪರದೆಯನ್ನು ಸಂಯೋಜಿಸಲಾಗಿದೆ. ಚಿತ್ರದಲ್ಲಿ ವರ್ಣವಿಧಾನವು ಗೌಣವಾಗಿದ್ದು, ರೇಖಾಸಂಯೋಜನೆಯಲ್ಲಿ ಪ್ರಮಾಣ, ತೂಕ ಹಾಗೂ ರಭಸತೆಯನ್ನು ಕಾಣಬಹುದು. ಚಿತ್ರದ ಹಿನ್ನೆಲೆಗೆ ಬಿಳಿಮಿಶ್ರಿತ ನೀಲಿಬಣ್ಣವನ್ನು ಲೇಪಿಸಲಾಗಿದೆ.

ಇಲ್ಲಿ ಚಿತ್ರಿತಗೊಂಡಿರುವ ಏಳು ಚಿತ್ರಗಳಲ್ಲಿ ದೇವತೆಗಳ ವೇಷಭೂಷಣಗಳು, ಆಭರಣಗಳ ಸಂಯೋಜನೆ, ಆಕೃತಿಗಳಲ್ಲಿನ ಶಾರೀರಿಕ ಲಕ್ಷಣಗಳು, ರೇಖಾ ಲಾವಣ್ಯತೆ, ವರ್ಣವೈವಿಧ್ಯತೆ ಹಾಗೂ ಹಿನ್ನೆಲೆಯಲ್ಲಿ ನಿರೂಪಿತಗೊಂಡ ಸನ್ನಿವೇಶಗಳು ಆಯಾ ಚಿತ್ರಗಳ ಕಲಾವಿದನ ಅಲಂಕಾರ ಪ್ರಜ್ಞೆ, ಸೌಂದರ್ಯಪ್ರಜ್ಞೆ, ಭಕ್ತಿಭಾವಗಳ ರಸಗ್ರಹಣ ಚಿಂತನೆ ಹಾಗೂ ವಿಷಯ ಜೋಡಣೆಯನ್ನು ಅವಲಂಬಿಸಿ ನಿರೂಪಣೆಗೊಂಡಿವೆ.

**ಚಿತ್ರಸಂಖ್ಯೆ ೦೯. ವಿಷ್ಣು (ವೆಂಕಟೇಶ)**

ಈ ಚಿತ್ರವು ನವಲಗುಂದದ ಶ್ರೀ ಮನೋಹರ ಹರಿಹರ ಇವರ ಮನೆಯಲ್ಲಿ ಲಭ್ಯವಿದ್ದು, ೩೯ x ೫೪ ಸೆಂ. ಮೀ ಅಳತೆಯನ್ನು ಹೊಂದಿದೆ. ಇಲ್ಲಿ ಚತುರ್ಭುಜಧಾರಿಯಾದ ವಿಷ್ಣು, ಶ್ವೇತವರ್ಣದಿಂದ ಅರಳಿದ ತಾವರೆಯ ಮೇಲೆ ನಿಂತಿರುವನು. ಎರಡು ಕೈಗಳಲ್ಲಿ ಶಂಖ ಮತ್ತು ಚಕ್ರವನ್ನು ಹಿಡಿದಿದ್ದು, ಕಿರೀಟಾಭರಣಗಳಿಂದ ಸರ್ವಭೂಷಿತನಾಗಿದ್ದಾನೆ. ಈ ಆಕೃತಿಯಲ್ಲಿ ರೇಖಾವಿನ್ಯಾಸವು ಅತ್ಯಂತ ಸೂಕ್ಷ್ಮವಿವರಗಳಿಂದ ಕೂಡಿದೆ. ಅದರಲ್ಲೂ ವಿಶೇಷವಾಗಿ ಹಿನ್ನೆಲೆಯಲ್ಲಿ ಚಿತ್ರಿತಗೊಂಡಿರುವ ಪ್ರಭಾವಳಿಯು ಈ ವಿವರಗಳನ್ನು ನೀಡುತ್ತದೆ. ಬಿಳಿವರ್ಣದ ಧೋತಿಯು ಉತ್ತರ ಕರ್ನಾಟಕದ ಪುರುಷರು ಧರಿಸುವ ರೀತಿಯಲ್ಲಿದೆ. ಬಂಗಾರ ವರ್ಣದ ಉತ್ತರಿಯವನ್ನು ಧರಿಸಿದ್ದು, ಹಿನ್ನೆಲೆಯಲ್ಲಿ ದೊಡ್ಡದಾದ ಹೂಮಾಲೆಯನ್ನು ಹಾಕಲಾಗಿದೆ.

ಇಲ್ಲಿ ವಿಷ್ಣುವಿನ ಮುಖವು ಹಸನ್ಮುಖಿಯಿಂದ ಕೂಡಿದ್ದು, ಬಟ್ಟಲು ಕಣ್ಣುಗಳಿಂದ ಪ್ರಸನ್ನತೆ ಸೂಸುವಂತೆ ಕಲಾವಿದನು ಸೃಜಿಸಿದ್ದಾನೆ. ವಿಷ್ಣುವಿನ ಹಿಂದೆ ನಿರ್ಮಿತಗೊಂಡ ಪ್ರಭಾವಳಿಯು ಅತ್ಯಂತ ಅಲಂಕಾರಯುತವಾಗಿ ಚಿತ್ರಿತಗೊಂಡಿದ್ದು, ಸೂಕ್ಷ್ಮ ನಕ್ಷಾ ವಿನ್ಯಾಸಗಳನ್ನು ಹೊಂದಿವೆ. ಬೃಹತ್ ಪುಷ್ಪಮಾಲೆಯೊಂದನ್ನು ಅಲಂಕಾರಿಕವಾಗಿ ಸಂಯೋಜನೆಗೊಳಿಸಲಾಗಿದೆ. ಹಿನ್ನೆಲೆಯಲ್ಲಿ

ಬಟ್ಟೆಗಳನ್ನು ಸಂಯೋಜಿಸಲಾಗಿದ್ದು, ಬಂಗಾರದ ಹಾಳೆಯಿಂದ ಹಾಗೂ ಕೆಂಪು ಮೆರಗು ಬಣ್ಣದಿಂದ ರಚನೆ ಮಾಡಲಾಗಿದೆ. ಚಿತ್ರವು ಎದ್ದು ತೋರುವಂತೆ ಹಳದಿ ಹಾಗೂ ನೀಲಿ ಮಿಶ್ರಬಣ್ಣಗಳನ್ನು ಲೇಪಿಸಲಾಗಿದೆ. ಇಲ್ಲಿ ಪೀಠವನ್ನು ಅಡ್ಡಸಾಲುಗಳನ್ನಾಗಿ ಚಿತ್ರಿಸಿ ಕಂದು ಬಣ್ಣವನ್ನು ಸಂಯೋಜನೆಗೊಳಿಸಲಾಗಿದ್ದು ಕೆಳಗೆ ಖಾದ್ಯ ತುಂಬಿದ ಬಟ್ಟಲುಗಳನ್ನು ಚಿತ್ರಿಸಿದ್ದಾರೆ. ಚಿತ್ರವು ಕಲಾಸಕ್ತರ ಮೇರೆಗೆ ರೂಪಗೊಂಡಿರುವಂತೆ ತೋರುತ್ತದೆ. ಒಟ್ಟಾರೆ ಈ ಚಿತ್ರವು ಸೂಕ್ಷ್ಮರೇಖಾ ವಿನ್ಯಾಸದಿಂದ ಕೂಡಿದ ಹಾಗೂ ರೇಖಾ ಲಾವಣ್ಯತೆ ಹೊಂದಿದ ಚಿತ್ರವೆಂದು ಹೇಳಬಹುದು. ವರ್ಣವಿಧಾನವು ಮಂದತೆಯಿಂದ ಕೂಡಿದ್ದರೂ ಆಕರ್ಷಕವಾಗಿ ಎಲ್ಲರ ಗಮನಸೆಳೆಯುತ್ತದೆ.

**ಚಿತ್ರಸಂಖ್ಯೆ ೧೧೦ ಸತ್ಯನಾರಾಯಣ**

ಈ ಚಿತ್ರವು ಸುರಪುರದ ಶ್ರೀ ತಾರಾಚಂದ್‌ರ ಮನೆಯಲ್ಲಿದೆ. ಇಲ್ಲಿ ತ್ರಿಮೂರ್ತಿಗಳಲ್ಲಿ ಒಬ್ಬನಾದ ಮಹಾವಿಷ್ಣು ಹಾಗೂ ತ್ರಿಲೋಕ ಸಂಚಾರಿಯಾದ ನಾರದರ ಸಮಾಗಮದ ದೃಶ್ಯವು ಬಿಂಬಿತವಾಗಿದೆ. ಚತುರ್ಭುಜಧಾರಿಯಾದ ವಿಷ್ಣು, ಶಂಖ, ಚಕ್ರ, ಗದೆ ಹಾಗೂ ಪದ್ಮ ಹಸ್ತಗಳನ್ನು ಒಳಗೊಂಡಿರುವನು. ಇಲ್ಲಿ ವಿಷ್ಣುವಿಗೆ ಮಿತವಾಗಿ ಆಭರಣಗಳನ್ನು ಸಂಯೋಜಿಸಿದ್ದು, ಹಳದಿ ಧೋತಿ ಹಾಗೂ ಕೆಂಪು ಉತ್ತರಿಯವನ್ನು ಚಿತ್ರಿಸಿದ್ದಾರೆ. ವಿಷ್ಣುವಿನ ಮೈಬಣ್ಣವು ಗೌರವ ವರ್ಣದಿಂದ ಕೂಡಿದ್ದರೂ ಇಲ್ಲಿ ಕಲಾವಿದನು ನೀಲಿಬಣ್ಣವನ್ನು ಸಂಯೋಜಿಸಿದ್ದಾನೆ. ಪುರಾಣಕಥೆಯಲ್ಲಿ ವಿಷ್ಣುವಿನ ಮೈಬಣ್ಣವು ನೀಲವರ್ಣವಾಗುವ ಸಂದರ್ಭವು ಬರುತ್ತದೆ. ಸಮುದ್ರ ಮಂಥನ ಕಾಲದಲ್ಲಿ ದೇವ-ದಾನವರು ಮಂದರ ಪರ್ವತವನ್ನು ಕಡಗೋಲಾಗಿಸಿ ವಾಸುಕಿ ಎಂಬ ಸರ್ಪವನ್ನು ಹಗ್ಗವಾಗಿ ಬಳಸಿ ಕ್ಷೀರ ಸಾಗರವನ್ನು ಕಡೆಯುವಾಗ ಹಾಲಾಹಲವು ಉದ್ಭವಿಸುತ್ತದೆ. ಭಯಂಕರವಾದ ಹಾಲಾಹಲವು ಆಕಾಶದೆತ್ತರಕ್ಕೆ ಹರಡುವಾಗ ಅದರ ಸ್ಪರ್ಶದಿಂದ ಎಲ್ಲರೂ ಭಯಭಿತರಾಗುತ್ತಾರೆ. ಈ ಸಂದರ್ಭದಲ್ಲಿ ಎಲ್ಲರ ಮೈಬಣ್ಣವು ಕಪ್ಪು ಬಣ್ಣಕ್ಕೆ ತಿರುಗುತ್ತದೆ. ಎಲ್ಲರಂತೆ ವಿಷ್ಣುವಿನ ಬಣ್ಣವು ವಿಷದ ಶಾಖದಿಂದ ನೀಲವರ್ಣಕ್ಕೆ ತಿರುಗುತ್ತದೆ. ಈ ಸಂದರ್ಭದ ಕಥೆಯನ್ನು ಕಲಾವಿದನು ಇಲ್ಲಿ ಅಭಿವ್ಯಕ್ತ ಮಾಡಿರಬಹುದೆಂದು ತಿಳಿಯಬಹುದಾದರೂ ಈ ಸಂದರ್ಭವು ಉಚಿತವಾದುದಲ್ಲ. ಬಹುತೇಕ ಗಾಜಿನ ಚಿತ್ರಗಳ ವಿಷ್ಣುವಿನ ಚಿತ್ರ ರಚನೆಯಲ್ಲಿ ಕಲಾವಿದರು. ನೀಲಿ ಬಣ್ಣವನ್ನು ಬಳಸಿದ್ದು ಕಂಡುಬರುತ್ತದೆ. ಇಲ್ಲಿ ಕಲಾವಿದರ ಅಲಂಕಾರಿಕ ಅಭಿವ್ಯಕ್ತಿಯನ್ನು ವಿವೇಚಿಸಬಹುದೆ ಹೊರತು ಪುರಾಣ ಪ್ರಜ್ಞೆಯನ್ನಲ್ಲ.

ಈ ಚಿತ್ರದಲ್ಲಿ ನಾರದರನ್ನು ವೀಣೆ, ಜಟಾ ಮುಕುಟ ಶ್ವೇತ ವರ್ಣದ ಧೋತಿ, ನೀಲಬಣ್ಣದ ಉತ್ತರಿಯದಿಂದ ರೂಪಿಸಿದ್ದಾರೆ. ಇವರ ವೇಷ ಭೂಷಣಗಳಲ್ಲಿ ಅಲಂಕರಣ ಮಿತವಾಗಿದೆ. ಮಹರ್ಷಿಯ ಭಾವಲಕ್ಷಣಗಳಲ್ಲಿ ಮಂದಹಾಸ ಎದ್ದು ತೋರುತ್ತದೆ. ಚಿತ್ರದ ಹಿನ್ನೆಲೆಯಲ್ಲಿ ಫಲಪುಷ್ಪಾದಿಗಳನ್ನು, ಪೂಜಾ ಪರಿಕರಗಳನ್ನು, ಬಾಳೆಯ ಗಿಡಗಳನ್ನು ಚಿತ್ರಿಸಿದ್ದಾರೆ. ಇದು ಪೂಜಾ ಸನ್ನಿವೇಶವನ್ನು ಸೂಚಿಸುತ್ತದೆ. ಅರಮನೆಯ ಕಲ್ಪನೆಯಂತೆ ಹಿನ್ನೆಲೆಯಲ್ಲಿ ಅಲಂಕೃತ ಕಂಬ ವಿನ್ಯಾಸಗಳು, ಗಾಜಿನ ತೂಗುದೀಪಗಳ ಚಿತ್ರವಿನ್ಯಾಸಗಳು ರೂಪಗೊಂಡಿವೆ. ಚಿತ್ರವು ಎದ್ದು ತೋರುವಂತೆ ಕಪ್ಪುವರ್ಣದಿಂದ ಹಿನ್ನೆಲೆಯನ್ನು ಏಕವರ್ಣವಾಗಿ ಲೇಪನ ಮಾಡಲಾಗಿದೆ.

ಚಿತ್ರವು ರೇಖೆ, ವರ್ಣ, ವಸ್ತು ಹಾಗೂ ಆಕೃತಿಗಳ ಸಂಯೋಜನೆಯಲ್ಲಿ ಯಥಾದರ್ಶನದಲ್ಲಿ, ಭಾವನೆಯ ನಿರೂಪಣೆಯಲ್ಲಿ ಉತ್ತಮವಾಗಿ ಅನಾವರಣಗೊಂಡಿದೆ. ನಮ್ಮ ಪುರಾಣ ಸಂಸ್ಕೃತಿಯನ್ನು ಬಿಂಬಿಸುವ ಈ ಚಿತ್ರವು ನಿರ್ದಿಷ್ಟ ಚಿತ್ರಶೈಲಿಯಲ್ಲಿ ರೂಪಗೊಳ್ಳದಿದ್ದರೂ ಉತ್ತಮ ಸಂಯೋಜನಾ ಚಿತ್ರವೆಂದು ಹೇಳಬಹುದು.

**ಚಿತ್ರಸಂಖ್ಯೆ ೧೧, ೧೨, ೧೩ ಗರುಡಾರೂಢ ವಿಷ್ಣು**

ಚಿತ್ರ ಸಂಖ್ಯೆ ೧೧ ಮತ್ತು ೧೨ ಈ ಚಿತ್ರಗಳು ಹುಮನಾಬಾದದ ಬಾಲಾಜಿ ಮಂದಿರದಲ್ಲಿ ಲಭ್ಯ ಇವೆ. ಎರಡೂ ಚಿತ್ರಗಳ ಮೂಲ ಆಶಯ ಒಂದೇಯಾಗಿದ್ದು, ರಚನೆಯಲ್ಲಿ ವೈವಿಧ್ಯತೆ ಕಂಡು ಬರುತ್ತದೆ. ಎರಡೂ ಚಿತ್ರಗಳ ದೃಶ್ಯಕಥೆಯಂತೆ ಕಶ್ಯಪ ಹಾಗೂ ವಿನಿತೆಯರ ಪುತ್ರನಾದ ಗರಡನ ಶಕ್ತಿ ಸಾಮರ್ಥ್ಯಗಳನ್ನು ಕಂಡ ಮಹಾವಿಷ್ಣು ಆತನಿಗೆ ಸುಪರ್ಣನೆಂಬ ಹೆಸರುಕೊಟ್ಟು ತನ್ನ ವಾಹನವನ್ನು ಮಾಡಿಕೊಂಡನು. ವಿಷ್ಣು ಹಾಗೂ ಗರುಡರ ಕುರಿತು ಅನೇಕ ಕಥಾ ಸನ್ನಿವೇಶಗಳು ಪುರಾಣಗಳಲ್ಲಿ ಸಿಗುತ್ತವೆ. ಇಲ್ಲಿ ಗಾಜಿನ ಕಲಾವಿದರು ಗರುಡನು ಮಹಾವಿಷ್ಣುವನ್ನು ತನ್ನ ಭುಜದ ಮೇಲೆ ಕುಳ್ಳಿರಿಸಿಕೊಂಡು ದಿಗ್ವಿಜಯಕ್ಕೆ ಹೊರಟಿರುವಂತೆ ಹಾಗೂ ಅವನನ್ನು ಆರಾಧಿಸುತ್ತಿರುವ ಅನೇಕ ಪುರೋಹಿತರನ್ನು ಸಂಯೋಜನೆಗೊಳಿಸಿದ್ದಾರೆ. ಈ ಎರಡು ಚಿತ್ರಗಳಲ್ಲಿ ವ್ಯಕ್ತಿಗಳ ಅನುಗುಣವಾಗಿ ವೇಷ ಭೂಷಣಗಳನ್ನು ಕಲ್ಪಿಸಿದ್ದಾರೆ. ಚಿತ್ರಸಂಖ್ಯೆ ೧೧, ೧೨ ರಲ್ಲಿ ಚತುರ್ಭುಜಧಾರಿಯ ವಿಷ್ಣುವನ್ನು ಶಂಖ, ಚಕ್ರಾದಿಗಳಿಂದ, ಸ್ವರ್ಣಾಭರಣಗಳಿಂದ ಹಾಗೂ ಸಾಂಪ್ರದಾಯಿಕ ಉಡುಗೆಗಳಿಂದ ಬಿಂಬಿಸಲಾಗಿದೆ. ಎರಡೂ ಚಿತ್ರಗಳಲ್ಲಿ ಜಟಾಮುಕುಟವು ವಿಭಿನ್ನವಾಗಿ ರೂಪುಗೊಂಡಿದೆ. ಇದು ಒಂದು ನಿರ್ದಿಷ್ಟ ರಚನೆಯ ಚಿತ್ರಶೈಲಿಯಲ್ಲಿ ವಿನ್ಯಾಸಗೊಂಡಿದೆ. ಈ ಮೂರು ಚಿತ್ರಗಳ ವಿಷ್ಣುವಿನ ಶರೀರ ರಚನೆಯಲ್ಲಿ ಮೃದುತ್ವ, ಕೋಮಲತೆ ಕಂಡು ಬಂದರೆ ಗರುಡನ ಶರೀರ ರಚನೆಯಲ್ಲಿ ಬಲಿಷ್ಠತೆ ಹಾಗೂ ಶಕ್ತಿ, ಗಾಂಭೀರ್ಯ ಭಾವನೆ ರೂಪುಗೊಂಡಿದೆ. ಇದಕ್ಕನುಗುಣವಾಗಿ ವೇಷ ಭೂಷಣಗಳು, ಆಭರಣಗಳು, ರೂಪ ಲಕ್ಷಣಗಳು ಹಾಗೂ ಸಾಂಕೇತಿಕ ವಸ್ತುಗಳು ನಿರೂಪಣೆಗೊಂಡಿವೆ. ಎರಡು ಚಿತ್ರಗಳಲ್ಲಿ ಹತ್ತರಿಂದ ಹನ್ನೆರಡು ಜನ ವಿಷ್ಣುವನ್ನು ಆರಾಧಿಸುತ್ತಿರುವ, ಸೇವೆಯನ್ನು ಮಾಡುತ್ತಿರುವ ಪುರೋಹಿತರನ್ನು ಚಿತ್ರಿಸಲಾಗಿದೆ. ಇವರನ್ನು ಕುಬ್ಜರನ್ನಾಗಿ ಚಿತ್ರಿಸಲಾಗಿದೆ. ಒಂದು ಕಥೆಯಂತೆ ಒಮ್ಮೆ ಕಶ್ಯಪನು ಮಾಡಿದ ಯಜ್ಞದಲ್ಲಿ ೬೦,೦೦೦ ಮಂದಿ ವಾಲಖಿಲ್ಯ ಮುನಿಗಳು ನೆರವಾಗಿ ತುಂಬಾ ಬಳಲಿದ್ದರು. ಆಗ ಇವರನ್ನು ಕಂಡು 'ಕುಳ್ಳರು' ಅಪಹಾಸ್ಯ ಮಾಡಿದರು. ಇದರಿಂದ ಮುನಿಗಳು ಕೋಪಗೊಂಡು ಶಾಪವಿತ್ತು, ಗರುಡನು ಅವತರಿಸುವುದಕ್ಕಾಗಿ ತಪಸ್ಸಿಗೆ ತೊಡಗಿದರು.[೯] ಚಿತ್ರಗಳಲ್ಲಿ ಈ ಕಥೆಯನ್ನು ಕಲ್ಪಿಸಬಹುದು.

ಚಿತ್ರದ ಹಿನ್ನೆಲೆಯಲ್ಲಿ ಪುಷ್ಪ ಹಾಗೂ ಸ್ವರ್ಣಗಳಿಂದ ಕೂಡಿದ ಪೀಠ ಅಲ್ಲದೇ ಛತ್ರಿಯನ್ನು ವಿಶಿಷ್ಟವಾಗಿ ಸಂಯೋಜನೆಯನ್ನು ಮಾಡಲಾಗಿದೆ. ಚಿತ್ರವು ಎದ್ದು ತೋರುವಂತೆ ಚಿತ್ರಸಂಖ್ಯೆ ೧೧ಕ್ಕೆ ಕಪ್ಪು ಬಣ್ಣ ಚಿತ್ರ ೧೨ ಕ್ಕೆ ಕೇಸರಿ ಬಣ್ಣವನ್ನು ಏಕರೂಪವಾಗಿ ಲೇಪಿಸಲಾಗಿದೆ. ಎರಡು ಚಿತ್ರಗಳು ರೇಖಾ ಪ್ರಧಾನವಾಗಿದ್ದರೂ, ಆಕೃತಿಗಳಲ್ಲಿ ತ್ರಿಕರಣ ರೂಪ ಕೊಡಲು ಇಲ್ಲಿ

೦೯. ಯಜ್ಞನಾರಾಯಣ ಉಡುಪ ; ಪುರಾಣ ಭಾರತ ಕೋಶ, ಪುಟ ೨೧೦

ಕಲಾವಿದನು ಪ್ರಯತ್ನಿಸಿದ್ದಾನೆ. ಎರಡು ಚಿತ್ರಗಳಲ್ಲಿ ರೇಖೆ ಮತ್ತು ವರ್ಣಾಲಂಕಾರಗಳಲ್ಲಿ ಸೂಕ್ಷ್ಮತೆಯೂ ಕಂಡು ಬರುತ್ತದೆ. ಒಟ್ಟಾರೆ ಈ ಎರಡೂ ಚಿತ್ರಗಳು ಉತ್ತಮ ಸಂಯೋಜನಾ ಚಿತ್ರವೆಂದು ಹೇಳಿಬಹುದು.

ಚಿತ್ರಸಂಖ್ಯೆ ೧೩. ಈ ಚಿತ್ರವು ಮೈಸೂರು ವಿಶ್ವವಿದ್ಯಾಲಯದ ಜಾನಪದ ವಸ್ತು ಸಂಗ್ರಹಾಲಯದಲ್ಲಿ ಸಂಗ್ರಹಗೊಂಡಿದೆ. ಇಲ್ಲಿಯೂ ಸಹ ವಿಷ್ಣು ಹಾಗೂ ಗರುಡರನ್ನು ಚಿತ್ರ ೧೧, ೧೨ ರಂತೆ ಯಥಾವತ್ತಾಗಿ ರೂಪಗೊಳಿಸಲಾಗಿದ್ದು, ಹಿನ್ನೆಲೆಯ ವಸ್ತು ಸಂಯೋಜನೆಯಲ್ಲಿ ಹಾಗೂ ವರ್ಣ ವೈವಿಧ್ಯತೆಯಲ್ಲಿ ವೈಪರೀತ್ಯತೆ ಕಂಡು ಬರುತ್ತಿದೆ. ಚಿತ್ರದಲ್ಲಿ ಪ್ರಖರವರ್ಣಗಳಾದ ಕೆಂಪು, ಹಳದಿ, ನೀಲಿ, ಬಿಳಿ ಬಣ್ಣಗಳಿಂದ ಸಂಯೋಜನೆ ಮಾಡಲಾಗಿದೆ. ಇಲ್ಲಿ ವಿಷ್ಣುವಿನ ಎಡ ಹಾಗೂ ಬಲ ಪಾರ್ಶ್ವಗಳಲ್ಲಿ ಇಬ್ಬರು ಪುರೋಹಿತರು ಭಕ್ತಿ ಪರವಶರಾಗಿದ್ದಾರೆ. ಗರುಡನ ವೇಶಭೂಷಣ, ಶರೀರ ಚಲನೆಯಲ್ಲಿ ಭಾವನೆಯಲ್ಲಿ ಗಾಂಭೀರ್ಯತೆ ಎದ್ದು ತೋರುತ್ತದೆ.

ಚಿತ್ರದ ಹಿನ್ನೆಲೆಯಲ್ಲಿ ಕಮಾನುವಿನ ದೃಶ್ಯವು ಹಾಗೂ ಹೂವುಗಳ ಅಲಂಕರಣ ವನ್ನು ಕಲಾವಿದನು ನಿರೂಪಿಸಿದ್ದು, ಚಿತ್ರವು ಆಕರ್ಷಕವಾಗಿ ಕಾಣುವಂತೆ ರೇಖೆ, ವರ್ಣ ಹಾಗೂ ಆಕೃತಿಗಳ ಸಂಯೋಜನೆಯಿಂದ ಕಲ್ಪಿಸಿದ್ದಾನೆ.

**ಚಿತ್ರಸಂಖ್ಯೆ ೧೪ ಗರುಡಾರೂಢ ವಿಷ್ಣು**

ಈ ಚಿತ್ರವು ಮೈಸೂರು ವಿಶ್ವವಿದ್ಯಾಲಯ ಜನಪದ ವಸ್ತು ಸಂಗ್ರಹಾಲಯದಲ್ಲಿ ಲಭ್ಯವಿದೆ. ಇದು ಕೂಡ ಚಿತ್ರಸಂಖ್ಯೆ ೧೧, ೧೨, ೧೩ ರಂತೆ ಪ್ರತಿರೂಪ ಹೊಂದಿರುವ ಚಿತ್ರ. ಶ್ವೇತ ವರ್ಣದಿಂದ ಕೂಡಿದ ವಿಷ್ಣು ಹಸನ್ಮುಖಿ ಭಾವ ಲಕ್ಷಣಗಳನ್ನು ಹೊಂದಿದ್ದಾನೆ. ಸದೃಢ ದೇಹರಚನೆಯನ್ನು ಹೊಂದಿರುವ ಗರುಡನ ಮುಖವು ಕೌರ್ಯತೆಯಿಂದ ಬಿಂಬಿತವಾಗಿದೆ. ಗರುಡ ಮತ್ತು ವಿಷ್ಣುವನ್ನು ಕಿರೀಟಾಭರಣಗಳಿಂದ ಸಂಯೋಜನೆಗೊಳಿಸಿದ್ದು, ಅವು ನಕ್ಷಾವಿನ್ಯಾಸಗಳಿಂದ ಚಿತ್ರಿತಗೊಂಡಿವೆ. ಚಿತ್ರದ ಹಿನ್ನೆಲೆಯಲ್ಲಿ ಆರ್ಧ ಚಂದ್ರಾಕೃತಿಯ ಕಮಾನುಗಳಿಂದ ಕೂಡಿದ ಚಿತ್ರ ವಿನ್ಯಾಸವನ್ನು ನೀಲಿ ಮಿಶ್ರಿತ ಕೆಂಪು ವರ್ಣಗಳ ಲೇಪನ ಮಾಡಲಾಗಿದೆ.

ಚಿತ್ರದ ಸುತ್ತಲೂ ಅಲಂಕಾರಿಕ ಚಿತ್ರವಿನ್ಯಾಸವು ಚಿತ್ರಿತಗೂಂಡಿದೆ. ಈ ಚಿತ್ರದಲ್ಲಿ ಒಬ್ಬ ವ್ಯಕ್ತಿಯು ವಿಷ್ಣುವನ್ನು ಆರಾಧಿಸುತ್ತಿರುವಂತೆ ರೂಪುಗೊಂಡಿದ್ದಾನೆ. ಚಿತ್ರದಲ್ಲಿ ಮಿತವಾದ ಬಣ್ಣಗಳು ಅಲಂಕಾರಿಕ ನಕ್ಷಾವಿನ್ಯಾಸಗಳು ರಚನೆಗೊಂಡಿದೆ.

**ಚಿತ್ರಸಂಖ್ಯೆ ೧೫ ವರಾಹವತಾರ**

ಈ ಚಿತ್ರವು ಧರ್ಮಸ್ಥಳದ 'ಮಂಜುಷಾ' ವಸ್ತು ಸಂಗ್ರಹಾಲಯದಲ್ಲಿ ಲಭ್ಯವಿದೆ. ಇದು ೩೫ x ೩೭ ಸೆಂ. ಮೀ ಅಳತೆಯನ್ನು ಹೊಂದಿದೆ. ಈ ದೃಶ್ಯವು ವಿಷ್ಣುವಿನ ದಶಾವತಾರಗಳಲ್ಲಿ ವರಾಹವತಾರ ತಾಳಿದ ಪ್ರಸಂಗವನ್ನು ತಿಳಿಸುತ್ತದೆ. ಇಲ್ಲಿ ಕಲಾವಿದನು ಮಾನವ ಶರೀರಕ್ಕೆ ವರಾಹ (ಹಂದಿ) ಮುಖವನ್ನು ಸಂಯೋಜಿಸಿ ದೇವತೆಯ ರೂಪಲಕ್ಷಣಗಳನ್ನು ನೀಡಿದ್ದಾನೆ. 'ಕಶ್ಯಪ ಹಾಗೂ ದಿತಿ' ಯ ಪುತ್ರನಾದ ಹಿರಣ್ಯಾಕ್ಷನು ಭೂದೇವಿಯನ್ನು ಅಪಹರಿಸಿ ಪಾತಾಳದಲ್ಲಿ ಸೆರೆ ಇಟ್ಟು ತನ್ನ ಬಲಪ್ರಯೋಗವನ್ನು ಮಾಡುತ್ತಿದ್ದಾಗ ಇಡೀ ಪ್ರಪಂಚವೇ ಜಲಾವೃತವಾಯಿತು.

ಇದರಿಂದ ಭಯಗೊಂಡ ದೇವತೆಗಳು ವಿಷ್ಣುವನ್ನು ಮೊರೆಹೊಕ್ಕು ಭೂದೇವಿಯನ್ನು ರಕ್ಷಿಸು ಎಂದು ಪ್ರಾರ್ಥಿಸಲು, ಆಗ ವಿಷ್ಣು ವರಾಹ ರೂಪವನ್ನು ತಾಳಬೇಕಾಯಿತು. ವಿಷ್ಣು ದೈತ್ಯಾಕಾರ ವರಾಹ ರೂಪ ತಳೆದು ಪಾತಾಳದಲ್ಲಿದ್ದ ಹಿರಣ್ಯಾಕ್ಷನ ಜೊತೆ ಅನೇಕ ವರ್ಷಗಳ ಕಾಲ ಯುದ್ಧ ಮಾಡಿ ಅವನನ್ನು ಸಂಹರಿಸಿ ಭೂದೇವಿಯನ್ನು ತನ್ನ ಚೂಪಾದ ಕೋರೆಯಿಂದ ಪಾತಾಳದಿಂದ ಮೇಲಕ್ಕೆ ಎತ್ತಿ ತಂದನು, ಎಂಬುದು ಪುರಾಣಕಥೆ.

ಈ ಪ್ರಸಂಗವನ್ನು ಗ್ರಹಿಸಿ ಕಲಾವಿದನು ಇಲ್ಲಿ ವರಾಹ ರೂಪಿಯಾದ ವಿಷ್ಣುವನ್ನು ದೊಡ್ಡ ಆಕಾರದಲ್ಲಿ ರಚಿಸಿ, ಹಿರಣ್ಯಾಕ್ಷ ಹಾಗೂ ಭೂದೇವಿಯರನ್ನು ಚಿಕ್ಕದಾಗಿ ರಚಿಸಿದ್ದಾನೆ. ಚತುರ್ಭುಜಧಾರಿಯಾದ ವಿಷ್ಣುವನ್ನು ನೀಲಿ ವರ್ಣದಿಂದ ಲೇಪಿಸಿ, ಕಿರೀಟ ಹಾಗೂ ಸ್ವರ್ಣಾಭರಣಗಳಿಂದ ಅಲಂಕರಣ ಮಾಡಲಾಗಿದೆ. ಸಾಂಪ್ರದಾಯಿಕ ಧೋತಿ, ಕೆಂಪು ಉತ್ತರೀಯ ಹಾಗೂ ವಿಶಿಷ್ಟವಾದ ಪುಷ್ಪಮಾಲೆಯನ್ನು ಸಂಯೋಜನೆ ಮಾಡಲಾಗಿದೆ. ಇಲ್ಲಿ ಭೂದೇವಿಯನ್ನು ಅರ್ಧಚಂದ್ರಾಕೃತಿಯ ರೇಖಾ ವಿನ್ಯಾಸದಿಂದ ಭೂಸ್ವರೂಪವನ್ನು ನೀಡಲಾಗಿದೆ. ಬೆಟ್ಟದ ಆಕಾರದ ಭೂಪ್ರದೇಶದಲ್ಲಿ ಹಂದಿಯು ಹಿರಣ್ಯಾಕ್ಷನನ್ನು ಬಗೆಯುತ್ತಿರುವ ದೃಶ್ಯವು ಬಿಂಬಿತವಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಕೇಸರಿ ಬಣ್ಣವನ್ನು ಚಿತ್ರವು ಎದ್ದು ತೋರುವಂತೆ ಏಕರೂಪವಾಗಿ ಲೇಪನಮಾಡಲಾಗಿದೆ. ಚಿತ್ರವು ಸುಂದರವಾಗಿ ಕಾಣುವಂತೆ ಸುತ್ತಲೂ ಹೂವು-ಎಲೆಗಳ ವಿನ್ಯಾಸದಿಂದ ನಕ್ಷೆಯನ್ನು ರಚನೆಯನ್ನು ಮಾಡಲಾಗಿದ್ದು, ರೇಖೆ, ವರ್ಣ, ಅಲಂಕಾರ, ವಸ್ತು ಸಂಯೋಜನೆ ಹಾಗೂ ಯಥಾದೃಷ್ಟಿಯು ಉತ್ತಮವಾಗಿ ನಿರೂಪಣೆಗೊಂಡಿದೆ.

**ಚಿತ್ರಸಂಖ್ಯೆ ೧೬. ವಾಮನ - ಬಲಿ ಚಕ್ರವರ್ತಿ**

ಈ ಚಿತ್ರವು ಮಣಿಪಾಲದ ಶ್ರೀ ವಿಜಯನಾಥ ಶೆಣೈರವರ ವಸ್ತು ಸಂಗ್ರಹಾಲಯದಲ್ಲಿ ಲಭ್ಯವಿದೆ. ಇದು ೩೦ x ೩೦ ಸೆಂ.ಮೀ ಅಳತೆಯನ್ನು ಹೊಂದಿದ್ದು, ಈ ದೃಶ್ಯವು ವಾಮನ ರೂಪಿಯಾದ ವಿಷ್ಣುವು, ಪ್ರಹ್ಲಾದನ ಮೊಮ್ಮಗನಾದ ಬಲಿಚಕ್ರವರ್ತಿಯಿಂದ ದಾನ ಪಡೆಯುವ ಪ್ರಸಂಗವನ್ನು ನಿರೂಪಿಸುತ್ತದೆ.

ಬಲಿ ಚಕ್ರವರ್ತಿಯು ಇಂದ್ರನಿಂದ ಸಂಹಾರಗೊಂಡು ಪುನಃ ಶುಕ್ರಾಚಾರ್ಯರ ಶಕ್ತಿಯಿಂದ ಪುನರ್ಜನ್ಮ ಪಡೆದು ಅನೇಕ ದೇವಾನುದೇವತೆಗಳಿಂದ ಬಲವನ್ನು ಹೆಚ್ಚಿಸಿಕೊಂಡು ಇಂದ್ರನನ್ನು ಸೋಲಿಸಿ ಅಮರಾವತಿಯನ್ನು ಆಳತೊಡಗಿದನು. ಶುಕ್ರಾಚಾರ್ಯರ ಅನುಗ್ರಹದಿಂದ ಅನೇಕ ಯಾಗಗಳನ್ನು ಮಾಡಿ ಬಲಿಚಕ್ರವರ್ತಿಯೆಂದು ಹೆಸರುವಾಸಿಯಾದನು. ಇಂಥ ದೈತ್ಯ ದೊರೆಯನ್ನು ಮತ್ತು ಇವನ ಬಲವನ್ನು ಶಮನ ಮಾಡಲು ಸಾಕ್ಷಾತ್ ವಿಷ್ಣು, ಅದಿತಿಯಲ್ಲಿ ಜನ್ಮ ಪಡೆದು ವಾಮನ ಅವತಾರದಿಂದ ಬಲಿಮಹಾರಾಜನ ಅಹಂಕಾರವನ್ನು ಮುರಿದನು. ದಾನಿಗಳಲ್ಲೇ ನಾನು ಶ್ರೇಷ್ಠನೆಂದು ಮೆರೆಯುತ್ತಿದ್ದ ಬಲಿ ಚಕ್ರವರ್ತಿಯನ್ನು ಮೂರು ಪಾದ ಭೂಮಿಯನ್ನು ನೀಡಲು ಕೇಳಿದಾಗ ಅದಕ್ಕೆ ಬಲಿಯು ಕೊಡಲೊಪ್ಪಿ, ಒಂದು ಪಾದ ಭೂಮಂಡಲ ಎರಡನೆಯ ಪಾದ ಅಂತರಿಕ್ಷ, ಮೂರನೇಯ ಪಾದವನ್ನು ಬಲಿಯ ತಲೆಯ ಮೇಲಿಡಲು ಅವನು ರಸಾತಳಕ್ಕೆ ತಳ್ಳಲ್ಪಟ್ಟನು. ಹೀಗೆ ವಿಷ್ಣು ಅವನ ಅಹಂಕಾರವನ್ನು ಮೆಟ್ಟಿ ಹಾಕಿದ ಪ್ರಸಂಗವು ಕಥೆಯಿಂದ





೦೧. ಶೇಷಾಶಯನ ಮಹಾವಿಷ್ಣು



೦೨. ವಿಷ್ಣು,ಶ್ರೀದೇವಿ- ಭೂದೇವಿ

ಗಾಜಿನ ಮೇಲಿನ ವೈಷ್ಣವ ಧರ್ಮದ ಚಿತ್ರಗಳು





೦೮. ವಿಷ್ಣು, ಶ್ರೀದೇವಿ–ಭೂದೇವಿ



೦೯. ವಿಷ್ಣು (ವೆಂಕಟೇಶ)

ಗಾಜಿನ ಮೇಲಿನ ವೈಷ್ಣವ ಧರ್ಮದ ಚಿತ್ರಗಳು





೧೫. ವರಾಹವತಾರ



೧೬. ವಾಮನ-ಬಲಿಚಕ್ರವರ್ತಿ

ಗಾಜಿನ ಮೇಲಿನ ವೈಷ್ಣವ ಧರ್ಮದ ಚಿತ್ರಗಳು

ತಿಳಿದು ಬರುತ್ತದೆ. ಈ ಕಥೆಯ ಸಂದರ್ಭವನ್ನು ಕಲ್ಪಿಸುವ ದೃಶ್ಯವು ಇದಾಗಿದೆ.

ಈ ಚಿತ್ರದಲ್ಲಿ ವಾಮನನು ವಟು ರೂಪಿಯಾಗಿದ್ದು, ಬಲಗೈ ಆಸರೆಯಲ್ಲಿ ಛತ್ರಿಯನ್ನು ಹಿಡಿದು, ಕಿವಿಯಲ್ಲಿ ಕರ್ಣಕುಂಡಲ, ತೋಳು ಪಟ್ಟಿ, ನಡುವಿಗೆ, ಗೆಜ್ಜೆ ಸರವನ್ನು ಧರಿಸಿದ್ದಾನೆ. ಇವನನ್ನು ಕೆಂಪು ಮಿಶ್ರಿತ ಬಿಳಿವರ್ಣದಿಂದ ಲೇಪನ ಮಾಡಲಾಗಿದೆ. ಕುಬ್ಜನಾದ ವಾಮನು ಪಾದುಕೆಯ ಮೇಲೆ ನಿಂತು ದಾನವನ್ನು ಸ್ವೀಕರಿಸುತ್ತಿರುವನು. ಇನ್ನೊಂದು ಕಡೆ ಬಲಿ ಚಕ್ರವರ್ತಿಯು ಕಮಂಡಲಿನಿಂದ ವಾಮನನಿಗೆ ದಾನೋದಕವನ್ನು ನೀಡುತ್ತಿರುವನು. ಇಲ್ಲಿ ಕಲಾವಿದನು ಬಲಿಯನ್ನು ವಾಮನನಿಗಿಂತಲೂ ದೊಡ್ಡ ಪ್ರಮಾಣದಲ್ಲಿ ಚಿತ್ರಿಸಿರುವನು. ಇವನು ನೀಲಿ ಬಣ್ಣದ ಮೈಬಣ್ಣವನ್ನು ಹೊಂದಿದ್ದು, ಕಿರೀಟ ಹಾಗೂ ಸ್ವರ್ಣಾಭರಣಗಳಿಂದ ಭೂಷಿತನಾಗಿದ್ದಾನೆ. ಇವನಿಗೆ ಧೋತಿ, ಉತ್ತರೀಯ ಹಾಗೂ ನಡುವಿಗೆ ಶಲ್ಯವನ್ನು ಸಂಯೋಜಿಸಲಾಗಿದೆ. ಇವನ ಮುಖಲಕ್ಷಣವು ಸುರುಳಿ ಮಾಡಿದ ಮೀಸೆ, ದೊಡ್ಡ ಕಣ್ಣುಗಳಿಂದ ದೈತ್ಯದೊರೆಯಂತೆ ಬಿಂಬಿತವಾಗಿದ್ದಾನೆ. ಚಿತ್ರದ ಹಿನ್ನೆಲೆಯನ್ನು ಕೆಂಪು ವರ್ಣದಿಂದ ಚಪ್ಪಟೆ ಲೇಪಿಸಲಾಗಿದೆ. ಚಿತ್ರದ ಮೇಲೆ ಅಲಂಕಾರಿಕ ಕಮಾನಿನ ನಕ್ಷಾ ವಿನ್ಯಾಸವನ್ನು ಚಿತ್ರಿಸಿದೆ. ಚಿತ್ರವು ರೇಖೆ, ವರ್ಣ ಹಾಗೂ ಭಾವನಾ ನಿರೂಪಣೆಯು ಉತ್ತಮವಾಗಿ ಅನಾವರಣಗೊಂಡಿದೆ.

**ಚಿತ್ರಸಂಖ್ಯೆ ೧೭ ಶ್ರೀರಾಮಚಂದ್ರ**

ಶ್ರೀರಾಮಚಂದ್ರನು ವಿಷ್ಣುವಿನ ದಶಾವತಾರಗಳಲ್ಲಿ ಒಂಭತ್ತನೆಯ ಅವತಾರವಾಗಿ ರೂಪತಾಳಿ ದುಷ್ಟ ಶಕ್ತಿಯನ್ನು ಶಮನ ಮಾಡಿದ ಪ್ರಸಂಗವು ರಾಮಾಯಣ ಕಥೆಯಿಂದ ತಿಳಿದು ಬರುತ್ತದೆ. ಇಲ್ಲಿ ಚಿತ್ರಿತಗೊಂಡಿರುವ ಸ್ಟೇನ್ಡ್ ಗ್ಲಾಸ್ ಚಿತ್ರವು ಮೈಸೂರಿನ ನಿಷಾದಬಾಗ್ ಪಾರ್ಕನ ಗಾಜಿನ ಮಂಟಪದಲ್ಲಿ ಕಂಡುಬರುತ್ತದೆ. ಸೂಕ್ಷ್ಮ ಹಾಗೂ ಅತ್ಯಾಲಂಕೃತ ರೇಖಾ ವಿನ್ಯಾಸದಿಂದ, ಆಕರ್ಷಕ ವರ್ಣಸಂಯೋಜನೆಯಿಂದ ಕೂಡಿದ ಈ ಚಿತ್ರವು ನೋಡುಗರನ್ನು ಭಾವಪರವಶರನ್ನಾಗಿ ಮಾಡುತ್ತದೆ.

ಇಲ್ಲಿ ಶ್ರೀರಾಮಚಂದ್ರನು ದ್ವಿಭುಜಧಾರಿಯಾಗಿದ್ದು, ನೃತ್ಯ ಭಂಗಿಯಲ್ಲಿ ನಿಂತಿರುವನು. ಒಂದು ಕೈಯಲ್ಲಿ ಧನಸ್ಸು, ಇನ್ನೊಂದು ಕೈಯಲ್ಲಿ ಬಾಣವನ್ನು ಹಿಡಿದಿರುವನು. ತಲೆಯಲ್ಲಿ ಕಿರೀಟ, ಕಿವಿಯಲ್ಲಿ ಕುಂಡಲ, ಕತ್ತಿನಲ್ಲಿ ಆಭರಣಗಳು ತೋಳಿನಲ್ಲಿ ಕೇಯೂರ, ಕೈಯಲ್ಲಿ ಕಂಕಣ, ಸೊಂಟದಲ್ಲಿ ಕಟಿಬಂಧ, ಕಾಲಿನಲ್ಲಿ ನೂಪುರಗಳನ್ನು ಧರಿಸಿದ್ದು, ಸಾಂಪ್ರದಾಯಿಕ ಉಡುಗೆಯಾದ ಧೋತಿಯನ್ನು ಹಾಗೂ ಖಡುಕೆಂಪು ಬಣ್ಣದ ಉತ್ತರಿಯವನ್ನು ಹೊಂದಿರುವನು. ಬೆನ್ನಿಗೆ ಬಾಣಗಳನ್ನು ಒಳಗೊಂಡ ಬತ್ತಳಿಕೆಯನ್ನು ಅಲಂಕರಿಸಲಾಗಿದೆ. ಇಲ್ಲಿ ಶ್ರೀರಾಮನ ಶರೀರ ರಚನೆಯನ್ನು ಕಲಾವಿದನು ಹಸಿರು ವರ್ಣದಿಂದ ದುಂಡುತನ ತರಲು ಬೆಳಕು ನೆರಳನ್ನು ಕಲ್ಪಿಸಿದ್ದಾನೆ. ಜೊತೆಗೆ ಬಟ್ಟೆಯ ವಿನ್ಯಾಸದಲ್ಲಿ ನಿರಿಗೆಗಳನ್ನು ತರಲು ಕಂದುಗೆಂಪು ಹಾಗೂ ಹಳದಿ ಬಣ್ಣಗಳಿಂದ ಸಂಯೋಜಿಸಿದ್ದಾನೆ.

ಶ್ರೀರಾಮನ ಮುಖಭಾವವು ಹಸನ್ಮುಖಿಯಿಂದ ಕೂಡಿದ್ದು ಕಣ್ಣುಗಳಿಂದ ಪ್ರಸನ್ನತೆ ಹೊರಸೂಸುತ್ತದೆ. ಅಂದರೆ ಶ್ರೀರಾಮನ ವ್ಯಕ್ತಿತ್ವವು ಹೇಗೆ ಪುರಾಣಗಳಲ್ಲಿ ವರ್ಣನೆಯಿಂದ ಕೂಡಿದೆಯೋ ಅದರಂತೆ ಕಲಾವಿದನು ರೇಖೆ ಹಾಗೂ ವರ್ಣಗಳ ಮೂಲಕ ಆ ರಸಭಾವವನ್ನು ಈ ಚಿತ್ರದಲ್ಲಿ

ಅಭಿವ್ಯಕ್ತಮಾಡಿದ್ದಾನೆ. ಚಿತ್ರದಲ್ಲಿ ರೇಖಾಲಾವಣ್ಯತೆ, ಭಾವನಾ ನಿರೂಪಣೆ, ವರ್ಣಭೇದ ಸಾದೃಶ್ಯದಂತಹ ಚಿತ್ರಷಡಂಗಳನ್ನು ನೆನಪಿಸುವಂತೆ ಕಲಾವಿದನು ಅಭಿವ್ಯಕ್ತಿಸಿದ್ದಾನೆ. ಸೌಂದರ್ಯ ಹಾಗೂ ಅಲಂಕಾರ ಪ್ರಜ್ಞೆಯೂ ಈ ಚಿತ್ರದಲ್ಲಿ ಎದ್ದು ತೋರುತ್ತದೆ.

**ಚಿತ್ರಸಂಖ್ಯೆ ೧೮, ೧೯, ೨೦, ೨೧, ೨೨, ೨೩, ೨೪ ಶ್ರೀರಾಮಚಂದ್ರನ ಪಟ್ಟಾಭಿಷೇಕ.**

ಇಲ್ಲಿ ಸುಮಾರು ಏಳು ಗಾಜಿನ ಚಿತ್ರಗಳು ಒಂದೇ ದೃಶ್ಯವನ್ನೊಳಗೊಂಡ ಪ್ರತಿಕೃತಿಯ ಚಿತ್ರಗಳು ಚಿತ್ರಿತಗೊಂಡಿವೆ. ಎಲ್ಲ ಚಿತ್ರಗಳು ಶ್ರೀರಾಮಚಂದ್ರನ ಪಟ್ಟಾಭಿಷೇಕಕ್ಕೆ ಸಂಬಂಧಿಸಿವೆ. ತಕ್ಷಣ ನೋಡಿದರೆ ಎಲ್ಲ ಚಿತ್ರಗಳನ್ನು ಒಬ್ಬನೇ ಕಲಾವಿದನು ರಚನೆ ಮಾಡಿದಂತೆ ತೋರುತ್ತದೆ. ಹಾಗೂ ನೆರಳಚ್ಚು ಮಾಡಿದಂತೆ ಗಮನಕ್ಕೆ ಬರುತ್ತದೆ. ಇದೇ ದೃಶ್ಯಕ್ಕೆ ಸಂಬಂಧಿಸಿದ ಚಿತ್ರಗಳು ಸಾಕಷ್ಟು ಸಂಖ್ಯೆಯಲ್ಲಿ ಪ್ರತಿಕೃತಿಗೊಂಡಿರಬಹುದು,

ಶ್ರೀರಾಮಚಂದ್ರನು ಯುದ್ಧದಲ್ಲಿ ರಾವಣನನ್ನು ಕೊಂದು, ಪತ್ನಿ ಹಾಗೂ ವಾನರ ಸಮೇತ ಅಯೋಧ್ಯೆಗೆ ಬಂದು ಪಟ್ಟಾಭಿಷೇಕ ಮಾಡಿಕೊಳ್ಳುವ ದೃಶ್ಯವನ್ನು ಈ ಚಿತ್ರಗಳು ಸೂಚಿಸುತ್ತವೆ. ಪಟ್ಟಾಭಿಷೇಕದ ಸಂದರ್ಭದಲ್ಲಿ ಋಷಿ ಮುನಿಗಳು, ರಾಜರು ಹಾಗೂ ವಾನರ ಸ್ತ್ರೀಪುರುಷರು ಪಾಲ್ಗೊಂಡಿರುತ್ತಾರೆ. ವಿಶೇಶವಾಗಿ ಜಾಂಬುವಂತ, ಹನುಮ, ಸುಗ್ರೀವ ಅಂಗದ, ವಾನಸ್ತ್ರೀಯರಾದ ರುಮೆ, ತಾರೆಯರು ಭಾಗಿಯಾಗಿರುತ್ತಾರೆ. ಈ ಸೀತಾರಾಮರ ಪಟ್ಟಾಭಿಷೇಕದ ಸಂದರ್ಭದಲ್ಲಿ ಅಯೋಧ್ಯಯು ಸಂಭ್ರಮದಿಂದ ಕಂಗೊಳಿಸುತ್ತದೆ. ಆ ಸಂಭ್ರಮವನ್ನು ಈ ಚಿತ್ರಗಳ ಮೂಲಕ ತಿಳಿಸಲು ಕಲಾವಿದನು ಪ್ರಯತ್ನಿಸಿದ್ದಾನೆ.

ಚಿತ್ರಸಂಖ್ಯೆ ೧೮ ಈ ಚಿತ್ರವು ಅಮೀನಗಡದ ಶೀಲವಂತಪ್ಪ ಗರಡಿಯವರ ಮನೆಯಲ್ಲಿ ಲಭ್ಯವಿದೆ. ಇಲ್ಲಿ ಶ್ರೀರಾಮಚಂದ್ರನು ತಾವರೆಯ ಮೇಲೆ ಆಸೀನನಾಗಿದ್ದು, ಅವನ ಒಂದು ಪಾದವನ್ನು ಹನುಮಂತನು ತನ್ನ ಅಂಗೈಗಳಲ್ಲಿ ಹಿಡಿದಿರುವನು. ಶ್ರೀರಾಮಚಂದ್ರನು ಸರ್ವಾಲಂಕೃತಗೊಂಡಿದ್ದು, ವಿಶೇಷವಾದ ಪುಷ್ಪ ಮಾಲೆಯನ್ನು ಹಾಕಿರುವನು. ಇದೆ ರೂಪದಲ್ಲಿ ಶ್ರೀರಾಮ ಹಾಗೂ ಹನುಮರು ಯಥಾವತ್ತಾಗಿ ಎಲ್ಲಾ ಚಿತ್ರಗಳಲ್ಲಿ ರೂಪಗೊಂಡಿದ್ದಾರೆ. ಚಿತ್ರದಲ್ಲಿ ವೇಷ ಭೂಷಣ ಹಾಗೂ ಆಭರಣಗಳಲ್ಲಿ ರೇಖೆಗಳ ಸ್ಪಷ್ಟತೆ, ವರ್ಣಗಳ ಉಜ್ವಲತೆಯೂ ವಿಶಿಷ್ಟವಾಗಿ ಮೂಡಿಬಂದಿದೆ. ಚಿತ್ರಸಂಕ್ಯೆ ೨೪ ಒಂದನ್ನು ಹೊರತುಪಡಿಸಿ ಇನ್ನುಳಿದ ಚಿತ್ರಗಳಲ್ಲಿ ಶ್ರೀರಾಮ ಮತ್ತು ಹನುಮರನ್ನು ಹಳದಿ ಹಾಗೂ ಹಸಿರು ಮಿಶ್ರಿತ ವರ್ಣಗಳಿಂದ ಸಂಯೋಜನೆಗೊಳಪಡಿಸಿದ್ದಾರೆ.

ಶ್ರೀರಾಮನ ಎಡ ಪಾರ್ಶ್ವದಲ್ಲಿ ಸೀತೆಯು ಪುಷ್ಪವನ್ನು ಹಿಡಿದು ಪತಿಯ ಪ್ರೇಮವನ್ನು ಮೆರೆಯುತ್ತಿರುವಂತೆ ತೋರುತ್ತದೆ. ಅದರಂತೆ ಲಕ್ಷ್ಮಣ, ಭರತ, ಶತೃಘ್ನರು ಹಾಗೂ ವಿವಿಧ ರಾಜರು ಈ ಸಂಭ್ರಮದಲ್ಲಿ ಪಾಲ್ಗೊಂಡಿರುವಂತೆ ಕಲಾವಿದನು ಇಲ್ಲಿ ಬಿಂಬಿಸಿದ್ದಾನೆ. ಶ್ರೀರಾಮನ ಬಲ ಪಾರ್ಶ್ವದಲ್ಲಿ ಅನೇಕ ಋಷಿಮುನಿಗಳು ಶ್ರೀರಾಮ ಸೀತೆಯನ್ನು ಹರಸುತ್ತಿದ್ದಾರೆ. ಕೆಳ ಸಾಲಿನಲ್ಲಿ ವಾನರು ಕೈಮುಗಿದು ಶ್ರೀರಾಮನ ಭಕ್ತಿಗೆ ಪಾತ್ರರಾಗಿರುವಂತೆ ಚಿತ್ರಿತಗೊಂಡಿದ್ದಾರೆ. ಚಿತ್ರದ ಎಡ ಬಲಗಳಲ್ಲಿ ಕುದುರೆ, ಆನೆಗಳು, ಕುಂಬ, ಯಜ್ಞಕುಂಡ ಹಾಗೂ ಸೈನಿಕರು ಕಂಡು ಬರುತ್ತಾರೆ. ಚಿತ್ರದ ಹಿನ್ನೆಲೆಯಲ್ಲಿ ಅರಮನೆಯ ಹೊರನೋಟವು ಅಲಂಕೃತಗೊಂಡಿದೆ. ಶ್ರೀರಾಮನ ಎಡ

ಮತ್ತು ಬಲ ಬದಿಯಲ್ಲಿ ಚಾಮರಧಾರಿಗಳು ಕಂಡು ಬರುತ್ತಾರೆ. ಈ ದೃಶ್ಯವು ಇನ್ನುಳಿದ ಚಿತ್ರಗಳಲ್ಲಿಯೂ ಕಂಡುಬರುತ್ತದೆ. ಚಿತ್ರವು ರೇಖೆ, ವರ್ಣ, ಅಲಂಕರಣ, ಆಕೃತಿಗಳ ಹೊಂದಾನಿಕೆ, ಭಾವನಾ ನಿರೂಪಣೆ ಹಾಗೂ ವಸ್ತುಗಳ ಸಂಯೋಜನೆಯಲ್ಲಿ ಪ್ರಬುದ್ಧತೆ ಒಡಮೂಡಿದೆ. ಚಿತ್ರದಲ್ಲಿ ಕೆಂಪು ಹಾಗೂ ಹಳದಿ ವರ್ಣಗಳು ಪ್ರಾಧಾನವಾಗಿ ಬಳಸಲ್ಪಟ್ಟಿವೆ.

ಚಿತ್ರಸಂಖ್ಯೆ ೧೯ ಇದು ಬಾಗಲಕೋಟೆಯ ಶ್ರೀ ಎಸ್. ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹವಿದೆ. ಈ ಚಿತ್ರದಲ್ಲಿ ಶ್ರೀರಾಮಚಂದ್ರನು ತಾವರೆಯ ಮೇಲೆ ಆಶೀನನಾಗಿರುವನು. ಧೋತಿ, ಉತ್ತರಿಯ, ಸೊಂಟಕ್ಕೆ ಕಟಿಬಂಧಕವನ್ನು ಧರಿಸಿರುವನು. ಅರೆನಗ್ನ ರೂಪದಲ್ಲಿ ಶ್ರೀರಾಮನು ಹಸಿರು ವರ್ಣದಿಂದ ಸಂಯೋಜನೆಗೊಂಡಿರುವನು. ಹನುಮನು ಶ್ರೀರಾಮನ ಪಾದವನ್ನು ಹಿಡಿದು ತನ್ನ ಬಾಲದಿಂದ ಸುರಳಿ ಸುತ್ತಿ ಅದನ್ನು ಪೀಠವನ್ನಾಗಿ ಮಾಡಿಕೊಂಡಿರುವನು. ಶ್ರೀರಾಮನ ಹಿಂದೆ ಇಬ್ಬರೂ ಚಾಮರಧಾರಿಗಳು ಚಾಮರವನ್ನು ಬೀಸುತ್ತಿರುವರು. ಶ್ರೀರಾಮನ ಎಡ ಹಾಗೂ ಬಲಪಾರ್ಶ್ವಗಳಲ್ಲಿ ಸೀತೆ, ಲಕ್ಷ್ಮಣ, ಭರತ, ಶತ್ರುಘ್ನರು, ವಾನರ ದೊರೆಗಳು, ಋಷಿಮುನಿಗಳು, ಸೈನಿಕರು, ಅಶ್ವ ಮತ್ತು ಗಜೇಂದ್ರರು ಈ ಸಮಾರಂಭದಲ್ಲಿ ಪಾಲ್ಗೊಮಡಿರುವಂತೆ ಕಲಾವಿದನು ಚಿತ್ರಿಸಿದ್ದಾನೆ. ಚಿತ್ರದಲ್ಲಿ ಇವರ ವೇಷಭೂಷಣಗಳಲ್ಲಿ ಹಳದಿ ಕೆಂಪು ಹಾಗೂ ಹಸಿರು ಮೆರಗು ವರ್ಣಗಳಿಂದ ಅಲಂಕಾರಿಕ ಚಿತ್ರವಿನ್ಯಾಸಗಳು ಮೂಡಿಬಂದಿವೆ. ಉಳಿದಂತೆ ಚಿತ್ರದ ಹಿನ್ನೆಲೆಯು ಅರಮನೆಯ ಸಂಕೇತಿಸುವಂತೆ ಬಾಹ್ಯ ಸ್ವರೂಪವನ್ನು ಕಾಣಬಹುದು. ಒಟ್ಟಾರೆ ಈ ಚಿತ್ರವು ವರ್ಣಾಲಂಕಾರಗಳಿಂದ ರೂಪಗೊಂಡಿದೆ.

ಚಿತ್ರಸಂಖ್ಯೆ ೨೦ ಇದು ಬಾಗಲಕೋಟೆಯ ಶ್ರೀ ಮಾನಿಕ್‌ಚಂದ್ ಬೇತಾಳರ ಮನೆಯಲ್ಲಿ ಲಭ್ಯವಿದೆ. ಈ ಚಿತ್ರದಲ್ಲಿ ಶ್ರೀರಾಮ ಹಾಗೂ ಹನುಮರು ಹಿಂದಿನ ಚಿತ್ರಗಳಂತೆ ಚಿತ್ರಿತಗೊಂಡಿದ್ದಾರೆ. ಇಲ್ಲಿ ವಿಶೇಷವೆಂದರೆ ಸೀತೆ, ಲಕ್ಷ್ಮಣ, ಸುಗ್ರೀವರನ್ನೊಳಗೊಂಡು ಇತರರು ಪಾರ್ಶ್ವಮುಖವನ್ನು ಹೊಂದಿದ್ದಾರೆ. ಚಿತ್ರದಲ್ಲಿ ಜನರನ್ನು ಮಿತವಾಗಿ ಸಂಯೋಜಿಸಿದ್ದು, ಇವರೆಲ್ಲರನ್ನು ಗೌರವರ್ಣಗಳಿಂದ ಲೇಪನ ಮಾಡಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಅರಮನೆಯ ಚಿತ್ರ ರಚಿಸಿ ಕೆಂಪು, ಕಪ್ಪು ಹಾಗೂ ಸ್ವರ್ಣ ವರ್ಣಗಳನ್ನು ಸಂಯೋಜನೆಗೊಳಿಸಿದ್ದಾರೆ. ರೇಖಾ ವಿನ್ಯಾಸ, ಆಕೃತಿಗಳ ಸಂಯೋಜನೆ, ವರ್ಣಗಳ ಕಲ್ಪನೆಯಿಂದ ಚಿತ್ರವು ನೋಡುಗರನ್ನು ಗಮನ ಸೆಳೆಯುತ್ತದೆ.

ಚಿತ್ರಸಂಖ್ಯೆ ೨೧ ಇಲ್ಲಿ ತಾವರೆಯ ಮೇಲೆ ಆಶೀನನಾದ ಶ್ರೀರಾಮಚಂದ್ರನಿಗೆ ಛತ್ರಿ, ಚಾಮರಗಳನ್ನು ಬೀಸುತ್ತಿದ್ದಾರೆ. ಹನುಮಂತನು ಶ್ರೀರಾಮನ ಪಾದ ಸೇವೆಯಲ್ಲಿದ್ದರೆ, ಸೀತೆಯು ಪತಿಯ ಪ್ರೇಮಾಲಾಪನೆಯಲ್ಲಿದ್ದಾಳೆ. ಕೆಳಸಾಲಿನಲ್ಲಿ ಜಾಂಬವಂತನು, ಸೈನಿಕರು ಹಾಗೂ ಗಜದಳವನ್ನು ಸಂಯೋಜಿಸಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಅರಮನೆಯ ಚಿತ್ರವು ರಚನೆಗೊಂಡಿದೆ. ಬಹುತೇಕ ಇಲ್ಲಿ ಚಿತ್ರಿತಗೊಂಡಿರುವ ಸಮೂಹವು ಮಿತವಾದ ಅಲಂಕಾರ, ಆಕರ್ಷಕ ವೇಷಭೂಷನಗಳಿಂದ ಕಂಗೊಳಿಸುತ್ತಿದ್ದಾರೆ. ಚಿತ್ರವು ಹಳದಿ, ಕೆಂಪು, ಹಸಿರು, ನೀಲಿ, ಬಿಳಿ ವರ್ಣಗಳ ಸಂಯೋಜನೆಯಿಂದ ರೂಪಗೊಂಡಿದೆ. ರೇಖಾವಿನ್ಯಾಸ, ವರ್ಣಸಂಯೋಜನೆ, ಆಕೃತಿಗಳ ಭಾವಲಕ್ಷಣಗಳು ಉತ್ತಮವಾಗಿ ನಿರೂಪಿತಗೊಂಡಿವೆ.

ಚಿತ್ರಸಂಖ್ಯೆ ೨೨ ಈ ಚಿತ್ರವು ಧರ್ಮಸ್ಥಳದ ಮಂಜುಷಾ ವಸ್ತು ಸಂಗ್ರಹಾಲದಲ್ಲಿ ಲಭ್ಯವಿದೆ. ೩೭ x ೬೧ ಸೆಂ.ಮೀ ಅಳತೆಯನ್ನು ಹೊಂದಿದ್ದು, ಶ್ರೀರಾಮಚಂದ್ರನು ಸರ್ವಾಭರಣಗಳಿಂದ ಭೂಷಿತನಾಗಿದ್ದಾನೆ. ಚಾಮರಧಾರಿಗಳು ಸೇವೆಯಲ್ಲಿ ನಿರತರಾಗಿದ್ದಾರೆ. ಶ್ರೀರಾಮನ ಎಡ ಹಾಗೂ ಬಲಪಾರ್ಶ್ವಗಳಲ್ಲಿ ಋಷಿಮುನಿಗಳು, ವಾನರು, ರಾಜ ಮಹಾರಾಜರು, ಸೈನಿಕರು ಸಂಭ್ರಮಿಸುತ್ತಿದ್ದಾರೆ. ಇವರೆಲ್ಲರೂ ರಾಮಭಕ್ತಿಯಲ್ಲಿ ತೊಡಗಿರುವಂತೆ ಕಲಾವಿದನು ಅಭಿವ್ಯಕ್ತಪಡಿಸಿದ್ದಾನೆ. ಶ್ರೀರಾಮನ ಪಾದ ಸೇವೆಯಲ್ಲಿ ಹನುಮನು ನಿರತನಾಗಿದ್ದನೆ. ವಾನರದೊರೆಗಳಾದ ಸುಗ್ರೀವ, ಜಾಂಬವಂತರು, ಈ ಸಮಾರಂಭದಲ್ಲಿ ಪಾಲ್ಗೊಂಡಿರುವರು. ಚಿತ್ರದ ಹಿನ್ನೆಲೆಯಲ್ಲಿ ಅರಮನೆಯ ಬಾಹ್ಯ ಸ್ವರೂಪವನ್ನು ಚಿತ್ರಿಸಿದ್ದು, ಆಕಾಶದಲ್ಲಿ ಗಂಧರ್ವರು ಈ ದಂಪತಿಗಳಿಗೆ ಹೂಮಳೆಯನ್ನು ಸುರಿಯುತ್ತಿರುವಂತೆ ಕಲಾವಿದನು ಸಂಯೋಜನೆಗೊಳಿಸಿದ್ದಾನೆ. ಚಿತ್ರದಲ್ಲಿ ಬಿಳಿ, ನೀಲಿ, ಹಸಿರು, ಹಳದಿ, ಕೆಂಪು ಹಾಗೂ ಕಪ್ಪು ವರ್ಣಗಳ ಸಂಯೋಜನೆಯು ಮೂಡಿಬಂದಿದೆ. ಇಲ್ಲಿ ಸಂಯೋಜನೆಗೊಂಡ ಆಕೃತಿಗಳಲ್ಲಿ ವ್ಯಕ್ತಿಗನುಗುಣವಾಗಿ ವೇಷಭೂಷಣ, ವರ್ಣಕಲ್ಪನೆ, ಭಾವನಾ ನಿರೂಪಣೆ, ವಸ್ತು ಸಂಯೋಜನೆಯೂ ಕಲ್ಪಿತಗೊಂಡಿದೆ. ಎಲ್ಲ ಚಿತ್ರಗಳಂತೆ ಈ ಚಿತ್ರದಲ್ಲಿಯೂ ಗಜ ಹಾಗೂ ಅಶ್ವಗಳನ್ನು ಚಿತ್ರಿಸಲಾಗಿದೆ.

ಚಿತ್ರಸಂಖ್ಯೆ ೨೩ ಈ ಚಿತ್ರವು ಹುಮನಾಬಾದದ ಬಾಲಾಜಿ ಮಂದಿರದಲ್ಲಿ ಲಭ್ಯವಿದೆ. ಇದು ಚಿತ್ರ ೨೨ ರಂತೆ ನಿರೂಪಿತಗೊಂಡರೂ ಆಕೃತಿಗಳ ಸಂಯೋಜನೆ ಹಾಗೂ ವರ್ಣಗಳಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಇಲ್ಲಿ ಜಾಂಬವಂತ, ಸುಗ್ರೀವ ಮುಂತಾದ ವಾನರ ಸಮೂಹವನ್ನು ಕೆಂಪು, ಹಸಿರು, ಬಿಳಿ, ಕೆಂಪು ವರ್ಣಗಳಿಂದ ಹಾಗೂ ಬಂಗಾರದ ಮೆರಗು ವರ್ಣಗಳಿಂದ ಸಂಯೋಜಿಸಲಾಗಿದೆ. ಕಾಲ್ದಳದ ಸೈನಿಕರ ಸಮೂಹವೂ ಇದೇ ವರ್ಣನೆಯಿಂದ ಕಲ್ಪಿಸಲಾಗಿದೆ. ಕಲಾವಿದನು ಇವರನ್ನು ಚಪ್ಪಟೆ ವರ್ಣಗಳಿಂದ ಚಿತ್ರಿಸಿದ್ದು, ಛತ್ರಿ, ಚಾಮರ, ಸೇವಕರು, ಋಷಿಮುನಿಗಳು ಹಾಗೂ ಅರಮನೆಯ ಹಿನ್ನೆಲೆಯು ಅಲಂಕಾರಿಕವಾಗಿ ಮೂಡಿಬಂದಿದೆ. ಈ ಚಿತ್ರದಲ್ಲಿ ಕೆಂಪು ಬಾವುಟಗಳನ್ನು ಕಾಣಬಹುದು. ಆಕಾಶವನ್ನು ನೀಲಿವರ್ಣದಿಂದ ಏಕರೂಪವಾಗಿ ಲೇಪನಮಾಡಲಾಗಿದ್ದು, ಕೆಂಪು, ನೀಲಿ, ಕಪ್ಪು ಮತ್ತು ಬಂಗಾರ ವರ್ಣಗಳು ಉಜ್ವಲವಾಗಿ ವ್ಯಕ್ತಗೊಂಡಿವೆ. ಶ್ರೀರಾಮನು ಧರಿಸಿದ ಪುಷ್ಪಮಾಲೆಯೂ ಸ್ಪಷ್ಟವಾಗಿ ಹಾಗೂ ಆಕರ್ಷಕವಾಗಿ ರಚನೆಗೊಂಡಿದೆ.

ಚಿತ್ರಸಂಖ್ಯೆ ೨೪ ಈ ಚಿತ್ರವು ಉಡುಪಿಯ 'ಉಡ್‌ಲ್ಯಾಂಡ್' ಹೊಟೇಲದಲ್ಲಿ ಲಭ್ಯವಿದೆ. ಇದು ೫೮ x ೮೮ ಸೆಂ, ಮೀ ಅಳತೆಯನ್ನು ಹೊಂದಿದೆ. ಇಲ್ಲಿ ಶ್ರೀರಾಮಚಂದ್ರ ಹಾಗೂ ಹನುಮರು ನೀಲಿವರ್ಣಗಳಿಂದ ಸಂಯೋಜಿತಗೊಂಡಿದ್ದಾರೆ. ಸೀತಾಮಾತೆಯು ಗೌರವರ್ಣ ಹೊಂದಿದ್ದು, ತಾವರೆಯನ್ನು ಹಿಡಿದು ಪತಿಯ ಪ್ರೀತಿಯನ್ನು ಆಲಾಪನೆ ಮಾಡುತ್ತಿರುವಳು. ಇಲ್ಲಿ ಸಂಯೋಜನೆಗೊಂಡಿರುವ ಎಲ್ಲರೂ ಗೌರವರ್ಣದಿಂದ ಬಿಂಬಿತವಾಗಿದ್ದಾರೆ. ಋಷಿಮುನಿಗಳು ಶ್ರೀರಾಮನನ್ನು ಹರಸುತ್ತಿದ್ದು, ಲಕ್ಷ್ಮಣ, ಭರತ, ಶತೃಘ್ನರರು ಶ್ರೀರಾಮನ ಸೇವೆಯಲ್ಲಿ ನಿರತರಾಗಿದ್ದಾರೆ. ಜಾಂಬವಂತ ಹಾಗೂ ಇತರ ವಾನರು ಹಾಗೂ ಅರಮನೆಯ ಸ್ತ್ರೀ, ಪುರುಷರು ಶ್ರೀರಾಮ

ಭಕ್ತಿಯಲ್ಲಿ ತೊಡಗಿರುವರು. ಕೆಳಸಾಲಿನಲ್ಲಿ ಅಶ್ವ ಹಾಗೂ ಗಜಗಳನ್ನು ಚಿತ್ರಿಸಿದ್ದು, ಚಿತ್ರದ ಹಿನ್ನೆಲೆಯಲ್ಲಿ ಅರಮನೆಯ ಬಾಹ್ಯರೂಪವನ್ನು ಅಲಂಕಾರಿಕ ಹಾಗೂ ವರ್ಣಮಯವಾಗಿ ಅನಾವರಣಗೊಳಿಸಿದ್ದಾರೆ. ಆಕಾಶದಲ್ಲಿ ಗಂಧರ್ವರು ಈ ಶುಭ ಸಂದರ್ಭದಲ್ಲಿ ಹೂಮಳೆಯನ್ನು ಸುರಿಯುತ್ತಿರುವರು.

ಚಿತ್ರದಲ್ಲಿ ಆಭರಣ, ಉಡುಗೆ – ತೊಡುಗೆ, ವಸ್ತುಗಳ ವಿನ್ಯಾಸದಲ್ಲಿ ಅತಿಯಾದ ಅಲಂಕರಣ ವೈಭವೀಕರಣಗೊಂಡಿದ್ದು, ಆಕೃತಿಗಳನ್ನು ಆಕರ್ಷಕವಾಗಿ ಸಂಯೋಜಿಸಲಾಗಿದೆ. ರೇಖೆ ಹಾಗೂ ವರ್ಣವೈವಿಧ್ಯತೆಯಲ್ಲಿ ಲಾವಣ್ಯ ಯೋಜನೆಯೂ ಉತ್ತಮವಾಗಿ ಅಭಿವ್ಯಕ್ತಗೊಂಡಿದೆ. ಒಟ್ಟಾರೆ ಈ ಎಲ್ಲ ಚಿತ್ರಗಳಲ್ಲಿ ಕಲಾವಿದನ ಅನುಭವ, ಅಲಂಕಾರ ಪ್ರಜ್ಞೆ, ಸೌಂದರ್ಯ ಪ್ರಜ್ಞೆ, ವಿಷಯ ಸಂದರ್ಭ, ವರ್ಣಗಾರಿಕೆ ಹಾಗೂ ಭಾವನಾ ನಿರೂಪಣೆಯೂ ಆಯಾ ಕಲಾಕೃತಿಯಲ್ಲಿ ಅಭಿವ್ಯಕ್ತಗೊಂಡಿವೆ.

**ಚಿತ್ರಸಂಖ್ಯೆ ೨೫ ಕೋದಂಡರಾಮ**

ಈ ಚಿತ್ರವು ತುಮಕೂರಿನ ಕೆ.ಆರ್. ಬಡವಣೆಯ ಶ್ರೀರಾಮ ಮಂದಿರದಲ್ಲಿದೆ. ಇದು ೫೩ x ೬೮ ಸೆಂ, ಮೀ ಅಳತೆಯಲ್ಲಿ ಸಿದ್ಧಗೊಂಡಿದೆ. ಚಿತ್ರವು ಶಿಥಿಲಾವಸ್ಥೆಯಲ್ಲಿದ್ದರೂ ಸ್ಪಷ್ಟದೃಶ್ಯವು ಕಾಣುತ್ತದೆ. ಬಾಣ, ಬತ್ತಳಿಕೆಯಿಂದ ರಾಮ ಲಕ್ಷ್ಮಣರು ರೂಪಗೊಂಡಿರುವರು. ಅವರ ಪಕ್ಕ ಸೀತಾದೇವಿಯೂ ಸಹ ಚಿತ್ರಿತಗೊಂಡಿರುವಳು. ಶ್ರೀರಾಮನ ಪರಮಭಕ್ತ ಹನಮನು ಶ್ರೀರಾಮನ ಪಾದದ ಕೆಳಗೆ ಕುಳಿತು ನಮಿಸುತ್ತಿರುವಂತೆ ಕಲಾವಿದನು ದೃಶ್ಯಿಕರಿಸಿದ್ದಾನೆ.

ಶ್ರೀರಾಮನು ನೀಲಿ ವರ್ಣದ ಮೈಬಣ್ಣ ಹೊಂದಿದ್ದು, ಕಿರೀಟಾಭರಣಗಳಿಂದ, ತೋಳ್ಬಂಧಿ, ಕಟಬಂಧಿ, ಕಂಕಣಗಳಂತಹ ಆಭರಣಗಳಿಂದ ಭೂಷಿತನಾಗಿದ್ದಾನೆ. ಸಾಂಪ್ರದಾಯಿಕ ಹಳದಿ ಧೋತಿ, ಕೆಂಪು ಉತ್ತರಿಯ ಮತ್ತು ಸೊಂಟಕ್ಕೆ ಕೆಂಪು ಶಲ್ಯವನ್ನು ಧರಿಸಿರುವನು. ಸೀತಾದೇವಿಯು ಸಹ ಸಾಂಪ್ರದಾಯಿಕ ಸೀರೆ, ಕಿರೀಟಾಭರಣಗಳನ್ನು, ಸೊಂಟಕ್ಕೆ ಡಾಬಗಳಂತಹ ಆಭರಣಗಳನ್ನು ಹೊಂದಿರುವಳು. ಇಲ್ಲಿ ಸೀತೆ–ಲಕ್ಷ್ಮಣರು ಗೌರವರ್ಣದಿಂದ ಕೂಡಿದ್ದು ಹನುಮ–ಶ್ರೀರಾಮರು ತಿಳಿನೀಲಿ ಬಣ್ಣದಿಂದ ಸಂಯೋಜಿತಗೊಂಡಿರುವರು. ಚಿತ್ರದ ಹಿನ್ನೆಲೆಯ ಅರಮನೆಯ ವೈಭವವನ್ನು ಕಲ್ಪಿಸುವಂತೆ ವಾಸ್ತುವಿನ್ಯಾಸವನ್ನು ಚಿತ್ರಿಸಲಾಗಿದೆ. ಅಲಂಕಾರಿಕ ಕಂಬವಿನ್ಯಾಸಗಳು, ಕಿಟಕಿ ವಿನ್ಯಾಸಗಳು ಹಾಗೂ ಪರದೆಗಳನ್ನು ಸಂಯೋಜಿಸಲಾಗಿದೆ. ಆಕೃತಿಗಳ ಉಡುಗೆ ತೊಡುಗೆಗಳ ಒಡಲು ಹಾಗೂ ಅಂಚುಗಳಲ್ಲಿ ಚಿತ್ರವಿನ್ಯಾಸಗಳು ಹಾಗೂ ಸಿಂಹಾಸನದ ರಚನೆಯಲ್ಲಿ ಅಲಂಕಾರಿಕ ನಕ್ಷಾವಿನ್ಯಾಸಗಳು ಸುಂದರವಾಗಿ ಮೂಡಿಬಂದಿವೆ. ಚಿತ್ರವು ಶಿಥಿಲಾವಸ್ಥೆಯಲ್ಲಿರುವುದರಿಂದ ರೇಖೆ ಹಾಗೂ ವರ್ಣಗಳಲ್ಲಿ ಸ್ಪಷ್ಟತೆ ಕಾಣುವುದಿಲ್ಲ.

ಚಿತ್ರವು ರೇಖೆ, ವರ್ಣ, ಭಾವ, ಆಕೃತಿಗಳ ಸಂಯೋಜನೆ, ಯಥಾದರ್ಶನ, ಅಲಂಕಾರ ದೃಷ್ಠಿಯಿಂದ ಉತ್ತಮವಾಗಿ ನಿರೂಪಣೆಗೊಂಡಿದೆ.

**ಚಿತ್ರಸಂಖ್ಯೆ ೨೬ ಸೀತೆ**

ಈ ಚಿತ್ರವು ಮೈಸೂರಿನ ನಿಷಾದಬಾಗ ಪಾರ್ಕನ ಗಾಜಿನ ಮಂಟಪದಲ್ಲಿದೆ. ಸೀತೆಯ ಪಾತ್ರ ರಾಮಾಯಣದಲ್ಲಿ ಬಹುಮುಖ್ಯವಾದುದು. ಶ್ರೀರಾಮನ ಹೆಂಡತಿಯಾಗಿ, ಜನಕನ

ಸುಪುತ್ರಿಯಾಗಿ, ಕುಶಲವರ ಪ್ರೀತಿಯ ತಾಯಿಯಾಗಿ, ಅನೇಕ ಘಟನೆಗಳಲ್ಲಿ ರಾಮಾಯಣದುದ್ದಕ್ಕೂ ಕಾಣಸಿಗುತ್ತಾಳೆ. ಇವಳು ಪಾರ್ವತಿಯ ಪುನರ್ ಜನ್ಮಳೆಂದೂ ಪುರಾಣ ಕಥೆ ತಿಳಿಸುತ್ತದೆ.

ಇಲ್ಲಿ ಸೀತೆಯನ್ನು ಗಾಜಿನ ಕಲಾವಿದರು ಏಕವ್ಯಕ್ತಿಯಾಗಿ ಚಿತ್ರಿಸಿದ್ದಾರೆ. ಬಲಗೈಯಲ್ಲಿ ಕೆಂಪು ತಾವರೆಯನ್ನು ಹಿಡಿದು ಎಡಕೈಯನ್ನು ಟೊಂಕಕ್ಕೆ ಆಣಿಸಿ ನೃತ್ಯಭಂಗಿಯಲ್ಲಿ ನಿಂತಿರುವಂತೆ ಕಲಾವಿದನು ಚಿತ್ರಿಸಿದ್ದಾನೆ. ಚಿತ್ರಾಲಂಕೃತಗಳಿಂದ ಕೂಡಿದ ಕಿರೀಟ, ಕರ್ಣಾಭರಣಗಳು, ಕಂಠಾಭರಣಗಳು, ತೋಳುಬಂಧಿಗಳು, ಕಂಕಣ ಬಂಧಿಗಳು, ಕಟಿಬಂಧಕಗಳು ಸೂಕ್ಷ್ಮರೇಖಾ ವಿನ್ಯಾಸಗಳಿಂದ ಅಲಂಕೃತಗೊಂಡಿವೆ. ಬಿಳಿ, ಹಳದಿ ಹಾಗೂ ಹಸಿರು ಮಿಶ್ರಿತ ಸೀರೆಯ ನಿರಿಗೆಗಳು ಬೆಳಕು ನೆರಳುಗಳ ಕಲ್ಪನೆಯಿಂದ ಅತ್ಯಾಕರ್ಷಕವಾಗಿ ಮೂಡಿಬಂದಿವೆ. ಸೀರೆ ಮತ್ತು ರವಿಕೆಯ ಅಂಚುಗಳು ಚಿತ್ರವಿನ್ಯಾಸಗಳಿಂದ ಕಂಗೊಳಿಸುತ್ತಿವೆ. ಇಲ್ಲಿ ಸೀತೆಯ ನೀಳವಾದ ಜಡೆಯನ್ನು ಹೂವುಗಳಿಂದ ಅಲಂಕರಿಸಲಾಗಿದೆ. ಚಿತ್ರದ ಸುತ್ತಲೂ ಅಲಂಕಾರಿಕ ಚಿತ್ರವಿನ್ಯಾಸದಿಂದ ಕೂಡಿದ ಮಂಟಪದ ಸಂಯೋಜನೆ ಇದೆ. ಗೌರವರ್ಣದಿಂದ ಕೂಡಿದ ಸೀತೆಯ ಶರೀರ ರಚನೆಯಲ್ಲಿ ದುಂಡುತನ ತರಲು ಕಲಾವಿದನು ಪ್ರಯತ್ನಿಸಿದ್ದಾನೆ. ಒಟ್ಟಾರೆ ಈ ಚಿತ್ರವು ಸೂಕ್ಷ್ಮರೇಖೆಗಳಿಂದ ಕೂಡಿದ ಅಲಂಕಾರವೂ ವೈಭವಿಕೃತಗೊಂಡಿದೆ.

**ಚಿತ್ರಸಂಖ್ಯೆ ೨೭, ೨೮, ೨೯ ಸೀತಾರಾಮರ ವಿವಾಹ**

ಇಲ್ಲಿ ಚಿತ್ರಿತಗೊಂಡಿರುವ ಈ ಎರಡು ಚಿತ್ರಗಳು ಸೀತಾರಾಮರ ವಿವಾಹದ ಪ್ರಸಂಗವನ್ನು ವ್ಯಕ್ತಪಡಿಸುತ್ತೇವೆ. ಶ್ರೀರಾಮಚಂದ್ರನು ವಿಶ್ವಾಮಿತ್ರರ ಜೊತೆ ಮಿಥಿಲಾನಗರಕ್ಕೆ ತೆರಳಿ ಅಲ್ಲಿ ಜನಕನು ಹೂಡಿದ ಸ್ವಯಂವರದಲ್ಲಿ ಶಿವಧನಸ್ಸನ್ನು ಭೇದಿಸಿ ಸೀತೆಯನ್ನು ವರಿಸುತ್ತಾನೆ. ಈ ಸಂದರ್ಭದಲ್ಲಿ ಕಂಡು ಬಂದ ಮದುವೆಯ ವರ್ಣನೆಯನ್ನು ಗಾಜಿನ ಕಲಾವಿದರು ಅಭಿವ್ಯಕ್ತಪಡಿಸಿದ್ದಾರೆ.

ಚಿತ್ರಸಂಖ್ಯೆ ೨೭ ಇದು ತುಮಕೂರಿನ ಟಿ. ಆರ್. ಮಂಜುನಾಥರ ಮನೆಯಲ್ಲಿ ಸಂಗ್ರಹಗೊಂಡಿದೆ. ಇಲ್ಲಿ ಸರ್ವಾಲಂಕೃತರಾದ, ವಧುವರರಂತೆ ಭೂಷಿತರಾದ ಶ್ರೀರಾಮಚಂದ್ರ ಹಾಗೂ ಸೀತೆಯರು ಪರಸ್ಪರ ಹೂವುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದಾರೆ. ಚಿತ್ರಾಲಂಕೃತ ಸ್ವರ್ಣ ಪೀಠದ ಮೇಲೆ ಆಶೀನರಾಗಿದ್ದು, ಶ್ರೀರಾಮನು ಹಸಿರು ಮೈಬಣ್ಣವನ್ನು ಹೊಂದಿದ್ದು, ಬಿಳಿ ಧೋತಿಯನ್ನು ಕೆಂಪು ಉತ್ತರಿಯವನ್ನು ಸೊಂಟಕ್ಕೆ ಕೆಂಪು ಶಲ್ಯವನ್ನು ಧರಿಸಿರುವನು. ಕಿರೀಟ ಹಾಗೂ ಆಭರಣಗಳು ಅಲಂಕೃತವಾಗಿ ಮೂಡಿಬಂದಿವೆ. ಸೀತೆಯು ಗೌರವರ್ಣ ಮೈಬಣ್ಣವನ್ನು ಹೊಂದಿದ್ದು, ಸಾಂಪ್ರದಾಯಿಕ ಸೀರೆ, ಹಸಿರು ರವಿಕೆಯನ್ನು ಧರಿಸಿರುವಳು. ಸೀತೆಯು ಕುಳಿತಿರುವ ಭಾವಭಂಗಿಯು ಮೈಸೂರು ಸಂಪ್ರದಾಯ ಚಿತ್ರಶೈಲಿಯನ್ನು ಪ್ರತಿನಿಧಿಸುತ್ತದೆ. ಉಡುಗೆ ತೊಡುಗೆಯಲ್ಲಿ ಚಿತ್ರವಿನ್ಯಾಸವು ಪ್ರಧಾನವಾಗಿ ಮೂಡಿಬಂದಿದೆ. ಅತೀಯಾದ ಸ್ವರ್ಣಾಭರಣಗಳ ವೈಭವವು ಎದ್ದು ತೋರುತ್ತದೆ. ವಧುವಿನ ವೇಷಭೂಷಣಗಳಂತೆ ಕಲಾವಿದನು ಸೀತೆಯನ್ನು ವಿನ್ಯಾಸಗೊಳಿಸಿರುವನು. ಇವರ ಹಿಂಬದಿಯ ಎಡ ಹಾಗೂ ಬಲಪಾರ್ಶ್ವಗಳಲ್ಲಿ ಕಿರೀಟಧಾರಿಗಳಾದ ಋಷಿಗಳು ಚಿತ್ರಿತಗೊಂಡಿರುವರು. ಇವರನ್ನು ಪುಷ್ಪಗಳಿಂದ ವಧು ವರರನ್ನು ಹರಸುತ್ತಿರುವಂತೆ ಸಂಯೋಜಿಸಿದ್ದಾರೆ. ಬಹುಶಃ ವಿಶ್ವಾಮಿತ್ರರು ಇರಬಹುದೆಂದು ತೋರುತ್ತದೆ.

ಚಿತ್ರದ ಕೆಳಭಾಗದಲ್ಲಿ ಹೋಮಕುಂಡದಲ್ಲಿ ಅಗ್ನಿಯು ಉರಿಯುತ್ತಿದ್ದು, ರಾಜ ಪುರೋಹಿತರು ಹೋಮವನ್ನು ಮಾಡುತ್ತಿರುವರು. ಚಿತ್ರದ ಎಡ ಹಾಗೂ ಬಲಪಾರ್ಶ್ವಗಳಲ್ಲಿ ಅರಮನೆಯ ಸ್ತ್ರೀಯರು ಫಲಪುಷ್ಪಾದಿಗಳಿಂದ ಕುಂಬಗಳಿಂದ ಈ ಮದುವೆಯಲ್ಲಿ ಪಾಲ್ಗೊಂಡಿರುವರು. ಇವರನ್ನು ಪಾರ್ಶ್ವಮುಖವಾಗಿ ಚಿತ್ರಿಸಿದ್ದು, ಅಲಂಕೃತ ವೇಷಭೂಷಣ ಹಾಗೂ ಆಭರಣಗಳಿಂದ ಸಂಯೋಜನೆಗೊಳಿಸಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಅರಮನೆಯ ಚಿತ್ರವು ಚಿತ್ರವಿನ್ಯಾಸಗಳಿಂದ ಬಿಂಬಿತವಾಗಿದೆ. ಅರಮನೆಯ ಮೇಲೆ ಕೆಂಪು ಬಾವುಟಗಳು ರಾರಾಜಿಸುತ್ತಿವೆ. ಆಕಾಶವು ಶುಭ್ರವಾದ ನೀಲಿವರ್ಣದಿಂದ ಕಂಗೊಳಿಸುತ್ತಿದೆ. ಚಿತ್ರವು ಕೆಂಪು, ನೀಲಿ, ಹಸಿರು, ಬಿಳಿ, ಕಪ್ಪು ಹಾಗೂ ಚಿನ್ನದರೇಖೆನಿಂದ ಸಂಯೋಜನೆಗೊಂಡಿದೆ. ವರ್ಣವಿನ್ಯಾಸವು ಉಜ್ವಲವಾಗಿ ಮೂಡಿಬಂದಿದ್ದು, ಅಲಂಕಾರ ಪ್ರಜೆಯನ್ನು ಅಭಿವ್ಯಕ್ತಿಸುತ್ತದೆ.

ಚಿತ್ರಸಂಖ್ಯೆ ೨೮ ಇದು ಕರ್ನಾಟಕ ವಿಶ್ವವಿದ್ಯಾಲಯ ಜನಪದ ವಸ್ತುಸಂಗ್ರಹಾಲದಲ್ಲಿ ಲಭ್ಯವಿದೆ. ಸೀತಾರಾಮರು ಸ್ವರ್ಣಪೀಠದ ಮೇಲೆ ಆಶೀನರಾಗಿದ್ದು ಪರಸ್ಪರ ಹೂವುಗಳನ್ನು ವಿನಿಮಯಮಾಡಿಕೊಳ್ಳುತ್ತಿರುವರು. ಇಬ್ಬರೂ ಪಾರ್ಶ್ವಭಂಗಿಯಲ್ಲಿದ್ದು, ವಸ್ತ್ರಾಭರಣಗಳಿಂದ ವಧುವರರಂತೆ ಭೂಷಿತರಾಗಿದ್ದಾರೆ. ವೇಷಭೂಷಣಗಳಲ್ಲಿ ಚಿತ್ರವಿನ್ಯಾಸಗಳು ಆಕರ್ಷಕವಾಗಿ ಮೂಡಿಬಂದಿವೆ. ಚಿತ್ರದ ಹಿಂಬದಿಯಲ್ಲಿ ಇಬ್ಬರೂ ರಾಜಪರಿವಾರದವರು ಭಕ್ತಿಪೂರ್ವಕವಾಗಿ ಈ ಸಮಾರಂಭದಲ್ಲಿ ಭಾಗಿಯಾಗಿರುವಂತೆ ಬಿಂಬಿತವಾಗಿದ್ದಾರೆ. ಇವರೂ ಸಹ ಕಿರೀಟ ಹಾಗೂ ವಸ್ತ್ರಾಭರಣಗಳಿಂದ ಅಲಂಕರತಗೊಂಡಿರುವರು. ಪೀಠದ ಕೆಳಗೆ ಹೋಮಕುಂಡಲದಲ್ಲಿ ಅಗ್ನಿಯು ಉರಿಯುತ್ತಿದೆ. ಚಿತ್ರವು ಎದ್ದು ತೋರುವಂತೆ ಕೆಂಪುವರ್ಣದಿಂದ ಹಿನ್ನೆಲೆಯನ್ನು ಲೇಪನಮಾಡಲಾಗಿದೆ.

ಈ ಚಿತ್ರವು ವಿಶೇಷವಾಗಿ ಹೂವು ಎಲೆಗಳಿಂದ ಕೂಡಿದ ನೈಸರ್ಗಿಕ ನಕ್ಷಾವಿನ್ಯಾಸವು ಚಿತ್ರದ ಸುತ್ತಲೂ ಸಂಯೋಜನೆಗೊಂಡಿದೆ. ಇನ್ನೂ ಅಲಂಕಾರವಾಗಿ ಕಾಣಲು, ಜ್ಯಾಮಿತಿಕ ಚಿತ್ರವಿನ್ಯಾಸವೂ ರೂಪಗೊಂಡಿದೆ. ಹಿನ್ನೆಲೆಯಲ್ಲಿ ಅರ್ಧಚಂದ್ರಾಕೃತಿಯ ಮಂಟಪವು ಹೂವು ಎಲೆಗಳ ನಕ್ಷೆಯಿಂದ ರಚನೆಗೊಂಡಿದೆ. ಇದಕ್ಕೆ ಬಟ್ಟೆಗಳ ಅಲಂಕಾರ ನಡುವೆ ಹೂವಿನ ಚಿತ್ರ ವಿನ್ಯಾಸ ಹಾಕಲಾಗಿದೆ. ಚಿತ್ರವು ರೇಖೆ, ವರ್ಣ ಹಾಗೂ ವಸ್ತುಗಳ ಸಂಯೋಜನೆಯಿಂದ ಉತ್ತಮವಾಗಿ ಮೂಡಿಬಂದಿದೆ. ಅಲಂಕಾರ ಹಾಗೂ ಸೌಂದರ್ಯಪ್ರಜ್ಞೆಯನ್ನು ಕಲಾವಿದನು ಇಲ್ಲಿ ಅಭಿವ್ಯಕ್ತಗೊಳಿಸಿರುವನು.

ಚಿತ್ರಸಂಖ್ಯೆ ೨೯ ಈ ಚಿತ್ರವು ಚಿತ್ರ ೨೮ ರಂತೆ ಆಶಯವನ್ನು ಹೊಂದಿದೆ. ಇಲ್ಲಿ ಸೀತಾರಾಮರು ಕುಳಿತಿರುವ ಭಂಗಿಯಲ್ಲಿ ವೈಪರೀತ್ಯತೆ ಇದೆ. ಇಲ್ಲಿಯೂ ಸಹ ನಾಲ್ಕು ಆಕೃತಿಗಳನ್ನು ಸಂಯೋಜಿಸಿದ್ದು, ಅವರ ಮೈಬಣ್ಣಗಳನ್ನು ಹಸಿರು ಹಾಗೂ ಬಿಳಿ ವರ್ಣಗಳಿಂದ ಲೇಪನಮಾಡಲಾಗಿದೆ. ಶ್ರೀರಾಮಸೀತೆಯರು ಕುಳಿತಿರುವ ಪೀಠ, ಧರಿಸಿರುವ ವಸ್ತ್ರಾಭರಣಗಳು ಚಿನ್ನದ ರೇಖುವಿನ ಜೊತೆಗೆ ಕೆಂಪು ಮೆರಗು ಬಣ್ಣವನ್ನು ಸಂಯೋಜಿಸಿ ನಕ್ಷಾವಿನ್ಯಾಸಗಳನ್ನು ಚಿತ್ರಿಸಿದ್ದಾರೆ. ಹಿಂಬದಿಯಲ್ಲಿ ಬಿಂಬಿತವಾಗಿರುವ ರಾಜರ್ಷಿಗಳು ವಧು ವರರನ್ನು ಹರಸುತ್ತಿರುವರು. ಇಲ್ಲಿ ಕಲಾವಿದನು ಇವರನ್ನು ಜನಕ ಹಾಗೂ ದಶರಥರನ್ನು ಕಲ್ಪಿಸಿರಬಹುದೆಂದು ತೋರುತ್ತದೆ.

ಚಿತ್ರದ ಹಿನ್ನೆಲೆಯಲ್ಲಿ ಚಿತ್ರವಿನ್ಯಾಸಗಳಿಂದ ಕೂಡಿದ ಪರದೆಗಳನ್ನು ಸಂಯೋಜಿಸಲಾಗಿದ್ದು, ನಡುವೆ ಅಲಂಕಾರಿಕ ವಸ್ತುವನ್ನು ನೇತುಹಾಕಿರುವಂತೆ ಬಿಂಬಿಸಿದ್ದಾರೆ. ಚಿತ್ರವು ಆಕರ್ಷಕವಾಗಿ ಕಾಣಲು ಹಿಂಬದಿಯಲ್ಲಿ ಕಪ್ಪು ಬಣ್ಣವನ್ನು ಚಪ್ಪಟೆಯಾಗಿ ಲೇಪಿಸಲಾಗಿದೆ. ಶ್ರೀರಾಮ ಸೀತೆಯರ ನೋಟಗಳಲ್ಲಿ ಪ್ರೇಮಾಲಾಪವು ಕಂಡುಬರುತ್ತದೆ. ಚಿತ್ರವು ರೇಖೆ, ವರ್ಣ ಹಾಗೂ ಭಾವನಾ ನಿರೂಪಣೆಯಲ್ಲಿ ಸೃಜನಶೀಲ ಅಭಿವ್ಯಕ್ತಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೩೦ ರಾವಣನ ಸಂಹಾರ**

ರಾವಣನು ಸೀತೆಯನ್ನು ಅಪಹರಿಸಿ ಲಂಕೆಯಲಿಟ್ಟಿದ್ದನು. ಸೀತೆಯನ್ನು ರಾವಣನಿಂದ ಬಿಡಿಸಿಕೊಂಡು ಬರಲು ಶ್ರೀರಾಮನು ಹನುಮಂತನ ಸಹಾಯದಿಂದ ಸೀತೆಯನ್ನು ಪತ್ತೆಹಚ್ಚಿ, ಕಪಿ ಸೈನ್ಯದೊಂದಿಗೆ ಲಂಕೆಯನ್ನು ಪ್ರವೇಶಮಾಡಿ ರಾವಣನ ಜೊತೆ ಯುದ್ಧ ಮಾಡಿ ಅವನನ್ನು ಸಂಹರಿಸುತ್ತಾನೆ. ಈ ಚಿತ್ರದಲ್ಲಿ ರಾಮ ರಾವಣರ ಯುದ್ಧ ಸನ್ನಿವೇಶ ಚಿತ್ರಿತಗೊಂಡಿದೆ. ಈ ಯುದ್ಧ ಸಂದರ್ಭದಲ್ಲಿ ವಿಭೀಷಣ ಹಾಗೂ ಮಂಡೋದರಿಯು ಶ್ರೀರಾಮನ ಜೊತೆ ಯುದ್ಧ ಮಾಡದೇ ಸಂಧಾನವಾಗಿ ಸೀತೆಯನ್ನು ಕಳುಹಿಸು ಎಂದು ರಾವಣನ್ನು ಪರಿಪರಿಯಾಗಿ ಬೇಡಿದರೂ ಅವನು ಕೇಳದೇ ಯುದ್ಧಕ್ಕೆ ಸನ್ನದ್ಧನಾಗಿ ಶ್ರೀರಾಮನಿಂದ ಹತನಾಗುತ್ತಾನೆ. ರಾಮಬಾಣದಿಂದ ಹತನಾಗುವ ಸಮಯದಲ್ಲಿ 'ಜೈ ಶ್ರೀರಾಮ' ಎಂದು ಮೋಕ್ಷವನ್ನು ಪಡೆಯುತ್ತಾನೆ ಎಂಬ ಕಥೆ ತಿಳಿಯುವುದು. ಶ್ರೀರಾಮನಿಂದ ರಾವಣನು ವಧೆಯಾಗುವ ಪ್ರಸಂಗವನ್ನು ಈ ಚಿತ್ರವು ಪ್ರತಿನಿಧಿಸುತ್ತದೆ.

ಈ ಚಿತ್ರವು ಮಣಿಪಾಲದ ವಸ್ತು ಸಂಗ್ರಹಾಲದಲ್ಲಿದೆ. ಇದು ೩೦ x ೩೦ ಸೆಂ. ಮೀ ಅಳತೆಯನ್ನು ಹೊಂದಿದೆ. ಇಲ್ಲಿ ಶ್ರೀರಾಮನು ಧನಸ್ಸನ್ನು ಹೆದೆಗೇರಿಸಿ ಬಾಣಪ್ರಯೋಗ ಮಾಡಿ, ದಶಮುಖನ ಶಿರಗಳನ್ನು ಸಂಹರಿಸಿದಂತೆ ಚಲನೆಯಿಂದ ಚಿತ್ರಿತಗೊಂಡಿದ್ದಾನೆ. ಶ್ರೀರಾಮನು ಕಿರೀಟ ಕರ್ಣಕುಂಡಲ, ಶಿರಾಭರಣಗಳು, ತೋಳ್ಬಂದಿ, ಕಂಕಣಬಂಧಿ, ಕಟಿಬಂಧಕ ಆಭರಣಗಳಿಂದ ಭೂಷಿತನಾಗಿರುವನು. ಬಿಳಿಧೋತಿ, ಚಿತ್ರಾಲಂಕೃತ ತಿಳಿಗುಲಾಬಿ ಉತ್ತರಿಯವನ್ನು ಧರಿಸಿರುವನು. ಈ ವಸ್ತ್ರಗಳ ಅಂಚನ್ನು ಹಳದಿ ಬಣ್ಣದಿಂದ ವಿನ್ಯಾಸಗೊಳಿಸಲಾಗಿದೆ. ಇಲ್ಲಿ ಕಲಾವಿದನು ಶ್ರೀರಾಮನನ್ನು ದಶಮುಖನಿಗಿಂತ ದೊಡ್ಡ ಪ್ರಮಾಣದಲ್ಲಿ ಚಿತ್ರಿಸಿ ಹಳದಿ ಮಿಶ್ರಿತ ಹಸಿರು ಮೈಬಣ್ಣವನ್ನು ಸಂಯೋಜಿಸಲಾಗಿದೆ. ದಶಮುಖನನ್ನು ಶಿರಚ್ಛೇದನ ಮಾಡಲಾಗಿದ್ದು, ಇಪ್ಪತ್ತು ಕೈಗಳಲ್ಲಿ ಎರಡು ಕೈಗಳಿಂದ ಶ್ರೀರಾಮನಿಗೆ ಬಾಣ ಪ್ರಯೋಗ ಮಾಡುತ್ತಿರುವನು. ಅವನ ದಶಮುಖಗಳು ಶ್ರೀರಾಮನ ಬಾಣಕ್ಕೆ ಅಂಟಿಕೊಂಡಿವೆ. ದಶಮುಖನನ್ನು ಮಿತವಾದ ವಸ್ತ್ರಾಭರಣಗಳಿಂದ ಸಂಯೋಜಿಸಲಾಗಿದ್ದು, ಹಸಿರು ಬಣ್ಣದ ಚಡ್ಡಿ ಹಾಗೂ ಶಲ್ಯವನ್ನು ಕಟ್ಟಿಕೊಂಡಿರುವಂತೆ ಬಿಂಬಿತವಾಗಿದ್ದಾನೆ. ಇವನ ಮೈಬಣ್ಣವು ತಿಳಿಗುಲಾಬಿ ಬಣ್ಣದಿಂದ ಕೂಡಿದ್ದು, ಶರೀರವು ಚಲನೆಯುಕ್ತವಾಗಿದೆ.

ಚಿತ್ರದ ಮೇಲೆ ಅಲಂಕಾರಿಕ ಮಂಟಪವನ್ನು ಚಿತ್ರಿಸಿ ಕೆಳಗೆ ಅರ್ಧಚಂದ್ರಾಕೃತಿಯ ಆಕಾರದ ರೇಖಾವಿನ್ಯಾಸದಿಂದ ಭೂದೃಶ್ಯವನ್ನು ಚಿತ್ರಿಸಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಕಂದುಗೆಂಪು ಬಣ್ಣವು ಪ್ರಧಾನವಾಗಿ ಆವರಿಸಿಕೊಂಡಿದೆ. ಚಿತ್ರದಲ್ಲಿ ರೇಖೆ, ವರ್ಣ ಹಾಗೂ ಭಾವನಾ ನಿರೂಪಣೆಯೂ ಕಲಾವಿದನ ಅನುಭವಕ್ಕನುಗುಣವಾಗಿ ಅಭಿವ್ಯಕ್ತಗೊಂಡಿದೆ.

**ಚಿತ್ರಸಂಖ್ಯೆ ೩೧, ೩೨, ೩೩, ೩೪, ೩೫, ೩೬, ೩೭, ೩೮, ೩೯ ಕೃಷ್ಣ ಯಶೋಧೆ.**

ಇಲ್ಲಿ ರಚನೆಗೊಂಡಿರುವ ಎಲ್ಲ ಗಾಜಿನ ಚಿತ್ರಗಳು ನಂದನ ಹೆಂಡತಿ ಯಶೋದೆ ಹಾಗೂ ದೇವಕಿಯ ಮಗ ಕೃಷ್ಣನ ತಾಯಿ ಮಗುವಿನ ಸಂಬಂಧವನ್ನು ಕಲ್ಪಿಸುತ್ತವೆ. ಅಂದರೆ ಒಬ್ಬತಾಯಿ ತನ್ನ ಮಗುವಿಗೆ ತೋರುವ ಪ್ರೀತಿ, ಮಮಕಾರವನ್ನು ಹಾಗೂ ಮಾತೃವಾತ್ಸಲ್ಯವನ್ನು ಪ್ರತಿಬಿಂಬಿಸುತ್ತವೆ.

ಶ್ರೀಕೃಷ್ಣ ಜನ್ಮ ವೃತ್ತಾಂತದಂತೆ ವಿಷ್ಣು, ದೇವಕಿಯ ಗರ್ಭದಲ್ಲಿ ಎಂಟನೆಯ ಮಗುವಾಗಿ ಅಂಕುರಿಸಿ ಮಾವ ಕಂಸನ ಸೆರೆಮನೆಯಲ್ಲಿ ಜನ್ಮವೆತ್ತಿ ಗೋಕುಲದ ನಂದ ಮಹಾರಾಜನ ಮನೆಯಲ್ಲಿ ಶ್ರೀಕೃಷ್ಣನೆಂದು ಜನ್ಮನಾಮ ಪಡೆದು ಬೆಳೆಯುತ್ತಾನೆ. ನಂದನ ಹೆಂಡತಿ ಯಶೋದೆಯು ದೇವಕಿಯ ಮಗನ್ನು ತನ್ನ ಮಗುವೆಂದೇ ಭಾವಿಸಿ ಅವನಿಗೆ ಮಾತೃವಾತ್ಸಲ್ಯ, ಮಾತೃಪ್ರೇಮವನ್ನು ಕರುಣಿಸಿದ್ದು ವಿಶೇಷವಾದುದು. ಆ ಮಾತೃತ್ವವನ್ನು ಈ ಚಿತ್ರಗಳು ಕಲ್ಪಿಸುತ್ತವೆ.

ಚಿತ್ರಸಂಖ್ಯೆ ೩೧ ಇದು ಅಮೀನಗಡದ ಶ್ರೀ ಶೀಲವಂತಪ್ಪ ಗರಡಿಯವರ ಮನೆಯಲ್ಲಿ ಲಭ್ಯವಿದೆ. ಇಲ್ಲಿ ಸರ್ವಾಲಂಕೃತ ವಸ್ತ್ರಾಭರಣಗಳಿಂದ ಭೂಷಿತಳಾದ ಯಶೋದೆಯು ಬಾಲಕ ಕೃಷ್ಣನನ್ನು ಅಪ್ಪಿಕೊಂಡು ಮುದ್ದು ಮಾಡುತ್ತಿರುವಳು. ಆಕರ್ಷಕ ಶಾರೀರಿಕ ಲಕ್ಷಣಗಳನ್ನು ಹೊಂದಿರುವ ಯಶೋದೆಯು ಒಬ್ಬ ಶ್ರೀಮಂತ ಸ್ತ್ರೀಯಂತೆ ಬಿಂಬಿತವಾಗಿದ್ದಾಳೆ. ಇವಳು ಧರಿಸಿದ ಸೀರೆ ಹಾಗೂ ಆಭರಣಗಳು ಹಾಗೂ ಕೇಶಾಲಂಕಾರಗಳು ಸೂಕ್ಷ್ಮರೇಖೆಗಳಿಂದ ರಚನೆಗೊಂಡಿವೆ. ಈ ಚಿತ್ರವಿನ್ಯಾಸಗಳು ಶ್ರೀಮಂತ ಬದುಕನ್ನು ಸೂಚಿಸುತ್ತವೆ.

ಇಲ್ಲಿ ಬಾಲಕ ಶ್ರೀಕೃಷ್ಣನ ಕೇಶವಿನ್ಯಾಸವನ್ನು ವಿಶೇಷವಾಗಿ ಅಲಂಕರಿಸಿ ಅದಕ್ಕೆ ಆಭರಣಗಳನ್ನು ಹಾಕಲಾಗಿದೆ. ಕಿವಿ, ಕತ್ತು, ರಟ್ಟೆ, ಕಾಲುಗಳಿಗೆ ಆಭರಣಗಳನ್ನು ಧರಿಸಿ ಪುತ್ರಪ್ರೇಮವನ್ನು ಅನುಭವಿಸುವಂತೆ ಬಾಲಕ ಕೃಷ್ಣನನ್ನು ಸಂಯೋಜಿಸಲಾಗಿದೆ. ಯಶೋದೆ ಹಾಗೂ ಕೃಷ್ಣರನ್ನು ಕಲಾವಿದನು ಹಾಲು ಬಿಳುಪಿನ ಮೈಬಣ್ಣವನ್ನು ಕಲ್ಪಿಸುವಂತೆ ವರ್ಣ ಸಂಯೋಜನೆ ಮಾಡಿರುವನು. ಇಲ್ಲಿ ಯಶೋದೆಯು ಒಬ್ಬ ಮರಾಠ ಸ್ತ್ರೀಯಂತೆ ಅವಳ ದೈಹಿಕ ಲಕ್ಷಣಗಳು ವ್ಯಕ್ತಗೊಂಡಿವೆ. ಚಿತ್ರದ ಹಿನ್ನೆಲೆಯಲ್ಲಿ ಶ್ರೀಮಂತರ ಮನೆಯ ವಾಸ್ತುವಿನ್ಯಾಸಗಳಂತೆ ದೊಡ್ಡ ಕಂಬಗಳು, ಚಿತ್ರವಿನ್ಯಾಸಗಳಿಂದ ಕೂಡಿದ ಪರದೆಗಳು ಅಲಂಕಾರಿಕವಾಗಿ ಸಂಯೋಜನೆಗೊಂಡಿವೆ. ಚಿತ್ರವು ರೇಖೆ, ವರ್ಣ ಹಾಗೂ ರೂಪಲಕ್ಷಣಗಳಿಂದ ಉತ್ತಮವಾಗಿ ಮೂಡಿಬಂದಿದೆ.

ಚಿತ್ರಸಂಖ್ಯೆ ೩೨ ಇದು ಬಾಗಲಕೋಟೆಯ ಶ್ರೀ ಎಸ್. ಬಿ. ಹೊಕ್ರಾಣಿಯವರ ಮನೆಯಲ್ಲಿ ಸಂಗ್ರಹವಿದೆ. ಈ ಚಿತ್ರದಲ್ಲಿ ಯಶೋದೆಯು ಬಾಲಕ ಕೃಷ್ಣನನ್ನು ತೊಡೆಯ ಮೇಲೆ ಹೊತ್ತುಕೊಂಡು ಅವನಿಗೆ ಬೆಣ್ಣೆಯನ್ನು ತಿನ್ನಿಸುತ್ತಿರುವಂತೆ ಕುಳಿತ ಭಂಗಿಯಲ್ಲಿರುವಳು. ಸಧೃಡ, ದೈಹಿಕ ಲಕ್ಷಣ ಹೊಂದಿದ್ದು, ಮುಖದಲ್ಲಿ ಮಮತೆ, ದುಂಡುತನವನ್ನು ಕಾಣಬಹುದು. ಚಿತ್ರವಿನ್ಯಾಸಗಳಿಂದ ಕೂಡಿದ ಕೆಂಪು ಸೀರೆ, ಹಸಿರು ಬಣ್ಣದ ರವಿಕೆ, ಅಂಚಿನಲ್ಲಿ ಚಿತ್ರವಿನ್ಯಾಸ, ಎತ್ತಿ ಕಟ್ಟಿದ ತುರುಬು ಅದಕ್ಕೆ ಮುತ್ತಿನ ಸರ, ಆಭರಣಗಳನ್ನು ಅಲಂಕರಿಸಲಾಗಿದೆ. ಇಲ್ಲಿ ಕೃಷ್ಣನನ್ನು ಚಿತ್ರ ೩೧ ರಂತೆ ವಸ್ತ್ರಾಭರಣಗಳನ್ನು ಅಲಂಕರಿಸಲಾಗಿದೆ. ಕುಳಿತಿರುವ ಭಂಗಿಯಲ್ಲಿ ಕೃಷ್ಣನು ಕಾಲ

ಮೇಲೆ ಕಾಲು ಹಾಕಿ ತಾಯಿಯ ಗಲ್ಲವನ್ನು ಹಿಡಿದಿರುವಂತೆ, ತನ್ನ ವಿಶಾಲ ಕಣ್ಣುಗಳಿಂದ ಮುಗ್ಧತೆಯನ್ನು ವ್ಯಕ್ತಪಡಿಸುತ್ತಿರುವಂತೆ ರೂಪಗೊಂಡಿರುವನು. ಚಿತ್ರದ ಹಿನ್ನೆಲೆಯಲ್ಲಿ ಅರಮನೆ ಯಲ್ಲಿರುವಂತೆ ಚಿತ್ರ ವಿನ್ಯಾಸಗಳ ಕಂಬಗಳು, ಚಿತ್ರಾಲಂಕೃತಗೊಂಡಿರುವ ಬಣ್ಣದ ಪರದೆಗಳು ಚಿತ್ರಿತಗೊಂಡಿವೆ. ಜೊತೆಗೆ ಪುತ್ರಪ್ರೇಮವನ್ನು ಸೂಚಿಸುವಂತೆ ಗಿಳಿಯ ಚಿತ್ರವನ್ನು ಕಾಣಬಹುದು. ಈ ಚಿತ್ರವೂ ಕೂಡಾ ಶ್ರೀಮಂತ ಸಂಸ್ಕೃತಿಯ ಮನೆತನವನ್ನು ಕಲ್ಪಿಸುತ್ತದೆ.

ಚಿತ್ರಸಂಖ್ಯೆ ೩೩ ಇದು ಧರ್ಮಸ್ಥಳದ 'ಮಂಜುಷಾ' ವಸ್ತು ಸಂಗ್ರಹಾಲಯದಲ್ಲಿ ಲಭ್ಯವಿದೆ. ಇದು ೪೦ x ೩೫ ಸೆಂ.ಮೀ ಅಳತೆಯನ್ನು ಹೊಂದಿದೆ. ಈ ಚಿತ್ರವು ರಚನೆಯಲ್ಲಿ ಸ್ವಲ್ಪ ಭಿನ್ನತೆಯನ್ನು ಕಾಣುತ್ತೇವೆ. ಇಲ್ಲಿ ಯಶೋದೆಯು ಚಿತ್ರವಿನ್ಯಾಸಗಳಿಂದ ಕೂಡಿದ ಸೀರೆಯನ್ನು ಧರಿಸಿದ್ದು, ಇದನ್ನು ಕಲಾವಿದನು ಅಲಂಕಾರಿಕವಾಗಿ ಅನಾವರಣಗೊಳಿಸಿರುವನು. ಸೀರೆಯ ನಿರಿಗೆಗಳು ವೃತ್ತಾಕಾರದ ಮಾದರಿಯಲ್ಲಿ ರೂಪುಗೊಂಡಿವೆ. ಅದರ ಅಂಚು ಚಿತ್ರವಿನ್ಯಾಸಗಳಿಂದ ಕೂಡಿದೆ. ಇಲ್ಲಿ ಯಶೋದೆಯು ರವಿಕೆಯನ್ನು ಧರಿಸಿಲ್ಲ. ಎತ್ತಿ ಕಟ್ಟಿದ ತುರುಬು, ಅದಕ್ಕೆ ಆಭರಣಗಳ ವಿಶೇಷ ಅಲಂಕಾರವು ವ್ಯಕ್ತಗೊಂಡಿದೆ. ಮೇಲ್ನೋಟಕ್ಕೆ ಯಶೋದೆಯ ದೇಹ ರಚನೆಯು ಆಕರ್ಷಕವಾಗಿ ಮೂಡಿಬಂದರೂ ವರ್ಣ ವಿನ್ಯಾಸದಲ್ಲಿ ಸೂಕ್ಷ್ಮತೆಯನ್ನು ತರಲಾಗಿಲ್ಲ.

ಕೃಷ್ಣ ತಾಯಿಯ ಮಡಿಲನ್ನೇರುತ್ತಿರುವಂತೆ ರೂಪಗೊಂಡಿದ್ದು, ಅವನಲ್ಲಿ ಮಗುವಿನ ಮುಗ್ಧತೆ ಎದ್ದು ತೋರುತ್ತದೆ. ಹಾಲು ಬಿಳುಪಿನ ಮೈಬಣ್ಣವನ್ನು ಹೊಂದಿರುವ ಕೃಷ್ಣನು ಆರೋಗ್ಯವಂತ ಮಗುವಿನ ಶರೀರ ಸಂಪತ್ತನ್ನು ಹೊಂದಿರುವನು. ಚಿತ್ರದ ಮುನ್ನೆಲೆಯಲ್ಲಿ ಜ್ಯಾಮಿತಿಕ ವಿನ್ಯಾಸದಿಂದ ಕೂಡಿದ ನೆಲಹಾಸು, ಚಿತ್ರ ವಿನ್ಯಾಸಗಳಿಂದ ಕೂಡಿದ ಅರ್ಧಚಂದ್ರಾಕೃತಿಯು ಮುಖಮಂಪಟವನ್ನು ಹೊಂದಿದೆ. ಚಿತ್ರದ ಸುತ್ತಲೂ ಎಲೆ ಹಾಗೂ ಹೂವುಗಳಿಂದ ಕೂಡಿದ ನಕ್ಷೆಯು ರಚನೆಗೊಂಡಿದೆ. ಯಶೋದೆಯ ಆಸರೆಯಾಗಿ ಶ್ವೇತವರ್ಣದ ದಿಂಬನ್ನು ಚಿತ್ರಿಸಲಾಗಿದೆ. ಅದನ್ನು ವಿಶಿಷ್ಟವಾಗಿ ಅಲಂಕರಿಸಲಾಗಿದೆ.

ಚಿತ್ರವು ನೀಲಿ, ಕೆಂಪು, ಬಿಳಿ, ಹಸಿರು ವರ್ಣಗಳಿಂದ ಸಂಯೋಜನೆಗೊಂಡಿದ್ದು, ರಚನಾ ವಿಧಾನದಲ್ಲಿ ಅಲಂಕರಣದ ವೈಭವವು ಎದ್ದು ತೋರುತ್ತದೆ. ಚಿತ್ರವು ರೇಖೆ, ವರ್ಣ ಹಾಗೂ ವಸ್ತುಗಳ ಸಂಯೋಜನೆಯ ದೃಷ್ಟಿಯಿಂದ ಉತ್ತಮವಾಗಿ ಮೂಡಿಬಂದಿದೆ. ಚಿತ್ರಸಂಖ್ಯೆ ೩೪ ಇದು ಬಾಗಲಕೋಟೆಯ ಎಸ್. ಎಸ್. ನಾರಾರವರ ಮನೆಯಲ್ಲಿ ಸಂಗ್ರಹವಿದೆ. ಈ ಚಿತ್ರವು ಚಿತ್ರಸಂಖ್ಯೆ ೩೧ರಂತೆ ಯಥಾವತ್ತಾಗಿ ಮೂಡಿಬಂದಿದೆಯಾದರೂ, ಸಂಯೋಜನೆಯಲ್ಲಿ ವೈವಿಧ್ಯತೆ ಕಂಡು ಬರುತ್ತಿದೆ. ಇಲ್ಲಿ ಆಭರಣಗಳ, ವಿನ್ಯಾಸಗಳಲ್ಲಿ ಸ್ಪಷ್ಟತೆ ಹಾಗೂ ವರ್ಣಮಯದಿಂದ ಕೂಡಿದೆ. ಮೈಬಣ್ಣದಲ್ಲಿ ಬೆಳಕು ನೆರಳುಗಳ ಮೂಲಕ ದುಂಡುತನವನ್ನು ತರಲಾಗಿದೆ. ಕೆಂಪು, ಹಳದಿ ಬಣ್ಣಗಳ ದೊಡ್ಡ ಪಟ್ಟಿಕೆಗಳಿಂದ ಕೂಡಿದ ಸೀರೆಯ ಚಿತ್ರವಿನ್ಯಾಸ ಅಲಂಕೃತಗೊಂಡಿದೆ.

ಚಿತ್ರದ ಮುನ್ನೆಲೆಯು ಕಂದುಗೆಂಪು ಹಾಗೂ ನಕ್ಷೆಗಳಿಂದ ಕೂಡಿದ ನೆಲಹಾಸನ್ನು ಹೊಂದಿದೆ. ಹಿನ್ನೆಲೆಯಲ್ಲಿ ಬಣ್ಣಬಣ್ಣದ ಪರದೆಗಳನ್ನು ಅಲಂಕರಿಸಲಾಗಿದ್ದು, ಚಿತ್ರವು ಎದ್ದು ತೋರುವಂತೆ ನೀಲಿಬಣ್ಣದಿಂದ ಏಕವರ್ಣವಾಗಿ ಲೇಪನಮಾಡಲಾಗಿದೆ. ಈ ಚಿತ್ರದಲ್ಲಿ ಅವಶ್ಯವಿದ್ದಲ್ಲಿ

ಮಾತ್ರ ಅಲಂಕಾರ ಕಂಡು ಬರುತ್ತದೆ. ಇನ್ನುಳಿದಂತೆ ತಾಯಿ ಮಗುವಿನ ಮಧುರ ಭಾವನೆಯನ್ನು ತಿಳಿಸಲು ಪ್ರಯತ್ನಿಸುತ್ತಿದೆ.

ಚಿತ್ರಸಂಖ್ಯೆ ೩೫ ಈ ಚಿತ್ರವು ಬಾಗಲಕೋಟೆಯ ಮಾನಿಕ್‌ಚಂದ್ ಬೇತಾಳದ ಮನೆಯಲ್ಲಿ ಸಂಗ್ರಹವಿದೆ. ಇದು ಚಿತ್ರ ೩೪ ರಂತೆ ರಚನೆಗೊಂಡಿದ್ದು, ಕೇಶವಿನ್ಯಾಸ ಹಾಗೂ ಆಭರಣಗಳ ಸಂಯೋಜನೆಯಲ್ಲಿ ವ್ಯತ್ಯಾಸ ಕಂಡು ಬರುತ್ತಿದೆ. ಕೃಷ್ಣನು ತಾಯಿ ಯಶೋದೆಯನ್ನು ಗಟ್ಟಿಯಾಗಿ ಅಪ್ಪಿಕೊಂಡಿರುವಂತೆ ಚಿತ್ರಿತಗೊಂಡಿರುವನು. ಇಲ್ಲಿ ಉತ್ತಿರಯವನ್ನು ಹೊಂದಿರುವುದಿಲ್ಲ. ತಾಯಿ ಮಗು ಹಾಲುಬಿಳುಪು ಮೈಬಣ್ಣವನ್ನು ಹೊಂದಿರುವರು ಹಾಗೂ ಇವರ ರೂಪ ಲಕ್ಷಣಗಳು ಶ್ರೀಮಂತ ಪರಿಸರವನ್ನು ಸೃಜಿಸುತ್ತವೆ. ಚಿತ್ರದ ಹಿನ್ನೆಲೆಯಲ್ಲಿ ಅಲಂಕಾರಿಕ ಬಟ್ಟೆಯನ್ನು ಅಲಂಕರಿಸಿದ್ದು ಕಪ್ಪು ವರ್ಣದಿಂದ ಹಿನ್ನೆಲೆಯನ್ನು ಲೇಪನಮಾಡಲಾಗಿದೆ. ರೇಖೆ, ವರ್ಣ ಹಾಗೂ ವಿಷಯ ನಿರೂಪಣೆಯೂ ಉತ್ತಮವಾಗಿ ಮೂಡಿಬಂದಿದೆ. ಇಲ್ಲಿ ತಾಯಿ ಮಗುವಿನ ಮಮತೆಯು ಭಾವನಾತ್ಮಕವಾಗಿ ಬಿಂಬಿತವಾಗಿದೆ.

ಚಿತ್ರಸಂಖ್ಯೆ ೩೫ ಈ ಚಿತ್ರವು ತುಮಕೂರಿನ ಟಿ. ಆರ್. ಮಂಜುನಾಥರ ಮನೆಯಲ್ಲಿ ಲಭ್ಯವಿದೆ. ಇದು ೫೦ x ೬೫ ಸೆಂ, ಮೀ ಅಳತೆಯನ್ನು ಹೊಂದಿದೆ. ಇಲ್ಲಿ ಯಶೋದೆ-ಕೃಷ್ಣರು ವಿಶಿಷ್ಟವಾಗಿ ರೂಪಗೊಂಡಿರುವರು. ಯಶೋದೆ-ಕೃಷ್ಣನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಕೊಳಲನ್ನು ಕೊಟ್ಟು ಮಾತೃವಾತ್ಸಲ್ಯ ತೋರುತ್ತಿರುವಂತೆ ಚಿತ್ರಣಗೊಂಡಿದ್ದಾರೆ. ಎತ್ತಿ ಕಟ್ಟಿದ ಕೇಶಕ್ಕೆ ಆಭರಣಗಳನ್ನು ಅಲಂಕರಿಸಿ, ಕೊರಳಲ್ಲಿ ಮುತ್ತಿನ ಸರ, ಕಂಠಾಭರಣಗಳನ್ನು ಧರಿಸಿರುವಳು. ಬಟ್ಟಲು ಕಣ್ಣುಗಳು, ತೀಡಿದ ಹುಬ್ಬುಗಳು, ತುಟಿಯಲ್ಲಿ ಮಂದಹಾಸ, ಮೂಗಲ್ಲಿ ದೊಡ್ಡ ನತ್ತು ನಳನಳಿಸುತ್ತಿದೆ. ಸೀರೆಯ ಅಂಚು ಹಾಗೂ ಒಡಲು ರೇಖಾವಿನ್ಯಾಸದಿಂದ ಅಲಂಕೃತಗೊಂಡಿದೆ. ಯಶೋದೆಯು ಕೆಂಪು, ಹಳದಿ ಹಾಗೂ ಬಿಳಿಬಣ್ಣಗಳ ಮಿಶ್ರಿತ ಮೈಬಣ್ಣಹೊಂದಿದ್ದು, ಕೃಷ್ಣನು ಗುಲಾಬಿ ಮಿಶ್ರಿತ ಬಿಳಿ ಬಣ್ಣದಿಂದ ಸಂಯೋಜನೆಗೊಂಡಿರುವನು. ಬಾಲಕೃಷ್ಣನು ಆಭರಣಗಳಿಂದ ಸಂಯೋಜಿತಗೊಂಡಿದ್ದು, ಕೆಂಪು ಉತ್ತರಿಯವನ್ನು ಧರಿಸಿರುವನು.

ಹಿನ್ನೆಲೆಯಲ್ಲಿ ಚಿತ್ರವಿನ್ಯಾಸಗಳಿಂದ ಕೂಡದ ಮಂಟಪವನ್ನು ರಚಿಸಿದ್ದು, ಕಪ್ಪು ಬಣ್ಣದಿಂದ ಚಿತ್ರವು ಎದ್ದು ತೋರುವಂತೆ ವರ್ಣವಿನ್ಯಾಸ ಮಾಡಲಾಗಿದೆ. ನೆಲಹಾಸನ್ನು ನೀಲಿ ವರ್ಣದ ಪಟ್ಟಿಗಳಿಂದ ಸಂಯೋಜಿತಗೊಳಿಸಲಾಗಿದೆ. ಚಿತ್ರವು ಸೂಕ್ಷ್ಮರೇಖೆ, ಮಿತವಾದ ವರ್ಣಸಂಯೋಜನೆ, ವೇಷಭೂಷನಗಳಲ್ಲಿ ತಕ್ಕ ಅಲಂಕಾರ ಮೂಡಿಬಂದಿದೆ.

ಚಿತ್ರಸಂಖ್ಯೆ ೩೭ ಈ ಚಿತ್ರವು ಗುಳೇದಗುಡ್ಡದ ಬನ್ಸಿಲಾಲ್ ಕಾಬ್ರಾರವರ ಮನೆಯಲ್ಲಿ ಲಭ್ಯ ವಿದೆ. ಚಿತ್ರಸಂಖ್ಯೆ ೩೮ ಕೂಡಾ ಇವರ ಮನೆಯಲ್ಲಿ ಸಂಗ್ರಹಗೊಂಡಿದ್ದು, ಎರಡೂ ಚಿತ್ರಗಳು ೩೫ x ೪೦ ಸೆಂ.ಮೀ. ಅಳತೆಯನ್ನು ಹೊಂದಿವೆ. ಇಲ್ಲಿ ಯಶೋದೆ ಮಡಿಲನ್ನೇರುತ್ತಿರುವ ಕೃಷ್ಣನನ್ನು ಮುದ್ದು ಮಾಡುತ್ತಿರುವಳು. ಮಗು ತಾಯಿಯ ಕೊರಳನ್ನು ಬಳಸಿದೆ. ಚಿನ್ನದ ರೇಖುವಿನಿಂದ ಲೇಪಿತಗೊಂಡ ಯಶೋದೆಯ ಸೀರೆಯು ಚಿಕ್ಕ ಚಿಕ್ಕ ಚುಕ್ಕಿಗಳಿಂದ ನಕ್ಷೆಗಳನ್ನು ಹೊಂದಿದೆ. ಸೀರೆಯ ನಿರೆಗೆಗಳು ವಿಶಿಷ್ಟವಾಗಿ ವೃತ್ತಾಕಾರವಾಗಿ ಹರಡಿಕೊಂಡಿವೆ. ಭಾರವಾದ ತುರುಬು ಅದಕ್ಕೆ

ಅಲಂಕೃತ ಆಭರಣ, ಮುಖದಲ್ಲಿ ಮಂದಹಾಸ ಎದ್ದು ತೋರುತ್ತದೆ. ಬಹುತೇಕ ಎಲ್ಲ ಚಿತ್ರಗಳಲ್ಲಿ ಯಶೋದೆಗೆ ರವಿಕೆಯನ್ನು ಚಿತ್ರಿಸಿಲ್ಲ. ಬಹುಶಃ ಇವು ಒಂದು ಜನಾಂಗದ ಮಹಿಳೆಯರ ವೇಷಭೂಷಣಗಳನ್ನು ನೆನೆಪಿಸುತ್ತವೆ.

ಕೃಷ್ಣನು ತಿಳಿಗುಲಾಬಿ ಹಾಗೂ ಬಿಳಿಮಿಶ್ರಿತ ವರ್ಣಗಳಿಂದ, ಯಶೋದೆಯು ಹಳದಿ ಮಿಶ್ರಿತ ಕೆಂಪುಬಣ್ಣದಿಂದ ಸಂಯೋಜಿತಗೊಂಡಿರುವರು. ಚಿತ್ರದ ಸುತ್ತಲೂ ಅಲಂಕಾರಿಕ ಚಿತ್ರವಿನ್ಯಾಸ ಹೊಂದಿದೆ. ಹಿನ್ನೆಲೆಯಲ್ಲಿ ಕೆಂಪುಬಣ್ಣದ ಪರದೆಗಳನ್ನು ಚಿತ್ರಿಸಲಾಗಿದೆ. ಚಿತ್ರವು ಎದ್ದು ತೋರುವಂತೆ ಹಿಂದೆ ನೀಲಿ ಬಣ್ಣದಿಂದ ಲೇಪನಮಾಡಲಾಗಿದೆ. ಚಿತ್ರದಲ್ಲಿ ಸೂಕ್ಷ್ಮರೇಖೆ, ಪ್ರಾಥಮಿಕ ಬಣ್ಣಗಳು ಹಾಗೂ ಆಕೃತಿಗಳ ಸಂಯೋಜನೆಯು ಭಾವನಾತ್ಮಕವಾಗಿ ಭಿತ್ತರಗೊಂಡಿವೆ.

ಚಿತ್ರಸಂಖ್ಯೆ ೩೮ ಈ ಚಿತ್ರದ ಅಂಚು ಚಿತ್ರ ೩೭ ರಲ್ಲಿರುವಂತೆ ಯಥಾವತ್ತಾಗಿ ಚಿತ್ರಣಗೊಂಡಿದೆ. ಯಶೋದೆ ಹಾಗೂ ಕೃಷ್ಣರ ಭಾವಭಂಗಿಗಳು, ವೇಷಭೂಷಣಗಳು, ವರ್ಣ ಸಂಯೋಜನೆಗಳು ಚಿತ್ರಸಂಖ್ಯೆ ೩೩ ರಂತೆ ಅಭಿವ್ಯಕ್ತಗೊಂಡಿವೆ. ಇಲ್ಲಿ ವಿಶೇಷವೆಂದರೆ ಅಲಂಕಾರಿಕ ಪೀಠವಿದ್ದು, ಹಿಂಬದಿಯಲ್ಲಿ ಅರಮನೆಯ ಸೇವಕಿಯು ಕೈಯಲ್ಲಿ ಮುತ್ತಿನ ಸರವನ್ನು ಹಿಡಿದು ನಿಂತಿರುವಳು. ಮೈಬಣ್ಣಗಳ ವಿನ್ಯಾಸದಲ್ಲಿ ಎರಡು ಬಣ್ಣಗಳ ಮಿಶ್ರಣ ಮಾಡುವಿಕೆ ಅತ್ಯಂತ ನೈಜತೆಯಿಂದ ಕೂಡಿದೆ. ಈ ತಂತ್ರದಲ್ಲಿ ಕಲಾವಿದನ ತಾಳ್ಮೆ ಹಾಗೂ ಸೌಂದರ್ಯ ಪ್ರಜ್ಞೆಯನ್ನು ಪರೀಕ್ಷಿಸುತ್ತದೆ. ಚಿತ್ರದಲ್ಲಿ ಕೆಂಪು, ನೀಲಿ, ಬಿಳಿ, ಹಸಿರು ಕೆಂಪು ಹಾಗೂ ಚಿನ್ನದ ರೇಖು ಸಮರ್ಥವಾಗಿ ಬಳಕೆಯಾಗಿದೆ. ಗಾಜಿನ ಚಿತ್ರಗಳಲ್ಲಿ ರೇಖಾವಿನ್ಯಾಸವು ವಿಶೇಷ ಹಾಗೂ ಆಖರ್ಷಕ ಪಾತ್ರವಹಿಸುತ್ತಿದೆ.

ಚಿತ್ರಸಂಖ್ಯೆ ೩೯ ಈ ಚಿತ್ರವು ಮೈಸೂರು ವಿಶ್ವವಿದ್ಯಾಲಯದ ಜನಪದ ವಸ್ತು ಸಂಗ್ರಹಾಲಯದಲ್ಲಿ ಲಭ್ಯವಿದೆ. ಇದು ಎಲ್ಲ ಚಿತ್ರಗಳಿಗಿಂತ ಸ್ವಲ್ಪ ಭಿನ್ನವಾಗಿದೆ. ಇಲ್ಲಿ ಯಶೋದೆಯು ಬಾಲಕ ಕೃಷ್ಣನಿಗೆ ಸ್ತನಪಾನ ಮಾಡುತ್ತಿರುವಳು. ಯಶೋದೆಯು ಪಾರ್ಶ್ವಮುಖಭಾವವನ್ನು ಹೊಂದಿದ್ದು, ಎತ್ತಿ ಕಟ್ಟಿದೆ ತುರುಬು, ಕಿವಿಯಲ್ಲಿ ಆಭರಣಗಳು, ಮೂಗಲ್ಲಿ ನತ್ತು, ಕೊರಳಲ್ಲಿ ಆಭರಣಗಳು, ರೇಖಾ ಸಂಯೋನೆಯಿಂದ ಕೂಡಿದ ಸೀರೆಯು ಆಕರ್ಷಕ ನಿರಿಗೆಗಳಿಂದ ಅನಾವರಣಗೊಂಡಿದೆ. ಶ್ವೇತವರ್ಣದ ಪೀಠ, ಹಿಂಬದಿಯಲ್ಲಿ ದೊಡ್ಡ ದಿಂಬು ಅಲಂಕೃತಗೊಂಡಿದೆ. ಕೃಷ್ಣನು ನಿರಾಳವಾಗಿ ಸ್ತನಪಾನ ಮಾಡುತ್ತಿದ್ದು, ಈ ಸಂದರ್ಭದಲ್ಲಿ ತಾಯಿಯು ಸಂತುಷ್ಠಭಾವವನ್ನು ವ್ಯಕ್ತಪಡಿಸುತ್ತಿರುವಂತೆ ನಿರೂಪಣೆಯಿದೆ.

ಚಿತ್ರದಲ್ಲಿ ಯಶೋದೆಯು ಪುತ್ರವಾತ್ಸಲ್ಯದಲ್ಲಿ ಪ್ರಪಂಚವನ್ನೇ ಮರೆತಂತೆ ಬಿಂಬಿತವಾಗಿದ್ದು, ಹಿನ್ನೆಲೆಯಲ್ಲಿ ಆರ್ಕಷಕ ಮಂಟಪ ಹಾಗೂ ಕ್ಯಾಂಡಲ್ ದೀಪಗಳು ರಚನೆಗೊಂಡಿವೆ. ಇದರ ಹಿನ್ನೆಲೆಯು ರಾಜ ವೈಭವದ ಚಿತ್ರಣದಂತೆ ಗೋಚರಿಸುತ್ತದೆ. ಇಲ್ಲಿ ಕೃಷ್ಣ ಹಾಗೂ ಯಶೋದೆಯರ ದೈಹಿಕ ಲಕ್ಷಣಗಳು ನೀಳವಾಗಿದ್ದು, ನೆರಳು ಬೆಳಕುಗಳಿಂದ ದೇಹದ ಚಲನೆಯು ಆಕರ್ಷಕವಾಗಿ ವ್ಯಕ್ತಗೊಂಡಿದೆ. ಹಸಿರು, ನೀಲಿ, ಹಳದಿ, ಕೆಂಪು, ಬಿಳಿ, ಕರಿ ಬಣ್ಣಗಳ ಮಿಶ್ರಣವು ವರ್ಣಮಯವಾಗಿ ಮೂಡಿ ಬಂದಿವೆ.

ಚಿತ್ರ ೩೯ರ ದೃಶ್ಯವನ್ನು ಗಮನಿಸಿದರೆ ಎಲ್ಲ ಚಿತ್ರಗಳಲ್ಲಿ ಯಶೋದೆಯು ರವಿಕೆಯನ್ನು ಹಾಕಿರುವುದಿಲ್ಲ. ಬಹುಶಃ ಮಗು ಸ್ತನಪಾನ ಮಾಡಲು ಅನುಕೂಲವಾಗಲೆಂದು ರವಿಕೆಯನ್ನು ಧರಿಸಿರಲಿಕ್ಕಿಲ್ಲ ಎಂಬ ಕಲ್ಪನೆ ಮೂಡಿಬರುತ್ತದೆ. ಆ ಕಾಲದ ಸಮಕಾಲೀನ ವ್ಯವಸ್ಥೆಯನ್ನು ವಿವೇಚಿಸಬಹುದು. ಈಗಲೂ ಕೆಲವು ಪಂಗಡಗಳಲ್ಲಿ ತಾಯಂದಿರು ಹೆರಿಗೆಯಾದ ಕೆಲವು ತಿಂಗಳ ತನಕ ರವಿಕೆಯನ್ನು ಧರಿಸುವುದಿಲ್ಲ. ಈ ದೃಶ್ಯಗಳು ನಮ್ಮ ಸಾಮಾನ್ಯ ಬದುಕಿನ ಸಂಗತಿಯ ತುಲನೆಗೆ ದಾರಿ ಮಾಡಿಕೊಡುತ್ತವೆ.

**ಚಿತ್ರಸಂಖ್ಯೆ ೪೦, ೪೧ ನಂದ ದಂಪತಿ ಹಾಗೂ ಕೃಷ್ಣ**

ಕೃಷ್ಣಾವತಾರದಲ್ಲಿ ಕೃಷ್ಣನ ಬಾಲ್ಯದಲ್ಲಿ ಅವನ ಪಾಲನೆ ಪೋಷಣೆಯಲ್ಲಿ ನಂದ ದಂಪತಿಗಳ ಪಾತ್ರವು ಮಹತ್ತರವಾದುದು. ಬಾಲ್ಯದಲ್ಲಿನ ಕೃಷ್ಣನ ಆಟ, ಕಿಟಲೆಗಳನ್ನು ಹಾಗೂ ಅವನ ಬೆಳವಣಿಗೆಯನ್ನು ಅನುಭವಿಸುವುದೇ ಈ ಮಾತಾಪಿತರ ಆಶಯ. ಇಲ್ಲಿ ಅವನ ಬೇಕು ಬೇಡಿಕೆಗಳನ್ನು ಚಾಚು ತಪ್ಪದೇ ಒದಗಿಸುವುದರಲ್ಲಿಯೇ ಆನಂದ ಪಡುತ್ತಿದ್ದರು. ಇವನಿಗೆ ಚೂರು ನೋವಾದರೂ ಅದನ್ನು ಸಹಿಸಿಕೊಳ್ಳುತ್ತಿರಲಿಲ್ಲ. ಅಂಥ ಮಾತೃಪಿತೃತ್ವವನ್ನು ಧಾರೆಎರೆದಿದ್ದರು. ಅಂಥ ಪ್ರಸಂಗವನ್ನು ಈ ಗಾಜಿನ ಚಿತ್ರಗಳು ತಿಳಿಸುತ್ತವೆ.

ಇಲ್ಲಿ ಎರಡು ಚಿತ್ರಗಳು ಒಂದೇ ಅಳತೆಯ ಒಂದೇ ದೃಶ್ಯವನ್ನು ವ್ಯಕ್ತಪಡಿಸುತ್ತವೆ. ವರ್ಣವಿಧಾನದಲ್ಲಿ ಸ್ವಲ್ಪ ವೈಪರೀತ್ಯತೆಯನ್ನು ಕಾಣಬಹುದು. ಚಿತ್ರಸಂಖ್ಯೆ ೪೦ಲ್ಲಿ ನಂದಮಹಾರಾಜನು ಕುರ್ಚಿಯಲ್ಲಿ ಕುಳಿತಿರುವನು, ಶ್ವೇತವರ್ಣದ ಧೋತಿ, ಕೆಂಪುಬಣ್ಣದ ಉತ್ತರಿಯವನ್ನು ಧರಿಸಿರುವನು. ವಿಶೇಷವಾಗಿ ಕಿರೀಟ, ಕರ್ಣಕುಂಡಲ, ಕತ್ತಿನಲ್ಲಿ ಸರ, ಧರಿಸಿದ್ದು ಹುರುನೀಸೆ, ಗಡ್ಡಧಾರಿಯಾಗಿ ಭೂಷಿತನಾಗಿದ್ದಾನೆ. ವೇಷಭೂಷಣಗಳಲ್ಲಿ ಮಿತವಾಗಿ ಅಲಂಕರಣ ಒಡಮೂಡಿದ್ದು ವರ್ಣವಿನ್ಯಾಸದಲ್ಲಿ ದುಂಡುತನ ಎದ್ದು ತೋರುತ್ತಿದೆ.

ಯಶೋದೆಯು ಎತ್ತರದ ನಿಲುವು ಸದೃಢ ಮೈಕಟ್ಟಿನಿಂದ ರೂಪಿತಗೊಂಡಿದ್ದು, ಕೆಂಪುಸೀರೆ ಹಸಿರು ರವಿಕೆಯನ್ನು ಧರಿಸಿರುವಳು, ಸಿರೆಯು ಪಟ್ಟಿಗಳಿಂದ ವಿನ್ಯಾಸಗೊಂಡಿದೆ, ರವಿಕೆಯಲ್ಲಿ ಚುಕ್ಕೆಗಳಂತಹ ಚಿತ್ರ ವಿನ್ಯಾಸವನ್ನು ಸಂಯೋಜಿಸಲಾಗಿದೆ. ಆಭರಣಗಳನ್ನು ಅವಶ್ಯಕತೆಯಿದ್ದಷ್ಟು ಮಾತ್ರ ರಚಿಸಲಾಗಿದೆ. ಕೃಷ್ಣನು ಕೆಂಪು ಉತ್ತರಿಯ ಹಾಗೂ ಆಭರಣಗಳಿಂದ ರೂಪಿತಗೊಂಡಿದ್ದು ಕಪಿರೂಪದ ಗೊಂಬೆಯನ್ನು ಹಿಡಿಯುತ್ತಿರುವಂತೆ ಬಿಂಬಿತವಾಗಿದ್ದಾನೆ. ಕೃಷ್ಣನ ಮುಖದಲ್ಲಿ ತುಂಟತನವು ವ್ಯಕ್ತಗೊಂಡಿದೆ.

ಈ ಚಿತ್ರದ ಹಿನ್ನೆಲೆಯಲ್ಲಿ ಮರದ ಡಯಾಸ್, ಅದರ ಮೇಲೆ ಗೊಂಬೆಯು ಚಿತ್ರಿತಗೊಂಡಿದ್ದು, ಕಪ್ಪು ಬಣ್ಣದಿಂದ ಆವೃತವಾಗಿದೆ. ಇಲ್ಲಿ ನಂದ ಹಾಗೂ ಕೃಷ್ಣರು ತಿಳಿಬಣ್ಣಗಳ ಮಿಶ್ರಣದ ಮೈಬಣ್ಣ ಹೊಂದಿದ್ದರೆ, ಯಶೋದೆಯು ಹಳದಿ, ಕೆಂಪು ಹಾಗೂ ಬಿಳಿಬಣ್ಣಗಳ ಮಿಶ್ರಣದ ಮೈಬಣ್ಣ ಹೊಂದಿರುವಳು.

ಚಿತ್ರ ಸಂಖ್ಯೆ ೪೧ ಇದು ಹುಮನಾಬಾದದ ಬಾಲಾಜಿ ಮಂದಿರದಲ್ಲಿ ಕಂಡುಬರುತ್ತದೆ. ಇದು ಚಿತ್ರಸಂಖ್ಯೆ ೪೦ರಂತೆ ಯಥಾವತ್ತಾಗಿ ಮೂಡಿಬಂದಿದೆ. ಯಶೋದೆಯ ಸೀರೆ ಹಾಗೂ

ರವಿಕೆ ವಿನ್ಯಾಸದಲ್ಲಿ ಚಿಕ್ಕ ಚಿಕ್ಕ ಚುಕ್ಕಿಗಳಿಂದ ಚಿತ್ರವಿನ್ಯಾಸವನ್ನು ಹೊಂದಿದ್ದು, ಅದೇ ಕ್ರಮ ನಂದ ಹಾಗು ಕೃಷ್ಣರ ಉಡುಪುಗಳಲ್ಲಿ ಕಂಡುಬರುತ್ತಿದೆ. ವರ್ಣವಿಧಾನವು ಹಾಗೂ ಭಾವಲಕ್ಷಣಗಳಲ್ಲಿ ಸ್ಪಷ್ಟ ವಿವರಗಳು ರೇಖಾ ವಿನ್ಯಾಸದಿಂದ ಬೇರ್ಪಟ್ಟಿವೆ. ಚಿತ್ರವು ಎದ್ದು ತೋರುವಂತೆ ಹಿನ್ನಲೆಗೆ ನೀಲಿ ಮಿಶ್ರಿತ ಕಪ್ಪು ಬಣ್ಣದಿಂದ ಏಕರೂಪವಾಗಿ ಲೇಪನ ಮಾಡಲಾಗಿದೆ.

ಚಿತ್ರ ೪೦ ರಲ್ಲಿ ವರ್ಣಗಳು ನೈಜತೆಯಿಂದ ಕೂಡಿದ್ದರೆ ಚಿತ್ರ ೪೧ ರಲ್ಲಿ ರೇಖೆಗಳು ವೈಖರಿಯಿಂದ ಅಭಿವ್ಯಕ್ತಗೊಂಡಿವೆ. ಎರಡೂ ಚಿತ್ರಗಳ ಆಶಯಗಳು ಮಾತಾಪಿತರ ಆದರ್ಶ ವ್ಯಕ್ತಿತ್ವವನ್ನು ಪ್ರತಿಬಿಂಬಿಸುತ್ತವೆ.

**ಚಿತ್ರಸಂಖ್ಯೆ ೪೨, ೪೩, ೪೪, ೪೫, ೪೬, ೪೭, ೪೮, ೪೯, ೫೦, ೫೧, ೫೨, ೫೩, ೫೪ ಬೆಣ್ಣೆ ಕೃಷ್ಣ**

ನಂದನ ಗೋಕುಲವು ಗೊಲ್ಲರ ಕೇರಿ ಇಲ್ಲಿನ ಜನರು ಹಸುಗಳನ್ನು ಸಾಕಿಕೊಂಡು ಅವುಗಳಿಂದ ಬೆಣ್ಣೆ, ಮೊಸರು, ಹಾಲನ್ನು ಮಾರಿಕೊಂಡು ಬದುಕನ್ನು ಸವೆಯುತ್ತಿರುವರು. ಇಂಥ ಸಮೃದ್ಧಿಯಿಂದ ಕೂಡಿದ ನಂದನನ ಮನೆಯಲ್ಲಿ ಸಾಕಷ್ಟು ಹಸುಗಳಿದ್ದವು. ಹಾಲು, ಮೊಸರು, ಬೆಣ್ಣೆಗೇನು ಕೊರತೆಯಿದ್ದಿಲ್ಲ. ಇಂಥ ಮನೆಯಲ್ಲಿ ಕೃಷ್ಣನ ಬಾಲ್ಯ ಕಳೆಯುತ್ತದೆ. ತಾಯಿ ಯಶೋದೆಯು ಮೊಸರನ್ನು ಕಡೆಯುವಾಗ ತುಂಟ ಕೃಷ್ಣನು ಮೊಸರು ಗಡಿಗೆಯಲ್ಲಿ ಕೈಹಾಕಿ ತಿನ್ನುವುದು ಅದನ್ನು ಜಗ್ಗುವುದು, ಮೈಮೇಲೆ ಬಳಿದುಕೊಳ್ಳುವುದು, ತಾಯಿ ಸಂಗ್ರಹಿಸಿದ ಬೆಣ್ಣೆಯ ಗಡಿಗೆಯನ್ನು ಎತ್ತಿಕೊಂಡು ತಂದು ಮರೆಯಲ್ಲಿ ತಿನ್ನುವುದು, ಸಾಕಗಿ ಒಡೆಯುವುದು ಇವನ ಬಾಲ್ಯದ ಕಾಯಕವಾಗಿತ್ತು. ಆದರೂ ನಂದ ಯಶೋದೆಯರು ಇವನ ತುಂಟತನವನ್ನು ಕಂಡು ಆನಂದಿಸುತ್ತಿದ್ದರು. ಇಲ್ಲಿ ಸುಮಾರು ಚಿತ್ರಗಳು ಈ ಪ್ರಸಂಗವನ್ನು ಕಲ್ಪಿಸುತ್ತವೆ. ಇಲ್ಲಿ ರಚನೆಗೊಂಡಿರುವ ೧೨ಕ್ಕೂ ಹೆಚ್ಚು ಗಾಜಿನ ಚಿತ್ರಗಳು ಒಂದೇ ಆಶಯವನ್ನು ವ್ಯಕ್ತಪಡಿಸುತ್ತವೆ. ಚಿತ್ರಗಳ ಅಳತೆ ಹಾಗೂ ರಚನಾ ವಿಧಾನದಲ್ಲಿ ವೈವಿಧ್ಯತೆ ಕಂಡುಬರುತ್ತವೆ.

ಚಿತ್ರ ಸಂಖ್ಯೆ೪೨ ಇಲ್ಲಿ ಕೃಷ್ಣನು ಚಿನ್ನದ ಮಂಚದ ಮೇಲೆ ಕುಳಿತು ಬೆಣ್ಣೆಯ ಹರಿವಾಣವನ್ನು ತೊಡೆಯ ಮೇಲೆ ಇಟ್ಟುಕೊಂಡು ಬೆಣ್ಣೆಯನ್ನು ಮೆಲ್ಲುತ್ತಿರುವನು. ಇವನನ್ನು ಚಿನ್ನಾಭರಣಗಳಿಂದ ಅಲಂಕರಿಸಿದ್ದು ಹಿಂಬದಿಯಲ್ಲಿ ತಾಯಿ ಹಾಗು ಗೋಪಿಯರು ಮುತ್ತಿನ ಸರವನ್ನು ಹಿಡಿದು ನಿಂತಿರುವಂತೆ ಚಿತ್ರಿತಗೊಂಡಿದ್ದಾರೆ. ಚಿತ್ರದ ಕೆಳಗೆ ಫಲಪುಷ್ಪಾದಿಗಳಿಂದ ತುಂಬಿದ ತಟ್ಟೆ ಹಾಗೂ ಜಿಂಕೆಯನ್ನು ಸಮಯೋಜಿಸಿದ್ದಾರೆ. ಚಿತ್ರದ ಸುತ್ತಲೂ ಚಿತ್ರವಿನ್ಯಾಸವನ್ನು ಹಾಗೂ ಅಲಂಕಾರಿಕ ಪರದೆಯನ್ನು ಚಿತ್ರಿಸಿರುವರು. ಚಿತ್ರದಲ್ಲಿ ಕೃಷ್ಣನು ದಷ್ಟಪುಷ್ಟ ಅಂಗಾಂಗಳಿಂದ ಆಕರ್ಷಕವಾಗಿ ಕಂಡುಬರುತ್ತಾನೆ. ಕೆಂಪು, ನೀಲಿ, ಬಿಳಿ, ಹಸಿರು, ಹಾಗೂ ಕಪ್ಪು ವರ್ಣಗಳ ಸಂಯೋಜನೆಯಿದ್ದು ಅಲಂಕರಣ ಎದ್ದು ತೋರುತ್ತದೆ. ಉತ್ತಮ ಭಾವಲಕ್ಷಣಗಳು ನಿರೂಪಣೆಗೊಂಡಿವೆ.

ಚಿತ್ರ ೪೩ರಲ್ಲಿ ಕೃಷ್ಣನು ಹಿಂದಿನ ಚಿತ್ರದಂತೆ ಯಥಾವತ್ತಾಗಿ ಮೂಡಿಬಂದಿದ್ದಾನೆ. ಇಲ್ಲಿ ವಿಶಿಷ್ಟ ರೀತಿಯಲ್ಲಿ ಅಲಂಕೃತಗೊಂಡ ಚಿನ್ನದ ತೂಗುಮಂಚವು ರಚನೆಗೊಂಡಿದೆ. ಮಂಚದ ಮೇಲೆ ಮೆತ್ತನೆಯ ದಿಂಬು ಅದಕ್ಕೆ ನಕ್ಷಾವಿನ್ಯಾಸವನ್ನು ಸಂಯೋಜಿಸಲಾಗಿದೆ. ತುಗುಮಂಚವನ್ನು

ನಂದಯಶೋದೆಯರು ತೂಗುತ್ತಿರುವಂತೆ ಬಿಂಬಿತವಾಗಿದ್ದಾರೆ. ಇವರು ವಸ್ತ್ರಾಭರಣಗಳಿಂದ ಭೂಷಿತರಾಗಿದ್ದು, ವೇಷಭೂಷಣಗಳಲ್ಲಿ ಅಲಂಕರಣವು ವೈಭವಿಕರಣಗೊಂಡಿದೆ. ಚಿತ್ರದ ಹಿನ್ನೆಲೆಯಲ್ಲಿ ಅಲಂಕಾರಿಕ ಮಂಟಪ ಹಾಗೂ ಪರದೆಯ ಸಂಕೀರ್ಣವನ್ನು ಕಾಣಬಹುದು. ಚಿತ್ರವು ರೇಖೆ, ವರ್ಣ ಹಾಗೂ ವಸ್ತುಗಳ ಸಂಯೋಜನೆಯಿಂದ ಭಾವಪೂರ್ಣವಾಗಿ ಮೂಡಿಬಂದಿದೆ.

ಚಿತ್ರಸಂಖ್ಯೆ–೪೪ ಇದು ೬೦ x ೬೬ ಸೆಂ.ಮೀ. ಅಳತೆಯಲ್ಲಿ ರಚನೆಗೊಂಡಿದೆ. ಈ ಚಿತ್ರವು ಹಿಂದಿನ ಚಿತ್ರಗಳಂತೆ ರಚನೆಗೊಂಡಿದ್ದರೂ ರೇಖಾ ವಿನ್ಯಾಸ ಹಾಗೂ ವರ್ಣವೈವಿಧ್ಯತೆಯಲ್ಲಿ ಉತ್ಕೃಷ್ಟ ವಿವರಣೆಯು ಗೌಣವಾಗಿದೆ. ದೈಹಿಕ ಲಕ್ಷಣಗಳಲ್ಲಿ ಆಕರ್ಷಕ ವ್ಯಕ್ತಿತ್ವ, ದುಂಡುತನವು ವ್ಯಕ್ತಗೊಂಡಿಲ್ಲ, ಚಿತ್ರದ ಹಿನ್ನೆಲೆಯಲ್ಲಿ ನಂದ ದಂಪತಿ ಹಾಗೂ ಗೋಪಿಕೆಯರು ಚಿತ್ರಣಗೊಂಡಿದ್ದು, ವಸ್ತ್ರಾಭರಣಗಳಲ್ಲಿ ನೈಜತೆ ಸಾಧಾರಣವಾಗಿ ಮೂಡಿಬಂದಿದೆ. ಇನ್ನುಳಿದಂತೆ ಹಿನ್ನೆಲೆಯು ಅರಮನೆಯ ಆಂತರಿಕ ವಿನ್ಯಾಸವನ್ನು ಕಲ್ಪಿಸುವಂತೆ ಕಂಬ ಹಾಗೂ ವರ್ಣಗಳ ಸಂಯೋಜನೆಯು ಕಲಾವಿದನ ಅನುಭವವನ್ನು ಬೇಡುತ್ತದೆ. ಈ ಚಿತ್ರದ ವರ್ಣಾಲಂಕಾರ ಉಜ್ವಲವಾಗಿ ಮೂಡಿಬಂದಿದೆ.

ಚಿತ್ರಸಂಕ್ಯೆ ೪೫ ಇದು ಚಿತ್ರ ೪೪ ರಂತೆ ಯಥಾರೂಪ ಪಡೆದಿದ್ದು, ಮಂಚದ ಚಿತ್ರವು ಅಲಂಕಾರಿಕ ನಕ್ಷಾವಿನ್ಯಾಸದಿಂದ ಭಿನ್ನವಾಗಿದೆ. ಕೃಷ್ಣನ ಪೋಷಕರ ವಸ್ತ್ರಾಭರಣಗಳಲ್ಲಿ ಚಿತ್ರವಿನ್ಯಾಸಗಳು ವೈವಿಧ್ಯಮಯವಾಗಿ ಮೂಡಿಬಂದಿವೆ. ಹಿನ್ನೆಲೆಯ ವಾಸ್ತುವಿನ್ಯಾಸದ ಹಾಗೂ ವಸ್ತುಗಳ ವಿನ್ಯಾಸಗಳು ಉತ್ತಮವಾಗಿ ಭಿತ್ತರಗೊಂಡಿವೆ. ಇಲ್ಲಿ ಕೃಷ್ಣನ ಕೊರಳಲ್ಲಿರುವ ಪುಷ್ಪಮಾಲೆಯು ಸ್ಪಷ್ಟರೂಪತೆಯಿಂದ ಬೇರ್ಪಟ್ಟಿದೆ. ಚಿತ್ರದಲ್ಲಿ ನಂದ ಹಾಗೂ ಯಶೋದೆಯರ ಆನಂದವು ಬಾಲಕ ಕೃಷ್ಣನಿಂದ ಪಸರಿಸಿದೆ. ಇಲ್ಲಿ ಕೃಷ್ಣನ ಆಭರಣಗಳಲ್ಲಿ ರೇಖಾ ಲಾವಣ್ಯತೆಯೂ ಉತ್ತಮವಾಗಿದ್ದು ಕೆಸರಿ ಹಾಗೂ ಬಿಳಿವರ್ಣಗಳ ಸಮ್ಮಿಶ್ರಣದಿಂದ ಈ ಸಮೂಹವನ್ನು ಚಿತ್ರಿಸಲಾಗಿದೆ.

ಚಿತ್ರಸಂಖ್ಯೆ ೪೬ ಈ ಚಿತ್ರದಲ್ಲಿ ಮಂಚದ ಕಾಲುಗಳು ಮಯೂರ ಪಕ್ಷಿಯ ರೂಪವನ್ನು ಹೊಂದಿದ್ದು, ಇವು ಮಂಚವನ್ನು ಹೊತ್ತಿರುವಂತೆ ಗೋಚರವಾಗುತ್ತದೆ. ಇಲ್ಲಿ ಕೃಷ್ಣನನ್ನು ವಿಶಿಷ್ಟವಾಗಿ ಪುಷ್ಪಾಭರಣಗಳಿಂದ ಅಲಂಕರಿಸಲಾಗಿದೆ. ಚಿನ್ನದ ಹರಿವಾಣವು ಚಿತ್ರವಿನ್ಯಾಸಗಳಿಂದ ರೂಪಗೊಂಡಿದ್ದು, ಕೃಷ್ಣನ ಪೋಷಕರಾದ ಯಶೋದೆ ಹಾಗೂ ನಂದಗೋಪರು ತಾವರೆ, ಗಿಳಿಯಿಂದ ಪುತ್ರ ಪ್ರೇಮವನ್ನು ವ್ಯಕ್ತಪಡಿಸುತ್ತಿರುವರು. ಅಲಂಕಾರಿಕ ವಸ್ತ್ರಾಭರಣಗಳಿಂದ ಶೋಭಿತರಾಗಿದ್ದಾರೆ. ಹಿನ್ನೆಲೆಯ ಅರಮನೆಯ ದೃಶ್ಯವು ಚಿತ್ರವಿನ್ಯಾಸಗಳಿಂದ ಕೂಡಿದ ಕಂಬಗಳು, ತೂಗುದೀಪಗಳು, ಪರದೆಗಳು ಹಾಗೂ ಅಲಂಕಾರಿಕ ವಸ್ತುಗಳು ಶ್ರೀಮಂತ ವೈಭವವನ್ನು ಪ್ರಕಟಪಡಿಸುತ್ತವೆ. ರೇಖಾ ಪ್ರಧಾನ್ಯತೆಯಿಂದ ಕೂಡಿದ ಈ ಚಿತ್ರವು ಆಕರ್ಷಕ ವರ್ಣವಿಧಾನವನ್ನು ಹೊಂದಿದೆ.

ಚಿತ್ರ ೪೭ ಇಲ್ಲಿ ಕೃಷ್ಣನು ಚಿತ್ರ ೪೩ರಂತೆ ರೂಪಗೊಂಡಿದ್ದು, ಚಿನ್ನದ ಮಂಚವು ಜ್ಯಾಮಿತಕ ನಕ್ಷೆಗಳಿಂದ ಅಲಂಕರಣಗೊಂಡಿದೆ. ದಿಂಬು ಹಾಗೂ ಹರಿವಾಣಗಳಲ್ಲಿನ ಸೂಕ್ಷ್ಮರೇಖೆಗಳ ಸಮ್ಮೇಳನವೂ ಉತ್ಕೃಷ್ಟವಾಗಿದೆ. ಕೃಷ್ಣನ ಹೊಂಬಣ್ಣ, ಬಟ್ಟಲು ಕಂಗಳು, ತಿದ್ದಿ ತೀಡಿದ ಹುಬ್ಬು, ಅಲಂಕೃತ ಜುಟ್ಟು ತುಟಿಯಲ್ಲಿ ಮಂದಹಾಸವು ಲವಲವಿಕೆಯಿಂದ ವ್ಯಕ್ತಗೊಂಡಿದೆ. ಚಿತ್ರದ ಹಿಂದೆ ಚಿತ್ರವಿನ್ಯಾಸಗಳಿಂದ ಕೂಡಿದ ಕಂಬಗಳು ಹಾಗೂ ಬಣ್ಣಬಣ್ಣದ ಪರದೆಗಳ ವಿನ್ಯಾಸವು ಉತ್ತಮವಾಗಿ

ಸಂಯೋಜನೆಗೊಂಡಿವೆ. ಮಗುವಿನ ಆರೋಗ್ಯಕರ ಬೆಳವಣಿಗೆ, ಮಾನಸಿಕ ಸದೃಢತೆ ಹಾಗೂ ಚೈತನ್ಯತೆಯನ್ನು ಹೇಳಲು ಕಲಾವಿದನು ಇಲ್ಲಿ ಪ್ರಯತ್ನಿಸಿದ್ದಾನೆ.

ಚಿತ್ರಸಂಖ್ಯೆ ೪೮ ಈ ಚಿತ್ರದಲ್ಲಿ ಆಭರಣ ವಿನ್ಯಾಸ, ಮಂಚದ ವಿನ್ಯಾಸ, ಚಿತ್ರದ ಅಂಚುಗಳ ರೇಖಾವಿನ್ಯಾಸದಲ್ಲಿ ಅಸ್ಪಷ್ಟತೆಯು ಕಂಡುಬರುತ್ತದೆ. ಇನ್ನುಳಿದಂತೆ ಬಾಲಕ ಕೃಷ್ಣನ ರೂಪಲಕ್ಷಣಗಳು ಇನ್ನುಳಿದ ಚಿತ್ರಗಳಂತೆ ರಚನೆಗೊಂಡಿದ್ದು, ವರ್ಣ ವೈವಿಧ್ಯತೆಯಲ್ಲಿ ಕಲಾವಿದನು ಮಿತವಾದ ನಿಲುವನ್ನು ತಳೆದಿರುವನು. ಹಿನ್ನೆಲೆಯಲ್ಲಿ ದಿಂಬಿನ ಮೇಲೆ ಗಿಳಿಯ ಚಿತ್ರವಿದ್ದು, ಕೃಷ್ಣನು ಆಟವನ್ನು ಗಮನಿಸುತ್ತಿರುವಂತೆ ನಿದರ್ಶನಗೊಂಡಿದೆ.

ಚಿತ್ರಸಂಖ್ಯೆ ೪೯ ಈ ಚಿತ್ರವು ಚಿತ್ರ ೪೩ ರಂತೆ ಪ್ರಕಟಗೊಂಡಿದ್ದು, ಇಲ್ಲಿ ನಂದ ಯಶೋದೆಯ ವೇಷಭೂಷಣಗಳಲ್ಲಿ, ಕೃಷ್ಣನ ಆಭರಣ ವಿನ್ಯಾಸಗಳಲ್ಲಿ, ಮಂಚ ಹಾಗೂ ಹರಿವಾಣದ ಸಂಯೋಜನೆಯಲ್ಲಿ ರೇಖಾ ವಿನ್ಯಾಸದ ಅಲಂಕರಣ ಆಶಯವು ವೈಭವೀಕರಣಗೊಂಡಿದೆ. ಆರೋಗ್ಯ ಪೂರ್ಣ ದೈಹಿಕ ಲಕ್ಷಣಗಳನ್ನು ಹೊಂದಿರುವ ಕೃಷ್ಣನು ಬಟ್ಟಲು ಕಂಗಳಿಂದ ಕಂಗೊಳಿಸುತ್ತಿರುವನು ಚಿತ್ರದ ಹಿನ್ನೆಲೆಯು ಇತರೆ ಚಿತ್ರಗಳಂತೆ ಸಂಯೋಜನೆಗೊಂಡಿದೆ.

ಚಿತ್ರಸಂಖ್ಯೆ ೫೦ ಇದು ಕೂಡಾ ಹಿಂದಿನ ಚಿತ್ರದಂತೆ ಯಥಾವತ್ತಾಗಿ ಪ್ರಕಟಗೊಂಡಿದ್ದು ಅಲಂಕರಣದ ವೈಭವವು ಎದ್ದು ತೋರುತ್ತದೆ. ಇಲ್ಲಿ ಪುಷ್ಪಾಭರಣಗಳ ವರ್ಣಾಲಂಕಾರದಲ್ಲಿ ಸ್ಪಷ್ಟತೆ ಹಾಗೂ ಆಕರ್ಷಕ ರಚನೆ ವ್ಯಕ್ತಗೊಂಡಿದೆ. ನಂದ ಗೋಪ ಹಾಗೂ ಯಸೋದೆಯ ಉಡುಪುಗಳಲ್ಲಿ ಪಟ್ಟಿಕೆಗಳ ವರ್ಣಾಲಂಕಾರ, ಚಿನ್ನದ ಮಂಚ, ಹರಿವಾಣದ ಬಾಹ್ಯರೂಪವು ಜಾಮಿತಿಕ ಹಾಗೂ ಅಲಂಕಾರಿಕ ಚಿತ್ರವಿನ್ಯಾಸಗಳಿಂದ ರಚನೆಗೊಂಡಿದೆ. ಚಿತ್ರದ ರೇಖೆ, ವರ್ಣ, ಆಕೃತಿಗಳ ಸಂಯೋಜನೆ ಭಾವನಾ ನಿರೂಪಣೆಯೂ ತುಂಬಾ ಅಚ್ಚು ಕಟ್ಟಾಗಿ ಮೂಡಿಬಂದಿದೆ. ಕಲಾವಿದನು ಅಲಂಕಾರ ಪ್ರಜ್ಞೆ, ಸೌಂದರ್ಯ ಪ್ರಜ್ಞೆಯನ್ನು ಈ ಚಿತ್ರದ ಮೂಲಕ ಅಭಿವ್ಯಕ್ತಗೊಳಿಸಿದ್ದಾನೆ.

ಚಿತ್ರಸಂಖ್ಯೆ ೫೧ ಇದು ೧೫ x ೨೦ ಸೆಂ.ಮೀ ಅಳತೆಯನ್ನು ಹೊಂದಿದೆ. ಇಲ್ಲಿ ಕೃಷ್ಣನು ಪುಷ್ಪಾಭರಣಗಳಿಂದ ಯಥಾವತ್ತಾಗಿ ಚಿತ್ರಣಗೊಂಡಿದ್ದು, ಚಿನ್ನದ ಮಂಚವು ವೈವಿಧ್ಯಮಯವಾಗಿ ಚಿತ್ರಾಲಂಕೃತಗೊಂಡಿದೆ. ಮಂಚದ ಮುಂಭಾಗದಲ್ಲಿ ಖಾದ್ಯ ತುಂಬಿದ ಚಿನ್ನದ ಬಟ್ಟಲುಗಳು ಕಾಣಸಿಗುತ್ತವೆ. ಚಿತ್ರದ ಹಿಂಬದಿಯಲ್ಲಿ ಯಶೋದೆಯು ಮಗನಿಗೆ ಬೆಣ್ಣೆಯನ್ನು ನೀಡುತ್ತಿರುವಂತೆ ಚಲನೆಯುಕ್ತವಾಗಿದ್ದಾಳೆ. ಹಿನ್ನೆಲೆಯಲ್ಲಿ ಆಕರ್ಷಕ ಮಂಟಪ ರಚನೆಗೊಂಡಿದ್ದು ಜಾಮಿತಿಕ ನಕ್ಷೆಗಳಿಂದ ವಿನ್ಯಾಸಗೊಂಡಿದೆ. ಜೊತೆಗೆ ಹಸಿರು ಪರದೆಯನ್ನು ವೃತ್ತಾಕಾರವಾಗಿ ಅಲಂಕರಿಸಲಾಗಿದೆ. ಆಕೃತಿಗಳಲ್ಲಿ ದುಂಡುತನ, ಆಕರ್ಷಕ ಭಾವ ನಿರೂಪಣೆಯೂ ಪ್ರಕಟಗೊಂಡಿದೆ.

ಚಿತ್ರಸಂಖ್ಯೆ ೫೨ ಇದು ಚಿತ್ರಸಂಖ್ಯೆ ೫೦ರಂತೆ ಯಥಾವತ್ತಾಗಿ ಪ್ರತಿಕೃತಿಗೊಂಡಿದ್ದು, ವರ್ಣಸಂಯೋಜನೆಯಲ್ಲಿ, ಚಿತ್ರವಿನ್ಯಾಸದಲ್ಲಿ ಹಾಗೂ ವಸ್ತುಗಳ ಸಂಯೋಜನೆಯಲ್ಲಿ ಆ ಚಿತ್ರದಲ್ಲಿರುವಂತೆ ಅಭಿವ್ಯಕ್ತಗೊಂಡಿದೆ. ಇಲ್ಲಿ ಫಲಪುಷ್ಪಗಳ ಚಿನ್ನದ ತಟ್ಟೆಯು ಕಂಡು ಬರುತ್ತಿದ್ದು, ಇನ್ನುಳಿದಂತೆ ಎಲ್ಲ ವಿವರಗಳು ಚಿತ್ರ ೫೦ ರಂತೆ ಪ್ರಕಟಗೊಂಡಿದೆ.

ಚಿತ್ರಸಂಖ್ಯೆ ೫೩ ಈ ಚಿತ್ರದಲ್ಲಿ ಕೃಷ್ಣನು ಚಿನ್ನದ ಹರಿವಾಣದಲ್ಲಿರುವ ಬೆಣ್ಣೆಯನ್ನು

ಮೆಲ್ಲುತ್ತಿದ್ದು, ವಿಶೇಷ ಆಭರಣಗಳಿಂದ ಅಲಂಕೃತಗೊಂಡು, ಗುಲಾಬಿ ಹೂವಿನ ಮಾಲೆಯನ್ನು ಧರಿಸಿರುವನು. ಇಲ್ಲಿ ವಿಶೇಷವೆಂದರೆ ಕೃಷ್ಣನನ್ನು ಅಂಗಿಯಿಂದ ರೂಪಗೊಳಿಸಲಾಗಿದೆ. ಅದು ಖಡು ನೀಲಿ ಬಣ್ಣದಿಂದ ಕೂಡಿದ ರೇಶ್ಮೆ ವಸ್ತ್ರದಂತೆ ಪ್ರಕಟಗೊಂಡಿದೆ. ಕೆಂಪು ಉತ್ತರಿಯವನ್ನು ಖಾದ್ಯತುಂಬಿದ ಚಿನ್ನದ ವಸ್ತು, ಹಳದಿ ಬಣ್ಣದ ಮ್ಯಾಟನ್ನು ಚಿತ್ರಿಸಲಾಗಿದೆ. ಹಿನ್ನೆಲೆಯಲ್ಲಿ ಕಂಭದ ವಿನ್ಯಾಸ ವ್ಯಕ್ತಗೊಂಡಿದ್ದು, ಗಿಳಿ ಹಸಿರು ಬಣ್ಣದಿಂದ ಲೇಪನಮಾಡಲಾಗಿದೆ. ಇದು ಎಲ್ಲ ಚಿತ್ರಗಳಿಗಿಂತ ಭಿನ್ನವಾಗಿ ರಚನೆಗೊಂಡಿದೆ. ಇಲ್ಲಿ ಕೃಷ್ಣನು ಸಮಕಾಲೀನ ಬಾಲಕನಂತೆ ಅಭಿವ್ಯಕ್ತಗೊಂಡಿರುವನು. ಹಸಿರು, ತಿಳಿಗುಲಾಬಿ, ನೀಲಿ, ಕಪ್ಪು, ಬಿಳಿವರ್ಣಗಳ ಸಂಯೋಜನೆಯಿಂದ ಚಿತ್ರವು ನಿರೂಪಣೆಗೊಂಡಿದೆ.

ಚಿತ್ರಸಂಖ್ಯೆ ೫೪ ಇಲ್ಲಿ ಕೃಷ್ಣ ವಿಶಿಷ್ಟವಾಗಿ ರೂಪಗೊಂಡಿರುವನು. ಅಂಬೆಗಾಲಿನಿಂದ ತೆವಳುತ್ತಾ ಬೆಣ್ಣೆಯ ಪಾತ್ರೆಯಲ್ಲಿ ಕೈಹಾಕಿ ಬೆಣ್ಣೆಯನ್ನು ತೆಗೆದುಕೊಳ್ಳುತ್ತಿರುವಂತೆ ಕಲಾವಿದನು ಬಿಂಬಿಸಿದ್ದಾನೆ. ಕೊರಳಲ್ಲಿ ಮುತ್ತಿನ ಸರ, ಕಂಕಣ ಆಭರಣ, ನಡುವಿಗೆ ಚಿನ್ನದ ಉಡದಾರ, ಕಾಲಲ್ಲಿ ಗೆಜ್ಜೆ, ವಿಶೇಷ ಕೇಶವಿನ್ಯಾಸದಿಂದ ಕೂಡಿದ ಜುಟ್ಟು, ಅದಕ್ಕೆ ಆಭರಣಗಳ ಅಲಂಕಾರವು ವೈವಿಧ್ಯಮಯವಾಗಿ ಮೂಡಿಬಂದಿದೆ. ಮೈಮೇಲೆ ಕೆಂಪು ದುಪ್ಪಟವನ್ನು ಹೊಂದಿದ್ದು ಅದರ ಅಂಚು ಚಿತ್ರವಿನ್ಯಾಸದಿಂದ ಕೂಡಿದೆ. ಅವನ ಮೈಬಣ್ಣವು ಹೊಂಬಣ್ಣದಂತೆ ಹೊಳೆಯುತ್ತಿದೆ. ಬಟ್ಟಲು ಕಣ್ಣು, ತುಟಿಯಲ್ಲಿ ಮಂದಹಾಸವೂ ಸೂಸುತ್ತಿದೆ.

ಚಿತ್ರದ ಹಿನ್ನೆಲೆಯಲ್ಲಿ ರಾಜವೈಭವದ ವಾಸ್ತುವಿನ್ಯಾಸ ಹೊಂದಿದ್ದು, ಗುಲಾಬಿ ಹೂವುಗಳ ಸಮುಚ್ಚಯವು ಹಾಗೂ ಹಳದಿ ಬಣ್ಣದಿಂದ ಕೂಡಿದ ಗಿಳಿಯು ವಿನ್ಯಾಸಗೊಂಡಿದೆ. ನೀಲಬಣ್ಣದ ನೆಲಹಾಸು, ಕಂಬಗಳು, ಸುಸಜ್ಜಿತ ಗೋಡೆ, ಪರದೆಗಳನ್ನು ಸಂಯೋಜಿಸಲಾಗಿದೆ. ಒಟ್ಟಾರೆ ಚಿತ್ರವು ರೇಖಾಪ್ರಧಾನವಾಗಿದ್ದು, ಚಪ್ಪಟೆಯ ವರ್ಣವಿಧಾನವು ಸಂಯೋಜನೆಗೊಂಡಿದೆ. ಪ್ರಥಮ ತರಗತಿಯ ವರ್ಣಗಳು ಮೇಳೈಸಿವೆ.

**ಚಿತ್ರಸಂಖ್ಯೆ ೫೫, ೫೬, ೫೭, ೫೮, ೫೯, ೬೦, ೬೧ ನವನೀತ ಕೃಷ್ಣ**

ಶ್ರೀ ಕೃಷ್ಣನು ವಿಷ್ಣುವಿನ ಅವತಾರಿ, ಇವನು ಬಾಲ್ಯದಲ್ಲಿಯೇ ಅನೇಕ ಅಸುರರನ್ನು ಕೊಂದ ಬಲಶಾಲಿ ತಂದೆ ವಸುದೇವನು, ಶಿಶು ಕೃಷ್ಣನನ್ನು ಗೋಕುಲಕ್ಕೆ ಹೊತ್ಯೊಯುವ ಸಂದರ್ಭದಲ್ಲಿ ಗುಡುಗು ಮಿಂಚುಗಳಿಂದ ಧಾರಾಕಾರವಾಗಿ ಮಳೆ ಸುರಿಯುತ್ತದೆ. ಆದಿಶೇಷನು ತನ್ನ ಲಕ್ಷಾಂತರ ಹೆಡೆಗಳನ್ನು ಚಾಚಿ ಮಳೆಯನ್ನು ತಡೆಯುತ್ತಾನೆ. ಕೃಷ್ಣನು ಯಮುನೆಯಲ್ಲಿ ವಾಸವಾಗಿದ್ದ ಕಾಳಿಯನನ್ನು ಮರ್ದನ ಮಾಡಿ ಅಲ್ಲಿಂದ ಬಿಟ್ಟು ಹೋಗುವಂತೆ ಮಾಡುತ್ತಾನೆ. ಇದು ಕೃಷ್ಣನ ಬಾಲ್ಯದಲ್ಲಿ ನಡೆಯುವ ಪ್ರಸಂಗಗಳು.

ಇಲ್ಲಿ ಗಾಜಿನ ಚಿತ್ರ ಕಲಾವಿದರು ಇಂಥ ಕಥೆಗಳನ್ನು ಗ್ರಹಿಸಿ ತಮ್ಮ ಕಲ್ಪನೆಯಂತೆ ಆದಿಶೇಷನನ್ನು ಹಾಸಿಗೆಯಾಗಿಸಿ ಅವುಗಳ ಹೆಡೆಗಳನ್ನು ಸದಾ ನೆರಳಾಗಿಸಿ ಈ ಚಿತ್ರಗಳನ್ನು ರಚಿಸಿರಬಹುದೆಂದು ತೋರುತ್ತದೆ. ಇಲ್ಲಿ ಸುಮಾರು ಏಳು ಚಿತ್ರಗಳು ರಚನೆಗೊಂಡಿದ್ದು ಕೆಲವು ಚಿತ್ರಗಳಲ್ಲಿ ಸುರಳಿಸುತ್ತಿದ ಸರ್ಪದ ಮೇಲೆ ಬಾಲಕ ಕೃಷ್ಣನನ್ನು ಚಿತ್ರಿಸಿದ್ದಾರೆ. ಕೆಲವು ಚಿತ್ರಗಳಲ್ಲಿ

ಚಿನ್ನದ ಮಂಚದ ಮೇಲೆ ಕೂರಿಸಿ ಹಿಂಬದಿಯಲ್ಲಿ ಶೇಷನ ಹೆಡೆಗಳನ್ನು ಚಿತ್ರಿಸಲಾಗಿದೆ. ಇದಕ್ಕನುಗುಣವಾಗಿ ನಂದಗೋಕುಲದ ಪರಿವಾರವನ್ನು ಸಂಯೋಜಿಸಿದ್ದಾರೆ.

ಚಿತ್ರಸಂಖ್ಯೆ ೫೫ ಇಲ್ಲಿ ಜ್ಯಾಮಿತಿಕ ಚಿತ್ರವಿನ್ಯಾಸಗಳಿಂದ ಕೂಡಿದ ಚಿನ್ನದ ಮಂಚದ ಮೇಲೆ, ಚಿನ್ನಾಭರಣಗಳಿಂದ ಅಲಂಕೃತನಾದ ಬಾಲಕ ಕೃಷ್ಣನು ಬಲಗಾಲಿನ ಹೆಬ್ಬೆರಳನ್ನು ಬಾಯಿಯಲ್ಲಿಟ್ಟುಕೊಂಡು ತುಂಟತನವನ್ನು ವ್ಯಕ್ತಪಡಿಸುತ್ತಿರುವಂತೆ ಕಲಾವಿದನು ಅಭಿವ್ಯಕ್ತ ಪಡಿಸಿದ್ದಾನೆ. ಈ ವಿವರಣೆಯು ಇನ್ನುಳಿದ ಚಿತ್ರಗಳಲ್ಲಿ ಮೂಡಿ ಬಂದಿವೆ. ಮಂಚದ ಮೇಲೆ ದೊಡ್ಡದಿಂಬು ಶೇಷನ ಐದು ಹೆಡೆಗಳು ಸೂಕ್ಷ್ಮರೇಖೆಗಳಿಂದ ವಿನ್ಯಾಸಗೊಂಡಿವೆ. ಶೇಷನ ಮುಖದಲ್ಲಿ ಜೀವಂತಿಕೆಯು ಒಡಮೂಡಿದೆ.

ಕೃಷ್ಣನ ಎಡ ಹಾಗೂ ಬಲಪಾರ್ಶ್ವಗಳಲ್ಲಿ ನಂದ ಹಾಗೂ ಯಶೋದೆಯರು ಮಗುವನ್ನು ಮಂಚದಲ್ಲಿ ಕೂರಿಸಿ ಹರ್ಷಿತರಾಗಿದ್ದಾರೆ. ಕಿರೀಟಧಾರಿಯಾದ ನಂದನು ಹಳದಿ ಧೋತಿ, ನಡುವಿಗೆ ಕೆಂಪು ಬಟ್ಟೆಯನ್ನು ಧರಿಸಿರುವನು. ಗಡ್ಡ, ಹುರಿಮೀಸೆ, ವಿಶಾಲ ಕಣ್ಣುಗಳು ಹಾಗೂ ಕರ್ಣಾಭರಣಗಳಿಂದ ಭೂಷಿತನಾಗಿದ್ದಾನೆ. ಯಶೋದೆಯು ವಸ್ತ್ರಾಭರಣಗಳಿಂದ ಭೂಷಿತಳಾಗಿದ್ದು, ಸೀರೆ ಹಾಗೂ ರವಿಕೆಯಲ್ಲಿ ಚಿತ್ರವಿನ್ಯಾಸಗಳು ರೂಪಗೊಂಡಿವೆ. ನವಿಲು ಪಕ್ಷಿಯನ್ನು ಅಲಂಕರಿಸಿ ಮಗು ಕೃಷ್ಣನಿಗೆ ತೋರಿಸುತ್ತಿರುವಂತೆ ಚಿತ್ರಿತಗೊಂಡಿದ್ದಾಳೆ. ಚಿತ್ರದ ಹಿನ್ನೆಲೆಯಲ್ಲಿ ನೀಲಿಬಣ್ಣವು ಆವರಿಸಿಕೊಂಡಿದ್ದು, ಮೇಲೆ ಗಂಧರ್ವನು ಹೂಮಳೆಯನ್ನು ಸುರಿಯುತ್ತಿರುವಂತೆ ಕಲಾವಿದನು ಸಂಯೋಜಿಸಿದ್ದಾನೆ. ಚಿತ್ರದಲ್ಲಿ ರೇಖೆ, ವರ್ಣ ಹಾಗೂ ಭಾವನಾ ನಿರೂಪಣೆಯೂ ಅಲಂಕಾರಯುತವಾಗಿ ಮೂಡಿಬಂದಿದೆ.

ಚಿತ್ರಸಂಖ್ಯೆ ೫೬ ರಲ್ಲಿ ಚಿನ್ನದ ಮಂಚದ ಮೇಲೆ ಆದಿಶೇಷನು ಪವಡಿಸಿದ್ದು, ಕೃಷ್ಣನು ಹಿಂದಿನ ಚಿತ್ರದಲ್ಲಿರುವಂತೆ ರೂಪಗೊಂಡಿರುವನು. ಮಂಚದ ಹಿಂದಿರುವ ನಂದ ಗೋಪ ಹಾಗೂ ಯಶೋದೆಯರ ವೇಷಭೂಷಣಗಳು ರೇಖಾಪ್ರಧಾನವಾಗಿದ್ದು, ಏಕವರ್ಣದಿಂದ ಸಂಯೋಜನೆಗೊಂಡಿದೆ. ಕಪ್ಪು ಬಣ್ಣದಿಂದ ಅವರ ರೂಪಲಕ್ಷಣಗಳು ಬೇರ್ಪಟ್ಟಿದ್ದು, ಇವರ ಹಿಂದೆ ಗೋಪಿಕಾ ಸ್ತ್ರೀಯು ಬೀಸಣಿಕೆಯಿಂದ ಗಾಳಿಯನ್ನು ಬೀಸುತ್ತಿರುವಳು, ಇವಳು ವಸ್ತ್ರಾಭರಣಗಳಿಂದ ಭೂಷಿತಳಾಗಿರುವಳು.

ಮಂಚದ ಮುಂಭಾಗದಲ್ಲಿ ಬಾಲಗೋಪರು ಚಿತ್ರಿತಗೊಂಡಿರುವರು. ಇವರು ಜಟಾಮುಕುಟಗಳಿಂದ ಶೋಭಿತರಾಗಿದ್ದಾರೆ. ಚಿತ್ರದ ಮೇಲೆ ವರಾಹ ಮೂರ್ತಿ ಋಷಿಗಳು ಸಂಯೋಜನೆಗೊಂಡಿರುವರು. ಫಲಪುಷ್ಪಗಳಿಂದ ತುಂಬಿದ ಚಿನ್ನದ ತಟ್ಟೆಯು ಮುಂಭಾಗದಲ್ಲಿ ರಚನೆಗೊಂಡಿದ್ದು, ಹಿನ್ನೆಲೆಯಲ್ಲಿ ನೀಲಿಬಣ್ಣವನ್ನು ಲೇಪನಮಾಡಿ ಚಿತ್ರವು ಎದ್ದು ತೋರುವಂತೆ ಅಭಿವ್ಯಕ್ತಪಡಿಸಲಾಗಿದೆ. ಈ ಚಿತ್ರದಲ್ಲಿ ಎಲ್ಲ ಆಕೃತಿಗಳಲ್ಲಿ ಬಿಳಿವರ್ಣವು ಆವೃತಗೊಂಡಿದ್ದು ಚಪ್ಪಟೆಯಾಗಿ ಬಿಂಬಿತವಾಗಿದೆ. ಇನ್ನುಳಿದಂತೆ ಕೆಂಪು, ಹಳದಿ, ಕಪ್ಪು ಹಸಿರು ಬಣ್ಣಗಳು ಅಲ್ಲಲ್ಲಿ ಪ್ರಯೋಗಗೊಂಡಿವೆ. ಕೃಷ್ಣನ ವಿಶಿಷ್ಟ ಪುಷ್ಪಮಾಲೆಯು ಆಕರ್ಷಕವಾಗಿ ಮೂಡಿಬಂದಿದೆ. ಚಿತ್ರವು ಮಿತವಾದ ಬಣ್ಣಗಳಿಂದ ಕೂಡಿದ್ದರೂ ರೇಖೆಯ ಅಲಂಕರಣ ಉತ್ಕೃಷ್ಟತೆಯಿಂದ ಪ್ರಕಟಗೊಂಡಿದೆ.

ಚಿತ್ರಸಂಖ್ಯೆ ೫೭ ಇಲ್ಲಿ ಬಿಂಬಿತವಾಗಿರುವ ಕೃಷ್ಣ, ಶೇಷನ ಹೆಡೆ, ಚಿನ್ನದ ಮಂಚ ಹಾಗೂ ಯಶೋದೆಯ ಆಕೃತಿಗಳಲ್ಲಿ ರೇಖೆಗಳ ಲಾವಣ್ಯತೆಯ ಉತ್ತಮ ವಿವರಣೆಗಳು ಮುಡಿಬಂದಿವೆ. ಕೃಷ್ಣನ ದೇಹ ರಚನೆಯು ಆರೋಗ್ಯಪೂರ್ಣವಾಗಿ ಮೂಡಿಬಂದಿದ್ದು, ತುಂಟತನವು ಭಾವಪೂರ್ಣವಾಗಿ ಅಭಿವ್ಯಕ್ತಗೊಂಡಿದೆ. ಇಲ್ಲಿ ಕೆಂಪು, ನೀಲಿ, ಹಸಿರು, ಬಿಳಿ ಹಾಗೂ ಕಪ್ಪು ವರ್ಣಗಳಲ್ಲಿ ದಟ್ಟತೆ ಕಂಡುಬರುತ್ತದೆ. ಚಿತ್ರದ ಸುತ್ತಲೂ ಅಲಂಕಾರಿಕ ಚಿತ್ರವಿನ್ಯಾಸ ಮೂಡಿಬಂದಿದೆ. ಇಲ್ಲಿ ಕಲಾವಿದನ ತಾಳ್ಮೆ ಹಾಗೂ ಚಿತ್ರಪ್ರಜ್ಞೆ ವ್ಯಕ್ತಗೊಂಡಿದೆ.

ಚಿತ್ರ ೫೮ ಇಲ್ಲಿ ಮಂಚದ ವಿವರಣೆ ಕಂಡು ಬರುವದಿಲ್ಲ, ಆದಿಶೇಷನೇ ಸುರುಳಿಯಾಗಿ ಮಂಚವಗಿದ್ದಾನೆ. ಹೆಡೆಗಳು ಭಾವಪರವಶವಾಗಿವೆ. ಕೆಂಪು ಹಳದಿ ಹಾಗೂ ಬಿಳಿಬಣ್ಣಗಳ ಮೇಳವು ಹೆಚ್ಚಿಗೆ ಕಂಡುಬರುತ್ತಿದೆ. ನಂದ, ಯಶೋದೆ, ಮಯೂರ ಪಕ್ಷಿಯು ಚಿತ್ರವಿನ್ಯಾಸಗಳಿಂದ ಅಭಿವ್ಯಕ್ತಗೊಂಡಿದ್ದು, ರೇಖಾ ಅಲಂಕಾರ ವೈಭವೀಕರಣಗೊಂಡಿದೆ. ಆಕೃತಿಗಳ ಸಂಯೋಜನೆ ಒತ್ತೊತ್ತಾಗಿ ಮೂಡಿಬಂದಿವೆ. ಹಿನ್ನೆಲೆಯಲ್ಲಿ ಶ್ವೇತವರ್ಣದಿಂದ ಚಿತ್ರವು ಬೇರ್ಪಟ್ಟಿರುವಂತೆ ರಚನಾ ವಿಧಾನಹೊಂದಿದೆ.

ಚಿತ್ರಸಂಖ್ಯೆ ೫೯ ಇಲ್ಲಿ ಆದಿಶೇಷನ ಸ್ವರೂಪವನ್ನು ರೇಖೆಗಳಿಂದ ಸ್ಪಷ್ಟವಿವರಣೆಗಳನ್ನು ತರಲಾಗಿದೆ. ಕೃಷ್ಣನು ಶ್ವೇತ ವರ್ಣಧಾರಿಯಾಗಿದ್ದು ಇತರ ಚಿತ್ರಗಳಂತೆ ಇಲ್ಲಿಯೂ ಅದೇ ಭಾವಭಂಗಿಯನ್ನು ಹೊಂದಿರುವನು. ನಂದ ಯಶೋದೆಯರು ವಸ್ತ್ರಾಭರಣಗಳಿಂದ ಭೂಷಿತಗೊಂಡು ಕೃಷ್ಣನ ಪ್ರೇಮವನ್ನು ಸವಿಯುತ್ತಿರುವಂತೆ ಅಭಿವ್ಯಕ್ತಗೊಂಡಿದ್ದಾರೆ. ಇವರ ವೇಷ ಭೂಷಣಗಳಲ್ಲಿ ಹಸಿರು, ಕೆಂಪು, ಹಳದಿ ವರ್ಣಗಳ ಜ್ಯಾಮಿತಿಕ ಹಾಗೂ ಅಲಂಕಾರಿಕ ಚಿತ್ರವಿನ್ಯಾಸಗಳನ್ನು ಕಲಾವಿದನು ಪ್ರಜ್ಞಾಪೂರಕವಾಗಿ ಮೂಡಿಸಿದ್ದಾನೆ. ಹಿನ್ನೆಲೆಯಲ್ಲಿ ಕಪ್ಪು ಮಿಶ್ರಿತ ನೀಲಿ ಬಣ್ಣವು ಏಕರೂಪವಾಗಿ ಲೇಪನಗೊಂಡಿದೆ.

ಚಿತ್ರ ಸಂಖ್ಯೆ ೬೦ ಇದು ಹಿಂದಿನ ಚಿತ್ರದಂತೆ ಯಥಾವತ್ತಾಗಿ ಮೂಡಿಬಂದಿದೆ. ಮಂಚದ ಚಿತ್ರವಿನ್ಯಾಸವು ಹೂವುಗಳಿಂದ ಕೂಡಿದ್ದು, ಆಕೃತಿಗಳ ಮೈಬಣ್ಣಗಳಲ್ಲಿ ಕಂದುಗೆಂಪು ಹಾಗೂ ಬಿಳಿ ವರ್ಣಗಳ ಸಮಿಶ್ರಣವು, ಅದರ ದುಂಡುತನವು ಉತ್ತಮವಾಗಿ ಪ್ರಕಟಗೊಂಡಿದೆ. ವರ್ಣಗಳ ವೈವಿಧ್ಯತೆಯು ಇಲ್ಲಿ ಉಜ್ವಲವಾಗಿ ಸಂಯೋಜನೆಗೊಂಡಿದ್ದು, ಹಿನ್ನೆಲೆಯು ಕಪ್ಪು ಬಣ್ಣದಿಂದ ಲೇಪಿತವಾಗಿದೆ.

ಚಿತ್ರ ಸಂಖ್ಯೆ ೬೧ ಇಲ್ಲಿ ಮಂಚದ ಮೇಲೆ ಆದಿಶೇಷನು ಪವಡಿಸಿದ್ದು, ಕೃಷ್ಣನು ಅದರ ಮೇಲೆ ಕುಳಿತಿರುವನು. ಇಲ್ಲಿ ಚಿತ್ರವಿನ್ಯಾಸದ ಸ್ಪಷ್ಟ ವಿವರಗಳು ಪ್ರಕಟಗೊಂಡಿಲ್ಲ. ಬಿಳಿ, ಕೆಂಪು, ಕಪ್ಪು ವರ್ಣಗಳು ಪ್ರಧಾನವಾಗಿ ಲೇಪನಗೊಂಡಿವೆ. ಚಿತ್ರವು ಅಲಂಕರಣದಿಂದ ಕೂಡದೇ ಇದ್ದರೂ ಸರಳವಾದ ವಿವರಣೆಗಳಿಂದ ಅಭಿವ್ಯಕ್ತಗೊಂಡಿದೆ.

**ಚಿತ್ರಸಂಖ್ಯೆ ೬೨, ೬೩, ೬೪ ಬಾಲಕೃಷ್ಣ**

ಗೋಕುಲದ ನಂದ ಯಶೋದೆಯರಿಗೆ ಮಗು ಕೃಷ್ಣನೆಂದರೆ ಪಂಚಪ್ರಾಣ. ಈ ದಂಪತಿಗಳ ಕಣ್ಣು ಕೃಷ್ಣನ ಚಲನವಲನದ ಮೇಲೆ ಇರುತ್ತಿದ್ದವು. ತಾಯಿ ಯಶೋದೆಗಂತೂ

ತನಗೆ ಗಂಡು ಮಗುವಾಯಿತೆಂದು ತಿಳಿದು ತನ್ನ ಸರ್ವಸ್ವವನ್ನೇ ಧಾರೆಎರೆದಿದ್ದಳು. ಆ ಮಗುವಿಗೆ ನಾನಾ ರೀತಿ ಅಲಂಕಾರ ಮಾಡುತ್ತಿದ್ದಳು. ಗೋಕುಲದ ಗೋಪಿಕೆಯರೆಲ್ಲ ಸೇರಿ ಮಗು ಕೃಷ್ಣನನ್ನು ಶೃಂಗರಿಸಿ ಹಾಡು, ಕುಣಿತಗಳ ಸಂಗೀತವನ್ನೇರ್ಪಡಿಸಿ ಮಾತೃತ್ವ ಪ್ರೀತಿಯನ್ನು ತೋರುತ್ತಿದ್ದರು. ಇದು ಗೋಕುಲದಲ್ಲಿ ನಿತ್ಯ ನಡೆಯುತ್ತಿದ್ದ ದಿನಚರಿ ಇಲ್ಲಿ ಗೋಕುಲದ ಅಪರೂಪದ ಮಗುವಾಗಿ ಕೃಷ್ಣನು ಬೆಳೆಯುತ್ತಿದ್ದನು.

ಇಲ್ಲಿ ಮೂರು ಗಾಜಿನ ಚಿತ್ರಗಳು ಇಂಥ ಪ್ರೀತಿ ಪ್ರಸಂಗವನ್ನು ವ್ಯಕ್ತಪಡಿಸುವಂತೆ ರಚನೆಗೊಂಡಿವೆ. ಚಿತ್ರ ಸಂಖ್ಯೆ ೬೨ ಇಲ್ಲಿ ಸರ್ವಾಭರಣಗಳಿಂದ ಭೂಷಿತನಾದ ಬಾಲಕ ಕೃಷ್ಣನು ಚಿನ್ನದ ಸಿಂಹಾಸನದ ಮೇಲೆ ಕುಳಿತಿರುವನು, ಇವನು ಕುಳಿತಿರುವ ಭಾವಭಂಗಿಯು ಒಬ್ಬ ಯುವರಾಜನ ವೈಭವವನ್ನು ಸೂಚಿಸುತ್ತಿರುವಂತೆ ಕಲಾವಿದನು ನಿರೂಪಿಸಿದ್ದಾನೆ. ಸಂಪಿಗೆಯ ಮೈಬಣ್ಣವನ್ನು ಹೊಂದಿರುವ ಕೃಷ್ಣನು, ಸುಪುಷ್ಟ ಶರೀರ ಸಂಪತ್ತಿನಿಂದ ಕಂಗೊಳಿಸುತ್ತಿದ್ದಾನೆ. ಬಟ್ಟಲು ಕಂಗಳು, ತುಟಿಯಲ್ಲಿ ಮಂದಹಾಸ, ಕುಳಿತಿರುವ ಭಂಗಿಯಲ್ಲಿ ಗಾಂಭೀರ್ಯತೆಯು ಪ್ರಕಟಗೊಂಡಿದೆ.

ಕೃಷ್ಣನ ಅಕ್ಕಪಕ್ಕ ಗೋಪಿಕೆಯರು ವೀಣೆ, ವಯೋಲಿನ್‌ನಂತಹ ಸಂಗೀತವನ್ನು ನುಡಿಸುತ್ತಿರುವರು. ಇವರು ವಸ್ತ್ರಾಭರಣಗಳಿಂದ ಭೂಷಿತರಾಗದ್ದಾರೆ. ಕೃಷ್ಣನ ಪಾದದ ಹತ್ತಿರ ಗೋಪಿಕಾ ಸ್ತ್ರೀಯರಿಬ್ಬರು ರಚನೆಗೊಂಡಿದ್ದು, ಕೃಷ್ಣನನ್ನು ಅಲಂಕರಣ ಮಾಡುತ್ತಿರುವಂತೆ ಚಲನೆಯುಕ್ತವಾಗಿದ್ದಾರೆ. ಚಿತ್ರದ ಹಿನ್ನೆಲೆಯಲ್ಲಿ ಅರಮನೆಯ ವಾಸ್ತು ಚಿತ್ರಣವು ಮೂಡಿಬಂದಿದೆ. ಮುಂಭಾಗದಲ್ಲಿ ಸುಸಜ್ಜಿತ ಕೋಟೆ, ಗೋಪುರಗಳು ಸಂಯೋಜನೆಗೊಂಡಿವೆ. ರೇಖಾಪ್ರಧಾನವಾಗಿ ಮೂಡಿಬಂದ ಈ ಚಿತ್ರವು ಬಿಳಿ, ಹಸಿರು, ಕಪ್ಪು, ಕೇಸರಿ, ನೀಲಿ, ಹಾಗೂ ಚಿನ್ನದ ವರ್ಣಗಳ ಮಿಶ್ರಣವು ವ್ಯಕ್ತಗೊಂಡಿದೆ. ಆಕೃತಿಗಳ ವೇಷಭೂಷಣಗಳಲ್ಲಿ ಆಭರಣಗಳಲ್ಲಿ ಸೂಕ್ಷ್ಮರೇಖೆಗಳಿಂದ ಅಲಂಕೃತ ವಿನ್ಯಾಸವು, ಭಾವ ನಿರೂಪಣೆಯೂ ಉತ್ತಮವಾಗಿ ಮೂಡಿಬಂದಿದೆ. ಕಲಾವಿದನ ವರ್ಣಗಾರಿಕೆಯಲ್ಲಿ ಸೂಕ್ಷ್ಮತೆ, ತಾಳ್ಮೆ, ಹಾಗೂ ಸೌಂದರ್ಯ ಪ್ರಜ್ಞೆಯು ಪ್ರಕಟಗೊಂಡಿದೆ.

ಚಿತ್ರ ೬೩ ಇಲ್ಲಿ ಕೃಷ್ಣನ ರೂಪವು ಅತ್ಯಂತ ಗಾಂಭೀರ್ಯದಿಂದ ವ್ಯಕ್ತಗೊಂಡಿದ್ದು ವರ್ಣ ಮಿಶ್ರಣದಲ್ಲಿ ನೆರಳು ಬೆಳಕಿನ ಕಲ್ಪನೆ ಮೂಡಿಬಂದಿದೆ. ಆಭರಣಗಳಲ್ಲಿ ರೇಖಾ ಸ್ಪಷ್ಟತೆ, ಹಾಗೂ ಅಲಂಕರಣ ಚಿತ್ರಣಗೊಂಡಿದ್ದು, ತಾಯಿ ಯಶೋದೆಯು ಬೆಣ್ಣೆ ಮುದ್ದೆಯನ್ನು ತಿನ್ನಲು ಕೊಡುತ್ತಿರುಂತೆ ಚಲನೆಯುಕ್ತಳಾಗಿ ಚಿತ್ರಣಗೊಂಡಿದ್ದಾಳೆ. ಇವಳ ಸೀರೆಯು ರೇಖಾ ವಿನ್ಯಾಸಗಳಿಂದ ರೂಪಗೊಂಡಿದ್ದು, ಕೆಂಪು ರವಿಕೆ ಹಾಗೂ ಆಭರಣಗಳಿಂದ ಭೂಷಿತಳಾಗಿದ್ದಾಳೆ. ಇಂದು ಕೆಲ ತಾಯಂದಿರು ಮಕ್ಕಳು ಹಟಮಾಡುತ್ತಿದ್ದಾಗ ಅವನನ್ನು ನಾನಾ ರೀತಿ ಶೃಂಗರಿಸಿ ಕಥೆ, ಹಾಡು ಹೇಳುತ್ತಾ ಅವನನ್ನು ವಿವಿಧ ಆಸನಗಳಲ್ಲಿ ಕೂಡಿಸಿ ಊಟ ಮಾಡಿಸುವದನ್ನು ಇಂದು ಗಮನಿಸಬಹುದು. ಆ ಅನುಭವವನ್ನು ಕಲಾವಿದನು ಇಲ್ಲಿ ಪ್ರಕಟಪಡಿಸಿರಬಹುದು. ಹಿನ್ನೆಲೆಯಲ್ಲಿ ಅಲಂಕಾರಿಕ ಮಂಟಪ ಹಾಗೂ ಬಣ್ಣಬಣ್ಣದ ಪರದೆಗಳನ್ನು ಸಂಯೋಜಿಸಲಾಗಿದ್ದು, ರೇಖೆ, ವರ್ಣಗಳಿಂದ ಚಿತ್ರಾಲಂಕೃತಗೊಂಡಿವೆ. ಚಿತ್ರದ ಕೆಳಗೆ ಖಾದ್ಯ, ಫಲಹಾರಗಳಿಂದ ತುಂಬಿದ ಚಿನ್ನದ ತಟ್ಟೆಯು

ಚಿತ್ರಿತಗೊಂಡಿದೆ. ಶ್ರೀಮಂತ ಪರಿಸರವನ್ನು, ಸಮೃದ್ಧಿ ಬದುಕನ್ನು ವ್ಯಕ್ತಪಡಿಸುತ್ತದೆ.

ಚಿತ್ರ ೬೪ ಇದು ಚಿತ್ರ ೬೩ ರಂತೆ ಯಥಾವತ್ತಾಗಿ ಪ್ರಕಟಗೊಂಡಿದೆ. ಇಲ್ಲಿ ರಚನೆಗೊಂಡಿರುವ ಗೋಪ ಸ್ತ್ರೀಯರು ಬೆಣ್ಣೆ ಮುದ್ದೆಗಳನ್ನು ಹಿಡಿದು ಕೃಷ್ಣನಿಗೆ ತಿನ್ನಲು ಕೊಡುತ್ತಿರುವಂತೆ ಭಾವಪರವಶರಾಗಿದ್ದಾರೆ. ಕಂದು ಗೆಂಪು ಹಾಗೂ ಬಿಳಿ ವರ್ಣಗಳ ವರ್ಣ ಸಂಯೋಜನೆಯಿಂದ ಮೈಬಣ್ಣವನ್ನು ಪ್ರಕಟಿಸಿದ್ದು, ಚಿತ್ರವಿನ್ಯಾಸಗಳಿಂದ ವಸ್ತ್ರಾಭರಣಗಳು ಅಲಂಕಾರಿಕವಾಗಿ ಮೂಡಿಬಂದಿವೆ. ಚಿತ್ರದ ಹಿನ್ನೆಲೆಯಲ್ಲಿ ಅರಮನೆಯ ವಾಸ್ತುರಚನೆಯಲ್ಲಿ ಜ್ಯಾಮಿತಿಕ, ನೈಸರ್ಗಿಕ ಹಾಗೂ ಅಲಂಕಾರಿಕ ನಕ್ಷಾವಿನ್ಯಾಸಗಳಿಂದ, ಬಣ್ಣದ ಗಾಜಿನಿಂದ ಕೂಡಿದ ಕಿಟಕಿಗಳ ಚಿತ್ರಗಳು ಆಕರ್ಷಕವಾಗಿ ಮೂಡಿ ಬಂದಿವೆ. ಹಾಗೂ ಪರದೆಗಳನ್ನು ವೈವಿಧ್ಯಮಯವಾಗಿ ಸಂಯೋಜಿಸಲಾಗಿದೆ. ಚಿತ್ರದಲ್ಲಿ ರೇಖೆ ಹಾಗೂ ವರ್ಣಗಳ ವೈಭವವು ಎದ್ದು ತೋರುತ್ತಿದೆ. ಆಕೃತಿಗಳ ಸಂಯೋಜನೆಯಲ್ಲಿ ಸೂಕ್ಷ್ಮವಿವರಗಳು ಪ್ರಕಟಗೊಂಡಿವೆ.

**ಚಿತ್ರಸಂಖ್ಯೆ ೬೫ ಕಾಳಿಂಗ ಮರ್ದನ**

ಯಮುನಾ ನದಿಯ ನೀರನ್ನು ಕಾಳಿಯೆಂಬ ಕರಿಸರ್ಪವು ವಿಷಮಯ ಮಾಡುತ್ತಿದ್ದನು. ಈ ನದಿಯ ಕಡೆ ಯಾವ ಮನುಷ್ಯರು ಗೋಪರು ಹಾಗೂ ಗೋವುಗಳು ಹೋಗುತ್ತಿರಲಿಲ್ಲ. ಆ ನದಿಯ ನೀರನ್ನು ಯಾರೂ ಕುಡಿಯುತ್ತಿರಲಿಲ್ಲ. ಇವನನ್ನು ದಮನ ಮಾಡಲು ಬಾಲಕ ಕೃಷ್ಣನು ಕದಂಬ ಮರವನ್ನೇರಿ ಅಲ್ಲಿಂದ ನದಿಗೆ ದುಮುಕಿ ಕಾಳಿಯನ ಜೊತೆ ಹೋರಾಡಿ ಅವನನ್ನು ಮರ್ದನ ಮಾಡುತ್ತಾನೆ. ಇಂಥ ಪ್ರಸಂಗವನ್ನು ಈ ಗಾಜಿನ ಚಿತ್ರವು ವ್ಯಕ್ತಪಡಿಸುತ್ತಿದೆ.

ಇಲ್ಲಿ ಬಾಲಕ ಕೃಷ್ಣನು ಕಾಳಿಯನ ಬಾಲವನ್ನು ಹಿಡಿದು ಅವನ ಅಸಂಖ್ಯಾತ ಹೆಡೆಗಳನ್ನು ತುಳಿಯುತ್ತಿರುವನು. ಇವನ ಶರೀರದ ಚಲನ ವಲನವನ್ನು ಗಮನಿಸಿದರೆ, ಅವನ ಹೆಡೆಯ ಮೇಲೆ ನರ್ತನ ಮಾಡುತ್ತಿರುವಂತೆ ತೋರುತ್ತದೆ. ಕೃಷ್ಣನು ಆಭರಣಗಳಿಂದ ಭೂಷಿತನಾಗಿದ್ದು, ರೇಖಾಸಂಯೋಜನೆಯಿಂದ ಕೂಡಿದ ಕೆಂಪು ಹಾಗೂ ಬಿಳಿ ವರ್ಣಗಳ ಮಿಶ್ರಣದ ಕೂಡಿವಿಕೆ ನೈಜವಾಗಿದೆ. ಚಿತ್ರದ ಹಿಂದೆ ಕದಂಬ ಮರವು ಹೂವು-ಎಲೆಗಳಿಂದ ಕಂಗೊಳಿಸುತ್ತಿದ್ದು ಇದರ ಅಲಂಕಾರ ರೂಪವು ಆಕರ್ಷಕವಾಗಿದೆ. ಚಿತ್ರದಲ್ಲಿ ವೃತ್ತಾಕಾರದ ಶ್ವೇತವರ್ಣದಿಂದ ಕೂಡಿದ ನದಿಯ ಸ್ವರೂಪವು ಮೂಡಿಬಂದಿದ್ದು, ಅಲ್ಲಲ್ಲಿ ಕೆಂಪು ತಾವರೆಗಳು ಕಂಡು ಬರುತ್ತಿವೆ.

ಚಿತ್ರದ ಹಿನ್ನೆಲೆಯಲ್ಲಿ ಒಬ್ಬ ಗೊಲ್ಲ ಮನುಷ್ಯನು ಕೈಮುಗಿದು ಭಕ್ತಿಯನ್ನು ವ್ಯಕ್ತಪಡಿಸುತ್ತಿರುವನು. ಅವನ ಮುಖದಲ್ಲಿ ಗಾಢತೆ ಎದ್ದು ತೋರುತ್ತಿದೆ. ರೇಖೆ ವರ್ಣ ಹಾಗೂ ಆಕೃತಿಗಳ ಚಲನೆಯಲ್ಲಿ ಜೀವಂತಿಕೆ ಎದ್ದು ಕಾಣುತ್ತಿದೆ. ಹಿನ್ನೆಲೆಯ ನೀಲಿ ಬಣ್ಣವು ಯಮುನೆಯ ಆಳವನ್ನು ಪ್ರಕಟಪಡಿಸುತ್ತಿದೆ.

**ಚಿತ್ರ ಸಂಖ್ಯೆ ೬೬, ೬೭ ಗೋಪಾಲ ಕೃಷ್ಣ**

ಗೋಕುಲವು ಗೊಲ್ಲರು ವಾಸಮಾಡುತ್ತಿರುವ ಸ್ಥಳ. ಇವರ ಕಾಯಕ ಗೋವುಗಳನ್ನು ಸಾಕುವುದು. ಅವುಗಳ ಪಾಲನೆ ಪೋಷಣೆಯಲ್ಲಿ, ಗೊಲ್ಲರ ಕೇರಿಯ ಬಾಲಕರು ತಮ್ಮ ತಮ್ಮ

ಹಸುಗಳನ್ನು ಮೇಯಿಸಲು ಯಮುನೆಯ ತೀರ ಮತ್ತು ಗೋವರ್ಧನ ಗಿರಿಗೆ ಕೊಂಡೊಯ್ಯುತ್ತಿದ್ದರು. ಅವರೆಲ್ಲ ಸಣ್ಣ ಹುಡುಗರೇ ಆಗಿರುತ್ತಿದ್ದರು. ಅದರಲ್ಲಿ ಬಲರಾಮ-ಕೃಷ್ಣರು ಜೊತೆಗಿರುತ್ತಿದ್ದರು. ಬಲರಾಮನಿಗಿಂತ ಕೃಷ್ಣನು ಸ್ವಲ್ಪ ಚಿಕ್ಕವನು ಇವನೂ ಸಹ ಬಲರಾಮನೊಡನೆ ಹಸುವುಗಳನ್ನು ಮೇಯಿಸಲು ಕಾಡಿಗೆ ಹೋಗುತ್ತಿದ್ದನು. ಅಲ್ಲಿ ಎಲ್ಲರೂ ಆಟ, ವಿನೋದಗಳಲ್ಲಿ ತೊಡುಗುತ್ತಿದ್ದರು. ಇಂಥ ಪರಿಸರ ಗೋಕುಲದಲ್ಲಿತ್ತು.

ಇಲ್ಲಿ ಕಲಾವಿದನು ಕೃಷ್ಣ ಹಾಗೂ ಗೋವುಗಳ ಸಂಬಂಧಗಳನ್ನು ಗಾಜಿನ ಚಿತ್ರಗಳ ಮೂಲಕ ಅಭಿವ್ಯಕ್ತಪಡಿಸಿರುವನು. ಇಲ್ಲಿ ಎರಡೂ ಚಿತ್ರಗಳು ಒಂದೇ ಆಶಯವನ್ನು ಹೊಂದಿದ್ದು, ಆಕೃತಿಗಳ ಸಂಯೋಜನೆಯಲ್ಲಿ ವರ್ಣ ವೈವಿಧ್ಯತೆಯಲ್ಲಿ ಸ್ವಲ್ಪ ಬದಲಾವಣೆಗಳು ಪ್ರಕಟಗೊಂಡಿವೆ. ಚಿತ್ರ ೬೬ ರಲ್ಲಿ ಬಾಲ ಗೋಪಾಲನು ಹಸುವನ್ನು ಹಿಡಿದುಕೊಂಡು ಶಂಖವನ್ನು ಊದುತ್ತಿರುವನು. ಶ್ವೇತ ವರ್ಣದ ಹಸುವು ಆ ಶಂಖದ ನಾದವನ್ನು ಆಸ್ವಾದಿಸುತ್ತಿದೆ ಎಂಬಂತೆ ಚಲನೆಯಿಂದ ಕೂಡಿದೆ. ಈ ಚಿತ್ರದಲ್ಲಿ ಕೃಷ್ಣನ ಶರೀರ ರಚನೆಯಲ್ಲಿ ಏರಿಳಿತವನ್ನು, ದುಂಡುತನವನ್ನು ಕಾಣಲಾಗುವುದಿಲ್ಲ. ಕಂದುಗೆಂಪು ಹಾಗೂ ಬಿಳಿಬಣ್ಣಗಳ ಮಿಶ್ರಣವು ನೈಜವಾಗಿ ವ್ಯಕ್ತವಾಗಿದೆ. ಕೇಶವಿನ್ಯಾಸ, ಆಭರಣಗಳಲ್ಲಿ ಅಲಂಕರಣವು ಒಡಮೂಡಿದೆ. ಜುಟ್ಟಿಗೆ ಮುತ್ತಿನ ಗೊಂಚಲು, ನವಿಲುಗರಿಯು ಶೋಭಿಸುತ್ತಿವೆ. ಹಿನ್ನೆಲೆಯಲ್ಲಿ ಚಿತ್ರವಿನ್ಯಾಸದ ಮಂಟಪ ಹಾಗೂ ವರ್ಣಮಯ ಪರದೆಗಳು ಸಂಯೋಜನೆಗೊಂಡಿವೆ. ಮಿತವಾದ ಅಲಂಕರಣ, ನೈಜತೆಯಿಂದ ಕೂಡಿದ ವರ್ಣ ಸಂಯೋಜನೆ ಹಾಗೂ ಭಾವಾಭಿವ್ಯಕ್ತಿಯೂ ಒಡಮೂಡಿದೆ.

ಚಿತ್ರಸಂಖ್ಯೆ ೬೭ ಇದು ಸಹ ಚಿತ್ರ ೬೬ ರಂತೆ ಪ್ರತಿಕೃತಿಗೊಂಡಿದ್ದು, ಇಲ್ಲಿ ವರ್ಣಗಳು ಚಪ್ಪಟೆಯಾಗಿ ಸಂಯೋಜನೆಗೊಂಡಿವೆ. ರೇಖಾ ಪ್ರಾಧಾನ್ಯತೆಯಿಂದ ಕೂಡಿದ್ದು ಕೃಷ್ಣನು ಧರಿಸಿದ ಆಭರಣಗಳು ಮುತ್ತಿನ ಸರ, ಚಿನ್ನದ ಸರ, ಮುತ್ತಿನ ಗೊಂಚಲು, ಚಿನ್ನದ ಉಡಿದಾರ, ಕರ್ಣಾಭರಣಗಳು, ತೋಳ್ಬಂಧಿಗಳ, ಬಾಹ್ಯವಿನ್ಯಾಸವು ರೇಖಾ ಸಂಯೋಜನೆಯಿಂದ ಸ್ಪಷ್ಟ ಪಡಿಸುತ್ತಿವೆ. ಗೋವಿನ ಚಲನೆಯು ಭಾವ ಪೂರ್ಣವಾಗಿ ಮೂಡಿಬಂದಿದ್ದು, ಇಲ್ಲಿ ಹಲವಾರು ಗೋವುಗಳನ್ನು ಚಿತ್ರಿಸಿದ್ದು, ಶಂಖನಾದಕ್ಕೆ ಬೆದರಿದಂತೆ ಚಲನೆಯುಕ್ತವಾಗಿವೆ. ಚಿತ್ರದ ಹಿನ್ನೆಲೆಯಲ್ಲಿ ನೈಸರ್ಗಿಕ ನಕ್ಷೆಗಳಿಂದ ಕೂಡಿದ ಮಂಟಪವನ್ನು ಚಿತ್ರಿಸಿದ್ದು, ಕೆಂಪು ನೆಲ ಹಾಗೂ ಕಪ್ಪು ಆಕಾಶವನ್ನು ಸಂಯೋಜಿಸಲಾಗಿದೆ. ರೇಖೆ ಹಾಗೂ ವರ್ಣಾಲಂಕಾರದಲ್ಲಿ ಭಾವ ನಿರೂಪಣೆಯು ಪ್ರಕಟಗೊಂಡಿದೆ.

**ಚಿತ್ರಸಂಖ್ಯೆ ೬೮ ಬಾಲಕೃಷ್ಣ**

ಬಾಲಕ ಕೃಷ್ಣನು ಸ್ವಲ್ಪ ನಡೆದಾಡಲು ಪ್ರಾರಂಭಿಸಿದ ನಂತರ ಅವನ ಕಿಟೆಲಗಳು ಪ್ರಾರಂಭವಾದವು. ದಿನಾಲು ಏನಾದರೊಂದು ದೂರನ್ನು ಮನೆಗೆ ತರುತ್ತಿದ್ದನು. ಪಕ್ಕದ ಮನೆಗಳಿಗೆ ಹೋಗಿ ಮೊಸರು, ಬೆಣ್ಣೆಗಳ ಗಡಿಗೆಗಳನ್ನು ಕದಿಯುವುದು, ಅವುಗಳನ್ನು ಒಡೆಯುವುದು ಸರ್ವೇಸಾಮಾನ್ಯವಾಯಿತು. ಈ ಚಿತ್ರದಲ್ಲಿ ಬಾಲಕ ಕೃಷ್ಣನು ಮೊಸರಿನ ನಿಲುವನ್ನು ಕೋಲನಿಂದ ಮುಟ್ಟುತ್ತಿರುವಂತೆ ಬಿಂಬಿತವಾಗಿದ್ದಾನೆ. ನಿಲುವಿನಲ್ಲಿ ಮಡಿಕೆಯು ಕಾಣುವುದಿಲ್ಲ. ಆದರೂ ಅದನ್ನು ಕಲ್ಪಿಸಬಹುದು. ಕೃಷ್ಣನು ಚಿನ್ನಾಭರಣಗಳಿಂದ ಭೂಷಿತನಾಗಿದ್ದು, ಶ್ವೇತವರ್ಣದ ಸಂಚಿಗೆಯ

ಮೈಬಣ್ಣವನ್ನು ಹೊಂದಿರುವನು. ಇಲ್ಲಿ ಕಲಾಕಾರನು ವಿಶೇಷ ಮಂಟಪವನ್ನು ಚಿತ್ರಿಸಿದ್ದು ಬಾವುಟ ಹಾಗೂ ಬಾಳೆ ಗಿಡಗಳಿಂದ ಅಲಂಕರಿಸಲಾಗಿದೆ. ಮಂಟಪದ ಹಿನ್ನೆಲೆ ನೀಲಿಬಣ್ಣದಿಂದ ಆವೃತ್ತವಾಗಿದೆ.

ಚಿತ್ರದ ಸುತ್ತಲೂ ಹೂವು, ಎಲೆಗಳಿಂದ ಕೂಡಿದ ನೈಸರ್ಗಿಕ ಚಿತ್ರವಿನ್ಯಾಸವು ರಚನೆಗೊಂಡಿದ್ದು, ಕೆಂಪು, ಹಸಿರು, ನೀಲಿ, ಕಪ್ಪು ಹಾಗೂ ಚಿನ್ನದ ಮೆರಗು ಬಣ್ಣಗಳು ಅನಾವರಣಗೊಂಡಿವೆ. ಚಿತ್ರದಲ್ಲಿ ಜ್ಯಾಮಿತಿಕ ಹಾಗೂ ನೈಸರ್ಗಿಕ ಚಿತ್ರವಿನ್ಯಾಸಗಳು ಸರಳವಾಗಿ ಮೂಡಿಬಂದಿವೆ.

**ಚಿತ್ರಸಂಖ್ಯೆ ೧೯, ೨೦ ಗೋಪಿ ಕನ್ಯೆಯರ ಉಡುಪುಗಳನ್ನು ಕದ್ದಿದ್ದು**

ವೈದಿಕ ನಾಗರಿಕತೆಯ ಪ್ರಕಾರ ಹತ್ತರಿಂದ ಹದಿನಾಲ್ಕನೆಯ ವಯಸ್ಸಿನ ಕನ್ಯೆಯರು ಒಳ್ಳೆಯ ಗಂಡನನ್ನು ಪಡೆಯಲು ಶಿವನನ್ನಾಗಲೀ ದುರ್ಗೆಯನ್ನಾಗಲೀ ಪೂಜೆ ಮಾಡುವುದು ಪದ್ಧತಿ. ಆದರೆ ವೃಂದಾವನದ ಗೋಪಿಕನ್ಯೆಯರು ಆಗಲೇ ಕೃಷ್ಣನ ಸೌಂದರ್ಯದಿಂದ ಆಕರ್ಷಿತರಾಗಿದ್ದರು.[೧೦] ಪ್ರತಿನಿತ್ಯ ವೃಂದಾದನದ ಸ್ತ್ರೀಯರು ಪ್ರಾತಃಕಾಲದಲ್ಲಿ ಯಮುನಾ ನದಿಗೆ ಸ್ನಾನ ಮಾಡಲು ಹೋಗುತ್ತಿದ್ದರು. ಸ್ನಾನ ಮಾಡುವಾಗ ಸಂಪೂರ್ಣ ಬೆತ್ತಲೆಯಾಗಿ ನೀರಿಗಳಿಯುತ್ತಿದ್ದರು. ಈ ಸಂದರ್ಭದಲ್ಲಿ ಕೃಷ್ಣನು ಇವರ ಉಡುಪುಗಳನ್ನು ಕದ್ದು ಹತ್ತಿರದ ಮರವೇರಿ ಕುಳಿತು ಗೋಪಿಕಾ ಕನ್ಯೆಯರನ್ನು ಪರಿಪರಿಯಾಗಿ ಕಾಡಿಸುತ್ತಿದ್ದನು. ಗೋಪಿಕನ್ಯೆಯರು ನೀರಿನಿಂದ ಹೊರಬರಲಾರದೇ ಅವನನ್ನು ಪರಿಪರಿಯಾಗಿ ಬೇಡಿ ಬಟ್ಟೆಗಳನ್ನು ಪಡೆಯುತ್ತಿದ್ದರು. ಈ ಪ್ರಸಂಗವನ್ನು ವ್ಯಕ್ತಪಡಿಸುವಂತೆ ಗಾಜಿನ ಚಿತ್ರಗಳು ಇಲ್ಲಿ ರಚನೆಗೊಂಡಿವೆ. (ಗೋಪಕನ್ಯೆಯರು ಕೃಷ್ಣನು ತಮ್ಮ ಗಂಡನಾಗಬೇಕೆಂಬ ಹಂಬಲವಿತ್ತು.)

ಚಿತ್ರ ಸಂಖ್ಯೆ ೧೯ ರಲ್ಲಿ ಐವರು ಗೋಪಿಕಾ ಕನ್ಯೆಯರು ಸಂಪೂರ್ಣ ಬೆತ್ತಲಾಗಿದ್ದು, ಒಬ್ಬಳು ಮರವನ್ನೇರುತ್ತಿರುವಳು. ಇನ್ನುಳಿದವರು ಕೃಷ್ಣನಿಗೆ ಕೈಮುಗಿದು ಬಟ್ಟೆಗಳನ್ನು ಕೊಡು ಎಂದು ಅಂಗಾಲಾಚುತ್ತಿರುವರು. ಇವರು ಸಂಪಿಗೆಯ ಮೈಬಣ್ಣವನ್ನು ಹೊಂದಿದ್ದು, ರೇಖಾ ವಿನ್ಯಾಸದಿಂದ ಸ್ತ್ರೀ ಸಹಜ ಲಜ್ಜೆತನ ಹಾಗೂ ಭಕ್ತಿಭಾವವು ಮೂಡಿಬಂದಿದೆ. ಕೃಷ್ಣನು ಹೂವು ಎಲೆಗಳಿಂದ ನಳನಳಿಸುತ್ತಿರುವ ಮರದ ಮೇಲೆ ಕುಳಿತು ಅವರ ನಗ್ನ ದೇಹ ಸೌಂದರ್ಯವನ್ನು ನೋಡುತ್ತಿರುವನು. ಇವನು ನೀಲಿ ಮೈಬಣ್ಣ, ಶ್ವೇತ ಧೋತಿ, ಕೆಂಪುದುಪ್ಪಟ, ಚಿಣ್ಣಾಭರಣಗಳಿಂದ ಭೂಷಿತನಾಗಿದ್ದಾನೆ. ಚಿತ್ರದ ಕೆಳಗೆ ಯಮುನೆಯನ್ನು ಚಿತ್ರಿಸಿದ್ದು ಅಲ್ಲಲ್ಲಿ ತಾವರೆಗಳ ಸಂಯೋಜನೆ ವ್ಯಕ್ತಗೊಂಡಿದೆ. ಚಿತ್ರವು ರೇಖೆ, ವರ್ಣಗಳಿಂದ ಭಾವಪೂರ್ಣವಾಗಿ ಮೂಡಿಬಂದಿದೆ. ಚಿತ್ರದ ಸುತ್ತಲೂ ನಕ್ಷೆಗಳು ರಚನೆಗೊಂಡಿವೆ.

ಚಿತ್ರಸಂಖ್ಯೆ ೨೦ ರಲ್ಲಿ ಯುವ ಕೃಷ್ಣನು ಮರದ ಮೇಲೆ ಕುಳಿತಿದ್ದು, ಮರವು ಎಲೆ ಹೂವುಗಳಿಂದ ಕಂಗೊಳಿಸುತ್ತಿದೆ. ಅಲ್ಲಲ್ಲಿ ಗೋಪಿಯರ ಬಟ್ಟೆಗಳು ಸಂಯೋಜನೆಗೊಂಡಿವೆ. ವಸ್ತ್ರಾಭರಣಗಳಿಂದ ಕೃಷ್ಣನು ವಿನೋಧ ಭಾವವನ್ನು ವ್ಯಕ್ತಪಡಿಸುತ್ತಿದ್ದಾನೆ. ಮರದ ಕೆಳಗೆ ಅರೆನಗ್ನರಾದ ಗೋಪಿಕಾ ಸ್ತ್ರೀಯರು ತಮ್ಮ ಬಟ್ಟೆಗಳನ್ನು ಕೊಡುವಂತೆ ಕೃಷ್ಣನಲ್ಲಿ ಮೊರೆಯಿಡುತ್ತಿದ್ದಾರೆ. ಇಲ್ಲಿ

---

೧೦. ಶ್ರೀ ಶ್ರೀಮದ್ ಎ.ಸಿ.ಭಕ್ತಿವೇದಾಂತ ಸ್ವಾಮಿ ; ಕೃಷ್ಣ ಪುಟ ೧೭೯

ಸ್ತ್ರೀಯರ ಉಡುಪುಗಳು ಕೆಂಪು ಹಾಗೂ ಹಳದಿ ಬಣ್ಣಗಳ ಪಟ್ಟಿಕೆಗಳಿಂದ ಚಿತ್ರ ವಿನ್ಯಾಸವನ್ನು ಹೊಂದಿವೆ. ಚಿತ್ರದ ಕೆಳಗೆ ಯಮುನಾ ನದಿಯು ಹರಿಯುತ್ತಿದ್ದು, ಕೆಂಪು ತಾವರೆಗಳಿಂದ ಸುಂದರವಾಗಿ ಮೂಡಿಬಂದಿದೆ. ಹಿನ್ನೆಲೆಯಲ್ಲಿ ತಿಳಿಹಸಿರು ಬಣ್ಣದಿಂದ ಲೇಪನವಾಗಿದೆ. ಇಲ್ಲಿ ರೇಖೆಗಿಂತ ಬೆಳಕು ನೆರಳುಗಳ ಕಲ್ಪನೆಯನ್ನು ತರಲಾಗಿದೆ. ಇಲ್ಲಿ ಸ್ತ್ರೀಯರು ನಗ್ನ ರೂಪದಲ್ಲಿದ್ದರೂ ಕೃಷ್ಣನ ಭಕ್ತಿ ಪ್ರೇಮವು ಪ್ರಕಟವಾಗುತ್ತದೆ.

**ಚಿತ್ರಸಂಖ್ಯೆ ೭೧, ೭೨, ೭೩, ೭೪, ೭೫, ೭೬, ೭೭, ೭೮ ವೇಣುಗೋಪಾಲ**

ಕೃಷ್ಣನು ಗೋಕುಲದಲ್ಲಿ ಬೆಳೆಯುತ್ತಿರುವಾಗ ತನ್ನ ಬಾಲ್ಯಾವಸ್ಥೆಯನ್ನು ಕಳೆದು ಯೌವ್ವನಕ್ಕೆ ಕಾಲಿಡುತ್ತಿದ್ದ ಸಂದರ್ಭದಲ್ಲಿ ವಜ್ರಪುರಿಯ ದೊರೆ ರಾಧೆಯ ಚಲುವಿಗೆ ಸೋತು ಅವಳ' ಪ್ರೇಮ ಪಾಶದಲ್ಲಿ ಮುಳುಗುತ್ತಾನೆ. ಅವಳು ಒಬ್ಬ ಗ್ರಹಸ್ಥ ಸ್ತ್ರೀಯಾಗಿದ್ದರೂ ಆಕೆಯ ಚಲುವಿಗೆ ಹಾಗೂ ಪ್ರೇಮಕ್ಕೆ ಹುಚ್ಚನಾಗುತ್ತಾನೆ. ಇವನಲ್ಲಿ ಒಂದು ಅದ್ಭೂತವಾದ ಕಲೆಯಿತ್ತು. ಅದ್ಭುತವಾಗಿ ಕೊಳಲನ್ನು ನುಡಿಸುತ್ತಿದ್ದನು. ಎಂಥವರೂ ಕೂಡಾ ಇವನ ಕೊಳಲುನಾದಕ್ಕೆ ತಲೆದೂಗುತ್ತಿದ್ದರು. ಮನುಷ್ಯರಷ್ಟೇ ಅಲ್ಲ, ಇಡೀ ಗೋಕುಲದ ಪರಿಸರವೇ ತೂಗುತ್ತಿತ್ತು. ದಿನಾಲು ಗೋವುಗಳನ್ನು ಮೇಯಿಸಲು ಯಮುನೆಯ ತೀರಕ್ಕೆ ಹೋಗುತ್ತಿದ್ದನು. ಅವನ್ನು ಅಲ್ಲಿ ಮೇಯಲು ಬಿಟ್ಟು ಇಂಪಾಗಿ ಕೊಳಲನ್ನು ನುಡಿಸುತ್ತಿದ್ದನು. ಇತರ ಗೋಪಬಾಲಕರನ್ನು ಆನಂದಿಸುತ್ತಿದ್ದನು. ಕೊಳಲಿನ ಕುರಿತು ಕೃಷ್ಣ ಕಥೆಯಲ್ಲಿ ಸಾಕಷ್ಟು ಪ್ರಸ್ತಾಪಗೊಂಡಿದೆ.

ಇಲ್ಲಿ ರಚನೆಗೊಂಡಿರುವ ಗಾಜಿನ ಚಿತ್ರಗಳಲ್ಲಿ ಕೃಷ್ಣನು ವೇಣು ನುಡಿಸುತ್ತಿರುವ ದೃಶ್ಯವು ವ್ಯಕ್ತಗೊಂಡಿದೆ. ಅದಕ್ಕೆ ಸೂಕ್ತ ಪರಿಸರವನ್ನು, ಸಮಯ ಸಂದರ್ಭವನ್ನು ಕಲಾವಿದನು ಕಲ್ಪಿಸಿದ್ದಾನೆ. ಚಿತ್ರಸಂಖ್ಯೆ ೭೧ ರಲ್ಲಿ ಕೃಷ್ಣನು ಕದಂಬ ಮರದ ಕೆಳಗೆ ನಿಂತು ಕೊಳಲನ್ನು ನುಡಿಸುತ್ತಿದ್ದು, ವಸ್ತ್ರಾಭರಣಗಳಿಂದ ಭೂಷಿತನಾಗಿದ್ದಾನೆ. ವಿಶಿಷ್ಟ ಹೂವುಗಳ ಮಾಲೆ, ಕೆಂಪು ಬಣ್ಣದ ಉತ್ತರೀಯ, ಕೆಂಪು ದುಪ್ಪಟವನ್ನು ಧರಿಸಿದ್ದು, ಜ್ಯಾಮಿತಿಕ ನಕ್ಷೆಗಳ ಚಿತ್ರವಿನ್ಯಾಸಗಳು ಒಡಮೂಡಿವೆ. ಹಿನ್ನೆಲೆಯಲ್ಲಿ ಇಬ್ಬರೂ ಗೋಪಿಕಾ ಸ್ತ್ರೀಯರು ಮುತ್ತಿನ ಸರವನ್ನು ಹಿಡಿದು ನಿಂತಿರುವರು. ಇವರ ವೇಷಭೂಷಣಗಳು, ಆಭರಣ ವಿನ್ಯಾಸಗಳು ಅವರ ರೂಪಲಕ್ಷಣಗಳು ಒಬ್ಬ ಆದರ್ಶ ಗ್ರಹಿಣಿಕಯಂತೆ ಬಿಂಬಿತವಾಗಿದ್ದಾರೆ.

ಕೃಷ್ಣನ ಕೊಳಲ ಧ್ವನಿಗೆ ಹಸು ತಲೆದೂಗಿ ಅವನ ದಾಪವನ್ನು ನೆಕ್ಕುತ್ತಿದೆ. ಇನ್ನುಳಿದ ಹಸುಗಳು ಅವನು ನುಡಿಸುವ ಭಂಗಿಯನ್ನೇ ಗಮನಿಸುತ್ತಿವೆ. ಹಸುಗಳ ಮೈಬಣ್ಣದಲ್ಲಿ ವರ್ಣಮಯ ಪಟ್ಟಿಕೆಗಳಿದ್ದು, ಅವುಗಳ ಚಲನೆಯಲ್ಲಿ ಜೀವಂತಿಕೆ ಪ್ರಕಟಗೊಂಡಿದೆ. ಕದಂಬ ಮರವು ಕೆಂಪು ಹೂವುಗಳಿಂದ ಕಂಗೊಳಿಸುತ್ತಿದೆ. ಚಿತ್ರವು ರೇಖೆಗಳಿಂದ ಅಲಂಕಾರಿಕ ಚಿತ್ರವಿನ್ಯಾಸಗಳು ಬಿಂಬಿತವಾಗಿವೆ. ಹಿನ್ನೆಲೆಯು ನೀಲಿ ಬಣ್ಣದಿಂದ ಕೂಡಿದ್ದು, ಕಂದುಗೆಂಪು ಭೂದೃಶ್ಯವು ಅನಾವರಣಗೊಂಡಿದೆ.

ಚಿತ್ರ ೭೨ ಇಲ್ಲಿ ಕೃಷ್ಣನ ದೇಹದ ರಚನೆಯಲ್ಲಿ ದಷ್ಟಪುಷ್ಟತೆ ಎದ್ದು ತೋರುತ್ತಿದೆ. ಆಭರಣಗಳು, ದುಪ್ಪಟಗಳಲ್ಲಿ ಚಿತ್ರವಿನ್ಯಾಗಳು ಹಾಗೂ ಅಂಚುಗಳು ಅಲಂಕೃತವಾಗಿವೆ. ಗೋಪಿಕೆಯ ಉಡುಪು ಶ್ವೇತವರ್ಣದಿಂದ ಕೂಡಿದ್ದು, ನಯಗಾರಿಕೆ ಪ್ರಕಟಗೊಂಡಿಲ್ಲ. ಇವರ ಹಸಿರು ಬಣ್ಣದ

ರವಿಕೆಗಳು ಚಿತ್ರಾಲಂಕೃತಗೊಂಡಿವೆ. ಕದಂಬ ಮರವು ಚಿಕ್ಕ ಚಿಕ್ಕ ರಂಬೆಗಳಿಂದ (ಕವಲು) ಚಿಕ್ಕ ಚಿಕ್ಕ ಎಲೆಗಳ ಸಮೂಹದಿಂದ ರಚನೆಗೊಂಡಿದೆ. ಮರದ ರೆಂಬೆಗಳಲ್ಲಿ ಗಿಳಿಗಳಿದ್ದು ಅವು ಶ್ವೇತವರ್ಣಗಳಿಂದ ರೂಪಗೊಂಡಿವೆ. ಚಿತ್ರದಲ್ಲಿ ರೇಖೆ, ವರ್ಣಗಳಿಂದ ರಚನೆಗೊಂಡ ಆಕೃತಿಗಳ ದೈಹಿಕ ಲಕ್ಷಣಗಳು ಜೀವಂತಿಕೆಯಿಂದ ಅಭಿವ್ಯಕ್ತಗೊಂಡಿವೆ.

ಚಿತ್ರ ೭೩ ರಲ್ಲಿ ವೇಣುಧಾರಿಯಾದ ಕೃಷ್ಣನು ನೀಲಿ ಹಾಗೂ ಬಿಳಿ ವರ್ಣಗಳಿಂದ ಸಂಯೋಜನೆಗೊಂಡಿರುವನು. ಈ ಚಿತ್ರವು ಚಿತ್ರ ೭೨ ರಂತೆ ಪ್ರತಿಕೃತಿಗೊಂಡಿದೆ. ಕೃಷ್ಣನುಧರಿಸಿದ ಬಟ್ಟೆಗಳಲ್ಲಿ ದೊಡ್ಡ ದೊಡ್ಡ ಚಿತ್ರವಿನ್ಯಾಸಗಳಿವೆ. ಇಲ್ಲಿ ಗೋಪಿಮಹಿಳೆರಿಬ್ಬರು ಬೀಸಣಿಕೆಯನ್ನು ಹಿಡಿದಿರುವರು. ಇಲ್ಲಿ ಕೆಂಪು ವರ್ಣವು ಪ್ರಧಾನವಾಗಿ ಮೂಡಿಬಂದಿದೆ. ಹಸುವು ಬಿಳಿವರ್ಣದಿಂದ ರಚನೆಗೊಂಡಿದ್ದು, ಇನ್ನುಳಿದಂತೆ ಚಿತ್ರವು ಹಿಂದಿನ ಚಿತ್ರದಂತೆ ಯಥಾವತ್ತಾಗಿ ವರ್ಣನೆಗೊಂಡಿದೆ. ಚಿತ್ರದ ಹಿನ್ನೆಲೆಯನ್ನು ಕಪ್ಪು ಬಣ್ಣದಿಂದ ಲೇಪನ ಮಾಡಿದ್ದು, ಚಿತ್ರ ಸಮೂಹವು ಸ್ಪಷ್ಟವಾಗಿ ಆಕರ್ಷಕವಾಗಿ ಪ್ರಕಟಗೊಂಡಿವೆ.

ಚಿತ್ರ ೭೪ ಇಲ್ಲಿ ಕೃಷ್ಣನು ವಿಷ್ಣು ಸ್ವರೂಪಿಯಂತೆ ಚತುರ್ಭುಜಧಾರಿಯಾಗಿದ್ದು, ಎರಡು ಕೈಗಳಲ್ಲಿ ಶಂಖ, ಚಕ್ರ ಹೊಂದಿದ್ದು, ಎರಡು ಕೈಗಳಿಂದ ಕೊಳಲನ್ನು ನುಡಿಸುತ್ತಿರುವನು. ಈ ಚಿತ್ರ ಸಮೂಹವು ಚೋಳ ಶಿಲ್ಪಗಳ ರೂಪವನ್ನು ಹೋಲುತ್ತಿದೆ. ಇಲ್ಲಿ ಎಲ್ಲರೂ ಕಿರೀಟಾಭರಣಗಳನ್ನು ಹೊಂದಿದ್ದು, ವಿಶೇಷ ಪುಷ್ಪಮಾಲೆಗಳನ್ನು ಧರಿಸಿರುವರು. ವಸ್ತ್ರಾಭರಣಗಳಲ್ಲಿ ಅಲಂಕರಣ ವೈಭವಿಕರಣಗೊಂಡಿದೆ. ಕದಂಬ ಮರವು ಕೆಂಪು ಬಣ್ಣದಿಂದ ಆಕರ್ಷಕ ರೆಂಬೆಗಳ ಸಮೂಹದಿಂದ ರೂಪುಗೊಂಡಿದೆ. ಇಲ್ಲಿಯೂ ಸಹ ಎರಡು ಶುಕಪಕ್ಷಿಗಳು ರಚನೆಗೊಂಡಿವೆ. ಕದಂಬದ ಹೊಂಬಣ್ಣವು ಶುಕಪಕ್ಷಿಗಳ ಮೇಲೆ ಹರಡಿ ಅವು ಕೂಡಾ ಕೆಂಪು ಬಣ್ಣದಿಂದ ಹೊಳೆಯುತ್ತಿವೆ. ಇಲ್ಲಿ ಗೋಪಸ್ತ್ರೀಯರು ಕೈಯಲ್ಲಿ ಲತೆಯನ್ನು ಹಿಡಿದು ಕೊಳಲಿನ ನಾದದ ಜೊತೆಗೆ ಕೃಷ್ಣಪ್ರೇಮವನ್ನು ಆಲಾಪನೆ ಮಾಡುತ್ತಿರುವಂತೆ ರೂಪಿತಗೊಂಡಿದ್ದಾರೆ. ಗೋವು ಕೂಡಾ ಕೊಳಲಿನ ನಾದಕ್ಕೆ ತಲೆದೂಗಿದೆ. ಹಿನ್ನೆಲೆ ಕಪ್ಪು ವರ್ಣದಿಂದ ಲೇಪನಗೊಂಡಿದ್ದು, ಚಿತ್ರವು ಆಕರ್ಷಕವಾಗಿ ನೋಡುಗರನ್ನು ಗಮನಸೆಳೆಯುತ್ತಿದೆ.

ಚಿತ್ರ ೭೫ ಇಲ್ಲಿ ಕೃಷ್ಣನು ಬಾಲಕನಾಗಿದ್ದು, ಹಸಿರು ಉತ್ತರೀಯವನ್ನು ಹೊಂದಿದ್ದಾನೆ. ಅದರ ಅಂಚು ಚಿತ್ರವಿನ್ಯಾಸಗಳಿಂದ ರಚನೆಗೊಂಡಿದೆ. ಗೋವು ಚಲನೆಯಿಂದ ಕೂಡಿದ್ದು, ಮೈಮೇಲೆ ಕಪ್ಪು ಪಟ್ಟೆಗಳು ಕಂಡು ಬರುತ್ತಿವೆ. ಗೋಪಿಯು ಚಾಮರವನ್ನು ಬೀಸುತ್ತಿದ್ದು, ಚಿತ್ರಾಲಂಕೃತ ವಿನ್ಯಾಸಗಳ ವಸ್ತ್ರಾಭರಣಗಳನ್ನು ಹೊಂದಿರುವಳು. ಕದಂಬ ಮರವೂ ಕೂಡಾ ಎಲೆ ಹೂವುಗಳಿಂದ ಅಲಂಕಾರಯುತವಾಗಿ ಮೂಡಿಬಂದಿದೆ. ಹಿನ್ನೆಲೆಯು ಕೇಸರಿ ಬಣ್ಣವನ್ನು ಹೊಂದಿದ್ದು, ನೆಲವು ನೀಲಿಮಿಶ್ರಿತ ಹಸಿರುಬಣ್ಣದಿಂದ ಲೇಪನಗೊಂಡಿದೆ. ಬಾಲಕ ಕೃಷ್ಣನ ಶರೀರ ರಚನೆಯಲ್ಲಿ ನಯಗಾರಿಕೆ ಮೂಡಿಬರದಿದ್ದರೂ ಆಕರ್ಷಕವಾಗಿ ವ್ಯಕ್ತಗೊಂಡಿದೆ.

ಚಿತ್ರ ೭೬ ಇಲ್ಲಿ ರಚನೆಗೊಂಡಿರುವ ಕದಂಬ ಮರವು ಎಲೆಗಳಿಂದ ದಟ್ಟವಾಗಿ ಹರಡಿವೆ. ನೀಲಿ ಕಾಂಡವನ್ನು ಕೆಂಪು ಹೂವುಗಳನ್ನು ಇಲ್ಲಿ ರಚಿಸಲಾಗಿದೆ. ಕೃಷ್ಣನ ದೇಹದ

ಬಾಹ್ಯ ರೇಖೆಯ ಸಮೂಹವು ಶಕ್ತಿಯುತವಾಗಿ ಮೂಡಿಬಂದಿವೆ. ಉತ್ತರಿಯ ಬಣ್ಣವು ಹಸಿರು ಬಣ್ಣದಿಂದ ಕೂಡಿದ್ದು, ಸರಳತೆ ಒಡಮೂಡಿದೆ. ಕೃಷ್ಣನ ಮೈಬಣ್ಣವು ತಿಳಿಗುಲಾಬಿ ಹಾಗೂ ಬಿಳಿವರ್ಣಗಳಿಂದ ಸಮ್ಮಿಶ್ರಗೊಂಡಿವೆ. ಗೋವು ಬಿಳಿವರ್ಣದಿಂದ ರಚನೆಗೊಂಡಿದ್ದು, ರೇಖಾ ಸ್ಪಷ್ಟತೆಯಿಂದ ಬೇರ್ಪಟ್ಟಿದೆ.

ಗೋಪಾಲಕ ವ್ಯಕ್ತಿಯು ಕರಿಕಂಬಳಿಯನ್ನು ಹೊಂದಿದ್ದು, ಮೈಮೇಲೆ ತುಂಡು ಲಂಗೋಟಿಯನ್ನು ಧರಿಸಿರುವನು. ಇವನು ಕೃಷ್ಣನ ಕೊಳಲುನಾದಕ್ಕೆ ಭಾವಪರವಶನಾಗಿ ಭಕ್ತಿಯಿಂದ ಕೈಮುಗಿದು ನಿಂತಿರುವಂತೆ ಕಲಾವಿದನು ಸಂಯೋಜಿಸಿದ್ದಾನೆ. ಗೋವು ಕೂಡಾ ಕೃಷ್ಣ ಪಾದವನ್ನು ನೆಕ್ಕುತ್ತಿದೆ. ಚಿತ್ರದ ಹಿನ್ನೆಲೆ ಕೆಂಪು ಬಣ್ಣದಿಂದ ಸಂಯೋಜನೆಗೊಂಡಿದ್ದು, ಅಸಂಖ್ಯಾತ ಪುಷ್ಪಗಳನ್ನು ರಚಿಸಿದ್ದು, ರೇಖೆ ಹಾಗೂ ವರ್ಣ ಸಂಯೋಜನೆಯಿಂದ ಉತ್ತಮವಾಗಿ ಪ್ರಕಟಗೊಂಡಿದೆ.

ಚಿತ್ರ ೭೭ ಈ ಚಿತ್ರದಲ್ಲಿ ಅತ್ಯಂತ ಸಾಂಪ್ರದಾಯಿಕ ಉಡುಗೆ ತೊಡುಗೆಯಿಂದ ಭೂಷಿತನಾದ ಕೃಷ್ಣನು ಆಕರ್ಷಕ ಮೈಕಟ್ಟನ್ನು ಹೊಂದಿರುವನು. ಇಲ್ಲಿ ವರ್ಣಗಾರಿಕೆಯೂ ಉತ್ಕೃಷ್ಟವಾಗಿ ವ್ಯಕ್ತಗೊಂಡಿದ್ದು, ಉಡುಪುಗಳ ನೀರಿಗೆಗಳಲ್ಲಿ ನೈಜತೆ ಹಾಗೂ ಏರಿಳಿತಗಳು ವ್ಯಕ್ತಗೊಂಡಿವೆ. ಉಡುಪುಗಳ ಅಂಚು ಸೂಕ್ಷ್ಮರೇಖೆ, ಬಿಂದುಗಳಿಂದ ಚಿತ್ರಿತಗೊಂಡಿವೆ. ಕಪ್ಪು ಜುಟ್ಟು ಅದಕ್ಕೆ ಆಭರಣಗಳ ಅಲಂಕರಣ, ಕರ್ಣಾಭರಣ, ವಿಶೇಷ ಪುಷ್ಪಗಳ ಮಾಲೆಯು ಭೂಷಣಗೊಂಡಿದೆ. ಹಸುವಿನ ಚಿತ್ರದಲ್ಲಿ ಜೀವಂತಿಕೆ ವ್ಯಕ್ತಗೊಂಡಿದ್ದು, ಕೊರಳಿಗೆ ಆಭರಣಗಳಿಂದ ಲಂಕರಿಸಲಾಗಿದೆ. ಚಿತ್ರದಲ್ಲಿ ರೇಖಾ ಸೂಕ್ಷ್ಮತೆ, ವರ್ಣಗಳ ಉಜ್ವಲತೆ ಹಾಗೂ ಭಾವನಿರೂಪಣೆಯು ಉತ್ಕೃಷ್ಟವಾಗಿ ಅಭಿವ್ಯಕ್ತಗೊಂಡಿದೆ.

ಚಿತ್ರ ೭೮ ಇದು ಆಧುನಿಕ ಶೈಲಿಯ ರಚನಾವಿಧಾನವನ್ನು ಹೊಂದಿದ್ದು, ಹಿನ್ನೆಲೆಯಲ್ಲಿ ಸುಂದರವಾಗಿ ಪ್ರಕೃತಿಯೂ ಒಡಮೂಡಿದೆ. ಬೆಳಕು ನೆರಳುಗಳ ವಿವರಣೆಗಳಿಂದ ರಚನೆಗೊಂಡಿರುವ ಈ ಚಿತ್ರದಲ್ಲಿ ಯಥಾದರ್ಶನದ ಪರಿಕಲ್ಪನೆಯು ವಾಸ್ತವತೆಯಿಂದ ಪ್ರಕಟಗೊಂಡಿದೆ. ಕೃಷ್ಣನ ಕಿರೀಟದ ಮೇಲೆ ಮೂರು ನವಿಲುಗರಿಗಳು, ಇಳಿಬಿದ್ದ ಕೇಶವಿನ್ಯಾಸವು, ನೀಳವಾದ ದೇಹ ರಚನೆಯನ್ನು ಹೊಂದಿರುವನು. ಗೋವು ಶ್ವೇತವರ್ಣದಿಂದ ಕೂಡಿದ್ದು, ಕೊಳಲಿನ ನಾದದಲ್ಲಿ ತಲೆದೂಗುತ್ತಿದೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ನೈಜ ರೀತಿಯ ವಿವರಗಳನ್ನು ಪ್ರಕಟಪಡಿಸುತ್ತಿದೆ.

**ಚಿತ್ರಸಂಖ್ಯೆ ೭೯, ೮೦, ೮೧, ೮೨ ಕೃಷ್ಣ ಗೋಪಿಕೆ**

ಕೃಷ್ಣನ ಬಾಲ್ಯದಲ್ಲಿನ ಕೀಟಲೆಗಳು, ವಿನೋದಗಳು ನಾನಾವಿಧದಲ್ಲಿ ಪ್ರಸ್ತಾಪವಾದುದನ್ನು ಕೃಷ್ಣ ಚರಿತ್ರೆಯಲ್ಲಿ ಕಾಣುತ್ತೇವೆ. ಕೃಷ್ಣನು ನಂದ ಯಶೋದೆಯರ ಪ್ರೇಮ ಪುತ್ರನಾಗಿದ್ದನು. ಅಲ್ಲದೇ ಗೋಕುಲದ ಸ್ತ್ರೀ ಪುರುಷರಿಗೂ ಪ್ರೀಯನಾಗಿದ್ದನು. ಇಲ್ಲಿ ಪ್ರಕಟಗೊಂಡ ಗಾಜಿನ ಚಿತ್ರಗಳಲ್ಲಿ ಇಂಥ ವಿನೋದ ಪ್ರಸಂಗಗಳು ಕಲ್ಪಿತಗೊಂಡಿವೆ.

ಚಿತ್ರ ೭೯, ೮೦ ರಲ್ಲಿ ಬಾಲಕ ಕೃಷ್ಣನು ಒರ್ವ ಗೋಪ ಸ್ತ್ರೀಯ ಜಡೆಯನ್ನು ಹಿಡಿದುಕೊಂಡು ವಿನೋದ ಮಾಡುತ್ತಿರುವನು. ಇಲ್ಲಿ ಸ್ತ್ರೀಯು ನೃತ್ಯಮಾಡುತ್ತಿರುವಳು. ಎರಡೂ ಚಿತ್ರಗಳು ಒಂದೇ ಆಶಯವನ್ನು ಹೊಂದಿವೆ. ಗೋಪ ಸ್ತ್ರೀಯು ಸೀರೆ ಕುಪ್ಪಸಗಳಿಂದ

ಭೂಷಿತಳಾಗಿದ್ದಾದ್ದು, ಒಬ್ಬಳು ವಿಶಿಷ್ಟವಾಗಿ ಹೆಣೆದ ನೀಳ ಜಡೆಯನ್ನು ಹೊಂದಿದ್ದು, ಇನ್ನೊಬ್ಬಳು ಜೋಡು ಜಡೆಯನ್ನು ಹೊಂದಿರುವಳು. ಚಿತ್ರ ೭೯ ರಲ್ಲಿ ಸ್ತ್ರೀಯ ಅಲಂಕರಣ ಸ್ವಲ್ಪ ಓರಣಗೊಂಡಿದೆ. ಕಿವಿಯಲ್ಲಿ ಕರ್ಣಾಭರಣಗಳು. ಮುತ್ತಿನ ಸರ, ಒಡ್ಯಾಣಗಳಲ್ಲಿ ವೈಭವದ ಅಲಂಕಾರ, ಕಾಲಲ್ಲಿ ಚಿನ್ನದ ತೋಡೆಗಳು ಅದರಲ್ಲಿ ಚಿಕ್ಕ ಚಿಕ್ಕ ಗೆಜ್ಜೆಗಳು ಉತ್ತಮವಾಗಿ ಮೂಡಿಬಂದಿದೆ. ಚಿತ್ರ ೮೦ ರಲ್ಲಿ ಸೀರೆಯ ವಿನ್ಯಾಸದಲ್ಲಿ ಸರಳತೆಯ ನಕ್ಷೆಗಳು ಆಭರಣಗಳು ಕಂಡು ಬರುತ್ತಿವೆ. ಎರಡೂ ಚಿತ್ರಗಳಲ್ಲಿ ಕೃಷ್ಣನ ಅಲಂಕರಣ ಸೂಕ್ಷ್ಮರೇಖೆಗಳಿಂದ ನಾವರಣಗೊಂಡಿವೆ. ಮುಖದಲ್ಲಿ ತುಂಟತನ ಎದ್ದು ತೋರುತ್ತಿದೆ. ಚಿತ್ರಗಳ ಹಿನ್ನೆಲೆಯಲ್ಲಿ ಕೆಂಪು ಹಾಗೂ ನೀಲಿ ಬಣ್ಣಗಳು ಲೇಪನಗೊಂಡಿದ್ದು, ಪುಷ್ಪಗಳಿಂದ ಆವೃತ್ತವಾದ ನೆಲಹಾಸು ಹಳದಿ ಹಾಗೂ ನೀಲಿ ಮಿಶ್ರಿತ ಕೆಂಪು ವರ್ಣಗಳು ಸಂಯೋಜನೆಗೊಂಡಿವೆ. ರೇಖೆ, ವರ್ಣ ಹಾಗೂ ಅಲಂಕರಣಗಳಿಂದ ಚಿತ್ರಗಳು ಉತ್ತಮ ಭಾವನೆಗಳನ್ನು ಪ್ರಕಟಪಡಿಸುತ್ತಿವೆ.

ಚಿತ್ರ ೮೧, ೮೨ ಎರಡೂ ಚಿತ್ರಗಳು ಒಂದೇ ಆಶಯವನ್ನು ಹೊಂದಿದ್ದು, ಇಲ್ಲಿ ಕೃಷ್ಣನು ಪುಂಗಿಯನ್ನು ಊದುತ್ತಿದ್ದು, ಒರ್ವ ಗೋಪಿಕಾ ಕನ್ಯೆಯೂ ಪುಂಗಿಯನ್ನು ಊದುತ್ತ ನೃತ್ಯಮಾಡುತ್ತಿರುವಳು. ಚಿತ್ರದ ಮುಂಭಾಗದಲ್ಲಿ ನಾಗರ ಹಾವುಗಳನ್ನು ಪುಂಗಿಯ ನಾದಕ್ಕೆ ಹೆಡೆ ಎತ್ತಿ ಆಡುತ್ತಿರುವಂತೆ ಸಂಯೋಜಿಸಲಾಗಿದೆ. ಮತ್ತು ಅಲ್ಲಿ ಬುಟ್ಟಿಗಳನ್ನು ಚಿತ್ರಿಸಲಾಗಿದೆ. ಗೋಪಿಕಾ ಕನ್ಯೆಯು ನೆಗೆಯುತ್ತಿರುವ ಭಾವಭಂಗಿಯು ವೈಯಾರದಿಂದ ಕೂಡಿದೆ. ಸೀರೆಯ ವಿನ್ಯಾಸವು ಅದರ ಸೆರಗಿನ ನಿರಿಗೆಗಳು ಚಿನ್ನದ ಎಳೆಗಳಿಂದ ನೆಯ್ದು ಚಿತ್ರವಿನ್ಯಾಸಗಳು ಅಲಂಕಾರಾಯುತವಾಗಿವೆ. ಅವಳ ನಾಗರ ಜಡೆಯು ನೀಳವಾಗಿದ್ದು, ಅದಕ್ಕೆ ಮುತ್ತಿನ ಗೊಂಚಲನ್ನು ಕಟ್ಟಲಾಗಿದೆ. ಕಟಿಬಂಧಕಗಳಾದ ಚಿನ್ನದ ಡಾಬು, ಚಿನ್ನದ ಒಡ್ಯಾಣ, ವಿಶಿಷ್ಟ ಪುಷ್ಪಮಾಲೆಯು ಭೂಷಿತವಾಗಿವೆ.

ಕೃಷ್ಣನು ಚಿತ್ರವಿನ್ಯಾಸದಿಂದ ಕೂಡಿದ ದುಪ್ಪಟವನ್ನು ಸುತ್ತಿದ್ದು, ಕೈಕಾಲುಗಳಲ್ಲಿ ವಿಶಿಷ್ಟ ಆಭರಣಗಳನ್ನು ಧರಿಸಿದ್ದಾನೆ. ಕೊರಳಲ್ಲಿ ಶೇಷನು ಹೆಡೆ ಎತ್ತಿ ಆಡುತ್ತಿದೆ. ಪುಂಗಿಯನ್ನು ಮೋಜಿನಿಂದ ನುಡಿಸುತ್ತಿರುವ ಭಾವಭಂಗಿಯು ಎದ್ದು ತೋರುತ್ತಿದೆ. ಚಿತ್ರದ ಹಿನ್ನೆಲೆಯಲ್ಲಿ ಅಲಂಕೃತ ಮಂಪಟಗಳು ವ್ಯಕ್ತಗೊಂಡಿದ್ದು ಕಂಬಗಳ ವಿನ್ಯಾಸ, ಪರದೆಗಳ ಸಂಯೋಜನೆ ಅಲಂಕೃತಗೊಂಡಿವೆ. ಸೂಕ್ಷ್ಮರೇಖೆಗಳಿಂದ ರಚನೆಗೊಂಡ ನಾಗಶೇಷಗಳು ಹೆಡೆಗಳನ್ನೆತ್ತಿ ತಲೆದೂಗುತ್ತಿವೆ. ಈ ಎರಡೂ ಚಿತ್ರಗಳಲ್ಲಿ ಹಸಿರು, ಕೆಂಪು, ನೀಲಿ, ಕಪ್ಪು ಹಾಗೂ ಬಿಳಿವರ್ಣಗಳ ಸಂಯೋಜನೆಗಳಿದ್ದು ವಿಶೇಷವಾಗಿ ಚಿನ್ನದ ಮೆರಗು ಬಣ್ಣವು ಪ್ರಧಾನವಾಗಿ ಬಳಕೆಗೊಂಡಿದೆ. ಆಕೃತಿಗಳ ಹೊಂದಾನಿಕೆ, ದೃಶ್ಯ ನಿರೂಪಣೆಯು ಸಾಂದರ್ಭಿಕವಾಗಿ ಮೂಡಿಬಂದಿದೆ. ಅಲಂಕಾರ ಪ್ರಜ್ಞೆಯು ಒಡಮೂಡಿದೆ.

**ಚಿತ್ರಸಂಖ್ಯೆ ೮೩. ಗೋವರ್ಧನ ಗಿರಿಧಾರಿ**

ಇಂದ್ರನ ಕೋಪಕ್ಕೆ ಗುರಿಯಾದ ಗೋಕುಲ, ವೃಂದಾವನ ಹಾಗೂ ಗೋವರ್ಧನ ಗಿರಿಯ ಜನರು ವರುಣನಿಂದ ಭಾರಿ ಅಘಾತವನ್ನು ಅನುಭವಿಸಬೇಕಾಯಿತು. ಇದಕ್ಕೆ ಈ ಜನರು ಇಂದ್ರನನ್ನು ಪೂಜಿಸದೇ ಅವನನ್ನು ದಿಕ್ಕರಿಸಿ ಕೃಷ್ಣನನ್ನು ಭಕ್ತಿಯಿಂದ ಪೂಜಿಸುತ್ತಿದ್ದರೂ ಎಂಬ ಕಾರಣದಿಂದ ಇಡೀ ಗಿರಿಯೂ ಮುಳುಗುವಂತೆ ಧಾರಾಕಾರ ಮಳೆಯನ್ನು ಸುರಿಸಿದನು.





೬.೨

೬.೩



ಬಾಲಕೃಷ್ಣನ ಚಿತ್ರಗಳು



೬.೪

ಗಾಜಿನ ಮೇಲಿನ ವೈಷ್ಣವ ಧರ್ಮದ ಚಿತ್ರಗಳು





೬೫. ಕಾಳಿಂಗ ಮರ್ದನ



೬೭. ಗೋಪಾಲಕೃಷ್ಣ

೬೬. ಗೋಪಾಲಕೃಷ್ಣ



ಗಾಜಿನ ಮೇಲಿನ ವೈಷ್ಣವ ಧರ್ಮದ ಚಿತ್ರಗಳು





೬೮. ಬಾಲಕೃಷ್ಣ



೬೯. ಗೋಪಿ ಕನ್ಯೆಯರ ಉಡುಪುಗಳನ್ನು ಕದ್ದಿದ್ದು



೭೦. ಗೋಪಿ ಕನ್ಯೆಯರ ಉಡುಪುಗಳನ್ನು ಕದ್ದಿದ್ದು

ಗಾಜಿನ ಮೇಲಿನ ವೈಷ್ಣವ ಧರ್ಮದ ಚಿತ್ರಗಳು





೭೫

ವೇಣುಗೋಪಾಲನ ಚಿತ್ರಗಳು



೭೬

೭೭



೭೮



ಗಾಜಿನ ಮೇಲಿನ ವೈಷ್ಣವ ಧರ್ಮದ ಚಿತ್ರಗಳು

ಈ ಸಂದರ್ಭದಲ್ಲಿ ಅಲ್ಲಿನ ಜನರು ಕೃಷ್ಣನನ್ನು ಮೊರೆಹೊಕ್ಕರು. ಇದನ್ನರಿತ ಕೃಷ್ಣನು ಇದು ಇಂದ್ರನ ಕಿತಾಪತಿ ಎಂದು ತಿಳಿದು ನೀವು ಹೆದರಬೇಡಿ ನಿಮ್ಮನ್ನು ರಕ್ಷಿಸುವ ಜವಾಬ್ದರಿನನ್ನದು ಎಂದು ಧೈರ್ಯ ತುಂಬಿ ಇಡೀ ಗೋವರ್ಧನ ಗಿರಿಯನ್ನು ತನ್ನ ಕಿರು ಬೆರಳಿನಲ್ಲಿ ಎತ್ತಿ ಹಿಡಿದನು. ಆಗ ಆ ಸಂತ್ರಸ್ತರು ಅವನ ಆಶ್ರಯವನ್ನು ಪಡೆದು ಕೃಷ್ಣನ ಭಕ್ತಿಗೆ ಪಾತ್ರರಾದರು. ಆದೃಶ್ಯವು ಈ ಗಾಜಿನ ಚಿತ್ರದಲ್ಲಿ ಮೂಡಿಬಂದಿದೆ.

ಇಲ್ಲಿ ವಸ್ತ್ರಾಭರಣಗಳಿಂದ ಭೂಷಿತನಾದ ಕೃಷ್ಣನು ಕಿರುಬೆರಳಿನಲ್ಲಿ ಪರ್ವತವನ್ನು ಎತ್ತಿ ಹಿಡಿದಿರುವನು. ಇವನು ನಿಂತಿರುವ ಭಂಗಿಯು ವೈಯಾರದಿಂದ ಕೂಡಿದ್ದು, ಸೃಜನಾತ್ಮಕ ಭಾವನೆ ವ್ಯಕ್ತಗೊಂಡಿದೆ. ಅವನ ಅಕ್ಕ ಪಕ್ಕ ಇಬ್ಬರೂ ಗೋಪಸ್ತ್ರೀಯರು ಹಾಲು ಮೊಸರು ತುಂಬಿದ ಬುಟ್ಟಿಗಳನ್ನು ಹೊತ್ತಿರುವರು. ಇವು ಬಿದಿರು ಬಿಟ್ಟಿಯ ಸ್ವರೂಪವನ್ನು ಪಡೆದಿವೆ. ಸ್ತ್ರೀಯರು ಸಾಂಪ್ರದಯಿಕ ಸೀರೆ ಕುಪ್ಪಸಗಳನ್ನು ಧರಿಸಿರುವರು. ಹಸುವು ಅವನ ಪಾದವನ್ನು ನೆಕ್ಕುತ್ತಿದೆ ಕೆಳಗಡೆ ಪೀಠದ ಚಿತ್ರವಿದೆ.

ನೀಲಿ ವರ್ಣದ ಪರ್ವತದ ಮೇಲೆ ಇಂದ್ರನ ಚಿತ್ರವಿದ್ದು ಇಲ್ಲಿ ಇವನನ್ನು ಐರಾವತದ ಮೇಲೆ ಕುಳಿತಿರುವಂತೆ ಸಂಯೋಜಿಸಲಾಗಿದೆ. ಈ ಚಿತ್ರವು ಸಂಕೇತಪ್ರಧಾನವಾಗಿ ಮೂಡಿಬಂದಿದ್ದು, ವರ್ಣಗಾರಿಕೆಯಲ್ಲಿ ಸರಳತೆ ಹಾಗೂ ರೇಖಾ ವಿನ್ಯಾಸಗಳಲ್ಲಿ ಸೃಜನಾತ್ಮಕ ಚಲನೆಯು ಅಭಿವ್ಯಕ್ತಗೊಂಡಿದೆ. ಇವರ ವೇಷಭುಷಣಗಳಲ್ಲಿ ಅಲಂಕಾರ ಹಾಗೂ ಸೌಂದರ್ಯ ಪ್ರಜ್ಞೆಯು ಭಾವನಾತ್ಮಕವಾಗಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೮೪, ೮೫, ೮೬, ೮೭, ೮೮, ೮೯, ೯೦, ೯೧ ಕೃಷ್ಣ-ರಾಧೆ**

'ರಾಧೆ' ಕೃಷ್ಣನ ಪ್ರೀಯ ಸಖಿ, ಈಕೆಯ ಪ್ರೇಮಕ್ಕೆ ಹುಚ್ಚನಾಗಿ ತನ್ನತನವನ್ನೇ ಮರೆತಿರುತ್ತಾನೆ. ಆಕೆಯಲ್ಲಿ ಪರಿಪರಿಯಾಗಿ ಪ್ರೇಮವನ್ನು ಯಾಚಿಸುತ್ತಾನೆ. ಅವಳು ನಂದನ ಸೋದರ ಸಂಬಂಧಿ ಆಯನನ ಧರ್ಮಪತ್ನಿಯಾಗಿದ್ದಳು. ಆದರೂ ಅವಳ ಚಲುವಿಗೆ ಮನಸೋತು ಅವಳ ಪ್ರೇಮವನ್ನು ಸಂಪಾದಿಸುತ್ತಾನೆ. ಇಬ್ಬರೂ ಅಮರ ಪ್ರೇಮಿಗಳಂತೆ ಗೋಚರಿಸುತ್ತಾರೆ. ಹೀಗೆ ರಾಧಾಕೃಷ್ಣರ ಕುರಿತು ಸಾಕಷ್ಟು ಕಥೆಗಳು ಹುಟ್ಟಿಕೊಳ್ಳುತ್ತಿವೆ. ಇಲ್ಲಿ ರಾಧಾಕೃಷ್ಣರ ಪ್ರೇಮವನ್ನು ವಿರಹವನ್ನು ಹಾಗೂ ಪುನರಮಿಲನವನ್ನು ಕುರಿತಾದ ಪ್ರೇಮಪ್ರಸಂಗವನ್ನು ಅನೇಕ ಕಾವ್ಯಗಳಲ್ಲಿ ಪುರಾಣಗಳಲ್ಲಿ ಹಾಗೂ ವರ್ಣಚಿತ್ರಗಳಲ್ಲಿ ಕವಿಗಳು, ಪಂಡಿತರು, ಕಲಾವಿದರು ಚಿತ್ರಣಗೊಳಿಸಿದ್ದಾರೆ. ಇವರ ಕುರಿತಾಗಿ ಭಿತ್ತಿ ಚಿತ್ರಗಳಲ್ಲಿ ಹಾಗೂ ಕಿರುರೂಪಚಿತ್ರಗಳಲ್ಲಿ ಸಾಂಪ್ರದಾಯಿಕ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ಗಾಜಿನ ಕಲಾವಿದರು ರಾಧೆ ಕೃಷ್ಣರನ್ನು ತಮ್ಮ ಕಲ್ಪನೆಯಂತೆ ರೇಖೆ, ವರ್ಣಗಳಿಂದ ಸಂಯೋಜಿಸಿ, ಅಲಂಕರಣಗೊಳಿಸಿದ್ದಾರೆ. ಇವರಿಬ್ಬರ ಏಕಾಂತವನ್ನು ಇಲ್ಲಿ ಪ್ರತಿನಿಧಿಸುತ್ತಿವೆ.

ಇಲ್ಲಿ ಎಂಟು ಚಿತ್ರಗಳು ಚಿತ್ರಣಗೊಂಡಿದ್ದು ಎಲ್ಲವೂ ಒಂದೇ ಆಶಯವನ್ನು ವ್ಯಕ್ತಪಡಿಸುತ್ತಿವೆ. ಚಿತ್ರ ೮೪ ರಲ್ಲಿ ರಾಧೆಕೃಷ್ಣರು ಸೃಜನಾತ್ಮಕ ರೇಖಾ ವಿನ್ಯಾಸದಿಂದ, ಆಕರ್ಷಕ ವರ್ಣವಿನ್ಯಾಸಗಳಿಂದ ಉತ್ತಮ ಭಾವನಾನಿರೂಪಣೆಯಿಂದ ಅಭಿವ್ಯಕ್ತಿಗೊಂಡಿರುವರು. ಸಾಂಪ್ರದಾಯಿಕ ಸೀರೆ ಕುಪ್ಪಸಗಳನ್ನು ಧರಿಸಿರುವ ರಾಧೆಯು ಎತ್ತಿಕಟ್ಟಿದ ತುರುಬು ಅವುಗಳಿಗೆ ಬೈತಲ ಮಣಿ,

ಕಿವಿಯಲ್ಲಿ ಚಿನ್ನದ ಓಲೆಗಳು, ತೋಳ್ಬಂಧಕಗಳು, ಕಂಠಾಭರಣಗಳು, ನಡುವಿಗೆ ಡಾಬು ಹಾಗೂ ಚಿನ್ನದ ಒಡ್ಯಾಣ ಕಾಲಲ್ಲಿ ಚಿನ್ನದ ತೋಡೆಗಳಿಂದ ಶೃಂಗಾರ ಗೊಂಡಿರುವಳು. ಇವಳು ಕೃಷ್ಣನ ಗದ್ದ ಹಿಡಿದು ಮುದ್ದು ಮಾಡುತ್ತಿರುವ ಭಂಗಿಯಲ್ಲಿ ನಿಂತಿರುವಳು. ಕೃಷ್ಣನು ಅವಳನ್ನು ಒಂದು ಕೈಯಿಂದ ಬಳಸಿ ಟೊಂಕಕ್ಕೆ ಕೈಕಟ್ಟಿ ನಿಂತಿರುವಂತೆ ರೂಪಗೊಂಡಿರುವನು.

ಇವನು ಇಲ್ಲಿ ವಿಶೇಷ ಕೇಶವಿನ್ಯಾಸ, ಆಭರಣಗಳು ನಡುವಿಗೆ ಹಸಿರು ದುಪ್ಪಟ, ಹಳದಿ ಧೋತಿ ಹಾಗೂ ಕೆಂಪು ಉತ್ತರೀಯವನ್ನು ಹೊಂದಿರುವನು. ಇವುಗಳಿಗೆ ಸೂಕ್ಷ್ಮ ಚಿತ್ರವಿನ್ಯಾಸವನ್ನು ಸಂಯೋಜಿಸಲಾಗಿದೆ. ಇಲ್ಲಿ ಸಂಯೋಜನೆಗೊಂಡಿರುವ ರಾಧಾಕೃಷ್ಣರ ವೇಷಭೂಷಣ ಗಳನ್ನು ಗಮನಿಸಿದರೆ ಆಗಿನ ಕಾಲದ ಜನರು ಎಷ್ಟೊಂದು ಶೃಂಗಾರ ಪ್ರೀಯರು ಆಭರಣ ಪ್ರೀಯರು ಹಾಗೂ ರಸಿಕ ಬದುಕನ್ನು ಸವಿಯುತ್ತಿದ್ದರೆಂದು ವಿವೇಚಿಸಬಹುದು. ಚಿತ್ರದ ಸುತ್ತಲೂ ನಕ್ಷಾವಿನ್ಯಾಸ, ಹಿನ್ನೆಲೆಯಲ್ಲಿ ಪರದೆಗಳ ಸಂಯೋಜನೆಯು ರಚನೆಗೊಂಡಿದೆ.

ಚಿತ್ರ ೮೫, ೮೬ ರಲ್ಲಿ ರಾಧಾಕೃಷ್ಣರ ಭಾವಭಂಗಿಯು ಒಬ್ಬರ ಮೇಲೊಬ್ಬರ ಹೆಗಲ ಮೇಲೆ ಕೈಹಾಕಿ ಪ್ರೇಮವನ್ನು ಪ್ರದರ್ಶಿಸುತ್ತಿರುವಂತೆ ಚಿತ್ರಿತಗೊಂಡಿದ್ದರೆ. ಎರಡೂ ಚಿತ್ರಗಳಲ್ಲಿ ವೈಭವಪೂರ್ಣ ಆಭರಣಗಳನ್ನು, ವರ್ಣದ ಉಡುಪುಗಳನ್ನು ಧರಿಸಿರುವರು. ಕೆಂಪು ಹಾಗೂ ಹಳದಿಯ ಮೆರಗು ಬಣ್ಣಗಳು ಪ್ರಧಾನವಾಗಿ ಸಂಯೋಜನೆಗೊಂಡಿವೆ. ಆಭರಣಗಳ ವಿನ್ಯಾಸಗಳಲ್ಲಿ ಅಲಂಕರಣ ಎದ್ದು ತೋರುತ್ತಿದೆ. ರಾಧಾಕೃಷ್ಣರು ಸಂಪಿಗೆಯ ಹೊಂಬಣ್ಣದ ಮೈ ಬಣ್ಣವನ್ನು ಹೊಂದಿರುವರು. ಹಿನ್ನೆಲೆಯಲ್ಲಿ ರಾಜ ವೈಭವದ ವಾಸ್ತುವನ್ನು ರಚಿಸಿ ಚಿತ್ರವಿನ್ಯಾಸಗಳಿಂದ ಅಲಂಕರಿಸಲಾಗಿದೆ. ಭಾವನೆಯಲ್ಲಿ ಯುವ ಪ್ರೇಮಿಗಳ ಮಿಲನೋತ್ಸವವು ಒಡಮೂಡಿದೆ.

ಚಿತ್ರ ೮೭, ೮೮, ೮೯ ಇಲ್ಲಿ ಕೃಷ್ಣನು ರಾಧೆಯನ್ನು ಅಪ್ಪಿಕೊಂಡು ಬರಸೆಳೆಯುತ್ತಿದ್ದಾನೆ. ವೇಷಭೂಷಣಗಳಿಂದ ಅಲಂಕೃತರಾಗಿದ್ದು ರೇಖೆ, ವರ್ಣಗಳ ಅಲಂಕಾರಗಳಿಂದ ಕೆಂಪು ಮೆರಗು ಬಣ್ಣವು ಪ್ರಧಾನವಾಗಿ ಮೂಡಿ ಬಂದಿದೆ. ಬಟ್ಟೆಗಳ ನಿರಿಗೆಗಳಲ್ಲಿ ಆಭರಣಗಳ ವೈವಿಧ್ಯತೆಯಲ್ಲಿ ಆಕರ್ಷಕ ರಚನೆಯೂ ಮೂಡಿಬಂದಿದೆ. ಹಿನ್ನೆಲೆಯಲ್ಲಿ ಚಿತ್ರವಿನ್ಯಾಸಗಳಿಂದ ಕೂಡಿದ ಪರದೆಗಳನ್ನು ಸಂಯೋಜಿಸಲಾಗಿದೆ. ಚಿತ್ರ ೮೮, ೮೯ ರಲ್ಲಿ ರಾಧೆಯು ವಿವಿಧ ವರ್ಣಗಳ ಹೂಮಾಲೆಯನ್ನು ಧರಿಸಿರುವಳು. ಚಿತ್ರವಿನ್ಯಾಸಗಳು ರೇಖಾಪ್ರಧಾನವಾಗಿದ್ದು, ಕಪ್ಪು ಕುಪ್ಪಸದಲ್ಲಿ ಅಂಚು ಚಿತ್ರವಿನ್ಯಾಸದಿಂದ ರಚನೆಗೊಂಡಿದೆ. ಇವರ ಮುಖಭಾವಗಳಲ್ಲಿ ಪ್ರೇಮಭಾವ ಹಾಗೂ ಲಜ್ಜೆತನವು ಪ್ರಕಟಗೊಂಡಿವೆ.

ಚಿತ್ರ ೯೦ ರಲ್ಲಿ ರಾಧೆ ವೀಣೆಯನ್ನು ನುಡಿಸುತ್ತಿರುವಳು. ಸಾಂಪ್ರದಾಯಿಕ ಸೀರೆ ಕುಪ್ಪಸ ಧರಿಸಿದ್ದು ವಿಶೇಷ ಪುಷ್ಪ ಮಾಲೆಯನ್ನು ಹಾಕಿರುವಳು. ಕೃಷ್ಣನು ಬಿಳಿಧೋತಿ, ಹಸಿರು ದುಪ್ಪಟ, ಕೆಂಪು ಉತ್ತರಿಯವನ್ನು ಧರಿಸುವನು. ವೈಯಾರದಿಂದ ರಾಧೆಯ ಮೇಲೆ ಕೈ ಹಾಕಿರುವನು. ಇಲ್ಲಿ ಸೃಜನಾತ್ಮಕ ವರ್ಣ ವೈವಿಧ್ಯತೆ, ಶೃಂಗಾರಮಯ ಆಭರಣಗಳು ಮೂಡಿಬಂದಿವೆ.

ಚಿತ್ರ ೯೧ ರಲ್ಲಿ ರಾಧಾಕೃಷ್ಣರು ಪ್ರಕೃತಿಯ ಮಡಿಲಲ್ಲಿ ಕುಳಿತಿರುವರು. ಇದು ಯಮುನೆಯ ಪರಿಸರವನ್ನು ನೆನಪಿಸುತ್ತಿದೆ. ಕೃಷ್ಣನು ತನ್ನ ಕೊಳಲನ್ನು ನುಡಿಸುತ್ತಾ, ರಾಧೆಯನ್ನು ಮೋಹಗೊಳಿಸುತ್ತಿರುವಂತೆ ಬಿಂಬಿತವಾಗಿದ್ದಾನೆ. ರಾಧೆಯು ಅವನ ಕೊಳಲ ಸುಧೆಗೆ ಮರುಳಾಗಿ

ಲಜ್ಜೆಯಿಂದ ಬಳುಕುತ್ತಿದ್ದಾಳೆ. ತಾನು ನೀರು ತರಲು ಬಂದಿದ್ದೇನೆ ಎಂಬುದರ ಪರಿವೇ ಇಲ್ಲದಂತೆ ರಾಧೆಕೃಷ್ಣರು ಪ್ರೇಮದಲ್ಲಿ ಮುಳುಗಿರುವರು. ಈ ಚಿತ್ರವು ಆಧುನಿಕ ರಚನಾ ವಿಧಾನದಲ್ಲಿ ರೂಪಗೊಂಡಿದ್ದು, ಇಲ್ಲಿ ರಾಧೆಯು ರವಿಕೆ, ಲಂಗ ಹಾಗೂ ಹಳದಿ ಬಣ್ಣದ ಉತ್ತರೀಯವನ್ನು ಧರಿಸಿರುವಳು. ಕೃಷ್ಣನು ಹಳದಿ ಧೋತಿ, ಬಿಳಿ ಉತ್ತರಿಯ ಹಾಗೂ ಕೆಂಪು ದುಪ್ಪಟವನ್ನು ಸುತ್ತಿರುವನು. ಚಿತ್ರದಲ್ಲಿ ರೇಖಾಲಂಕಾರ, ವರ್ಣಗಳ ಸಂಯೋಜನೆ, ಭಾವನಾ ನಿರೂಪಣೆ ಹಾಗೂ ಸಮಕಾಲೀನ ಚಿತ್ರಪ್ರಜ್ಞೆಯು ಪ್ರಕಟಗೊಂಡಿದೆ.

**ಚಿತ್ರಸಂಖ್ಯೆ ೯೨ ಕೃಷ್ಣ-ಸಖಿಯರು**

ಈ ಚಿತ್ರದಲ್ಲಿ ಶೃಂಗಾರಗೊಂಡ ಕೃಷ್ಣನು ವೀಣಾಧಾರಿಣಿ ಸಖಿಯ ಮೇಲೆ ಕೈಹಾಕಿ ನಾಟ್ಯ ಭಂಗಿಯಲ್ಲಿ ನಿಂತಿರುವನು. ಈ ಚಿತ್ರವು ರೇಖಾ ಲಾವಣ್ಯತೆಯಿಂದ ಕೂಡಿದ್ದು, ಆಕೃತಿಗಳು ಸುಪುಷ್ಟವಾದ ಅಂಗ ರಚನೆಯನ್ನು ಹೊಂದಿವೆ. ರೇಖೆಗಳ, ಸೂಕ್ಷ್ಮತೆ, ಬಾಗುವಿಕೆ, ಬಳುಕುವಿಕೆ ಹಾಗೂ ದಟ್ಟ ವಿವರಗಳಿಂದ ರಚನೆಗೊಂಡಿವೆ.

ಇಲ್ಲಿ ಇಬ್ಬರು ಸಖಿಯರಿದ್ದು, ನಡುವೆ ಕೃಷ್ಣನು ನಿಂತಿರುವನು. ಕೃಷ್ಣನು ಸಂಪಿಗೆಯ ಮೈಬಣ್ಣವನ್ನು ಹೊಂದಿದ್ದರೆ, ಸಖಿಯರು ಹಳದಿ ಮಿಶ್ರಿತ ಕಂದುಗೆಂಪು ಬಣ್ಣಗಳಿಂದ ಸಂಯೋಜನೆಗೊಂಡಿರುವರು. ಅಂಗಾಂಗಗಳಲ್ಲಿ ದುಂಡುತನವು ಎದ್ದುತೋರುತ್ತಿದೆ. ವೇಷಭೂಷಣಗಳಲ್ಲಿ ಹಾಗೂ ಆಭರಣಗಳ ವಿನ್ಯಾಸಗಳಲ್ಲಿ ಅಲಂಕಾರವು ವೃದ್ಧಿಸಿದೆ. ಇಲ್ಲಿ ವೀಣೆಗಳು ಸೂಕ್ಷ್ಮ ಚಿತ್ರವಿನ್ಯಾಸಗಳ ವಿವರಣೆಗಳಿಂದ ರಚನೆಗೊಂಡಿವೆ. ಈ ಮೂವರು ನಿಂತಿರುವ ಭಂಗಿಯು ಯಾವುದೋ ಸಂಗೀತಕ್ಕೆ ಹೆಜ್ಜೆ ಹಾಕುತ್ತಿರುವಂತೆ ಅಭಿವ್ಯಕ್ತಗೊಂಡಿರುವರು. ಹಿನ್ನೆಲೆಯು ನೀಲಿ ವರ್ಣದಿಂದ ಕೂಡಿದ್ದು, ನೆಲಹಾಸನ್ನು ಕಪ್ಪು ಬಿಳುಪಿನ ಟೈಲ್ಸ್‌ಗಳಿಂದ ಸಂಯೋಜಿಸಲಾಗಿದೆ. ಚಿತ್ರವು ರೇಖೆ, ವರ್ಣ ಹಾಗೂ ಭಾವ ನಿರೂಪಣೆಯಲ್ಲಿ ಸೃಜನಾತ್ಮಕ ವರ್ಣನೆಗಳು ಪ್ರಕಟಗೊಂಡಿವೆ.

**ಚಿತ್ರ ೯೩, ೯೪, ೯೫, ೯೬, ೯೭, ೯೮, ೯೯, ೧೦೦ ಕೃಷ್ಣ, ರುಕ್ಮೀಣಿ-ಸತ್ಯಭಾಮೆ**

ಸತ್ಯಭಾಮೆ ಮತ್ತು ರುಕ್ಮೀಣಿಯರು ಕೃಷ್ಣನ ಪ್ರೇಮ ಪತ್ನಿಯರು, ಇವರೆಲ್ಲದೇ ಇನ್ನು ಅನೇಕ ಪತ್ನಿಯರು ಶ್ರೀಕೃಷ್ಣನಿಗಿದ್ದರು. ಇಲ್ಲಿ ಕಲಾವಿದರು. ಸತ್ಯಭಾಮೆ ಹಾಗೂ ರುಕ್ಮೀಣಿಯನ್ನು ಆಧರಿಸಿ ಚಿತ್ರಗಳನ್ನು ರಚಿಸಿದ್ದಾರೆ. ಇಲ್ಲಿ ಕಂಡು ಬರುವ ಗಾಜಿನ ಚಿತ್ರಗಳನ್ನು ಬೇರೆ ಬೇರೆ ಭಾಗಗಳಿಂದ ಸಂಗ್ರಹಿಸಿದ್ದು ವೈವಿಧ್ಯಮಯ ಅಳತೆಗಳನ್ನು ಹೊಂದಿವೆ. ಎಲ್ಲ ಚಿತ್ರಗಳು ಒಂದೇ ಆಶಯದಲ್ಲಿ ಪ್ರತಿರೂಪಗೊಂಡಿದ್ದು, ಕಲಾವಿದರ ವಿವಿಧ ಆಶಯಗಳನ್ನು ಪ್ರಕಟಪಡಿಸುತ್ತವೆ.

ಎಲ್ಲ ಚಿತ್ರಗಳ ಸನ್ನಿವೇಶಗಳಲ್ಲಿ ಶ್ರೀಕೃಷ್ಣನು, ಮಡದಿಯರಾದ ರುಕ್ಮೀಣಿ-ಸತ್ಯಭಾಮೆಯರನ್ನು ಎರಡೂ ಬಾಹುಗಳಿಂದ ಬಳಸಿ ಅಪ್ಪಿಕೊಂಡಿರುವಂತೆ ಚಿತ್ರಿತಗೊಂಡಿರುವನು. ಚಿತ್ರ ೯೩ ರಲ್ಲಿ ಕಲಾವಿದನು ರೇಖೆಗೆ ಪ್ರಧಾನ್ಯತೆ ಕೊಟ್ಟು ಅಲಂಕಾರ ಪ್ರಜ್ಞೆಯನ್ನು ಮೆರೆದಿದ್ದಾನೆ. ಅಂಗಾಂಗಗಳ ರಚನೆಯಲ್ಲಿ ದುಂಡುತನ ಹಾಗೂ ಆಕರ್ಷಕ ಏರಿಳಿತವನ್ನು ಪ್ರದರ್ಶಿಸಿದ್ದಾನೆ. ಚಿತ್ರದ ಹಿನ್ನೆಲೆಯಲ್ಲಿ ದೊಡ್ಡ ದೊಡ್ಡ ಚಿತ್ರವಿನ್ಯಾಸಗಳಿಂದ ಕೂಡಿದ ಮಂಟಪವು ರಚನೆಗೊಂಡಿದೆ. ಆಕೃತಿಗಳ ಹಿಂಬದಿಯಲ್ಲಿ ಕೆಂಪುವರ್ಣಆವರಿಸಿದೆ. ನೆಲಹಾಸು ನೀಲಿಬಣ್ಣದಿಂದ ಕೂಡಿದೆ.

ಚಿತ್ರ ೯೪ ಸಣ್ಣ ಹಾಗೂ ದಪ್ಪ ರೇಖೆಗಳಿಂದ ವೇಷಭೂಷಣಗಳು & ಹಿನ್ನೆಲೆಯ ಪರದೆಗಳು ರಚನೆಗೊಂಡಿವೆ. ಈ ಚಿತ್ರದಲ್ಲಿ ಪುಷ್ಪಮಾಲೆಯು ವಿಶೇಷವಾಗಿ ಮೂಡಿಬಂದಿದ್ದು, ಹಳದಿ, ಕೆಂಪು ಹಾಗೂ ಚಿನ್ನದ ಮೆರಗು ಕಾಗದದ ಬಳಕೆಯು ಪ್ರಧಾನವಾಗಿದೆ. ಆಕೃತಿಗಳು ಹಾಲು ಬಿಳುಪಿನ ಮೈಬಣ್ಣವನ್ನು ಹೊಂದಿದ್ದು, ಕೆಳಗೆ ಅಲಂಕೃತ ಪೀಠವು ಚಿತ್ರಣಗೊಂಡಿದೆ. ಆಕೃತಿಗಳ ಅಂಗ ಸೌಷ್ಟವ ಎದ್ದು ತೋರುತ್ತಿದೆ.

ಚಿತ್ರ ೯೫ ರಲ್ಲಿ ರೇಖೆ, ವರ್ಣ ಹಾಗೂ ಅಲಂಕರಣೆ ಅಚ್ಚುಕಟ್ಟುತನದಿಂದ ರಚನೆಗೊಂಡಿದೆ. ಇಲ್ಲಿ ಚಿನ್ನದ ಮೆರಗು ಬಣ್ಣವು ಪ್ರಧಾನನಾಗಿದ್ದು, ಅದಕ್ಕೆ ಪೂರಕವಾಗಿ ಕೆಂಪು, ಹಸಿರು, ಕಪ್ಪು ಮತ್ತು ಬಿಳಿ ಬಣ್ಣಗಳು ಸಂಯೋಜನೆಗೊಂಡಿವೆ. ಆಕೃತಿಗಳ ಮೈಬಣ್ಣಗಳಲ್ಲಿ ಬಣ್ಣಗಳ ಮಿಶ್ರಣ ಮಾಡುವಿಕೆಯಲ್ಲಿ ನೈಪುಣ್ಯತೆಯನ್ನು ತರಲಾಗಿದೆ. ಇನ್ನುಳಿದಂತೆ ವೇಷ ಭೂಷಣಗಳು ಹಾಗೂ ಆಭರಣ ವಿನ್ಯಾಸಗಳು ಯಥಾವತ್ತಾಗಿ ಪ್ರಕಟಗೊಂಡಿವೆ. ಚಿತ್ರದಲ್ಲಿ ಅಲಂಕಾರಿಕ ಮಂಟಪ ಹಾಗೂ ಹೂವು ಎಲೆಗಳ ಅಂಚನ್ನು ಕಾಣುತ್ತೇವೆ. ಚಿತ್ರವು ವಿಷಯ ಹಾಗೂ ವಸ್ತುಗಳಿಂದ ಸೃಜನಾತ್ಮಕವಾಗಿ ಮೂಡಿಬಂದಿದೆ.

ಚಿತ್ರ ೯೬ ಇದು ೧೫ x ೨೦ ಸೆಂ.ಮೀ ಅಳತೆಯಲ್ಲಿದ್ದು, ರೇಖಾ ಆಕೃತಿಗಳು ಪ್ರಧಾನ್ಯತೆಯಿಂದ ಕೂಡಿದ್ದು, ಕೆಂಪು ಹಾಗೂ ಚಿನ್ನದ ಮೆರಗು ಬಣ್ಣಗಳಿಂದ ಸಂಯೋಜನೆಗೊಂಡಿವೆ. ಅಲಂಕಾರ ಹಾಗೂ ಭಾವನಾ ನಿರೂಪಣೆಯು ಉತ್ತಮವಾಗಿ ಪ್ರಕಟಗೊಂಡಿದೆ. ಹಿನ್ನೆಲೆಯಲ್ಲಿ ಸರಳವಾದ ವರ್ಣಸಂಯೋಜನೆಯಿಂದ ವಸ್ತುಗಳನ್ನು ಚಿತ್ರಿಸಲಾಗಿದೆ.

ಚಿತ್ರ ೯೭ ಇಲ್ಲಿ ಶಾರೀರಿಕ ವಿವರಗಳು ವಿಶಾಲವಾಗಿದ್ದು, ಉಡುಗೆ ತೊಡುಗೆಗಳಲ್ಲಿ ಚಿತ್ರವಿನ್ಯಾಸಗಳು, ಕೆಂಪು ಹಾಗೂ ಈ ಚಿನ್ನದ ಮೆರಗು ಬಣ್ಣಗಳ ಪಟ್ಟಿಕೆಗಳು ರಚನೆಗೊಂಡಿವೆ. ಅಲಂಕಾರ ಮಿತವಾಗಿದ್ದರೂ ಕೆಂಪು ಹಾಗೂ ಚಿನ್ನದ ರೇಖುವಿನಿಂದ ವೈಭವದ ವಿವರಣೆಗಳು ಗೋಚರಿಸುತ್ತವೆ. ಚಿತ್ರದ ಹಿನ್ನೆಲೆಯಲ್ಲಿ ಆಕರ್ಷಕ ಕಂಬಗಳ ವಿನ್ಯಾಸ ನಡುವೆ ವರ್ಣಮಯ ಪರದೆಗಳು, ಶೃಂಗಾರಮಯವಾಗಿದೆ. ಚಿತ್ರವು ಆಕರ್ಷಕ ರೇಖೆ ಹಾಗೂ ವರ್ಣಗಳ ಸಂಯೋಜನೆ ಯಿಂದ ಕೂಡಿದೆ.

ಚಿತ್ರ ೯೮ ಈ ಚಿತ್ರವು ಹಿಂದಿನ ಚಿತ್ರಗಳಂತೆ ರಚನೆಗೊಂಡಿದ್ದರೂ ರೂಪಲಕ್ಷಣಗಳಲ್ಲಿ, ವರ್ಣವೈವಿಧ್ಯತೆಯಲ್ಲಿ, ಆಧುನಿಕತೆಯ ಛಾಯೇ ಎದ್ದು ಕಾಣುತ್ತಿದೆ. ರುಕ್ಮಿಣಿ ಹಾಗೂ ಭಾಮೆಯರ ಉಡುಪುಗಳಲ್ಲಿ ವರ್ಣಗಳ ದಟ್ಟತೆ ಇದೆ. ಆಭರಣಗಳು ಮಿತವಾಗಿ ಅಲಂಕರಿಸಿವೆ. ಚಿತ್ರದ ಹಿನ್ನೆಲೆಯಲ್ಲಿ ಕಂಬಗಳ ಅಲಂಕರಣಗಳಲ್ಲಿ ಭವ್ಯತೆ ಕಾಣುತ್ತದೆ. ನೆಲಹಾಸು ಟೈಲ್ಸಗಳಿಂದ ರಚನೆಗೊಂಡಿದ್ದು, ಪಟ್ಟಿಕೆಗಳು ರೇಖೆಗಳಿಂದ ಸಂಯೋಜನೆಗೊಂಡಿವೆ.

ಚಿತ್ರ ೯೯ ಇಲ್ಲಿ ಆಕೃತಿಗಳಲ್ಲಿ ರೇಖಾ ಸಂಯೋಜನೆಯು ಲಾವಣ್ಯತೆಯಿಂದ ಹಾಗೂ ಸೃಜನಾತ್ಮಕವಾಗಿ ಮೂಡಿಬಂದಿದೆ. ಆಭರಣ ಹಾಗೂ ವೇಷ ಭೂಷಣಗಳಲ್ಲಿ ಕುಸುರಿ ಕೆಲಸವು ಆಕರ್ಷಕವಾಗಿ ಮೂಡಿಬಂದಿದೆ. ಕೆಂಪು, ಹಸಿರು, ಹಳದಿ ಹಾಗೂ ಬಿಳಿವರ್ಣಗಳ ವರ್ಣಾಲಂಕಾರಗಳಲ್ಲಿ ಸರಳತೆ ಒಡಮೂಡಿದೆ. ಚಿತ್ರವು ಭಾವನಾತ್ಮಕವಾಗಿ ಬಿಂಬಿತವಾಗಿದೆ.

ಚಿತ್ರ ೧೦೦ ಇಲ್ಲಿ ವರ್ಣಗಳ ಉಜ್ವಲ ವಿವರಣೆಗಳು ರೂಪಗೊಂಡಿದ್ದು ಹೂವಿನ ಮಾಲೆ, ಆಭರಣಗಳು, ಉಡುಪುಗಳ ಅಂಚು ಹಾಗೂ ಹಿನ್ನೆಲೆಯ ಮಂಟಪದ ಚಿತ್ರವಿನ್ಯಾಸಗಳು ಸೂಕ್ಷ್ಮ ರೇಖಾವಿನ್ಯಾಸಗಳಿಂದ ಪ್ರಕಟಗೊಂಡಿವೆ. ಅಲಂಕಾರ ವೈಭವವು ಎದ್ದು ತೋರುತ್ತಿದೆ. ಪೀಠದ ವಿನ್ಯಾಸ, ಕೃಷ್ಣನ ಪಾದದಲ್ಲಿರುವ ತಾವರೆಯು ಸ್ಪಷ್ಟವಿವರಗಳಿಂದ ರಚನೆಗೊಂಡಿದೆ. ದೈಹಿಕ ರೂಪರೇಷಗಳಲ್ಲಿ ಸಮಕಾಲೀನ ಪ್ರಭಾವ ಹಾಗೂ ವಾಸ್ತವತೆಯೂ ಮೇಳೈಸಿದೆ.

**ಚಿತ್ರಸಂಖ್ಯೆ ೧೦೧ ಕೃಷ್ಣ**

ಈ ಚಿತ್ರದಲ್ಲಿ ಕೃಷ್ಣನು ಯುವರಾಜ ಕುವರನಂತೆ ಶೃಂಗಾರಗೊಂಡಿದ್ದು, ವಿಶಿಷ್ಟವಾಗಿ ಕಟ್ಟಿಕೊಂಡ ಜುಟ್ಟು, ಅದಕ್ಕೆ ಮುತ್ತಿನ ಗೊಂಚಲು, ಬೈತಲಮಣಿ, ನವಿಲುಗರಿ, ಚಿನ್ನದ ಎಳೆಗಳು, ಸಣ್ಣ ಚಿನ್ನದ ಪದಕ, ನಾಭಿಯತನಕ ಶೃಂಗಾರಗೊಂಡ ಚಿನ್ನ ಹಾಗೂ ಮುತ್ತಿನ ಸರಗಳು ಅದಕ್ಕೆ ಹೊಂದಿಕೆಯಾಗುವ ಪಚ್ಚೆಯ ಪದಕಗಳು, ಕಟಿಬಂಧಕ, ಕೈಯಲ್ಲಿ ಚಿನ್ನದ ಬಳೆಗಳು (ಖಡಗ), ಕಾಲಲ್ಲಿ ತೋಡೆಗಳು ಸಂಯೋಜನೆಗೊಂಡಿವೆ. ಕೃಷ್ಣನ ಕೈಯಲ್ಲಿ ಶಂಖವಿದ್ದು, ಇಲ್ಲಿ ಹಳದಿ ಧೋತಿ, ಕೆಂಪು ದುಪ್ಪಟ ಹಾಗೂ ಹಸಿರು ಉತ್ತರೀಯವನ್ನು ಸಂಯೋಜಿಸಿ, ಅವುಗಳ ನಿರಿಗೆಗಳನ್ನು ವೈವಿಧ್ಯಮಯವಾಗಿ ರೂಪಗೊಳಿಸಲಾಗಿದೆ. ಅವುಗಳ ಅಂಚು ಚಿನ್ನದ ಎಳೆಯಿಂದ ನೆಯ್ದ ಚಿತ್ರವಿನ್ಯಾಸವು ಆಕರ್ಷಕವಾಗಿದೆ. ಕೃಷ್ಣನ ಪಾದದ ಕೆಳಗೆ ಪೀಠವನ್ನು, ಅವನ ಎಡ ಬಲಗಳಲ್ಲಿ ಫಲಪುಷ್ಪಗಳ ಚಿನ್ನದ ತಟ್ಟೆಗಳನ್ನು ಸಂಯೋಜಿಸಲಾಗಿದೆ.

ಚಿತ್ರದ ಹಿನ್ನೆಲೆಯು ಮಂಟಪದ ಬಾಹ್ಯ ಸ್ವರೂಪವು ಗೋಚರಿಸುತ್ತಿದ್ದು, ಅಲ್ಲಿ ನೈಸರ್ಗಿಕ ಚಿತ್ರವಿನ್ಯಾಸವು ಸಂಯೋಜನೆಗೊಂಡಿದೆ. ಇಲ್ಲಿ ಗಾಜಿನ ಚಿತ್ರ ಕಲಾವಿದರು ದೇವತಾ ಸ್ವರೂಪಿಯಾದ ಕೃಷ್ಣನನ್ನು ರೇಖೆ, ವರ್ಣಗಳಿಂದ ರೂಪಲಕ್ಷಣಗಳನ್ನು ನೀಡಿ ಭಕ್ತಿ ಭಾವವನ್ನು ಪ್ರಕಟಪಡಿಸಿದ್ದಾರೆ.

**ಚಿತ್ರಸಂಖ್ಯೆ ೧೦೨ ಶಿಶುಪಾಲನ ಸಂಹಾರ**

ಯುಧಿಷ್ಠಿರನು ರಾಜಸೂಯ ಯಾಗವನ್ನು ಏರ್ಪಡಿಸಿದ್ದನು. ಅದರಲ್ಲಿ ದೇಶದ ಎಲ್ಲ ರಾಜಮಹಾರಾಜರು, ಋಷಿಗಳು, ಬ್ರಾಹ್ಮಣ ಆಚಾರ್ಯರು, ಹಿರಿಯರು ಹಾಗೂ ದೇವಾನು ದೇವತೆಗಳು ಯಾಗವನ್ನು ನೋಡಲು ಬಂದಿದ್ದರು. ಅದರಲ್ಲಿ ಕೃಷ್ಣ ಶಿಶುಪಾಲರೂ ಪಾಲ್ಗೊಂಡಿದ್ದರು. ಈ ಯಾಗದಲ್ಲಿ ಅಗ್ರಪೂಜೆ ಯಾರಿಗೆ ಸಲ್ಲಬೇಕು ಎಂಬ ಪ್ರಸ್ತಾಪ ಬಂದಾಗ ಸಹದೇವನು ಶ್ರೀಕೃಷ್ಣನ ಹೆಸರನ್ನು ಸೂಚಿಸುತ್ತಾನೆ. ಇದನ್ನು ಸಭೆಯು ಸರ್ವಾನುಮತದಿಂದ ಒಪ್ಪಿಕೊಳ್ಳುತ್ತದೆ. ಆದರೆ ಶಿಶುಪಾಲನು ತೀವ್ರವಾಗಿ ವಿರೋಧಿಸಿ ಕೃಷ್ಣನನ್ನು ಅಪಮಾನ ಮಾಡುತ್ತಾನೆ. ಆ ಯಾಗವು ನಡೆಯದಂತೆ ನಡೆದುಕೊಳ್ಳುತ್ತಾನೆ. ಇದನ್ನರಿತ ಶ್ರೀಕೃಷ್ಣನು ತನ್ನ ಚಕ್ರದಿಂದ ಶಿಶುಪಾಲನ ಶಿರಚ್ಛೇಧನ ಮಾಡುತ್ತಾನೆ. ಆ ಕಥಾಪ್ರಸಂಗವು ಈ ಚಿತ್ರದಲ್ಲಿ ವ್ಯಕ್ತಗೊಂಡಿದೆ.

ಈ ಚಿತ್ರವು ೩೦ x ೩೦ ಸೆಂ.ಮೀ ಅಳತೆಯಲ್ಲಿ ರಚನೆಗೊಂಡಿದೆ. ಇಲ್ಲಿ ಕೃಷ್ಣನು ಶಿಶುಪಾಲನ ಶಿರಚ್ಛೇಧನ ಮಾಡುತ್ತಿರುವನು. ಕೃಷ್ಣನ ದೈಹಿಕ ರೂಪವನ್ನು ದೊಡ್ಡದಾಗಿ, ಶಿಶುಪಾಲನನ್ನು ಚಿಕ್ಕವನನ್ನಾಗಿ ಸಂಯೋಜಿಸಲಾಗಿದೆ. ಕೃಷ್ಣನು ಶಂಖ, ಚಕ್ರ ಹಾಗೂ ವಸ್ತ್ರಾಭರಣಗಳಿಂದ

ಭೂಷಿತನಾಗಿದ್ದು, ನೀಲಿ ಹಾಗೂ ಬಿಳಿವರ್ಣಗಳ ಮಿಶ್ರಣವು ನೈಜವಾಗಿ ಮೂಡಿಬಂದಿದೆ. ಶಿಶುಪಾಲನು ಪಚ್ಚೆಹಸಿರು ಬಣ್ಣವನ್ನು ಹೊಂದಿದ್ದು, ರಾಕ್ಷಸ ಸ್ವರೂಪವನ್ನು ಪ್ರತಿಬಿಂಬಿಸುವಂತೆ ಚಡ್ಡಿ (ಲಂಗೋಟಿ) ದುಪ್ಪಟಿಯನ್ನು ಚಿತ್ರಿಸಲಾಗಿದೆ. ಬಟ್ಟೆಯ ಅಂಚಿನಲ್ಲಿ ನಕ್ಷೆ ವಿನ್ಯಾಸ ರೂಪಗೊಂಡಿದೆ. ಶಿಶುಪಾಲನ ಶಿರವು ಮುಂಡದಿಂದ ಬೇರ್ಪಟ್ಟಿದೆ.

ಚಿತ್ರದ ಹಿನ್ನೆಲೆಯಲ್ಲಿ ಚಿತ್ರಾಲಂಕೃತ ಮಂಟಪದ ವಿನ್ಯಾಸವಿದ್ದು, ಕೆಂಪು ಬಣ್ಣದ ಲೇಪನ ಏಕರೂಪವಾಗಿ ಮೂಡಿಬಂದಿದೆ. ಚಿತ್ರವು ಸಾಂಕೇತಿಕವಾಗಿ ಅಭಿವ್ಯಕ್ತಗೊಂಡಿದ್ದು, ರೇಖಾ ಲಾವಣ್ಯತೆ ವರ್ಣಗಳ ಸರಳ ಸಂಯೋಜನೆ ಪ್ರಕಟಗೊಂಡಿದೆ.

**ಚಿತ್ರಸಂಖ್ಯೆ ೧೦೩ ಬಲರಾಮನು ಹಸ್ತಿನಾವತಿಯನ್ನು ಗಂಗೆಗೆ ಎಳೆಯುತ್ತಿರುವುದು.**

ಕುರುವಂಶದ ದೊರೆ ಸುಯೋಧನನ ಪುತ್ರಿ ಲಕ್ಷಣೆಯನ್ನು ಸ್ವಯೋವರದಲ್ಲಿ, ಶ್ರೀಕೃಷ್ಣ ಹಾಗೂ ಜಾಂಬುವತಿಯ ಮಗನಾದ ಸಾಂಬನು ಬಲತ್ಕಾರವಾಗಿ ಹೊತ್ತೊಯ್ಯುತ್ತಿರುವಾಗ ಅವನನ್ನು ಬಂಧಿಸಲಾಯಿತು. ಇದರಿಂದ ಕ್ರೋಧಗೊಂಡ ಯದು ದೊರೆಗಳು ಉಗ್ರಸೇನನ ಅಪ್ಪಣೆ ಪಡೆದು, ಬಲರಾಮನು ಹಸ್ತನಾಪುರಕ್ಕೆ ಬರುತ್ತಾನೆ. ಕೌರವರಲ್ಲಿ ಬಲರಾಮನ ಕುರಿತು ಗೌರವವಿದ್ದರೂ ಸಹ ಈ ಸಂದರ್ಭದಲ್ಲಿ ಅವನನ್ನು ಅವನ ವಂಶವನ್ನು ನಿಂಧಿಸುತ್ತಾರೆ. ಸಾಂಬ-ಲಕ್ಷಣೆಯರನ್ನು ಕಳಿಸಲೊಪ್ಪುವುದಿಲ್ಲ. ಆಗ ಕ್ರೋಧಗೊಂಡು ತನ್ನ ಆ ಹಾಲಾಯುಧ (ನೇಗಿಲು) ದಿಂದ ಇಡೀ ಹಸ್ತನಾಪೂರ ನಗರವನ್ನೇ ಗಂಗಾ ನದಿಗೆ ಎಳೆಯಲು ಪ್ರಾರಂಭಿಸುತ್ತಾನೆ. ಇದನ್ನರಿತ ಕೌರವರು ಭಯಗೊಂಡು ಬಲರಾಮನಿಗೆ ಶರಣಾಗುತ್ತಾರೆ. ಅವರನ್ನು ಮದುವೆ ಕೊಡಲು ಒಪ್ಪುತ್ತಾರೆ. ಈ ಕಥಾಪ್ರಸಂಗವನ್ನು ಗಾಜಿನ ಮೇಲಿನ ಚಿತ್ರವು ಅಭಿವ್ಯಕ್ತಪಡಿಸುತ್ತಿದೆ.

ಇಲ್ಲಿ ವಸ್ತ್ರಾಭರಣಗಳಿಂದ ಭೂಷಿತನಾದ ಬಲರಾಮನು ನೇಗಿಲಿನಿಂದ ಭೂಮಿಯನ್ನು ಅಗಿಯುತ್ತಿರುವಂತೆ ರೂಪಗೊಂಡಿರುವನು. ನೇಗಿಲಿನ ಆಕಾರವು ರೇಖಾಪ್ರಧಾನವಾಗಿದ್ದು, ಅದರ ತುದಿಯು ತೀಕ್ಷತೆಯನ್ನು ಸೂಚಿಸುತ್ತದೆ. ಚಿತ್ರದಲ್ಲಿ ಹಸ್ತಿನಾವತಿ ನಗರವನ್ನು ಸಂಕೇತಿಸುವಂತೆ ಒಂದು ದೇವಸ್ಥಾನವನ್ನು ಚಿತ್ರಿಸಲಾಗಿದೆ. ಕುರು ದೊರೆಗಳು ಸಂದಾನಕ್ಕೆ ಒಪ್ಪಿಕೊಳ್ಳುವಂತೆ ಇಬ್ಬರು ವ್ಯಕ್ತಿಗಳು ಸೂಚಿತರಾಗಿದ್ದಾರೆ. ಒಬ್ಬ ಕಿರೀಟಧಾರಿಯಾಗಿದ್ದು ಇನ್ನೊಬ್ಬ ಆಚಾರ್ಯನಂತೆ ಭೂಷಿತರಾಗಿದ್ದಾರೆ. ಮಣ್ಣಿನ ಗುಡ್ಡೆ ಹಾಗೂ ನದಿಯ ಸ್ವರೂಪವನ್ನು ರೇಖಾವಿನ್ಯಾಸದಿಂದ, ಕಂದುಗೆಂಪು ಹಾಗೂ ಬಿಳಿವರ್ಣಗಳನ್ನು ಲೇಪನಮಾಡಲಾಗಿದೆ. ಹಳದಿ, ಹಸಿರು, ನಸುಗೆಂಪು, ಬಿಳಿ ಹಾಗೂ ಕಪ್ಪು ವರ್ಣಗಳಿಂದ ರಚನೆಗೊಂಡ ಈ ಚಿತ್ರವು ಮಿತವಾದ ಅಲಂಕಾರದ ಆಶಯದೊಂದಿಗೆ ಉತ್ತಮ ಭಾವನಾನಿರೂಪಣೆಯನ್ನು ಪ್ರಕಟಪಡಿಸುತ್ತದೆ.

**ಚಿತ್ರಸಂಖ್ಯೆ ೧೦೪ ಹನುಮಂತನು ಸಂಜೀವಿನಿ ಪರ್ವತ ತಂದಿದ್ದು**

ಇಂದ್ರಜೀತನ ಮಾಯಾ ಬಾಣಕ್ಕೆ ಮೂರ್ಚಿತನಾದ ಲಕ್ಷ್ಮಣನನ್ನು ಬದುಕಿಸಲು ಸಂಜೀವಿನಿ ಗಿಡವನ್ನು ತರಲು ಹನುಮಂತನಿಗೆ ಹೇಳಲಾಯಿತು. ಆಗ ಹನುಮಂತನು ಹಿಮಾಲಯಕ್ಕೆ ಹೋಗಿ ಸಂಜೀವಿನಿ ಗಿಡವನ್ನು ಹುಡುಕಲು ವಿಫಲನಾಗಿ ಇಡೀ ಪರ್ವತವನ್ನು ಎತ್ತಿ ಲಂಕೆಗೆ ತರುತ್ತಾನೆ. ಆ ದೃಶ್ಯವು ಈ ಚಿತ್ರದಲ್ಲಿ ಮೂಡಿಬಂದಿದೆ.





೮೩. ಗೋವರ್ಧನ ಗಿರಿಧಾರಿ

೮೪. ಕೃಷ್ಣ-ರಾಧೆ





೮೫. ಕೃಷ್ಣ-ರಾಧೆ

೮೬. ಕೃಷ್ಣ-ರಾಧೆ



ಗಾಜಿನ ಮೇಲಿನ ಕೃಷ್ಣನ ಬರ್ಮಾದ ಚಿತ್ರಗಳು





೧೦೧ ಕೃಷ್ಣ



೧೦೨ ಶಿಶುಪಾಲ ಸಂಹಾರ



೧೦೩. ಬಲರಾಮನು ಹಸ್ತಿನಾವತಿ ನಗರವನ್ನು
ಗಂಗೆಗೆ ಎಳೆಯುತ್ತಿರುವುದು

೧೦೪. ಹನುಮಂತನು ಸಂಜೀವಿನಿ
ಪರ್ವತ ತಂದಿದ್ದು



ಗಾಜಿನ ಮೇಲಿನ ವೈಷ್ಣವ ಧರ್ಮದ ಚಿತ್ರಗಳು

ಇಲ್ಲಿ ಸಾಂಕೇತಿಕವಾಗಿ ಹನುಮಂತನು ಪರ್ವತವನ್ನು ಎತ್ತಿ ನಡೆದಿರುವಂತೆ ಚಿತ್ರಿಸಲಾಗಿದೆ. ಇವನ ದೈಹಿಕ ರೂಪರೇಶಗಳು ಚಲನೆಯುಕ್ತವಾಗಿದ್ದು, ಕೆಂಪು ಚಡ್ಡಿ, ದುಪ್ಪಟ, ಉತ್ತರೀಯ ಹಾಗೂ ಪುಷ್ಪಮಾಲೆಯನ್ನು ಚಿತ್ರವಿನ್ಯಾಸದಿಂದ ರಚಿಸಲಾಗಿದ್ದು, ಹನುಮಂತನು ಹಸಿರು ಬಣ್ಣವನ್ನು ಹೊಂದಿರುವನು. ಪರ್ವತದ ಚಿತ್ರವು ವೃತ್ತಾಕಾರದ ನಕ್ಷೆಗಳಿಂದ ಕೂಡಿದ ಅಂಡಾಕಾರದಂತೆ ರಚನೆಗೊಂಡಿದೆ. ಮುನ್ನೆಲೆಯಲ್ಲಿ ಪರ್ವತಗಳ ಸಾಲಿನಂತೆ ಭೂದೃಶ್ಯವು ಸಂಯೋಜನೆಗೊಂಡಿದೆ. ಹಿನ್ನೆಲೆಯು ದಟ್ಟ ಗುಲಾಬಿ ವರ್ಣದಿಂದ ಚಪ್ಪಟೆಯಾಗಿ ಲೇಪನ ಮಾಡಲಾಗಿದೆ. ಹನುಮಂತನ ವೇಷಭೂಷಣಗಳಲ್ಲಿ ಜ್ಯಾಮಿತಿಕ ಹಾಗೂ ಅಲಂಕಾರಿಕ ಚಿತ್ರವಿನ್ಯಾಸಗಳು ಸೃಜನಾತ್ಮಕ ರೇಖೆಗಳಿಂದ, ಆಕರ್ಷಕ ವರ್ಣಗಾರಿಕೆಯಿಂದ ರಚನೆಗೊಂಡಿವೆ. ಚಿತ್ರದಲ್ಲಿ ಯಥಾದರ್ಶನ ಹಾಗೂ ಭಾವಾವೇಶವೂ ಸಮಯೋಚಿತವಾಗಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೧೦೫, ೧೦೬ ಕಲ್ಕಿ**

ವಿಷ್ಣುವಿನ ಅವತಾರಗಳಲ್ಲಿ ಕೊನೆಯದು; ಕಲಿಯುಗದ ಅತ್ಯಂತದಲ್ಲಿ ಸಂಬಲನೆಂದು ಗ್ರಾಮದ ಬ್ರಾಹ್ಮಣನಾದ ವಿಷ್ಣುಯಶ ಮತ್ತು ಸುಮತಿಯರಿಗೆ ಮಗನಾಗಿ ಈತನು ಹುಟ್ಟಿ ಪರಶುರಾಮನಿಂದ ವಿದ್ಯಾಭ್ಯಾಸ ಮಾಡಿದನು. ಮುಂದೆ ಶಿವನ ಅನುಗ್ರಹಕ್ಕೆ ಪಾತ್ರನಾಗಿ ಒಂದು ಖಡ್ಗ, ಒಂದು ಉತ್ತಮ ಕುದುರೆ ಮತ್ತು ಒಂದು ಗಿಳಿಯನ್ನು ಆತನಿಂದ ಪಡೆದನು. ಇವನು ಸಿಂಹಳ ದ್ವೀಪದ ರಾಜನಾದ ಬೃಹದ್ರಥನ ಮಗಳಾದ ಪದ್ಮಾವತಿಯನ್ನು ಲಗ್ನವಾದನು. ಇವನೇ ಕಲಿಯನ್ನೂ, ದುಷ್ಟರನ್ನು ನಾಶಮಾಡಿ ದೇಶದಲ್ಲಿ ಪುನಃ ಧರ್ಮಸಂಸ್ಥಾಪನೆಯನ್ನು ಮಾಡಿದನು[೧೧]

ಈ ಕಲ್ಕ್ಯಾವತಾರದ ಕುರಿತು ಗಾಜಿನ ಮೇಲಿನ ಚಿತ್ರಕಲಾವಿದರು ಹಲವಾರು ಚಿತ್ರಗಳನ್ನು ರಚಿಸಿದ್ದಾರೆ. ಆ ಅವತಾರದ ವಿವಿಧ ಪ್ರಸಂಗಗಳನ್ನು ತಿಳಿಸುವ ಅನೇಕ ಚಿತ್ರಗಳು ಗಾಜಿನ ಮೇಲೆ ವಿವಿಧ ಚಿತ್ರಶೈಲಿಗಳಲ್ಲಿ ರಚನೆಗೊಂಡಿರಬಹುದು. ಹಾಗೂ ಸಂದರ್ಭಾನುಸಾರವಾಗಿ ಈ ಕಲ್ಕಿಯನ್ನು ಬೇರೆ ಬೇರೆ ಚಿತ್ರಗಳಲ್ಲಿ ಚಿತ್ರಿಸಿದ್ದನ್ನು ವಿವೇಚಿಸಬಹುದು. ಆದರೆ ನನ್ನ ಅಧ್ಯಯನದ ಸಂದರ್ಭದಲ್ಲಿ ದೊರೆತ ಎರಡು ಚಿತ್ರಗಳಲ್ಲಿ ವಿಷ್ಣುವಿನ ಶರೀರಕ್ಕೆ ಕುದುರೆಯ ಮುಖವನ್ನು ಸಂಯೋಜಿಸಿ ಅವನ ರೂಪರೇಶವನ್ನು ಚಿತ್ರಿಸಿದ್ದು ಕಾಣುತ್ತೇವೆ.

ಈ ಎರಡೂ ಚಿತ್ರಗಳು ಬೇರೆ ಬೇರೆ ಅಳತೆಯಲ್ಲಿ ರಚನೆಗೊಂಡಿದ್ದು, ರೇಖೆ ಹಾಗೂ ವರ್ಣ ಸಂಯೋಜನೆಯಲ್ಲಿ ಸ್ವಲ್ಪ ವ್ಯತ್ಯಾಸ ಕಂಡು ಬರುತ್ತಿದೆ. ಚಿತ್ರ ೧೦೫ ರಲ್ಲಿ ಚತುರ್ಭುಜಧಾರಿಯಾದ ಕಲಿಯು ಎರಡು ಕೈಗಳಲ್ಲಿ ಶಂಖ, ಚಕ್ರವನ್ನೂ, ಇನ್ನೊಂದು ಕೈಗಳಲ್ಲಿ ಕತ್ತಿ ಮತ್ತು ಗುರಾಣಿಯನ್ನು ಹಿಡಿದಿರುವನು. ಇಲ್ಲಿ ವಿಶೇಷ ಪುಷ್ಪಮಾಲೆಯನ್ನು ಧರಿಸಿದ್ದು, ಸ್ವರ್ಣಕಿರೀಟ, ಕಂಠಾಭರಣಗಳು, ತೋಳ್ಬಂಧಕಗಳು, ಕೈಗಳಲ್ಲಿ ಚಿನ್ನದ ಕಡಗಗಳು, ಕಾಲಲ್ಲಿ ಚಿನ್ನದ ತೋಡೆಗಳು ಅಲಂಕರಿಸಿವೆ. ಈ ವಿವರಣೆಯು ಚಿತ್ರ ೧೦೬ ರಲ್ಲಿ ಯಥಾವತ್ತಾಗಿ ಮೂಡಿಬಂದಿದೆ. ಎರಡೂ ಚಿತ್ರಗಳಲ್ಲಿ ಮೈಬಣ್ಣವನ್ನು ಶ್ವೇತವರ್ಣದಿಂದ ಸಂಯೋಜಿಸಿದ್ದು, ಬಿಳಿ, ಹಳದಿ, ಹಸಿರು, ಕೆಂಪು, ಚಿನ್ನದ ರೇಖುಗಳು ಧೋತಿ, ಉತ್ತರೀಯ, ದುಪ್ಪಟಗಳಲ್ಲಿ ವ್ಯಕ್ತಗೊಂಡಿವೆ.

೧೧. ಯಜ್ಞ ನಾರಾಯಣ ಉಡುಪ ; ಪುರಾಣ ಭಾರತಕೋಶ, ಪುಟ ೧೦೪

ಚಿತ್ರ ೧೦೫ ರಲ್ಲಿ ಹಿನ್ನೆಲೆಯು ಅಲಂಕಾರಿಕ ಮಂಟಪ, ಸುತ್ತಲೂ ನೈಸರ್ಗಿಕ ಚಿತ್ರವಿನ್ಯಾಸದ ಅಂಚನ್ನು ಹೊಂದಿದೆ. ಇಲ್ಲಿ ಕೆಂಪು ಬಣ್ಣವು ಪ್ರಧಾನವಾಗಿ ಲೇಪನಗೊಂಡಿದ್ದು, ಅದರಿಂದ ಚಿತ್ರವು ಬೇರ್ಪಟ್ಟಿದೆ. ಜೊತೆಗೆ ಭೂದೃಶ್ಯವು ದಿನ್ನೆಗಳ ಸಂಕೀರ್ಣದಿಂದ ಪ್ರಕಟಗೊಂಡಿದೆ. ಈ ವಿವರಣೆಯು ಚಿತ್ರ ೧೦೬ ರಲ್ಲಿ ಕಾಣುವುದಿಲ್ಲ. ಇದು ಮಿತವಾದ ಅಲಂಕರಣದಿಂದ, ರೇಖಾ ಲಾವಣ್ಯದಿಂದ ಅಭಿವ್ಯಕ್ತಗೊಂಡರೆ, ಚಿತ್ರ ೧೦೫ ರಲ್ಲಿ ಅಲಂಕಾರದ ವೈಭವವು ಸ್ವಲ್ಪ ಓರಣಗೊಂಡಿರುವುದು ಕಂಡು ಬರುತ್ತದೆ.

**ಚಿತ್ರಸಂಖ್ಯೆ ೧೦೭ ದಶಾವತಾರಗಳ ಸಂಯೋಜನಾ ಚಿತ್ರಗಳು**

ಕರ್ನಾಟಕದಲ್ಲಿ ವಿಷ್ಣುವಿನ ದಶಾವತಾರಗಳ ಸಂಯೋಜನಾ ಚಿತ್ರಗಳು ಗಾಜಿನ ಮೇಲೆ ರಚನೆಗೊಂಡಿರುವುದನ್ನು ಕಾಣುತ್ತೇವೆ. ಇವು ತೂಗುಹಾಕುವ ಹಾಗೂ ವಿವಿಧ ವಸ್ತುಗಳಲ್ಲಿ ಅಳವಡಿಸಿದ ಗಾಜಿನ ಮೇಲೆ ಚಿತ್ರಿತಗೊಂಡಿರುವುದು ಗಮನಕ್ಕೆ ಬರುತ್ತವೆ. ಇಲ್ಲಿ ರಚನೆಗೊಂಡಿರುವ ಗಾಜಿನ ಚಿತ್ರಗಳಲ್ಲಿ ಮಾನವನ ಶರೀರಕ್ಕೆ ಸಾಂಕೇತಿಕವಾಗಿ, ಅವತಾರಕ್ಕನುಗುಣವಾಗಿ ಪ್ರಾಣಿಗಳನ್ನು ಕಲ್ಪಿಸಿದ ಸಂಯೋಜನೆಯ ರೂಪಲಕ್ಷಣಗಳು ಪ್ರಧಾನವಾಗಿ ಮೂಡಿಬಂದಿವೆ. ದೇವತೆಯ ಸ್ವರೂಪವನ್ನು ವ್ಯಕ್ತಪಡಿಸಲು ಚತುರ್ಭುಜಗಳನ್ನು, ಕೀಟಾಭರಣಗಳನ್ನು ವೇಷಭೂಷಣಗಳನ್ನು ಹಾಗೂ ವಸ್ತುಗಳನ್ನು ಸಂಯೋಜಿಸಲಾಗಿದೆ. ಅದಕ್ಕೆ ತಕ್ಕ ಹಿನ್ನೆಲೆಯನ್ನು ಹಾಗೂ ಮುನ್ನೆಲೆಯನ್ನು ಪ್ರಕಟಪಡಿಸಲಾಗಿದೆ.

ಧರ್ಮಸ್ಥಳದ 'ಮಂಜುಷಾ' ವಸ್ತುಸಂಗ್ರಹಾಲಯದಲ್ಲಿ ದಶಾವತಾರಗಳ ಸಂಯೋಜನಾ ಚಿತ್ರವು ಲಭ್ಯವಿದ್ದು, ಇದು ೪೫ x ೬೦ ಸೆಂ.ಮೀ ಅಳತೆಯನ್ನು ಹೊಂದಿದೆ. ಈ ಚಿತ್ರದಲ್ಲಿ ಚೌಕಾಕಾರದ ಪಟ್ಟಿಕೆಗಳ ಒಂದೊಂದು ಖಾನೆಗಳಲ್ಲಿ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬೌದ್ಧ ಹಾಗೂ ಕಲ್ಕ್ಯಾವತಾರಗಳ ಸಮೂಹವು ಚಿತ್ರಿತಗೊಂಡಿದ್ದು, ಎಲ್ಲವೂ ಸಾಂಕೇತಿಕವಾಗಿ ಮೂಡಿಬಂದಿವೆ. ಮಧ್ಯದ ಪಟ್ಟಿಯಲ್ಲಿ ಕೃಷ್ಣಾವತಾರಕ್ಕೆ ಸಂಬಂಧಿಸಿದಂತೆ ವೇಣುಗೋಪಾಲನ ಚಿತ್ರವು ರಚನೆಗೊಂಡಿದೆ. ಇಲ್ಲಿ ಗೋಪಾಲನು ಕೊಳಲನ್ನು ನುಡಿಸುತ್ತಿರುವನು. ಕದಂಬ ಮರ, ಗೋವು ಹಾಗೂ ಗೋಪ ಸ್ತ್ರೀಯರನ್ನು ಸಂಯೋಜಿಸಲಾಗಿದೆ. ಚಿತ್ರದ ಮೇಲಿನ ಚೌಖಾನೆಯಲ್ಲಿ ವೈಷ್ಣವ ಸಂಕೇತಗಳಾದ ಶಂಖ, ಚಕ್ರ ಹಾಗೂ ನಾಮಗಳನ್ನು ಚಿತ್ರಿಸಿದೆ. ಪ್ರತಿಯೊಂದು ಚೌಖಾನೆಯು ವಿಶಿಷ್ಟವಾಗಿ ಕಮಾನುಗಳ ರೂಪಗಳಲ್ಲಿ ರೂಪಗೊಂಡಿದ್ದು ರೇಖೆ ಹಾಗೂ ವರ್ಣಗಳಿಂದ ಸೃಜನಾತ್ಮಕ ವಿವರಣೆಗಳು ಅಭಿವ್ಯಕ್ತಗೊಂಡಿವೆ.

ನವಲಗುಂದದ ಎರಡು ಮನೆತನಗಳಲ್ಲಿ ಗಣಪತಿಯ ಕಟ್ಟಿಗೆಯ ಮಂಟಪದ ಸುತ್ತಲೂ ಚಿಕ್ಕ ಚಿಕ್ಕ ಚೌಕಾಣೆಗಳಿಗೆ ಗಾಜಿನ ಫಲಕಗಳನ್ನು ಅಳವಡಿಸಿದ್ದು ಅವುಗಳಲ್ಲಿ ದಶಾವತಾರದ ಚಿತ್ರಗಳು ರಚನೆಗೊಂಡಿವೆ. ಈ ಎರಡೂ ಮಂಟಪಗಳಲ್ಲಿನ ಗಾಜಿನ ಚಿತ್ರಗಳು ಒಂದೇ ರೀತಿಯ ರೇಖೆ ಹಾಗೂ ವರ್ಣಗಳಲ್ಲಿ ಒಂದೇ ಶೈಲಿಯಲ್ಲಿ ರಚನೆಗೊಂಡಿದ್ದು, ಇವುಗಳನ್ನು ಒಬ್ಬನೇ ಕಲಾಕಾರನು ರಚಿಸಿದ್ದಾನೆ. ಈ ಪಟ್ಟಿಕೆಗಳಲ್ಲಿನ ಚಿತ್ರಗಳು ರೇಖಾಪ್ರಧಾನವಾಗಿದ್ದು, ಚಪ್ಪಟೆ ವರ್ಣವಿಧಾನವನ್ನು ಅನುಸರಿಸಲಾಗಿದೆ. ಪ್ರಧಾನವಾಗಿ ಬಿಳಿ, ಹಸಿರು, ಕೆಂಪು, ನೀಲಿ, ಕಪ್ಪು ಬಣ್ಣಗಳು ಸಂಯೋಜನೆಗೊಂಡಿವೆ.

ಮೂರು ಭಾಗಗಳಲ್ಲಿ ಕಂಡು ಬರುವ ಸಂಯೋಜನೆಯ ಚಿತ್ರಗಳು ಆಕೃತಿಗಳ ದೈಹಿಕ ಲಕ್ಷಣಗಳಲ್ಲಿ ದುಂಡುತನ, ಅಲಂಕಾರ ರೇಖೆಗಳ ವೈವಿಧ್ಯತೆ ಮತ್ತು ಭಾವನಾ ನಿರೂಪಣೆಯೂ ಕಲಾವಿದನ ಅನುಭವ ಹಾಗೂ ಆಶಯದೊಂದಿಗೆ ಪ್ರಕಟಗೊಂಡಿವೆ.

**ಚಿತ್ರಸಂಖ್ಯೆ ೧೦೮, ೧೦೯, ೧೧೦, ೧೧೧, ೧೧೨, ೧೧೩, ೧೧೪ ಗಜಲಕ್ಷ್ಮೀ**

ಈಕೆ ಶ್ರೀಮನ್ ನಾರಾಯಣನ ಪತ್ನಿ. ಈಕೆ ಸಮುದ್ರ ಮಥನ ಕಾಲದಲ್ಲಿ ಹುಟ್ಟಿದವಳು. ನಾರಾಯಣನು ಬೇರೆ ಬೇರೆ ಅವತಾರಗಳನ್ನು ತೆತ್ತರೆ ಇವಳೂ ಅವನನ್ನು ಹಿಂಬಾಲಿಸಿದವಳು. ರಾಮಾವತಾರದಲ್ಲಿ ಸೀತೆಯಾಗಿ, ಕೃಷ್ಣಾವತಾರದಲ್ಲಿ ರುಕ್ಮೀಣಿಯಾಗಿ ಜನಿಸಿದವಳು. ಇವಳೂ ಸಹ ಶ್ರೀಮನ್ ನಾರಾಯಣನಂತೆ ಸರ್ವವ್ಯಾಪಿಯಾಗಿ ಇರುವವಳು. ಇಂಥ ಲಕ್ಷ್ಮೀಯ ಕುರಿತಾಗಿ ಅನೇಕ ಗಾಜಿನ ಚಿತ್ರಗಳು ರಚನೆಗೊಂಡಿದ್ದು ಇಲ್ಲಿ ಸುಮಾರು ಏಳು ಚಿತ್ರಗಳು ಲಭ್ಯ ಇವೆ. ಈ ಎಲ್ಲ ಚಿತ್ರಗಳೂ ಒಂದೇ ಆಶಯಗಳನ್ನು ಹೊಂದಿವೆ. ಹಾಗೂ ವಿವಿಧ ಅಳತೆಗಳಲ್ಲಿ ರಚನೆಗೊಂಡಿವೆ.

ಚಿತ್ರಸಂಖ್ಯೆ ೧೧೪ ನ್ನು ಹೊರತು ಪಡಿಸಿ ಇನ್ನುಳಿದ ಚಿತ್ರಗಳು ಒಂದೇ ರೀತಿಯ ಪ್ರತಿರೂಪ ಪಡದುಕೊಂಡಿರುವ ಚಿತ್ರಗಳಾಗಿವೆ. ಇಲ್ಲಿ ಚತುರ್ಭುಜಧಾರಿಯಾದ ಮಹಾಲಕ್ಷ್ಮೀಯು ವಸ್ತ್ರಾಭರಣಗಳಿಂದ ಭೂಷಿತಗೊಂಡು, ಪದ್ಮಾಸನದಲ್ಲಿ ಬಿಳಿ ಹಾಗೂ ತೆಳು ಗುಲಾಬಿ ಬಣ್ಣದ ತಾವರೆಯ ಮೇಲೆ ಕುಳಿತಿರುವಳು. ಸಾಂಪ್ರದಾಯಿಕ ಸೀರೆ, ಕುಪ್ಪಸ ಧರಿಸಿದ್ದು, ಅವುಗಳನ್ನು ಚಿತ್ರವಿನ್ಯಾಸಗಳಿಂದ ರಚಿಸಲಾಗಿದೆ. ಕಿರೀಟ, ಕರ್ಣಾಭರಣಗಳು, ಕಂಠಾಭರಣಗಳು, ರತ್ನಖಚಿತ ಪದಕಗಳು, ವಿವಿಧ ಪಚ್ಚೆಯ ಹರಳುಗಳು, ಕಟಿಬಂಧಕಾಭರಣಗಳು, ವಿವಿಧ ಒಡ್ಯಾಣಗಳು, ಚಿನ್ನದ ಬಳೆಗಳು, ಚಿನ್ನದ ತೋಡೆಗಳು ಹಾಗೂ ವೈವಿಧ್ಯಮಯವಾದ ಪುಷ್ಪಗಳ ಮಾಲೆಗಳನ್ನು ಧರಿಸಿರುವಳು.

ಇಲ್ಲಿ ಲಕ್ಷ್ಮೀಯು ಎರಡು ಕೈಗಳಲ್ಲಿ ತಾವರೆಗಳನ್ನು ಹಿಡಿದಿದ್ದು, ಇನ್ನೆರಡು ಕೈಗಳನ್ನು ಅಭಯಹಸ್ತ ಹಾಗೂ ವರದ ಹಸ್ತ ರೂಪದಲ್ಲಿ ಚಿತ್ರಿತಗೊಂಡಿರುವಳು. ಚಿತ್ರಸಂಖ್ಯೆ ೧೦೮, ೧೧೧, ೧೧೨, ೧೧೩ ರಲ್ಲಿ ಚಿನ್ನದ ಪೀಠಗಳನ್ನು ರಚಿಸಲಾಗಿದ್ದು, ಅವುಗಳನ್ನು ಜಾಮಿತಿಕ ನಕ್ಷೆಗಳಿಂದ ಅಲಂಕೃತಗೊಳಿಸಲಾಗಿದೆ. ಚಿತ್ರ ೧೦೯, ೧೧೦ ರಲ್ಲಿ ಶ್ವೇತ ವರ್ಣದ ವಾತರೆಗಳು ದೊಡ್ಡ ಗಾತ್ರಗಳಲ್ಲಿ ರೂಪಗೊಂಡಿದ್ದು, ಹಿನ್ನೆಲೆಯ ಅಲಂಕಾರಿಕ ಪ್ರಭಾವಳಿಗಳು ಒಂದೇ ರೂಪವನ್ನು ಹೊಂದಿವೆ. ಆಕರ್ಷಕ ಚಿತ್ರವಿನ್ಯಾಸಗಳಿಂದ ಕೂಡಿದ ಈ ಪ್ರಭಾವಳಿಗಳು ಚಿನ್ನದ ಮೆರಗನ್ನು ಪಡದುಕೊಂಡಿವೆ. ಇದಕ್ಕೆ ವಿಶಿಷ್ಟವಾದ ಪುಷ್ಪಗಳ ಮಾಲೆಗಳನ್ನು ಅಲಂಕರಿಸಲಾಗಿದೆ.

ಎಲ್ಲ ಚಿತ್ರಗಳಲ್ಲಿಯೂ ಲಕ್ಷ್ಮೀಯ ಎಡ ಹಾಗೂ ಬಲಪಾರ್ಶ್ವಗಳಲ್ಲಿ ಶ್ವೇತವರ್ಣಗಳ ಗಜಗಳು ಚಿನ್ನದ ಕುಂಭಗಳಿಂದ ಸೊಂಡಿಲುಗಳಿಂದ ಕ್ಷೀರವನ್ನು ಸುರಿಸುತ್ತಿರುವಂತೆ ಬಿಂಬಿತವಾಗಿವೆ. ಇವುಗಳನ್ನು ವಿಶಿಷ್ಟವಾಗಿ ವಸ್ತ್ರಾಭರಣಗಳಿಂದ ರಚಿಸಿದ್ದು, ಅವುಗಳಿಗೆ ವರ್ಣಮಯ ಪರದೆಗಳನ್ನು ರಚಿಸಲಾಗಿದೆ. ಪರದೆಯ ಅಂಚುಗಳು ಚಿತ್ರವಿನ್ಯಾಸಗಳಿಂದ ಸಂಯೋಜನೆಗೊಂಡಿವೆ. ಚಿತ್ರಸಂಖ್ಯೆ ೧೧೧, ೧೧೨ ರಲ್ಲಿ ಚಿತ್ರಗಳ ಸುತ್ತಲೂ ಎಲೆ ಹಾಗೂ ಹೂವುಗಳ ನೈಸರ್ಗಿಕ ಚಿತ್ರವಿನ್ಯಾಸಗಳು

ರಚನೆಗೊಂಡಿವೆ. ಮಂಟಪದ ವಿನ್ಯಾಸಗಳಲ್ಲಿ ಆಕರ್ಷಕ ನಕ್ಷೆಗಳ ಸುಳುಹುಗಳು ವ್ಯಕ್ತಗೊಂಡಿವೆ. ಬಿಳಿ ಹಾಗೂ ನೀಲಿ ಬಣ್ಣಗಳ ಮಿಶ್ರಣದಿಂದ ಕ್ಷೀರಸಾಗರವನ್ನು ಚಿತ್ರಿಸಲಾಗಿದ್ದು, ಇದು ಸಾಂಕೇತಿಕವಾಗಿ ಪ್ರಕಟಗೊಂಡಿದೆ.

ಚಿತ್ರಸಂಖ್ಯೆ ೧೧೪ ಈ ಚಿತ್ರವು ಆಧುನಿಕ ಶೈಲಿಯಲ್ಲಿ ರೂಪಗೊಂಡಿದ್ದು, ಚತುರ್ಭುಜಧಾರಿಯಾದ ಲಕ್ಷ್ಮೀಯು ಅರಳಿದ ನಸುಗೆಂಪು ತಾವರೆಯ ಮೇಲೆ ನಿಂತಿರುವಳು. ಇವಳ ವಸ್ತ್ರಾಭರಣಗಳ ವಿನ್ಯಾಸವು ಸಮಕಾಲೀನ ಸ್ತ್ರೀಯಂತೆ ಅಭಿವ್ಯಕಗೊಂಡಿವೆ. ಎರಡು ಕೈಗಳಲ್ಲಿ ತಾವರೆಗಳು ಇನ್ನೆರಡು ಕೈಗಳು ವರದ ಹಸ್ತ ಹಾಗೂ ಅಭಯ ಹಸ್ತಗಳನ್ನು ಸೂಚಿಸುತ್ತವೆ.

ಚಿತ್ರದ ಹಿನ್ನೆಲೆಯಲ್ಲಿ ಸುಂದರವಾದ ಪ್ರಕೃತಿ ಹಾಗೂ ಸರೋವರದ ಪರಿಕಲ್ಪನೆಯು ವ್ಯಕ್ತಗೊಂಡಿದೆ. ಇಲ್ಲಿ ಲಕ್ಷ್ಮೀಯ ಎಡಪಾರ್ಶ್ವದಲ್ಲಿ ಪುಷ್ಪಮಾಲೆಯನ್ನು ಹಿಡಿದ ಗಜದ, ಮುಖಮಾತ್ರ ರಚನೆಗೊಂಡಿದೆ. ಸರೋವರದಲ್ಲಿ ಹಂಸಪಕ್ಷಿ, ತಾವರೆಯ ಹೂವುಗಳು ಸಂಯೋಜನೆಗೊಂಡಿದ್ದು, ಬಂಡೆಕಲ್ಲುಗಳು, ಮರಗಳು ರಚನೆಗೊಂಡಿವೆ. ನೀಲಿ ಹಾಗೂ ಬಿಳಿಮಿಶ್ರಿತ ಆಕಾಶವು ವ್ಯಕ್ತಗೊಂಡಿದೆ. ಚಿತ್ರವು ಬೆಳಕು ನೆರಳುಗಳ ಸಂಯೋಜನೆ ಹಾಗೂ ವಸ್ತುಗಳ ಯಥಾದರ್ಶನವು ಉತ್ತಮವಾಗಿ ಮೂಡಿಬಂದಿದೆ.

ಚಿತ್ರಸಂಖ್ಯೆ ೧೧೪ ನ್ನು ಬಿಟ್ಟು ಇನ್ನುಳಿದ ಆರು ಚಿತ್ರಗಳು ರೇಖೆ, ವರ್ಣ ಹಾಗೂ ಭಾವನಾನಿರೂಪಣೆ, ಅಲಂಕರಣದ ಆಶಯ, ಯಥಾದರ್ಶನ, ವಸ್ತುಗಳ ಸಂಯೋಜನೆಗಳು ಕಲಾವಿದರ ಚಿತ್ರಪ್ರಜ್ಞೆ, ಅಲಂಕಾರ ಪ್ರಜ್ಞೆ, ಸೌಂದರ್ಯ ಪ್ರಜ್ಞೆ ಹಾಗೂ ವಿಷಯ ಗ್ರಹಿಕೆಗಳನ್ನು ಅವಲಂಬಿಸಿ ರಚನೆಗೊಂಡಿವೆ. ಬಹುತೇಕ ಎಲ್ಲ ಚಿತ್ರಗಳಲ್ಲಿ ಕೆಂಪು, ಬಿಳಿ, ಕಪ್ಪು, ಹಸಿರು, ನೀಲಿ ಹಾಗೂ ಹಳದಿ ವರ್ಣಗಳ ಮಿಶ್ರಣಗಳು ಮೇಳೈಸಿದ್ದು, ಪ್ರಧಾನವಾಗಿ ಚಿನ್ನದ ರೇಖು ಲೇಪನಗೊಂಡಿದೆ.

ವೈಷ್ಣವ ಗಾಜಿನ ಮೇಲಿನ ಚಿತ್ರಗಳ ರಚನೆಯಲ್ಲಿ ಬಹುತೇಕ ಪೌರಾಣಿಕ ಹಿನ್ನೆಲೆಯನ್ನೊಳಗೊಂಡ ಕಥಾಪ್ರಸಂಗಗಳು ಭಿತ್ತರಗೊಂಡಿವೆ. ಈ ಪುರಾಣ ಪ್ರಸಂಗಗಳಲ್ಲಿ ಬರುವ ದೇವಾನು ದೇವತೆಗಳ ಹಾಗೂ ಅವತಾರಗಳ ವಿವಿಧ ಹಿನ್ನೆಲೆಗಳನ್ನು ಕಲಾವಿದರು ತಮ್ಮ ಕಲ್ಪನೆಯಂತೆ ಗಾಜಿನ ಮೇಲೆ ಬರೆದು ಧಾರ್ಮಿಕ ಮನೋಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಬಹುತೇಕ ಚಿತ್ರಗಳು ಪುನಃ ಪುನಃ ಪ್ರತಿಕೃತಿಗೊಂಡಿವದನ್ನು ಕಾಣುತ್ತೇವೆ. ರಾಮನ ಪಟ್ಟಾಭಿಷೇಕ, ವಿಷ್ಣು, ಶ್ರೀದೇವಿ, ಭೂದೇವಿ, ವರಾಹ, ಬೆಣ್ಣೆಕೃಷ್ಣ, ಕೃಷ್ಣ ಯಶೋದೆ, ವೇಣುಗೋಪಾಲ, ಕೃಷ್ಣಸಖಿಯರು ಹೀಗೆ ಅನೇಕ ದೃಶ್ಯಗಳ ಚಿತ್ರಗಳು ಸಾಕಷ್ಟು ಸಂಖ್ಯೆಗಳಲ್ಲಿ ಪ್ರತಿಕೃತಿಗೊಂಡಿವೆ.

ಈ ರೀತಿಯಾಗಿ ಚಿತ್ರಗಳು ರಚನೆಗೊಂಡಿರುವುದನ್ನು ಗಮನಿಸಿದರೆ ಕಲಾವಿದರು ಗ್ರಾಹಕರ ಆಶಯಗಳ ಬೇಡಿಕೆಗನುಗುಣವಾಗಿ ರಚಿಸಿರಬಹುದೆಂದು ತೋರುತ್ತದೆ. ವೃತ್ತಿಪರ ಹಾಗೂ ಹವ್ಯಾಸಿ ಕಲಾವಿದರ ಕುಂಚಗಳಿಂದ ಮೂಡಿಬಂದ ಈ ಗಾಜಿನ ಚಿತ್ರಗಳು ಅಲಂಕಾರದ ಆಶಯಗಳನ್ನು ಅಭಿವ್ಯಕ್ತಪಡಿಸುತ್ತವೆ. ಇಲ್ಲಿ ಬಳಸಿರುವ ಮೆರಗು ಬಣ್ಣಗಳು, ಮೆರಗು ಕಾಗದಗಳು ಹಾಗೂ ಪ್ರಾಥಮಿಕ ವರ್ಗದ ಬಣ್ಣಗಳು, ಕಥಾವಸ್ತುವನ್ನು ಸಂಯೋಜಿಸುವ ಕ್ರಮ, ಆಕೃತಿಗಳ ದೈಹಿಕ ರೂಪಲಕ್ಷಣಗಳನ್ನು ಕೊಡುವ ವಿಧಾನ, ರೇಖಾ ಸಂಯೋಜನೆಗಳಲ್ಲಿ ಪ್ರಮಾಣತೆ, ಲಾವಣ್ಯ

ಯೋಜನೆ, ಸೂಕ್ಷ್ಮತೆ, ದಟ್ಟತೆ, ತೂಕ, ಚಲನೆ ಹಾಗೂ ಜೀವಂತಿಕೆಯನ್ನು ಗಮನಿಸಿದರೆ ಕಲಾವಿದನ ವಾಣಿಜ್ಯದ ಆಶಯಗಳನ್ನು ಅನಾವರಣಗೊಳಿಸುತ್ತವೆ.

### ಕ. ಜೈನ ಧರ್ಮದ ಚಿತ್ರಗಳು

ಚಿತ್ರಕಲೆ ಮತ್ತು ಶಿಲ್ಪಕಲೆಗೆ ಪ್ರೋತ್ಸಾಹ ನೀಡಿದ ಧರ್ಮಗಳಲ್ಲಿ ಒಂದಾಗಿದೆ. ಜೈನ ಧರ್ಮದ ಅನುಯಾಯಿಗಳು ಚಿತ್ರಕಲೆಗೆ ವಿಶೇಷ ಪ್ರೋತ್ಸಹ ನೀಡಿದ್ದರೆ. ಭಿತ್ತಿಚಿತ್ರಗಳು, ಹಸ್ತಪ್ರತಿ ಚಿತ್ರಗಳು, ಕಿರುರೂಪ ಚಿತ್ರಗಳಿಗೆ ಪ್ರೋತ್ಸಾಹ ನೀಡಿದ್ದಾರೆ. ಜೈನ ಧರ್ಮಸಾರದ ಕಥೆಗಳನ್ನು ತಿಳಿಸುವ ಚಿತ್ರಗಳು ವಿವಿಧ ಫಲಕಗಳ ಮೇಲೆ ಮೂಡಿಬಂದಿವೆ. ಅದರಲ್ಲಿ ಗಾಜುಕೂಡಾ ಒಂದಾಗಿದೆ. ಇತ್ತೀಚೆಗೆ ಜೈನ ಮಂದಿರಗಳಲ್ಲಿ ಗಾಜಿನ ಚಿತ್ರಕಲೆಯು ವಿಪುಲವಾಗಿ ಬೆಳೆಯುತ್ತಿರುವುದನ್ನು ಕಾಣುತ್ತೇವೆ. ಅದರಲ್ಲೂ ವಿಶೇಷವಾಗಿ ಕರ್ನಾಟಕದ ವಿವಿಧ ನಗರ ಪ್ರದೇಶಗಳಲ್ಲಿ ಜೈನಧರ್ಮಿಯರು ಈ ಒಂದು ಕಾರ್ಯವನ್ನು ಗಣನೀಯವಾಗಿ ಮಾಡುತ್ತಲಿದ್ದಾರೆ. ಇಲ್ಲಿ ವಿಶೇಷವಾಗಿ ಜೈನಧರ್ಮದಲ್ಲಿ ದಿಗಂಬರ ಹಾಗೂ ಶ್ವೇತಾಂಬರ ಎಂಬ ಪಂಗಡಗಳಿದ್ದು ಶ್ವೇತಾಂಬರ ಪಂಗಡದ ಜೈನಧರ್ಮಿಯರು ಇಂಥ ಕಾರ್ಯವನ್ನು ಹೆಚ್ಚಿನ ರೀತಿಯಲ್ಲಿ ಮಾಡುತ್ತಿದ್ದಾರೆ. ಜೈನಧರ್ಮದ ರೂವಾರಿಗಳಾದ ೨೪ ತೀರ್ಥಂಕರ ಉದ್ಧರಣೆಗಳನ್ನು ಪರಿಕಲ್ಪಿಸುವ ವಿಷಯಗಳನ್ನು ಗಾಜಿನ ಮೇಲಿನ ರಚನೆ ಮಾಡಿಸಿರುವುದನ್ನು ಅನೇಕ ಜೈನದೇವಾಲಯಗಳಲ್ಲಿ ಕಾಣುತ್ತೇವೆ. ಬಹುತೇಕ ಈ ಚಿತ್ರಗಳು ಮಂದಿರದ ಒಳಾವರಣವನ್ನು ಆವರಿಸಿವೆ. ಜೈನ ಕಥಾಚಿತ್ರಗಳ ಜೊತೆಗೆ ನಕ್ಷಾವಿನ್ಯಾಸಗಳ ಚಿತ್ರಸಮೂಹವು ಪ್ರಮುಖವಾಗಿ ಬಿಂಬಿತವಾಗಿವೆ. ಇಲ್ಲಿ ನನಗೆ ಲಭ್ಯವಾದ ಚಿತ್ರಗಳನ್ನು ಕುರಿತು ವಿವೇಚಿಸಲಾಗುತ್ತಿದೆ.

**ಚಿತ್ರಸಂಖ್ಯೆ ೦೧ ಶ್ರೀ ಸಮೇತ ಶಿಖರಜಿ**

ಈ ಚಿತ್ರವು ೧೫೬ x ೧೨೦ ಸೆಂ. ಮೀ ಅಳತೆಯ ದೊಡ್ಡಗಾತ್ರದ ಗಾಜಿನ ಮೇಲೆ ಚಿತ್ರಿತಗೊಂಡಿದೆ. ಆಧುನಿಕ ರಚನಾಶೈಲಿಯಲ್ಲಿ ರೂಪಗೊಂಡ ಈ ದೃಶ್ಯವು ಜೈನಧರ್ಮದ ೨೪ ತೀರ್ಥಂಕರ ಸಮಾಧಿಗಳಿರುವ ಬಿಹಾರದ ಮಧುವನದ ಪರಿಸರವನ್ನು ಬಿಂಬಿಸುತ್ತದೆ. ಇಲ್ಲಿ ೨೪ ತೀರ್ಥಂಕರ ಸಮಾಧಿಗಳ ಗೋಪುರಗಳನ್ನು ಸಂಯೋಜಿಸಲಾಗಿದೆ. ಗೋಪುರದ ಮೇಲೆ ಕೆಂಪು ಬಾವುಟಗಳನ್ನು ಚಿತ್ರಿಸಿದ್ದು, ಅವು ಸಾಂಕೇತಿಕವಾಗಿ ರೂಪಗೊಂಡಿವೆ. ಸಮಾಧಿ ಗೋಪುರಗಳ ವಾಸ್ತು ರೂಪಗಳನ್ನು ಉಬ್ಬು ತಗ್ಗುಗಳ ಕಲ್ಪನೆಯಲ್ಲಿ ಚಿತ್ರಿಸಲಾಗಿದೆ. ಅದರಂತೆ ಜೈನಧರ್ಮದ ವಿವಿಧ ವಾಸ್ತು ಕಟ್ಟಡಗಳನ್ನು ಸಹ ಈ ಚಿತ್ರದಲ್ಲಿ ಸಂಯೋಜಿಸಲಾಗಿದೆ. ನದಿ, ಮರಗಳ ಸಾಲು, ಭೂದೃಶ್ಯ ಹಾಗೂ ಜನ ಸಮೂಹವನ್ನು ಚಿತ್ರಿಸಿದ್ದು, ಉತ್ತಮ ಸಂಯೋಜನೆಯನ್ನು ಹೊಂದಿವೆ. ಚಿತ್ರವು ಬಂಗಾರದ ಮೆರಗು ಬಣ್ಣದಿಂದ ಪ್ರಧಾನಗೊಂಡಿದ್ದು, ಇನ್ನುಳಿದಂತೆ ಹಸಿರು, ಕೆಂಪು, ಕಂದು, ಬಿಳಿ ವರ್ಣಗಳು ಸಂಯೋಜಿತಗೊಂಡಿವೆ. ಇಲ್ಲಿ ಪ್ರತಿಯೊಬ್ಬ ತೀರ್ಥಂಕರರ ಸಮಾಧಿ ಗಳನ್ನು ಗೋಪುರದ ಕೆಳಗೆ ಅವರ ಹೆಸರನ್ನು ನಮೂದಿಸಲಾಗಿದೆ. ಈ ಚಿತ್ರವು ಉತ್ತಮ ಆಧುನಿಕ ರಚನಾ ಸಂಯೋಜನೆಯಿಂದ ಬಿಂಬಿತವಾಗಿದೆ.

**ಚಿತ್ರಸಂಖ್ಯೆ ೦೨ ಶ್ರೀ ಶತ್ರುಂಜಯ ಮಹಾತೀರ್ಥ**

ಈ ಚಿತ್ರವೂ ಸಹ ೧೫೬ x ೧೨೦ ಸೆಂ. ಮೀ ಅಳತೆಯ ಗಾಜಿನ ಮೇಲೆ ಚಿತ್ರಿತಗೊಂಡಿದ್ದು, ಗುಜರಾತದ ಪಾಲಿಪತ್‌ನಲ್ಲಿರುವ ಶ್ರೀ ಶತ್ರುಂಜಯ ಮಹಾತೀರ್ಥದ ಪರಿಸರದ ದೃಶ್ಯವನ್ನು ನಿದರ್ಶಿಸುತ್ತದೆ. ಈ ಚಿತ್ರದಲ್ಲಿ ವಿಶಾಲವಾದ ಭೂದೃಶ್ಯವನ್ನು ರೂಪಿಸಿದ್ದು ಇವರ ಮಧ್ಯ ಜೈನಧರ್ಮದ ವಿವಿಧ ಮಂದಿರಗಳನ್ನು ಸಂಯೋಜಿಸಲಾಗಿದೆ. ಮಂದಿರಗಳ ಗೋಪುರಗಳು, ಮೆಟ್ಟಿಲುಗಳು, ಕಂಪೌಂಡುಗಳು, ವರ್ಣರಂಜಿತ ಬಂಗಾರದ ಮೆರಗಿನಿಂದ ಕೂಡಿದ್ದು, ಉಬ್ಬುತಗ್ಗುಗಳ ಕಲ್ಪನೆಯು ಉತ್ತಮವಾಗಿ ಬಿಂಬಿತವಾಗಿದೆ. ಚಿತ್ರದಲ್ಲಿ ಹಲವಾರು ಮರಗಳನ್ನು ಸಂಯೋಜಿಸಿದ್ದು ಉತ್ತಮ ಪ್ರಕೃತಿ ಸೌಂದರ್ಯವು ಕಲ್ಪಿತಗೊಂಡಿದೆ. ಅಲ್ಲಲ್ಲಿ ಜೈನಯತಿಗಳನ್ನು ಭಕ್ತರ ಸಮೂಹವನ್ನು ಸಂಯೋಜಿಸಲಾಗಿದೆ. ಚಿತ್ರದ ಸುತ್ತಲೂ ವೃತ್ತಾಕಾರದಲ್ಲಿ ಜೈನಧರ್ಮದ ಸಾಂಕೇತಿಕ ಚಿತ್ರಗಳನ್ನು ಚಿತ್ರಿಸಲಾಗಿದೆ. ಚಿತ್ರದ ಎಡಪಾರ್ಶ್ವದಲ್ಲಿ ಗೂಳಿ, ಆನೆ, ಸಿಂಹ, ಗಜಲಕ್ಷ್ಮೀ, ಹೂವಿನ ಹಾರಗಳು, ಚಂದ್ರ, ಚಕ್ರವಾಕ ಸಂಕೇತ ಚಿತ್ರಗಳು ರಚನೆಗೊಂಡಿದ್ದರೆ, ಬಲಪಾರ್ಶ್ವದಲ್ಲಿ ಬಾವುಟ, ಕುಂಬ, ಹೂವು ಮಂಟಪ, ಫಲಪುಷ್ಪ, ಹೋಮದ ಚಿತ್ರಗಳು ರಚನೆಗೊಂಡಿವೆ. ಚಿತ್ರದ ಮೇಲೆ ವಿವಿಧ ಲಾಂಛನಗಳು ಸಂಯೋಜಿತಗೊಂಡಿವೆ. ಈ ಚಿತ್ರವು ಆಧುನಿಕ ರಚನಾ ಶೈಲಿಯಲ್ಲಿ ರೂಪಗೊಂಡಿದ್ದು, ಕೆಂಪು, ಹಳದಿ, ನೀಲಿ, ನೇರಳೆ, ಬಿಳಿ, ಕಂದು ಹಸಿರು ವರ್ಣಗಳಿಂದ ಅನಾವರಣಗೊಂಡಿದೆ.

**ಚಿತ್ರಸಂಖ್ಯೆ ೦೩. ಮೇಘರಾಜ**

ಚಿತ್ರವು ೧೫೬ x ೧೨೦ ಸೆಂ. ಮೀ, ಅಳತೆಯನ್ನು ಹೊಂದಿದ್ದು, ಪ್ರಮುಖವಾಗಿ ನಾಲ್ಕು ಭಾಗಗಳನ್ನಾಗಿ ವಿಂಗಡಿಸಿಕೊಂಡು ಪ್ರತಿಯೊಂದು ಭಾಗದಲ್ಲಿ ಮೇಘರಾಜರ ಬದುಕಿನ ದೃಶ್ಯವನ್ನು ಚಿತ್ರಿಸಲಾಗಿದೆ. ಚಿತ್ರದ ಎಡಪಾರ್ಶ್ವದಲ್ಲಿರುವ ಮೇಲಿನ ಚಿತ್ರದಲ್ಲಿ ಮೇಘರಾಜರು ಗಾಯಗೊಂಡ ಪಾರಿವಾಳದ ತೂಕದಷ್ಟೇ ತಮ್ಮ ರಕ್ತವನ್ನು ತೂಕ ಮಾಡಿಕೊಡುವ ದೃಶ್ಯವು ಬಿಂಬಿತವಾಗಿದೆ. ಇಲ್ಲಿ ಮಹಾರಾಜರ ಕಾಲನ್ನು ರಕ್ತಮಯವಾಗಿ ಚಿತ್ರಿಸಿದ್ದು ಒಂದು ತಕ್ಕಡಿಯಲ್ಲಿ ಪಾರಿವಾಳ ಇನ್ನೊಂದು ತಕ್ಕಡಿಯಲ್ಲಿ ರಕ್ತವನ್ನು ಚಿತ್ರಿಸಲಾಗಿದೆ. ಅವರ ಮುಂದೆ ಗುಣಮುಖವಾದ ಪಾರಿವಾಳವು ಕುಳಿತಿದೆ. ಎಡಪಾರ್ಶ್ವದ ಕೆಳಚಿತ್ರದಲ್ಲಿ ಮೇಘರಾಜರು ಅಂಬಾರಿಯ ಮೇಲೆ ಸವಾರಿ ಮಾಡುತಿರುವ ದೃಶ್ಯವು ಚಿತ್ರಿತಗೊಂಡಿದೆ. ಇಲ್ಲಿ ಕಪ್ಪು ಬಣ್ಣದಿಂದ ಆನೆಗಳನ್ನು ಸ್ವರ್ಣಮಯ ಅಂಬಾರಿಗಳನ್ನು ಚಿತ್ರಿಸಿದೆ. ಅಲಂಕೃತವಾದ ಆನೆಯ ಮೇಲೆ ಮೇಘರಾಜರು ಕುಳಿತಿದ್ದಾರೆ. ಅವರ ಹಿಂದೆ ರಾಜ ಪರಿವಾರವು ಬಿಂಬಿತವಾಗಿದೆ. ಚಿತ್ರದಲ್ಲಿ ಭೂದೃಶ್ಯವು ಹಾಗೂ ಹಸಿರು ಮರಗಳ ಗುಂಪು ರಚನೆಗೊಂಡಿದೆ. ಚಿತ್ರದ ಬಲಪಾರ್ಶ್ವದ ಮೇಲಿನ ಚಿತ್ರದಲ್ಲಿ ಮೇಘರಾಜರು ಧ್ಯಾನಾಸಕ್ತರಾಗಿದ್ದು ಅವರ ಸ್ತ್ರೀಯರು ಸಂಗೀತ ನುಡಿಸುವವರು. ಚಿತ್ರದ ಕೆಳಭಾಗದಲ್ಲಿ ಮೇಘರಾಜರು ಜೈನ ಸನ್ಯಾಸಿಗಳಾಗಿ ಕಾಡಿನ ಮರದ ಕೆಳಗೆ ಧ್ಯಾನದಲ್ಲಿ ತೊಡಗಿದ್ದಾರೆ. ಇವರ ಸುತ್ತಲೂ ಸಿಂಹ, ಜಿಂಕೆ, ನವಿಲು, ಸರ್ಪಗಳನ್ನು ಸಂಯೋಜಿಸಿದ್ದು, ಕಾಡಿನ ಪರಿಸರವನ್ನು ಕಲಾವಿದನು ಉತ್ತಮವಾಗಿ ಬಿಂಬಿಸಿದ್ದಾನೆ. ಮಧ್ಯದಲ್ಲಿ ವೃತ್ತಾಕಾರದ ಸ್ಥಳಾವಕಾಶದಲ್ಲಿ ಮೇಘರಾಜರ ಭಾವಚಿತ್ರವು ಬಿಂಬಿತವಾಗಿದೆ. ಚಿತ್ರವು ಮನುಷ್ಯನು ಐಹಿಕ ಭೋಗಗಳನ್ನು ತೊರೆದು ಧರ್ಮದೀಕ್ಷೆಯಲ್ಲಿ ತೊಡಗಿ ಮುಕ್ತಿಯನ್ನು

ಹೊಂದುವ ಸರವನ್ನು ಈ ಮೂಲಕ ಕಲಾವಿದನು ಕಲ್ಪಿಸಿದ್ದಾನೆ. ಆಕೃತಿಗಳ ಪ್ರಮಾಣ, ವರ್ಣ ಸಂಯೋಜನೆ ಹಾಗೂ ಯಥಾದೃಷ್ಟಿಯು ಸಾಂಕೇತಿಕವಾಗಿ ಮೂಡಿಬಂದಿದೆ. ಈ ಚಿತ್ರವು ಸಹ ಆಧುನಿಕ ರಚನಾ ಶೈಲಿಯಲ್ಲಿ ರೂಪಗೊಂಡಿದೆ.

**ಚಿತ್ರಸಂಖ್ಯೆ ೦೪ ಅಷ್ಟಪದ ಮಹಾತೀರ್ಥ**

೧೫೬ x ೧೨೦ ಸೆಂ.ಮೀ ಅಳತೆಯಲ್ಲಿ ರೂಪಗೊಂಡ ಈ ಚಿತ್ರವು ಅಷ್ಟಪದ ಮಹಾತೀರ್ಥದ ದೃಶ್ಯವನ್ನು ನಿದರ್ಶಿಸುತ್ತದೆ. ಚಿತ್ರದಲ್ಲಿ ೨೪ ತೀರ್ಥಂಕರರ ಚಿತ್ರಗಳನ್ನು ಸಂಯೋಜಿಸಿದ್ದು, ಪ್ರತಿಯೊಬ್ಬರನ್ನು ಒಂದೊಂದು ಮಂಟಪದಲ್ಲಿ ಚಿತ್ರಿಸಲಾಗಿದೆ. ಮಂಟಪಗಳ ಅಲಂಕಾರವು ಚಿನ್ನದ ಬಣ್ಣದಿಂದ ಲೇಪನಗೊಂಡಿದ್ದು ಗೋಪುರದ ಉಬ್ಬು ತಗ್ಗುಗಳ ಕಲ್ಪನೆಯು ಆಕರ್ಷಕವಾಗಿ ಮೂಡಿಬಂದಿದೆ. ತೀರ್ಥಂಕರರ ಗೋಪುರಗಳ ಕೆಳಭಾಗದ ಮೆಟ್ಟಲುಗಳಲ್ಲಿ ಜೈನಯತಿಗಳೊಬ್ಬರು ಭಿಕ್ಷೆ ನೀಡುತ್ತಿರುವರು. ಇಲ್ಲಿ ಬಿಕ್ಕುಗಳನ್ನು ಸಾಲಾಗಿ ಚಿತ್ರಿಸಿದ್ದು, ಉತ್ತಮ ಭಾವನಿರೂಪಣೆಯನ್ನು ತರಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಶ್ವೇತವರ್ಣದ ಮೋಡಗಳಿಂದ ಕೂಡಿದ ಆಕಾಶವು ಬಿಂಬಿತವಾಗಿದ್ದು, ಮೋಡಗಳು ತ್ರಿಕರಣ ಭಾವನೆಯನ್ನು ಹೊಂದಿವೆ. ಆಕಾಶದಲ್ಲಿ ದೇವತೆಗಳು ಗಂಧರ್ವರು ತೀರ್ಥಂಕರ ಮೇಲೆ ಹೂವನ್ನು ಸುರಿಯುತ್ತಿರುವಂತೆ ಸಂಯೋಜಿಸಲಾಗಿದೆ. ಭೂದೃಶ್ಯದಲ್ಲಿಯೂ ಸಹ ಭಕ್ತಸಮೂಹವನ್ನು ಚಿತ್ರಿಸಲಾಗಿದೆ. ಚಿತ್ರವು ಉತ್ತಮ ಆಕೃತಿಗಳ ಸಂಯೋಜನೆ ಹಾಗೂ ಮೈವಳಿಕೆಯಿಂದ ಬಿಂಬಿತವಾಗಿದೆ. ಇಲ್ಲಿ ಕೆಂಪು, ಚಿನ್ನದ ವರ್ಣ, ಹಸಿರು, ನೀಲಿ, ಕಂದು, ಬಿಳಿ ವರ್ಣಗಳು ಪ್ರಧಾನವಾಗಿ ಸಂಯೋಜನೆಗೊಂಡಿವೆ.

**ಚಿತ್ರಸಂಖ್ಯೆ ೦೫ ಜನ್ಮ ಕಲ್ಯಾಣಕ**

ಈ ಚಿತ್ರವು ೧೫೬ x ೧೨೦ ಸೆಂ.ಮೀ ಅಳತೆಯನ್ನು ಹೊಂದಿದ್ದು ಇದು ಜೈನಕಥೆಗೆ ಸಂಬಂಧಿಸಿದಂತೆ ಸ್ವಪ್ನದಲ್ಲಿ ದೇವರು ಮಗುವನ್ನು ಕರುಣಿಸುತ್ತಿರುವಂತೆ ಆ ಮಗುವು ಮುಂದೆ ಶ್ರೇಷ್ಠ ಜೀನನಾಗುವ ಕಥಾಪ್ರಸಂಗವನ್ನು ನಿದರ್ಶಿಸುತ್ತದೆ. ಇದು ವೃಷಭನಾಥನ ಕಥೆಗೆ ಸಂಬಂಧಿಸಿರಬಹುದು. ಮನುನಾಭಿರಾಜನ ಪತ್ನಿಯಾದ ಮರುದೇವಿಯು ಬೆಳಗಿನ ಜಾವ ಸ್ವಪ್ನವನ್ನು ಕಾಣುತ್ತಾಳೆ. ಜೀನೇಶ್ವರನ ಹುಟ್ಟನ್ನು ಸೂಚಿಸುವ ಶುಭಫಲದ ಹದಿನಾರು ಸ್ವಪ್ನಗಳನ್ನು ಅರಿತು ಹರ್ಷಗೊಳ್ಳುತ್ತಾಳೆ. ಆನಂತರ ವಜ್ರನಾಭಿಯಾಗಿದ್ದ ಅಹಮಿಂದ್ರ ದೇವನು ಆಶಾಢ ಮಾಸದ ಶುಕ್ಲಪಕ್ಷದ ಬಿದಿಗೆಯ ಉತ್ತರಾಷಾಢ ನಕ್ಷತ್ರದಲ್ಲಿ ಮರುದೇವಿಯ ಗರ್ಭವನ್ನು ಸೇರುತ್ತಾನೆ. ದಿಕ್ಕುಕುಮಾರಿಯರು ಮರುದೇವಿಯ ಸೇವೆ ಮಾಡುತ್ತಾರೆ. ಅವಳನ್ನು ವಿವಿಧ ರೀತಿಯಲ್ಲಿ ರಂಜಿಸುತ್ತಾರೆ. ಒಂಭತ್ತು ತಿಂಗಳ ನಂತರ ಚೈತ್ರಮಾಸದ ಕೃಷ್ಣಪಕ್ಷದ ನವಮಿ ತಿಥಿಯ ಸುರ್ಯೋದಯದ ಕಾಲದಲ್ಲಿ ಪುತ್ರನನ್ನು ಪಡೆಯುತ್ತಾಳೆ. ಈ ಪುತ್ರನೆ ವೃಷಭನಾಥನಾಗಿ ಜಗದ ಕಲ್ಯಾಣ ಮಾಡುತ್ತಾನೆ.[೧೨]

ಈ ಚಿತ್ರದಲ್ಲಿ ಆದೃಶ್ಯ ಕಲ್ಪನೆಯು ಬಿಂಬಿತವಾಗಿದೆ. ಮರುದೇವಿಯು ಸ್ವಪ್ನದಲ್ಲಿರುವಂತೆ ಚಿತ್ರಿತಗೊಂಡಿದ್ದು ಇನ್ನೊಂದು ಭಾಗದಲ್ಲಿ ಮಗುವನ್ನು ಕರುಣಿಸುತ್ತಿರುವಂತೆ ಚಿತ್ರಿಸಲಾಗಿದ್ದು, ದಿಕ್ಕುಕುಮಾರಿಯರು ಸೇವೆಯಲ್ಲಿರುವಂತೆ ಹಾಗೂ ಹಿನ್ನೆಲೆಯಲ್ಲಿ ಅರಮನೆಯ ಒಳನೋಟದ

---

೧೨ ಹಂಪ ನಾಗರಾಜಯ್ಯ : (ಸಂ) ಜೈನಕಥಾಕೋಶ, ಪುಟ ೭೧೦–೭೧೧

ಚಿತ್ರವು ಬಿಂಬಿತವಾಗಿದೆ. ಚಿತ್ರವು ಪ್ರಧಾನವಾಗಿ ಚಿನ್ನದ ಬಣ್ಣದಿಂದ ಲೇಪನಗೊಂಡಿದ್ದು, ಉಬ್ಬು ತಗ್ಗುಗಳ ಕಲ್ಪನೆಯು ರಚನೆಗೊಂಡಿದೆ. ಉಳಿದಂತೆ ಹಸಿರು, ಕೆಂಪು, ನೇರಳೆ, ಕಂದು ಬಣ್ಣಗಳು ಸಂಯೋಜನೆಗೊಂಡಿವೆ.

**ಚಿತ್ರಸಂಖ್ಯೆ ೦೬ ದೀಕ್ಷಾ ಕಲ್ಯಾಣಕ**

ಈ ಚಿತ್ರವೂ ಸಹ ೧೫೬ x ೧೨೦ ಸೆಂ.ಮೀ ಅಳತೆಯನ್ನು ಹೊಂದಿದ್ದು ಜೈನಯತಿಗಳು ದೀಕ್ಷೆಪಡೆಯುತ್ತಿರುವ ಕಥಾ ಸಂಗತಿಯನ್ನು ಸೂಚಿಸುತ್ತದೆ. ಈ ಚಿತ್ರದಲ್ಲಿ ಮೂರು ಭಾಗಗಳಿದ್ದು, ಎಡಪಾರ್ಶ್ವದಲ್ಲಿ ತೀರ್ಥಂಕರನ್ನು ಮರದ ಕೆಳಗೆ ಜುಟ್ಟನ್ನು ಕಿತ್ತುಕೊಳ್ಳುವಂತೆ ಚಿತ್ರಿಸಿದ್ದು, ಅವರ ಪಕ್ಕ ದಂಪತಿಗಳು ಚಿತ್ರಿತಗೊಂಡಿದ್ದಾರೆ. ಕೈಯಲ್ಲಿ ಶ್ವೇತವಸ್ತ್ರವನ್ನು ಹಿಡಿದು ನಿಂತಿರುವನು. ಸುತ್ತಲೂ ಜೈನ ಭಕ್ತರು ಸಂಯೋಜಿತಗೊಂಡಿದ್ದಾರೆ. ಇವರೆಲ್ಲರೂ ಸಾಮಾನ್ಯ ವ್ಯಕ್ತಿಗಳಂತೆ ರೂಪಲಕ್ಷಣಗಳನ್ನು ಹೊಂದಿದ್ದಾರೆ. ಮರದ ಸಂಯೋಜನೆ, ಭೂದೃಶ್ಯ ಹಾಗೂ ಹಿನ್ನೆಲೆಯ ಆಕಾಶದ ಕಲ್ಪನೆಯು ಬಿಂಬಿತವಾಗಿದೆ. ಬಲಪಾರ್ಶ್ವದಲ್ಲಿ ತೀರ್ಥಂಕರರು ನದಿಯ ದಂಡೆಯ ಮೇಲೆ ಚಿತ್ರಿತಗೊಂಡಿರುವರು. ಹಿನ್ನೆಲೆಯಲ್ಲಿ ಮರದ ಸಂಯೋಜನೆ, ಬೆಟ್ಟ ಗುಡ್ಡಗಳ ಸಂಯೋಜನೆ, ಭೂದೃಶ್ಯ ಹಾಗೂ ನದಿಯ ಸಂಯೋಜನೆಯು ಚಿತ್ರಿತಗೊಂಡಿದ್ದು ನೈಜ ಕಲ್ಪನೆಯು ಮೂಡಿಬಂದಿದೆ. ಚಿತ್ರದ ಮಧ್ಯದಲ್ಲಿ ತೀರ್ಥಂಕರರು ಮರದ ಕಲೆಗೆ ಧ್ಯಾನಾಸಕ್ತರಾಗಿರುವದನ್ನು ಚಿತ್ರಿಸಲಾಗಿದೆ. ಹಿನ್ನೆಲೆಯಲ್ಲಿ ಇಬ್ಬರೂ ಚಾಮರ ಹಿಡಿದು ಸೇವೆಯನ್ನು ಮಾಡುತ್ತಿರುವರು. ಕಮಲದ ದಳಗಳ ಸಂಯೋಜನೆ ಹಾಗೂ ಭಕ್ತರ ಸಂಯೋಜನೆಯು ಬಿಂಬಿತವಾಗಿದ್ದು, ಆಧುನಿಕ ರೀತಿಯ ರಚನಾ ಶೈಲಿಯಲ್ಲಿ ಅಭಿವ್ಯಕ್ತಗೊಂಡಿದೆ. ಚಿತ್ರದಲ್ಲಿ ವರ್ಣಸಂಯೋಜನೆ ಹಾಗೂ ಆಕೃತಿಗಳ ಸಂಯೋಜನೆ, ಭಾವನಿರೂಪಣೆಯೂ ಸಾಂದರ್ಭಿಕವಾಗಿ ಮೂಡಿಬಂದಿದೆ.

ಗಾಜಿನ ಮೇಲಿನ ಜೈನ ಚಿತ್ರಗಳಲ್ಲಿ ಬಹುತೇಕ ಆಧುನಿಕ ರೀತಿಯ ರಚನಾಕ್ರಮವನ್ನು ಅನಸರಿಸುವ ಇತ್ತಿಚೀನ ಚಿತ್ರಗಳು ಪ್ರಧಾನವಾಗಿ ಕಂಡು ಬರುತ್ತವೆ. ಪಾರದರ್ಶಕ ಗಾಜಿನ ಮೇಲೆ ವೈವಿಧ್ಯಮಯ ತಂತ್ರಗಳನ್ನು ಬಳಸಿಕೊಂಡು ಅದನ್ನು ತಮಗೆ ಬೇಕಾದ ಮೈವಳಿಕೆಯನ್ನು ತಂದು ಇಂದು ಲಭ್ಯವಿರುವ ಆಕರ್ಷಕ ಬಣ್ಣಗಳನ್ನು ಸಂಯೋಜಿಸುತ್ತಿದ್ದಾರೆ. ಇಲ್ಲಿ ನನಗೆ ಲಭ್ಯವಾದ ಜೈನ ಧರ್ಮಕಥೆಗೆ ಸಂಬಂಧಿಸಿದ ಚಿತ್ರಗಳನ್ನು ವಿವೇಚಿಸಲು ಪ್ರಯತ್ನಿಸಲಾಗಿದೆ.

**ಡ. ಇತರೆ ಹಿಂದೂ ಧರ್ಮದೇವತೆಗಳ ಚಿತ್ರಗಳು**

ಭಾರತವು ಅನೇಕ ಧರ್ಮ, ಮತ ಸಂಪ್ರದಾಯಗಳಿಂದ ಕೂಡಿದ ರಾಷ್ಟ್ರ. ಇಲ್ಲಿ ಶಿವ, ವಿಷ್ಣು ಇತರೆ ದೇವರುಗಳಲ್ಲದೇ ಇನ್ನೂ ಅನೇಕ ಧಾರ್ಮಿಕ ದೇವತೆಗಳನ್ನು ಆರಾಧಿಸುತ್ತಿದ್ದು, ಹಾಗಾಗಿ ಗಾಜಿನ ಕಲಾವಿದರು ಬ್ರಹ್ಮ, ಸರಸ್ವತಿ, ದತ್ತಾತ್ರೇಯರಂತಹ ದೇವತೆಗಳನ್ನು ಧಾರ್ಮಿಕ ವ್ಯಕ್ತಿಗಳನ್ನು ಹಾಗೂ ಗಂಧರ್ವ ಸ್ತ್ರೀ, ಪುರುಷರ ಚಿತ್ರಗಳನ್ನು ಗಾಜಿನ ಮೇಲೆ ರಚಿಸಿರುವರು. ಇಲ್ಲಿ ರಚನೆಗೊಂಡಿರುವ ಗಾಜಿನ ಮೇಲಿನ ಚಿತ್ರಗಳು ವೈವಿಧ್ಯಮಯ ಅಳತೆಗಳಲ್ಲಿ, ಬೇರೆ ಬೇರೆ ರಚನಾ ಶೈಲಿಯಲ್ಲಿ ಭಿತ್ತರಗೊಂಡಿವೆ. ಇವುಗಳನ್ನು ಕುರಿತು ವಿವೇಚಿಸಲಾಗುತ್ತಿದೆ.

**ಚಿತ್ರಸಂಖ್ಯೆ ೦೧ ಬ್ರಹ್ಮದೇವ**

ತ್ರೀಮೂರ್ತಿಗಳಲ್ಲಿ ಒಬ್ಬನಾದ ಬ್ರಹ್ಮನು ವಿಷ್ಣುವಿನ ನಾಭಿಕಮಲದಿಂದ ಜನಿಸಿದನು. ಇವನಿಗೆ ಪಂಚಮುಖಗಳಿದ್ದು ಶಿವನಿಗಿಂತ ತಾನುಶ್ರೇಷ್ಠನೆಂಬ ಗರ್ವವು ಪ್ರಾಪ್ತವಾಗಲೂ, ಶಿವನು ಇತನ ಒಂದು ತಲೆಯನ್ನು ಕತ್ತರಿಸಿ ಚತುರ್ಮುಖನನ್ನಾಗಿ ಮಾಡಿದನು. ಇದರಿಂದ ಶಿವನಿಗೆ ಬ್ರಹ್ಮಹತ್ಯಾದೋಷವು ಪ್ರಾಪ್ತವಾಗಲು ಬ್ರಹ್ಮಕಪಾಲವೂ ಅವನ ಕೈಯಿಂದ ಜಾರಿಬಿತ್ತು. ಶಿವನೇ ಬ್ರಹ್ಮನಿಗೆ ಪೂಜಾ ಉತ್ಸವಗಳು ಸಲ್ಲದಂತೆ ಶಾಪವಿತ್ತನು. ಬ್ರಹ್ಮನಿಗೆ ವಿಷ್ಣುವಿನ ನಾಭಿಕಮಲದಿಂದ ಹುಟ್ಟಿದಾಗ ಒಂದೇ ಮುಖವಿತ್ತು. ಅವನು ನಾಲ್ಕೂ ದಿಕ್ಕುಗಳನ್ನು ನೋಡಲನುಕೂಲವಾಗುವಂತೆ ನಾಲ್ಕು ಮುಖಗಳನ್ನು ಪಡೆದನು. ಹೀಗೆ ಬ್ರಹ್ಮದೇವನ ಕುರಿತು ಅನೇಕ ಕಥಾಪ್ರಸಂಗಗಳು ಹುಟ್ಟುತ್ತವೆ.

ಇಲ್ಲಿರುವ ಚಿತ್ರದಲ್ಲಿ ಬ್ರಹ್ಮನು ಚತುರ್ಮುಖ ಹಾಗೂ ಚತುರ್ಭುಜಗಳನ್ನು ಹೊಂದಿದ್ದು, ನಾಲ್ಕು ಮುಖಗಳು ಪಾರ್ಶ್ವರೂಪದಲ್ಲಿ ಬಿಂಬಿತವಾಗಿವೆ. ತಲೆಗಳ ಮೇಲೆ ಸ್ವರ್ಣ ಕಿರೀಟಗಳೂ, ಭುಜಕೀರ್ತಿ, ಕಂಠಾಭರಣಗಳು, ಕೈಗಳಲ್ಲಿ ಚಿನ್ನದ ಕಡಗ, ಕಾಲುಗಳಲ್ಲಿ ಚಿನ್ನದ ಕಡಗಗಳು ಅಲಂಕಾರಿಕವಾಗಿ ರೂಪಿತಗೊಂಡಿವೆ. ನಾಲ್ಕೂ ಕೈಗಳಲ್ಲಿ ಸಂಕೇತಗಳ ಚಿತ್ರಗಳನ್ನು ರಚಿಸಿದ್ದು, ಅವು ಕೂಡಾ ರೇಖಾ ಲಾವಣ್ಯತೆಯಿಂದ ರಚನೆಗೊಂಡಿವೆ. ಸಾಂಪ್ರದಾಯಿಕ ಧೋತಿ ಹಾಗೂ ಶಲ್ಯವನ್ನು ಚಿತ್ರಿಸಲಾಗಿದೆ. ಬ್ರಹ್ಮಣ ಮೈಬಣ್ಣವು ಕೆಂಪು ಮಿಶ್ರಿತ ನೇರಳೆ ಬಣ್ಣದಿಂದ ಸಂಯೋಜಿತಗೊಂಡಿದೆ. ವೇಷಭೂಷಣ ಹಾಗೂ ಮೈಬಣ್ಣಗಳ ರಚನೆಯಲ್ಲಿ ಬೆಳಕು ನೆರಗಳುಗಳ ವೈವಿಧ್ಯತೆಯನ್ನು ತರಲು ಪ್ರಯತ್ನಿಸಲಾಗಿದೆ. ಚಿತ್ರವು ಉಜ್ವಲ ವರ್ಣಗಳಿಂದ ಕೂಡಿದ್ದು, ನೋಡುಗರನ್ನು ಆಕರ್ಷಿಸುತ್ತವೆ. ಚಿತ್ರ ಸಂಯೋಜನೆಯು ಅಲಂಕಾರಿಕ ಆಶಯವನ್ನು ಹೊಂದಿದ್ದು ಸೃಜನಶೀಲ ಚಿತ್ರಕ್ರಮ ಇಲ್ಲಿ ಬಿಂಬಿತವಾಗಿದೆ.

**ಚಿತ್ರಸಂಖ್ಯೆ ೦೨, ೦೩, ೦೪, ೦೫, ೦೬ ಸರಸ್ವತಿ**

ಈಕೆ ವಿದ್ಯಾದೇವತೆ, ಬ್ರಹ್ಮನ ಮಗಳು ಹೌದು. ಇವನೇ ಸರಸ್ವತಿಯ ಸೌಂದರ್ಯಕ್ಕೆ ಮೋಹಿತನಾಗಿ ಅವಳನ್ನು ಹೆಂಡತಿಯಾಗಿ ಸ್ವೀಕರಿಸಿದನು. ಸರಸ್ವತಿಯನ್ನು ನವರಾತ್ರಿಯ ಕೊನೆಯ ಮೂರು ದಿವಸಗಳಲ್ಲಿ ಪೂಜಿಸುತ್ತಾರೆ. ಇಂಥ ವಿಶಿಷ್ಟ ದೇವತೆಯನ್ನು ನಮ್ಮ ಗಾಜಿನ ಚಿತ್ರಕಲಾವಿದರು ವಿವಿಧ ಚಿತ್ರಶೈಲಿಗಳಲ್ಲಿ ರಚನೆ ಮಾಡಿರುವರು.

ಇಲ್ಲಿ ಸುಮಾರು ಐದು ಚಿತ್ರಗಳು ಲಭ್ಯ ವಿದ್ದು, ವೈವಿಧ್ಯಮಯ ಅಳತೆ ಹಾಗೂ ರಚನೆಯನ್ನು ಹೊಂದಿವೆ. ಮೈಸೂರು ಸಾಂಪ್ರದಾಯಿಕ ಚಿತ್ರಶೈಲಿಯಲ್ಲಿ ಈ ದೇವತೆ ಮಹತ್ತರವಾಗಿ ಕಾಣಿಸಿಕೊಳ್ಳುತ್ತಾಳೆ. ಆ ಶೈಲಿಯನ್ನೇ ಹೋಲುವ ಈ ಗಾಜಿನ ಚಿತ್ರಗಳು ಅಲಂಕಾರಿಕವಾಗಿ ಮೂಡಿಬಂದಿವೆ. ಚಿತ್ರಸಂಖ್ಯೆ ೦೨, ೦೩, ೦೪ ರಲ್ಲಿ ಕುಳಿತಿರುವ ಭಂಗಿ, ವೀಣೆಯನ್ನು ಹಿಡಿದಿರುವ ಕ್ರಮ ಮತ್ತು ತಾವರೆಯ ವಿನ್ಯಾಸಗಳು ಯಥಾವತ್ತಾಗಿ ಚಿತ್ರಿತಗೊಂಡಿವೆ. ಇಲ್ಲಿ ಸರಸ್ವತಿಯು ಚತುರ್ಭುಜಧಾರಿಯಾಗಿದ್ದು, ಎರಡು ಕೈಗಳಲ್ಲಿ ವೀಣೆಯನ್ನು ಹಿಡಿದಿರುವಳು. ಇನ್ನೆರಡು ಕೈಗಳಲ್ಲಿ ಲೇಖನಿ ಮತ್ತು ಶಾಸ್ತ್ರ ಪುಸ್ತಕ ಹಿಡಿದಿರುವಳು. ಸಾಂಪ್ರದಾಯಿಕ ಸೀರೆಯ ಹಾಗೂ ಕುಪ್ಪಸಗಳ

ಅಲಂಕಾರವು ವೈವಿಧ್ಯಮಯ ಸುಳುಹು ಚಿತ್ರಗಳು, ಜ್ಯಾಮಿತಿಕ ನಕ್ಷೆಗಳಿಂದ ಕೂಡಿವೆ. ಸ್ವರ್ಣಕಿರೀಟ, ಕರ್ಣಾಭರಣಗಳು, ಕಂಠಾಭರಣಗಳು, ರತ್ನಖಚಿತ ಚಿನ್ನದ ಹಾಗೂ ಮುತ್ತಿನ ಬಳೆಗಳು, ಚಿನ್ನದ ತೋಡೆಗಳು ರಚನೆಗೊಂಡಿವೆ. ವಿಶಿಷ್ಠ ಪುಷ್ಪಮಾಲೆಯು ಅಲಂಕಾರಗೊಂಡಿದ್ದು, ವಸ್ತ್ರಾಭರಣಗಳ ವಿನ್ಯಾಸಗಳಲ್ಲಿ ಚಿನ್ನದ ಮೆರಗು ಬಣ್ಣವು ಪ್ರಧಾನವಾಗಿ ಲೇಪನಗೊಂಡಿದೆ.

ಈ ಮೂರು ಚಿತ್ರಗಳಲ್ಲಿ ವೀಣೆ ಹಾಗೂ ಕಮಲ ಪುಷ್ಪಗಳು ರೇಖಾ ವಿನ್ಯಾಸದಿಂದ ಬೇರ್ಪಟ್ಟು ಶ್ವೇತವರ್ಣದಿಂದ ಸಂಯೋಜನೆಗೊಂಡಿವೆ. ದೈಹಿಕ ಲಕ್ಷಣಗಳು ಭಾವನಾ ನಿರೂಪಣೆ ಹಾಗೂ ವಸ್ತು ಜೋಡಣೆಯು ಒಂದೇ ರೀತಿಯಲ್ಲಿ ವ್ಯಕ್ತಗೊಂಡಿವೆ. ಚಿತ್ರ ೦೨ ರಲ್ಲಿ ಹಿನ್ನೆಲೆಯಲ್ಲಿ ಕಂಬಗಳ ವಿನ್ಯಾಸ, ವರ್ಣಮಯ ಪರದೆಗಳ ವಿನ್ಯಾಸ ರಚನೆಗೊಂಡಿದ್ದು, ಜೊತೆಗೆ ಸ್ವರ್ಣಮಯ ದಿಂಬನ್ನು ಚಿತ್ರಿಸಲಾಗಿದೆ. ಚಿತ್ರ ೦೩ ರಲ್ಲಿ ಚಿತ್ರವಿನ್ಯಾಸದಿಂದ ಮೂಡಿಬಂದ ಪ್ರಭಾವಳಿ ಹಾಗೂ ದಿಂಬನ್ನು ಚಿತ್ರಿಸಲಾಗಿದೆ. ಚಿತ್ರ ೦೨ ರ ವಿವರವನ್ನು ಚಿತ್ರ ೦೪ ರಲ್ಲಿ ಕಾಣುತ್ತೇವೆ. ಚಿತ್ರ ೦೨ ರಲ್ಲಿ ಅಲಂಕಾರಕ್ಕೆ ಪ್ರಾಧ್ಯಾನತೆ ನಿಡಿದರೆ ಚಿತ್ರ ೦೩, ೦೪ ರಲ್ಲಿ ರೇಖಾವಿನ್ಯಾಸಕ್ಕೆ ಪ್ರಾಶಸ್ತ್ಯವನ್ನು ನೀಡುತ್ತವೆ. ಈ ಮೂರು ಚಿತ್ರಗಳಲ್ಲಿ ಆಧುನಿಕತೆಯ ಪ್ರಭಾವ ವ್ಯಕ್ತಗೊಂಡಿದೆ.

ಚಿತ್ರ ೦೫, ೦೬ ರಲ್ಲಿ ಸರಸ್ವತಿಯ ವೇಷಭೂಷಣಗಳು, ಕುಳಿತ ಭಂಗಿ, ವಸ್ತುಗಳ ಸಂಯೋಜನೆ ಒಂದೇ ರೀತಿಯಲ್ಲಿವೆ. ಸೀರೆಯ ನಿರೆಗೆಗಳು, ತಾವರೆಯ ದಳಗಳು ವೈಶಿಷ್ಟಪೂರ್ಣವಾಗಿ ಚಿತ್ರ ೦೫ ರಲ್ಲಿ ಮೂಡಿಬಂದಿದೆ. ವರ್ಣಮಯ ವೀಣೆಯನ್ನು ಎರಡು ಕೈಗಳಿಂದ ಹಿಡಿದ್ದು, ಇನ್ನೆರಡು ಕೈಯಲ್ಲಿ ಲೇಖನಿ ಹಾಗೂ ಶಾಸ್ತ್ರಪುಸ್ತಕವನ್ನು ಹಿಡಿದಿರುವಳು. ಚಿನ್ನದ ಮಂಚ, ದಿಂಬುಗಳು ಚಿತ್ರವಿನ್ಯಾಸಗಳಿಂದ ರಚನೆಗೊಂಡಿವೆ. ನೀಳ ದೇಹ, ಸಿಂಹಕಟಿ ಹಾಗೂ ಸಂಪಿಗೆಯ ಹೊಂಬಣ್ಣವನ್ನು ವ್ಯಕ್ತಪಡಿಸುವಂತಹ ರಚನಾವಿಧಾನ ಈ ಚಿತ್ರದಲ್ಲಿ ಮೂಡಿಬಂದಿದೆ. ಕಿರೀಟಾಭರಣಗಳು, ಪುಷ್ಪಮಾಲೆಯು ಸೂಕ್ಷ್ಮರೇಖಾವಿನ್ಯಾಸಗಳಿಂದ ಕುಸುರಿ ಕೆಲಸದಿಂದ ಕೂಡಿದ ರಚನೆಯು ಪ್ರಕಟಣೆಗೊಂಡಿದೆ.

ಹಿನ್ನೆಲೆಯುಲ್ಲಿ ಕೆಂಪು ಬಣ್ಣದ ವಿವಿಧ ಪರದೆಗಳನ್ನು ವಿಶಿಷ್ಟವಾಗಿ ಸಂಯೋಜಿಸಲಾಗಿದೆ. ಚಿತ್ರವು ಎದ್ದು ತೋರುವಂತೆ ಕಪ್ಪು ಬಣ್ಣವನ್ನು ಏಕರೂಪವಾಗಿ ಲೇಪನಮಾಡಲಾಗಿದೆ. ಉತ್ತಮ ಭಾವನಾನಿರೂಪಣೆಯನ್ನು ಈ ಚಿತ್ರವು ಪ್ರಕಟಪಡಿಸುತ್ತದೆ.

ಚಿತ್ರ ೦೬ ರಲ್ಲಿ ವೀಣೆಯು ಸಾಂಕೇತಿಕವಾಗಿ ಮೂಡಿಬಂದಿದ್ದು, ಸೀರೆಯ ವಿನ್ಯಾಸದಲ್ಲಿ ನಿರಿಗೆಗಳು ಮೂಡಿಬರದಿದ್ದರೂ ವೃತ್ತಾಕಾರದ ವಿನ್ಯಾಸದಲ್ಲಿ ಚಿಕ್ಕ ಚಿಕ್ಕ ಚುಕ್ಕಿಗಳ ಚಿತ್ರಗಳು ಸಂಯೋಜನೆಗೊಂಡಿವೆ. ಇಲ್ಲಿ ಎರಡು ಕೈಗಳಲ್ಲಿ ಒಂದು ಕೈ ಅಭಯಹಸ್ತ, ಇನ್ನೊಂದು ಕೈ ಲೇಖನಿಯನ್ನು ಹೊಂದಿರುವಳು. ಕಿರೀಟಾಭರಣಗಳು ವೈವಿಧ್ಯಮಯವಾಗಿ ಮೂಡಿಬಂದಿವೆ. ಚಿತ್ರದ ಸುತ್ತಲೂ ನೈಸರ್ಗಿಕ ನಕ್ಷಾವಿನ್ಯಾಸ ಹಾಗೂ ಮಂಟಪವನ್ನು ಚಿತ್ರಿಸಲಾಗಿದೆ. ಆಭರಣಗಳ ಅಲಂಕಾರವನ್ನು ವೈಭವಿಕರಿಸಲಾಗಿದೆ. ಉತ್ತಮ ರೇಖಾವಿನ್ಯಾಸದಿಂದ ಚಿತ್ರವು ಆಕರ್ಷಕವಾಗಿ ರೂಪಗೊಂಡಿದ್ದು, ಉತ್ತಮ ಭಾವನಾ ನಿರೂಪಣೆಯೂ ಇಲ್ಲಿ ಒಡಮೂಡಿದೆ.

ಈ ಐದು ಚಿತ್ರಗಳು ರೇಖೆ, ವರ್ಣ, ಅಲಂಕಾರ, ವೇಷಭೂಷಣಗಳ ಸಂಯೋಜನೆ,

ಆಕೃತಿಗಳ ಹಾಗೂ ವಸ್ತುಗಳ ಸಂಯೋಜನೆಗಳು ಸಾಂಪ್ರದಾಯಿಕ ಹಾಗೂ ಆಧುನಿಕತೆಯ ಆಶಯಗಳೊಂದಿಗೆ ರಚನೆಗೊಂಡಿವೆ.

**ಚಿತ್ರಸಂಖ್ಯೆ ೦೭, ೦೮ ದತ್ತಾತ್ರೇಯ**

ಇವನು ವಿಷ್ಣುವಿನ ಅವತಾರ, ಅತ್ರಿ ಮತ್ತು ಅನುಸೂಯೆಯರ ಮಗನು. ಈ ಮುನಿದಂಪತಿಗಳು ಪುತ್ರನಿಗಾಗಿ ವಿಷ್ಣುವಿನ ಕುರಿತು ತಪಸ್ಸು ಮಾಡಲು, ವಿಷ್ಣು ಪ್ರತ್ಯಕ್ಷನಾಗಿ ಆ ದಂಪತಿಗಳಿಗೆ ತನ್ನನ್ನೇ ಕೊಟ್ಟಿದ್ದರಿಂದ ದತ್ತಾತ್ರೇಯನೆಂದು ಪ್ರಸಿದ್ಧನಾದನು. ದೈವಸ್ವತ ಮನ್ವಂತರದಲ್ಲಿ ಅತ್ರಿ ಮುನಿಯು ಸತ್ಪುತ್ರನಿಗಾಗಿ ತಪಸ್ಸು ಮಾಡುತ್ತಿರಲು ತ್ರಿಮೂರ್ತಿಗಳು ಆತನಿಗೆ ಪ್ರಸನ್ನರಾಗಿ ಪುತ್ರನಾಗುವಂತೆ ಅನುಗ್ರಹಿಸಿದರು. ಮುಂದೆ ಅನುಸೂಯೆಯಲ್ಲಿ ಬ್ರಹ್ಮನ ಅಂಶದಿಂದ ಚಂದ್ರನನ್ನು, ವಿಷ್ಣುವಿನ ಅಂಶದಿಂದ ದತ್ತನೂ, ಶಿವನ ಅನುಗ್ರಹದಿಂದ ದುರ್ವಾಸ ಮುನಿಯೂ ಹುಟ್ಟಿದರು. ಮಹಾರಾಷ್ಟ್ರದ ಗಾಣಗಾಪುರವು ಸುಪ್ರಸಿದ್ಧ ದತ್ತಕ್ಷೇತ್ರ

ಈ ಹಿನ್ನೆಲೆಯನ್ನು ಪ್ರಕಟಪಡಿಸುವ ಎರಡು ಗಾಜಿನ ಚಿತ್ರಗಳು ಲಭ್ಯವಿದ್ದು, ವಿಭಿನ್ನ ಶೈಲಿಯಲ್ಲಿ ಚಿತ್ರಿತಗೊಂಡಿವೆ. ಚಿತ್ರಸಂಖ್ಯೆ ೦೭ ಇದು ೫೦ x ೬೩ ಸೆಂ.ಮೀ. ಅಳತೆಯನ್ನು ಹೊಂದಿದೆ. ಈ ಚಿತ್ರವು ಆಧುನಿಕ ರಚನಾ ಶೈಲಿಯಲ್ಲಿ ರೂಪಗೊಂಡಿದ್ದು, ಸಾಂಕೇತಿಕವಾಗಿ ಮೂಡಿಬಂದಿದೆ. ತ್ರಿಮೂರ್ತಿಗಳ ಶಿರಭಾವ, ಷಡ್ಭುಜಗಳಲ್ಲಿ ಶಂಖ, ಚಕ್ರ, ತ್ರಿಶೂಲ, ಕಮಂಡಲ ಹಾಗೂ ಗದೆಗಳನ್ನು ಹೊಂದಿದ್ದು, ಜಟಾಮುಕುಟ, ಕೊರಳಲ್ಲಿ ರುದ್ರಾಕ್ಷಿ ಮಾಲೆಗಳು, ಜನಿವಾರಗಳು, ಭೂಷಿತವಾಗಿವೆ. ವ್ಯಾಘ್ರಚರ್ಮವು ಭುಜವನ್ನು ಅಲಂಕರಿಸಿದ್ದು, ಕಟ್ಟಿಗೆಯ ಪಾದುಕೆಗಳು ಪಾದವನ್ನು ಅಲಂಕರಿಸಿವೆ. ಚಿತ್ರದ ಹಿನ್ನೆಲೆಯಲ್ಲಿ ಪ್ರಕೃತಿಯು ಜಲಪಾತ, ಹಸಿರು ಭೂಪ್ರದೇಶ, ನಂದಿ ಹಾಗೂ ಶ್ವಾನಗಳನ್ನು ಸಂಯೋಜಿಸಲಾಗಿದೆ. ಈ ಚಿತ್ರವು ಹವ್ಯಾಸಿ ಕಲಾವಿದನ ಆಶಯದೊಂದಿಗೆ ಅಭಿವ್ಯಕ್ತಗೊಂಡಿರಬಹುದು. ಯಾಕೆಂದರೆ ಇಲ್ಲಿ ವ್ಯಕ್ತಗೊಂಡಿರುವ ರೇಖೆ, ವರ್ಣ ಹಾಗೂ ಪೂರಕ ವಸ್ತುಗಳ ಸಂಯೋಜನೆಯು ಸಶಕ್ತಯುತವಾಗಿ ಮೂಡಿಬಂದಿಲ್ಲ. ವರ್ಣಗಳಲ್ಲಿ ಉಜ್ವಲತೆ ಹಾಗೂ ಸ್ಪಷ್ಟತೆ ಕಾಣುವುದಿಲ್ಲ. ಕಂದುಗೆಂಪು, ಹಸಿರು, ಬಿಳಿ, ಹಳದಿ ಹಾಗೂ ಕಪ್ಪು ಮಿಶ್ರಿತ ವರ್ಣಗಳಿಂದ ಸಂಯೋಜನೆಗೊಂಡಿದೆ.

ಚಿತ್ರ ೦೮ ಈ ಚಿತ್ರವು ಚೀನಿ ಕಲಾವಿದನಿಂದ ರಚಿಸಲ್ಪಟ್ಟಿದ್ದು, ದತ್ತನನ್ನು ಚಿತ್ರವಿನ್ಯಾಸಗಳಿಂದ ಕೂಡಿದ ಕೆಂಪು ಬಣ್ಣದ ನಿಲುವಂಗಿಯನ್ನು ಸಂಯೋಜಿಸಲಾಗಿದೆ. ನಡುವಿಗೆ ಶ್ವೇತವರ್ಣದ ಬಟ್ಟೆಯನ್ನು ಕಟ್ಟಿಕೊಂಡಂತೆ ಹಾಗೂ ಚಿತ್ರವಿನ್ಯಾಸಗಳಿಂದ ಕೂಡಿದ ನೀಲಿ ಉತ್ತರೀಯವನ್ನು ಹೊದ್ದುಕೊಂಡಂತೆ ರಚಿಸಲಾಗಿದೆ. ಮೂರು ಶಿರಭಾವಗಳು ತ್ರಿವಳಿಯಂತೆ ರೂಪಗೊಂಡಿದ್ದು, ಕೋರೆಮೀಸೆ, ನೀಲಿ ಕುಲಾಯಿಗಳನ್ನು ಅಲಂಕರಿಸಲಾಗಿದೆ. ಎರಡು ಕೈಗಳನ್ನು ಎದೆಗವುಚಿದಂತೆ ರಚಿಸಿದ್ದು, ಇನ್ನುಳಿದ ನಾಲ್ಕು ಕೈಗಳಲ್ಲಿ ಚಕ್ರ, ಲೇಖನಿ, ಪುಷ್ಪ ಹಾಗೂ ಕಮಂಡಲವನ್ನು ಕೊಡಲಾಗಿದೆ.

ವಿಶೇಷವಾಗಿ ದೊಡ್ಡದಾದ ಪುಷ್ಪಮಾಲೆಯನ್ನು ಹಾಕಲಾಗಿದೆ. ಆಕೃತಿಯ ಭಾವಲಕ್ಷಣಗಳು ಹಾಗೂ ವೇಷಭೂಷಣಗಳು ಮರಾಠರ ದೈಹಿಕ ಲಕ್ಷಣಗಳನ್ನು ಅಭಿವ್ಯಕ್ತಿಸುತ್ತಿವೆ.

ನೀಳ ಶರೀರ, ತಿಳಿಗುಲಾಬಿ ಬಣ್ಣದ ಮೈಬಣ್ಣವನ್ನು ಅಭಿವ್ಯಕ್ತಪಡಿಸಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಕೋಲು ಶರೀರವನ್ನು ಹೊಂದಿದ ಶ್ವಾನಗಳು, ನಂದಿಗಳು ಭಾವನಾತ್ಮಕವಾಗಿ ಮೂಡಬಂದಿವೆ. ನೀಲಿ ಬೆಟ್ಟ, ಸರೋವರ, ಹಸಿರು ಭೂದೃಶ್ಯ ಹಾಗೂ ಮರಗಳನ್ನು ಸಂಯೋಜಿಸಲಾಗಿದೆ. ಈ ಚಿತ್ರವು ನೀಲಿ ಮಿಶ್ರಿತ ಏಕ ವರ್ಣವಿಧಾನದಲ್ಲಿ ರಚನೆಗೊಂಡಿದೆ ಎಂಬಂತೆ ಗೋಚರವಾಗುತ್ತಿದೆ. ಹಿನ್ನೆಲೆಯ ಭೂದೃಶ್ಯದ ಯಥಾದರ್ಶನವೂ ಉತ್ತಮವಾಗಿ ಮೂಡಿಬಂದಿದ್ದು ದತ್ತನನ್ನು ಒಬ್ಬ ಧಾರ್ಮಿಕ ವ್ಯಕ್ತಿಯಂತೆ ಚಿತ್ರಿಸಲಾಗಿದೆ. ಈ ಚಿತ್ರದಲ್ಲಿ ನೀಲಿ, ಕೆಂಪು, ಕಪ್ಪು ಹಾಗೂ ಬಿಳಿ ವರ್ಣಗಳು ಪ್ರಧಾನವಾಗಿ ಬಳಸಲ್ಪಟ್ಟಿವೆ.

**ಚಿತ್ರಸಂಖ್ಯೆ ೦೯, ೧೦ ಮಹಿಷ ಮರ್ದಿನಿ (ಚಾಮುಂಡೇಶ್ವರಿ)**

ಮೈಸೂರು ಅರಸರ ಅಧಿದೇವತೆ ಚಾಮುಂಡೇಶ್ವರಿ ಇವಳನ್ನು ಮಹಿಷಾಸೂರ ಮರ್ದಿನಿ ಎಂದು ಕರೆಯುವರು. ಮೈಸೂರಿನ ಬೆಟ್ಟದಲ್ಲಿ ವಾಸವಾಗಿದ್ದ ಮಹಿಷಾಸೂರನೆಂಬ ರಾಕ್ಷಸನನ್ನು ಕೊಂದು ಚಾಮುಂಡೇಶ್ವರಿಯಾಗಿ ನೆಲೆನಿಂತಳೆಂದು ಕಥೆ ಬರುತ್ತದೆ. ಈ ದೇವತೆಯ ಕುರಿತು ಮೈಸೂರು ಅರಸರು ಅಲ್ಲದೇ ಅಲ್ಲಿನ ಸ್ಥಳೀಯ ಜನರು ಭಕ್ತಿ ಭಾವಗಳನ್ನು ತಳೆದಿರುವರು. ಮೈಸೂರು ಸಾಂಪ್ರದಾಯಿಕ ಚಿತ್ರಗಳಲ್ಲಿ ಚಾಮುಂಡೇಶ್ವರಿಯ ದೃಶ್ಯಚಿತ್ರಗಳು ರಚನೆಗೊಂಡಿವೆ. ಇಂಥ ಶಕ್ತಿದೇವತೆಯನ್ನು ಗಾಜಿನ ಕಲಾವಿದರು ಗಾಜಿನ ಮೇಲೆ ರಚನೆ ಮಾಡಿರುವರು.

ಇಲ್ಲಿ ರಚನೆಗೊಂಡಿರುವ ಗಾಜಿನ ಮೇಲಿನ ಚಿತ್ರವು ಮೈಸೂರು ಸಾಂಪ್ರದಾಯಿಕ ಶೈಲಿಯಲ್ಲಿದೆ. ಇಲ್ಲಿ ಚಾಮುಂಡೇಶ್ವರಿಯು ಅಷ್ಟಭುಜಗಳನ್ನು ಹೊಂದಿದ್ದು, ಬಲಭುಜದ ನಾಲ್ಕು ಕೈಗಳಲ್ಲಿ ಚಕ್ರ, ಕತ್ತಿ, ತ್ರಿಶೂಲ, ಬಾಣಗಳನ್ನು ಎಡಭುಜದ ಕೈಗಳಲ್ಲಿ ಶಂಖ, ಗುರಾಣಿ, ಪುಸ್ತಕ, ಬಿಲ್ಲನ್ನು ಹಿಡಿದಿರುವಳು.ದೇವಿಯು ಅಸೂರನ ಮೇಲೆ ಮೆಟ್ಟಿನಿಂತು ತ್ರಿಶೂಲದಿಂದ ಮರ್ದಿಸುತ್ತಿರುವ ಭಾವವೇಷವು ಮೂಡಿಬಂದಿದೆ. ಕಂದುಕೆಂಪು ಬಣ್ಣದ ಸೀರೆ, ಕಿರೀಟ, ಕರ್ಣಾಭರಣಗಳು, ವಿವಿಧ ಮುತ್ತಿನ ಹಾಗೂ ಚಿನ್ನದ ಸರಗಳು, ಕಟಿಬಂಧಕ, ಚಿನ್ನದ ಒಡ್ಯಾಣ, ಚಿನ್ನದ ಚೂಮಕಣ್ಣುಗಳು, ಬಾಗಿದ ಹುಬ್ಬು, ಮುತ್ತಿನ ನತ್ತು, ಕೆಂಪು ಸಿಂಧೂರ ಹಾಗೂ ದುಂಡುಮುಖ ಆಕರ್ಷಕ ಮೈಕಟ್ಟು, ಸಿಂಹಕಟಿಯಿಂದ ಭಾವಪರವಶತೆಯೂ ಎದ್ದು ತೋರುತ್ತಿದೆ.

ಅಲಂಕಾರಿಕ ರೇಖಾ ವಿನ್ಯಾಸಗಳಿಂದ ರೂಪುಗೊಂಡ ಸಿಂಹ, ದಢೂತಿ ದೇಹವನ್ನು ಹೊಂದಿದ ಅಸೂರ ಹಾಗೂ ಅವನ ಕತ್ತಿ, ಗುರಾಣಿ, ಶಿರಶ್ಛೇಧನ ಹೊಂದಿದ ಕೋಣನ ಚಿತ್ರವು ರಚನೆಗೊಂಡಿದ್ದು, ಈ ಸಮೂಹವು ಚಲನೆಯುಕ್ತವಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಅಲಂಕಾರಿಕ ಮಂಟಪ, ದೇವಿಯ ಹಿಂದೆ ಉರಿಯುತ್ತಿರುವ ಅಗ್ನಿ, ಚಂದ್ರನ ಚಿತ್ರವು ವ್ಯಕ್ತಗೊಂಡಿದ್ದು ಚಿತ್ರವು ಸಾಂಕೇತಿಕವಾಗಿ ಪ್ರಕಟಗೊಂಡಿದೆ. ಹಳದಿ, ಕೆಂದುಗೆಂಪು, ಹಸಿರು, ನೇರಳೆ, ಕಪ್ಪು ಬಣ್ಣಗಳು ತೇಳುವಾದ ಆಮ್ಲವರ್ಣಗಳಿಂದ ಲೇಪನಗೊಂಡಿದ್ದು, ಹೊರಗಿನ ಪ್ರಖರ ಬೆಳಕಿನಿಂದ ರೇಖೆ ಮತ್ತು ವರ್ಣಛಾಯೆಗಳು ಆಕರ್ಷಕವಾಗಿ ಅನಾವರಣಗೊಂಡಿವೆ.

ಚಿತ್ರಸಂಖ್ಯೆ ೧೦ ಇದು ೫೦ x ೬೩ ಸೆಂ.ಮೀ. ಅಳತೆಯನ್ನು ಹೊಂದಿದೆ. ಇಲ್ಲಿ ದೇವಿಯು ಅಷ್ಟಭುಜಗಳನ್ನು ಹೊಂದಿದ್ದು, ಬಲಗೈನ ನಾಲ್ಕು ಕೈಗಳಲ್ಲಿ ದೊಡ್ಡ ಕತ್ತಿ, ಚಕ್ರ,





೦೯.ಮಹಿಷಮರ್ದಿನಿ (ಚಾಮುಂಡೇಶ್ವರಿ)



೧೦.ಮಹಿಷಮರ್ದಿನಿ (ಚಾಮುಂಡೇಶ್ವರಿ)

ಗಾಜಿನ ಮೇಲಿನ ಇತರೆ ಹಿಂದೂದೇವತೆಗಳ ಚಿತ್ರಗಳು

ತ್ರಿಶೂಲ, ಗದೆಯನ್ನು ಹಿಡಿದಿರುವಳು. ಎಡಗೈನ ನಾಲ್ಕು ಕೈಗಳಿಂದ ಒಬ್ಬ ಅಸೂರನ ಕೈ, ಕೂದಲು, ಕತ್ತನ್ನು ಮುತ್ತಿರುವಂತೆ ಚಿತ್ರಿತಗೊಂಡಿರುವಳು. ಸಾಂಪ್ರದಾಯಿಕ ಸೀರೆಯನ್ನು ಧರಿಸಿ ಟೊಂಕಕ್ಕೆ ಸೆರಗು ಸುತ್ತಿ, ಕಚ್ಚೆಹಾಕಿ, ಸಿಂಹದ ಮೇಲೆ ಆಶೀನಳಾಗಿ ಒಂದು ಕಾಲಿನಿಂದ ಕೋಣವನ್ನು ತಳ್ಳುತ್ತಿರುವಂತೆ ಭಾವಾವೇಷವು ಅಭಿವ್ಯಕ್ತಗೊಂಡಿದೆ. ಇನ್ನೊಬ್ಬ ಅಸೂರನ ಮೇಲೆ ಸಿಂಹವು ಎರಗಿದ್ದು ಅವನನ್ನು ಸಾಯಿಸಿದೆ. ಇಲ್ಲಿ ಇಬ್ಬರೂ ಅಸುರರು ಕತ್ತಿ ಹಾಗೂ ಗುರಾಣಿಗಳನ್ನು ಹಿಡಿದಿರುವರು. ದೇವಿಯನ್ನು ಎದುರಿಸಲು ಹೋಗಿ ಹತರಾಗುತ್ತಿರುವಂತೆ ರಚನೆಗೊಂಡಿರುವರು. ಕೋಣವು ಶಿರಶ್ಛೇಧನವಾಗಿದ್ದು ದೇವಿಯ ಕಾಲಿನ ತುಳಿತದಿಂದ ಅದರ ನಾಲಿಗೆಯು ಹೊರಚಾಚಿದೆ. ಕಣ್ಣುಗುಡ್ಡೆಗಳು ಮೇಲೆ ತಿರುಗಿವೆ. ಚಿತ್ರದ ಹಿನ್ನೆಲೆಯು ಕಂದುಗೆಂಪು ವರ್ಣದಿಂದ ಆವರಿಸಿದ್ದು, ಸಂಜೆಯ ಸಮಯವನ್ನು ತೋರಿಸಿರುತ್ತಿರುವಂತೆ ಚಿತ್ರಣಗೊಂಡಿದೆ.

ದೇವಿಯ ಮುಖಭಾವವು ಹೊಂಬಣ್ಣದಂತೆ ರಂಗಾಗಿದ್ದು, ದೊಡ್ಡಕಣ್ಣುಗಳು, ಹರಡಿದ ಕೂದಲುಗಳಿಂದ ರೌದ್ರಸ್ವರೂಪವು ವ್ಯಕ್ತವಾಗುತ್ತಿದೆ.ಚಿತ್ರವು ರೇಖೆ, ವರ್ಣ ಹಾಗೂ ಭಾವನಿರೂಪಣೆಯು ಸಾಂಪ್ರದಾಯಿಕವಾಗಿದ್ದರೂ ಸಹ ವರ್ಣಛಾಯೆಯಲ್ಲಿ ಆಧುನಿಕತೆಯ ಪ್ರಭಾವ ಅಭಿವ್ಯಕ್ತಗೊಂಡಿದೆ. ಇಲ್ಲಿ ದೇವಿಯ ಉಡುಪು ಆಭರಣಗಳಲ್ಲಿ ಅಲಂಕಾರವು ಸರಳತೆಯಿಂದ ಕೂಡಿದ್ದು ಸಾಂಕೇತಿಕ ಸಂಯೋಜನೆ ಪ್ರಕಟಗೊಂಡಿದೆ.

## ೦೨. ಗಾಜಿನ ಮೇಲಿನ ಕ್ರೈಸ್ತ ಧರ್ಮದ ಚಿತ್ರಗಳು

ಯಾವುದೇ ಒಂದು ದೇಶದ ಸಂಸ್ಕೃತಿಯನ್ನು ಅರಿಯಬೇಕಾದರೇ ಆದೇಶದ ಕಲೆ, ಧರ್ಮ, ಪುರಾಣ, ಪುಣ್ಯಕಥೆಗಳಿಂದ ತಿಳಿಯಬಹುದು. ಅದರಂತೆ ಚಿತ್ರಕಲೆಯಾಗಲಿ, ಶಿಲ್ಪಕಲೆಯಾಗಲಿ ಬೆಳೆಯಲು ಆ ದೇಶದ ಧರ್ಮ ಸಂಸ್ಕೃತಿಯು ಪ್ರಮುಖ ಪಾತ್ರವಹಿಸುತ್ತದೆ. ಇದಕ್ಕೆ ಭಾರತವೂ ಕೂಡಾ ಹೊರತಾಗಿಲ್ಲ. ಭಾರತವು ವಿವಿಧ ಮತಧರ್ಮಗಳಿಂದ ಕೂಡಿದ ವಿಶಾಲವಾದ ರಾಷ್ಟ್ರ ಇದು ಹಿಂದೂ ರಾಷ್ಟ್ರವಾಗಿದ್ದರೂ ಸಹ ಕ್ರೈಸ್ತ, ಇಸ್ಲಾಂ, ಸಿಖ್ ನಂತಹ ಅನೇಕ ಮತಧರ್ಮಗಳಿಂದ ಕೂಡಿದೆ.

ಕ್ರೈಸ್ತ ಧರ್ಮವು ಭಾರತದಲ್ಲಿ ಮಧ್ಯಕಾಲದಿಂದಲೂ ಪ್ರಚಲಿತವಾಗಿದ್ದು ಇತಿಹಾಸಗಳಿಂದ ತಿಳಿದುಕೊಳ್ಳಬಹುದಾಗಿದೆ. ಈ ಧರ್ಮವು ಯೇಸು ಕ್ರಿಸ್ತನಿಂದ ಪ್ರಾರಂಭವಾಯಿತೆಂದು ತಿಳಿಯಬಹುದು. ಯೇಸುವಿನ ಮರಣದ ನಂತರ ಕ್ರೈಸ್ತ ಧರ್ಮವು ವ್ಯಾಪಕ ಪ್ರಚಾರ ಪಡೆದುಕೊಂಡಿತು. ಈ ಧರ್ಮವು ಯುರೋಪ ರಾಷ್ಟ್ರಗಳ ಮೂಲಕ ಭಾರತಕ್ಕೂ ಪ್ರವೇಶ ಪಡೆಯಿತು. ಇಲ್ಲಿ ಅನೇಕ ಕ್ರೈಸ್ತ ಮಿಸಿನರಿಗಳು ಉದಯಗೊಂಡವು. ಇವು ಮೊದಲು ಕ್ರೈಸ್ತಮತ ಪ್ರಚಾರ ಗೈಯಲು ದೇಗುಲಗಳನ್ನು ನಿರ್ಮಿಸಿ ಆ ಮೂಲಕ ಶಿಲ್ಪ ಹಾಗೂ ಚಿತ್ರಗಳ ಮೂಲಕ ಕ್ರೈಸ್ತ ಕಥಾನಕ ದೃಶ್ಯಗಳನ್ನು ಬರೆದು ವ್ಯಾಪಕ ಪ್ರಚಾರ ಮಾಡಲು ಪ್ರಾರಂಭಿಸಿದರು. ಈ ಬಗೆಯ ಕ್ರೈಸ್ತ ಕಥಾನಕ ದೃಶ್ಯಗಳು ಗೋಡೆಯ ಮೇಲೆ, ಲೋಹದ ಮೇಲೆ, ಕಟ್ಟಿಗೆಯ ಮೇಲೆ ಹಾಗೂ ಗಾಜಿನ ಮೇಲೆ ವರ್ಣರಂಜಿತವಾಗಿ ಮೂಡಿ ಬಂದಿವೆ. ಇಂಥ ವರ್ಣರಂಜಿತ ಗಾಜಿನ

ಚಿತ್ರಗಳು ಕರ್ನಾಟಕದ ಅನೇಕ ಕ್ರೈಸ್ತ ದೇವಾಲಯಗಳ ಕಿಟಕಿಗಳ ಮೇಲೆ ಚಿತ್ರಿತಗೊಂಡಿವೆ. ಈ ಗಾಜಿನ ಚಿತ್ರಗಳು ಕ್ರಿಸ್ತ ಹಾಗೂ ಅವನ ಅನುಯಾಯಿಗಳಿಗೆ ಸಂಬಂಧ ಪಟ್ಟಿವೆ. ಜೊತೆಗೆ ಕ್ರೈಸ್ತ ಧರ್ಮದ ಪ್ರವರ್ತಕರಿಗೆ ಸಂಬಂಧಿಸಿವೆ. ಅವುಗಳನ್ನು ಇಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

ಯೇಸುಕ್ರಿಸ್ತನು ಕ್ರೈಸ್ತ ಧರ್ಮದ ಮೂಲ ಪುರುಷನೂ ಮತ್ತು ಈ ಮತಧರ್ಮದವರ ಆರಾಧ್ಯದೈವನಾಗಿದ್ದಾನೆ. ಮಾನವ ಸ್ವರೂಪದಲ್ಲಿ ಹುಟ್ಟಿ ಭೂಮಿಯ ಮೇಲೆ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿ, ಸಮಗ್ರ ಮಾನವ ಕಲ್ಯಾಣಕ್ಕಾಗಿ ಹೋರಾಡಿ ಕೊನೆಗೆ ದೇಹತ್ಯಾಗ ಮಾಡಿ ದೈವಿಪುರುಷನಾಗಿ ನಿಲ್ಲುತ್ತಾನೆ. ಇಂಥ ಮಹಾನ ಪುರುಷನ ಹಿಂದೆ ಅವನ ಸಂಗಡಿಗರು ಸಹ ಇವನಂತೆ ಹಿಂಬಾಲಕರಾಗಿ ಧರ್ಮ ರಕ್ಷಣೆಯಲ್ಲಿ ತೊಡಗುತ್ತಾರೆ. ಇಂಥ ವಿಷಯಗಳನ್ನು ತಿಳಿಸುವ ಅನೇಕ ಗಾಜಿನ ಚಿತ್ರಗಳು ಕಾಣಸಿಗುತ್ತವೆ. ಅವನ್ನು ಇಲ್ಲಿ ಚರ್ಚಿಸಲಾಗುತ್ತಿದೆ.

ಇಲ್ಲಿ ರಚನೆಗೊಂಡ ಬಹುತೇಕ ಗಾಜಿನ ಚಿತ್ರಗಳು ಕ್ರಿಸ್ತನ ಜನನದಿಂದ ಅವನ ಮರಣದ ನಂತರ ಪುನರುತ್ಥಾನದ ದೃಶ್ಯಕಲ್ಪನೆಯನ್ನು ವಿವರಿಸುತ್ತವೆ. ಕರ್ನಾಟಕದಲ್ಲಿ ಅನೇಕ ಕ್ರಿಸ್ತ ದೇಗುಲಗಳು ಕಂಡು ಬರುತ್ತಿದ್ದು, ಅವುಗಳ ಕಿಟಕಿಗಳಲ್ಲಿ ಅಳವಡಿಸಿದ ಗಾಜುಗಳ ಮೇಲೆ ಈ ವಿಷಯದ ಚಿತ್ರಗಳು ಚಿತ್ರಿತಗೊಂಡಿವೆ.

**ಚಿತ್ರಸಂಖ್ಯೆ ೦೧ ಬಾಲಕ ಯೇಸು ತಾಯಿ ಮೇರಿಯೊಂದಿಗೆ**

ಈ ದೃಶ್ಯವು ಮೈಸೂರಿನ ಸಂತ ಫಿಲೋಮಿನಾ ಚರ್ಚದ ಕಿಟಕಿಯೊಂದರ ಗಾಜಿನ ಮೇಲೆ ಕಂಡುಬರುತ್ತಿದೆ. ಈ ದೊಡ್ಡ ಕಿಟಕಿಯು ೧೨ ಖಾನೆಗಳನ್ನು ಹೊಂದಿದ್ದು ಮೇಲಿನ ಮೂರು ಖಾನೆಗಳಲ್ಲಿ ಇಬ್ಬರು ಸ್ತ್ರೀಯರು ಮಂಡಿಯೂರಿ ನಮಸ್ಕರಿಸುತ್ತಿರುವ ಭಂಗಿಯಲ್ಲಿ ಕುಳಿತಿರುವರು. ನಡುವಿನ ಖಾನೆಯ ಗಾಜಿನ ಮೇಲೆ ಹಸುವೊಂದು ಮಲಗಿರುವ ದೃಶ್ಯ ಹಾಗೂ ಸಾಂಕೇತಿಕ ಮರದ ದೃಶ್ಯವೊಂದು ಕಂಡುಬರುತ್ತಿದೆ. ಇನ್ನುಳಿದಂತೆ ಉಳಿದ ಖಾನೆಗಳ ಗಾಜುಗಳನ್ನು ಬಳಸಿಕೊಂಡು ದೊಡ್ಡ ಪ್ರಮಾಣದ ಆಕಾರದಲ್ಲಿ ಮೇರಿಮಾತೆಯು ಮಗು ಯೇಸುವನ್ನು ಹೊತ್ತುಕೊಂಡಿರುವ ದೃಶ್ಯವು ಚಿತ್ರಿತಗೊಂಡಿದೆ. ಇಲ್ಲಿ ಮೇರಿಮಾತೆಯು ತುಂಬು ತೋಳಿನ ನಿಲುವಂಗಿ ಹಾಗೂ ಹಸಿರು ವರ್ಣದ ಸ್ಕರ್ಟನ್ನು ಧರಿಸಿರುವಳು. ಇವಳು ಧರಿಸಿದ ಬಟ್ಟೆಯ ನಿರಿಗೆಗಳು ಆಕರ್ಷಕವಾಗಿ ಮೂಡಿಬಂದಿದ್ದು, ಬೆಳಕು ನೆರಳುಗಳ ವರ್ಣಛಾಯೆಗಳು ಹಾಗೂ ನೀರಿಗೆಗಳ ಏರಿಳಿತಗಳು ಉತ್ತಮವಾಗಿ ಮೂಡಿಬಂದಿವೆ.

ಮೇರಿಮಾತೆಯ ಪಾದದ ಕೆಳಮಟ್ಟದಲ್ಲಿ ಎಡಕ್ಕೆ ಹಾಗೂ ಬಲಕ್ಕೆ ದಂಪತಿಗಳು ರೂಪುಗೊಂಡಿದ್ದು, ಇವರು ಮೇರಿ ಮಾತೆಯನ್ನು ಆರಾಧಿಸುತ್ತಿರುವಂತೆ ಚಿತ್ರಿತಗೊಂಡಿರುವರು. ಇವರು ಮೈತುಂಬುವಂತೆ ಬಟ್ಟೆಗಳನ್ನು ಧರಿಸಿದ್ದು, ನಿರಿಗೆಗಳು ವರ್ಣಛಾಯೆಗಳು ಆಕರ್ಷಕವಾಗಿ ಮೂಡಿಬಂದಿವೆ. ಹಿನ್ನೆಲೆಯನ್ನು ಚಿಕ್ಕ ಚಿಕ್ಕ ನಕ್ಷತ್ರಗಳಿಂದ ಮತ್ತು ಮರಗಳಿಂದ ಸಂಯೋಜಿಸಲಾಗಿದೆ. ಈ ಚಿತ್ರದಲ್ಲಿ ಕೆಂಪು, ಕಪ್ಪು, ಬಿಳಿ, ನೀಲಿ, ಹಳದಿ ಮಿಶ್ರಿತ ಹುಡಿವರ್ಣಗಳನ್ನು ಬಳಸಲಾಗಿದೆ. ಇಲ್ಲಿ ಭಿತ್ತಿ ಚಿತ್ರಗಳ ಶೈಲಿಯ ರಚನಾ ಪದ್ಧತಿಯನ್ನು ಅನುಸರಿಸಲಾಗಿದೆ. ಹಾಗೂ ಆಕೃತಿಗಳ

ಭಾವನಾ ನಿರೂಪಣೆಯು ಭಕ್ತಿಯ ಸ್ವರೂಪವನ್ನು ಅಭಿವ್ಯಕ್ತ ಪಡಿಸುತ್ತಿದೆ.

**ಚಿತ್ರಸಂಖ್ಯೆ ೧೨ ಮರಣಕ್ಕೆ ಗುರಿಯಾದ ಯೇಸುವನ್ನು ಶಿಲುಬೆಗೇರಿಸುವ ದೃಶ್ಯಸರಣಿ**

ಈ ಸರಣಿ ಚಿತ್ರವು ಮೈಸೂರಿನ ಸಂತ ಫಿಲೋಮಿನಾ ಚರ್ಚದ ಕಿಟಕಿಯೊಂದರಲ್ಲಿ ಕಂಡುಬರುತ್ತಿದೆ. ಇಲ್ಲಿ ಯೇಸುವಿನ ಜನನದಿಂದ ಮರಣಹೊಂದುವ ದೃಶ್ಯನಿರೂಪಣೆಯನ್ನು ವ್ಯಕ್ತಪಡಿಸುವ ಸನ್ನಿವೇಶಗಳನ್ನು ಕಿಟಕಿಯ ೧೨ ಖಾನೆಗಳಲ್ಲಿನ ಗಾಜುಗಳ ಮೇಲೆ ಚಿತ್ರಿತಗೊಂಡಿವೆ. ಈ ಕಿಟಕಿಯು ನಾಲ್ಕು ಭಾಗಗಳಾಗಿ ವಿಂಗಡನೆಗೊಂಡಿದ್ದು ಪ್ರತಿ ಖಾನೆಗಳಲ್ಲಿ ಒಂದೊಂದು ದೃಶ್ಯವು ರಚನೆಗೊಂಡಿದೆ.

ಮೊದಲಿನ ಮೂರು ಖಾನೆಗಳಲ್ಲಿ ಬಾಲಕ ಯೇಸು ಹಾಗೂ ಅವನ ತಂದೆ ತಾಯಿಗಳು ಚಿತ್ರಿತಗೊಂಡಿರುವರು. ಎರಡನೆ ಖಾನೆಗಳಲ್ಲಿ ಮರಣ ಶಿಕ್ಷೆಗೆ ಗುರಿಯಾದ ಯೇಸು, ಅವನ ಕುಟುಂಬ ಪರಿವಾರ ಹಾಗೂ ಅನುಯಾಯಿಗಳನ್ನು ಚಿತ್ರಿಸಲಾಗಿದೆ. ಮೂರನೆಯ ಖಾನೆಗಳಲ್ಲಿ ಭಗವಾನ ಯೇಸುವಿಗೆ ಮುಳ್ಳಿನ ತಂತಿಯಿಂದ ತಲೆಗೆ ಬಿಗಿಯುತ್ತಿರುವ ದೃಶ್ಯ, ಯೇಸುವನ್ನು ಕ್ರೂಜೆಗೆ ಜಡಿಯುತ್ತಿರುವ ದೃಶ್ಯ ಹಾಗೂ ಯೇಸುವನ್ನು ಕ್ರೂಜೆಗೆ ಎರಿಸಿದ ದೃಶ್ಯವನ್ನು ಚಿತ್ರಿಸಲಾಗಿದೆ. ಇಲ್ಲಿ 'ಯೇಸು ಹಾಗೂ ಆ ನಗರದ ಜನತೆಯ ದುಃಖದ ಮಡುವು ತುಂಬಿದೆ. ನಾಲ್ಕನೆಯ ಮೂರು ಖಾನೆಗಳಲ್ಲಿನ ಗಾಜಿನ ಮೇಲೆ ಯೇಸುದೇವನು ಕ್ರೂಜೆಯನ್ನು ಹೊತ್ತಿರುವುದು. ಯೇಸುವಿನ ಮೃತ ಶರೀರವನ್ನು ಕ್ರೂಜೆಯಿಂದ ಇಳಿಸುತ್ತಿರುವ ಹಾಗೂ ತಾಯಿ ಮೇರಿ ಮಾತೆಯು ಯೇಸುವಿನ ಕಳೆಬರವನ್ನು ಮಡಿಲಲ್ಲಿರಿಸಿಕೊಂಡು ಶಾಂತಿಕೋರುತ್ತಿರುವ ದೃಶ್ಯವು ಚಿತ್ರಿತಗೊಂಡಿದೆ. ಈ ಚಿತ್ರ ಸರಣಿಯು ಭಾವಪರವಶದಿಂದ ಕೂಡಿದ್ದು, ಉತ್ತಮ ವರ್ಣಸಂಯೋಜನೆ, ಯಥಾದರ್ಶನ ಹಾಗೂ ವಸ್ತು ಸಂಯೋಜನೆಯನ್ನು ಮಾಡಲಾಗಿದೆ. ಪಾಶ್ಚಾತ್ಯ ಶೈಲಿಯಲ್ಲಿ ರೂಪನೆಗೊಂಡಿರುವ ಈ ದೃಶ್ಯವು ಉತ್ತಮ ಬೆಳಕು ನೆರಳುಗಳ ವರ್ಣಛಾಯೇ ವ್ಯಕ್ತಗೊಂಡಿದೆ. ಇಂದು ಈ ಚಿತ್ರವು ಅವಸಾನದ ಸ್ಥಿತಿಯಲ್ಲಿ ಕಂಡು ಬರುತ್ತಿದ್ದು, ಚಿತ್ರಸಂಯೋಜನೆಯು ಭಿತ್ತಿಚಿತ್ರಗಳ ರಚನಾ ಪದ್ಧತಿಯಿಂದ ರೂಪಗೊಂಡಿದೆ.

**ಚಿತ್ರಸಂಖ್ಯೆ ೦೩ ಯೇಸುವಿನ ಮರಣದಿಂದ ಪುನರುತ್ಥಾನದ ಸರಣಿಚಿತ್ರ**

ಈ ಚಿತ್ರ ಸರಣಿಯು ಮಂಗಳೂರಿನ ಫಾದರ ಮಲ್ಲರ್ ಆಸ್ಪತ್ರೆಯ ಚರ್ಚಒಂದರ ೧೭ ಕಿಟಕಿಗಳಲ್ಲಿ ಅಳವಡಿಸಿದ ಗಾಜುಗಳ ಮೇಲೆ ಚಿತ್ರಿತಗೊಂಡಿವೆ. ಈ ಚಿತ್ರ ಸರಣಿಯು ಸಂಪೂರ್ಣ ಆಧುನಿಕ ರೀತಿಯ ರಚನಾ ಪದ್ಧತಿಯಲ್ಲಿ ರೂಪಗೊಂಡಿದ್ದು, ಅತ್ಯಂತ ಭಾವನಾ ನಿರೂಪಣೆಯಿಂದ ಅಭಿವ್ಯಕ್ತಗೊಂಡಿದೆ. ಚರ್ಚದ ಒಂದನೆಯ ಕಿಟಕಿಯಲ್ಲಿ ಭಗವಾನ್ ಯೇಸು ಅವನ ಅನುಯಾಯಿಗಳನ್ನು ಸಂತೈಸುತ್ತಿರುವುದನ್ನು ಕಾಣುತ್ತೇವೆ. ಈ ಚಿತ್ರದಲ್ಲಿ ಯೇಸುವನ್ನು ದೊಡ್ಡ ಆಕೃತಿಯಲ್ಲಿ ಚಿತ್ರಿಸಿದ್ದು, ಬಹುಶ ಮರಣಕ್ಕೆ ಗುರಿಯಾದ ಸಂದರ್ಭದಲ್ಲಿ ಆ ನಗರದ ಜನರ ಭಯವನ್ನು ಅವರ ಭಕ್ತಿ ಆಧರತೆಗಳನ್ನು ಗಮನಿಸಿ, ಅವರನ್ನು ಸಂತೈಸುತ್ತಿರುವಂತೆ ನಿರೂಪಣೆಗೊಳಿಸಲಾಗಿದೆ. ಹಿನ್ನೆಲೆಯ ಪ್ರಕೃತಿ ದೃಶ್ಯವು ಬೃಹತ್ ಮರ, ಕೋಟೆ ಕೊತ್ತಲುಗಳ ದೃಶ್ಯಗಳು, ಬೆಟ್ಟಗಳ ಸಾಲುಗಳು ಹಾಗೂ ಸ್ವಚ್ಛ ನೀಲಿ ಬಣ್ಣದಿಂದ ಕೂಡಿದ ಆಕಾಶವು ರಚನೆಗೊಂಡಿದೆ.

ಕಿಟಕಿ - ಎರಡರಲ್ಲಿ ಯೇಸುದೇವನು ಓರ್ವ ಅನುಯಾಯಿಯನ್ನು ಸಂತೈಸುತ್ತಿರುವನು. ಹಿನ್ನೆಲೆಯಲ್ಲಿ ಮೂವರು ವ್ಯಕ್ತಿಗಳು ಯಾವುದೋ ಆಲೋಚನೆಯಲ್ಲಿ ನಿರತರಾಗಿರುವಂತೆ ರೂಪಗೊಂಡಿರುವರು. ಚಿತ್ರದ ಹಿನ್ನೆಲೆಯು ಸುಂದರವಾದ ಪ್ರಕೃತಿಯು ಚಿತ್ರಿತಗೊಂಡಿದ್ದು, ಯೇಸುವಿನ ಹಿಂಬದಿಯಲ್ಲಿ ಅಚ್ಚ ಹಸಿರು ವರ್ಣದಿಂದ, ಎಲೆಗಳ ಗುಂಪು, ನಿಚ್ಚಳವಾಗಿ ಕಾಣುವಂತೆ ಕಲಾವಿದನು ನಿರೂಪಿಸಿದ್ದಾನೆ. ಶುಭ್ರ ಆಕಾಶ, ಕೋಟೆಯ ವಿಹಂಗಮ ನೋಟ ಹಾಗೂ ಹಸಿರು ಹೊದಿಕೆಯಿಂದ ಕೂಡಿದ ಭೂದೃಶ್ಯವು ಚಿತ್ರಿತಗೊಂಡಿದೆ. ಈ ಚಿತ್ರದಲ್ಲಿ ನೀಲಿ, ಕೆಂಪು, ಹಸಿರು, ಕಪ್ಪು ಹಾಗೂ ಬಿಳಿ ವರ್ಣಗಳ ಬೆಳಕು ನೆರಳುಗಳ ವರ್ಣಛಾಯೆಯು ಉತ್ತಮವಾಗಿ ಮೂಡಿಬಂದಿದೆ.

ಕಿಟಕಿ - ಮೂರರಲ್ಲಿ ಮರಣ ಶಿಕ್ಷೆಗೆ ಗುರಿಯಾದ ಯೇಸುವನ್ನು ರಾಜಭಟರು ದೊರೆಯ ಮುಂದೆ ತಂದು ನಿಲ್ಲಿಸಿ ವಿಚಾರಣೆ ಮಾಡುತ್ತಿರುವಂತೆ ಈ ಚಿತ್ರವು ಸೂಚಿಸುತ್ತಿದೆ. ಇಲ್ಲಿ ಯೇಸುವನ್ನು ಮುಳ್ಳಿನ ತಂತಿಯಿಂದ ತಲೆಯನ್ನು ಸುತ್ತಿದ್ದು, ಮುಖದಲ್ಲಿ ಶಾಂತತೆ ಒಡಮೂಡಿದೆ. ರಾಜಭಟನು ಆವೇಶ ಭರಿತನಾಗಿ ದೊರೆಯೊಂದಿಗೆ ಏನೋಪ್ರಸ್ತಾಪ ಮಾಡುತ್ತಿರುವಂತೆ ಚಿತ್ರಿತಗೊಂಡಿರುವನು. ಚಿತ್ರದ ಹಿನ್ನೆಲೆಯು ಅರಮನೆಯ ಬೃಹತ್ ವಾಸ್ತುಕಲ್ಪನೆಯು ರೂಪಗೊಂಡಿದೆ. ಈ ಚಿತ್ರದಲ್ಲಿಯೂ ಸಹ ವರ್ಣ ಸಂಯೋಜನೆ ಹಾಗೂ ಭಾವ ನಿರೂಪಣೆಯೂ ಉತ್ತಮವಾಗಿ ಪ್ರದರ್ಶಿತಗೊಂಡಿವೆ.

ಕಿಟಕಿ - ನಾಲ್ಕರಲ್ಲಿ ಯೇಸು ಕ್ರೂಜೆಯನ್ನು ಹೊತ್ತು ನಡೆಯುತ್ತಿರುವ ಸಂದರ್ಭವನ್ನು ಇಲ್ಲಿ ನಿರೂಪಿಸಲಾಗಿದೆ. ಭಗವಾನ ಯೇಸುವಿಗೆ ಎಂತಹ ಶಿಕ್ಷೆಯನ್ನು ಕೊಡುತ್ತಿದ್ದರು ಸಹಿತ ಜಗತ್ತಿನ ಅಂಧಕಾರವನ್ನು ದೂರಮಾಡುವುದು. ಮಾನವೀಯತೆಯನ್ನು ಜನರಲ್ಲಿ ಮೂಡಿಸುವುದಾಗಿತ್ತು. ಇಲ್ಲಿ ಭಾರವಾದ ಕ್ರೂಜೆಯನ್ನು ಹೊತ್ತು ನಡೆದಿರುವ ಯೇಸುವಿನ ಮುಖ ಭಾವನೆಯಲ್ಲಿ ಜನರ ಒಳಿತನ್ನೇ ಬಯಸುವ ಭಾವ ಭಂಗಿಯು ಎದ್ದು ತೋರುತ್ತಿದೆ. ಕ್ರೂಜೆಯನ್ನು ವರ್ಣಛಾಯೆಗಳಿಂದ ತ್ರಿಕರಣ ರೂಪವನ್ನು ತರಲಾಗಿದೆ. ಹಿನ್ನೆಲೆಯಾಗಿ ಅರಮನೆಯ ವಾಸ್ತುದೃಶ್ಯವು ಬೃಹತ್ ಕಲ್ಪನೆಯನ್ನು ಕೊಡುತ್ತಿದೆ. ಇಲ್ಲಿಯೂ ಸಹ ಕೆಂಪು, ನೀಲಿ, ಬಿಳಿ, ಕೆಂಪು, ಕಂದು ಹಾಗೂ ಬಿಳಿವರ್ಣಗಳ ಸಂಯೋಜನೆಯು ನಿರೂಪಣೆಗೊಂಡಿದೆ.

ಕಿಟಕಿ - ಐದರಲ್ಲಿ ಯೇಸು ಕ್ರೂಜೆಯನ್ನು ಹೊತ್ತು ನಡೆಯುತ್ತಿರುವ ಸಂದರ್ಭದಲ್ಲಿ ಕ್ರೂಜೆಯ ಭಾರದಿಂದ ಆಯಾತಪ್ಪಿ ಬೀಳುವ ಸನ್ನಿವೇಶವನ್ನು ಚಿತ್ರಿಸಲಾಗಿದೆ. ಇಲ್ಲಿ ಯೇಸು ಭಾರವಾದ ಕ್ರೂಜೆಯನ್ನು ಹೊತ್ತಿದ್ದು, ಇಬ್ಬರೂ ರಾಜಭಟರು ಬೀಳುತ್ತಿರುವ ಕ್ರೂಜೆಯನ್ನು ಮೇಲಕ್ಕೆತ್ತುವ ಸಾಹಸ ಮಾಡುತ್ತಿರುವರು. ಚಿತ್ರದ ಹಿನ್ನೆಲೆಯ ಭೂದೃಶ್ಯದಲ್ಲಿ ಬೆಟ್ಟಗಳ ಸಾಲು, ಹಸಿರು ಗಿಡ ಮರಗಳು ಶುಭ್ರ ಆಕಾಶವು ವ್ಯಕ್ತಗೊಂಡಿದೆ. ಇಲ್ಲಿ ಯೇಸುವಿನ ತಲೆಗೆ ಮುಳ್ಳಿನ ತಂತಿ ಸುತ್ತಿರುವುದನ್ನು ನೋಡಿದರೆ, ಒಬ್ಬ ಮಾನವ ರೂಪದ ದೇವನನ್ನು ಹಿಂಸಿಸುತ್ತಿರುವ ಪ್ರಸಂಗವು ಭಾರತೀಯ ಪುರಾಣ ಕಲ್ಪನೆಗಳು ನಮ್ಮ ಸ್ಮೃತಿಪಟಲಕ್ಕೆ ಕರೆದೊಯ್ಯುತ್ತವೆ. ಇಲ್ಲಿ ಕಲಾವಿದನ ಕಲ್ಪನೆಯು ಉತ್ತಮವಾಗಿ ಅಭಿವ್ಯಕ್ತಗೊಂಡಿದೆ.

ಕಿಟಕಿ – ಆರರಲ್ಲಿ ಮರಣ ದಂಡನೆಗೆ ಗುರಿಯಾದ ಯೇಸುದೇವನು ತನ್ನ ತಾಯಿಯನ್ನು ಭೆಟ್ಟಿಯಾಗುವ ಸನ್ನಿವೇಶವನ್ನು ಸೂಚಿಸುವ ಚಿತ್ರವಾಗಿದೆ. ತಾಯಿ ಮತ್ತು ಮಗನ ಭಾವನಾತ್ಮಕ ನಿರೂಪಣೆಯು ಇಲ್ಲಿ ಮೂಡಿಬಂದಿದೆ. ಒಬ್ಬ ಸಾಮಾನ್ಯ ತಾಯಿಮಗನ ಮನದಾಳವು ಈ ಸಂದರ್ಭಗಳಲ್ಲಿ ಹೇಗೆ ಇರುತ್ತದೆಯೋ ಅದನ್ನು ಇಲ್ಲಿ ನಿರೂಪಿಸಲಾಗಿದೆ. ಈ ಚಿತ್ರದ ಆಕೃತಿಗಳಲ್ಲಿನ ಬಟ್ಟೆಯ ವಿನ್ಯಾಸ, ವರ್ಣ ಸಂಯೋಜನೆ ಹಾಗೂ ಹಿನ್ನೆಲೆಯನ್ನು ವಾಸ್ತು ಕಟ್ಟಡಗಳ ವಿನ್ಯಾಸದಿಂದ ಸಮರ್ಪಕವಾಗಿ ಸಂಯೋಜಿಸಲಾಗಿದೆ.

ಕಿಟಕಿ – ಏಳರಲ್ಲಿ ಕ್ರೂಜೆಯನ್ನು ಹೊತ್ತ ಯೇಸು ಭಾರದಿಂದ ಬೀಳುತ್ತಿರುವನು ನಂತರ ಮತ್ತೇ ಕ್ರೂಜೆಯನ್ನು ಹೊತ್ತು ನಡೆಯುವ ಪ್ರಸಂಗ ಇಲ್ಲಿ ನಿರೂಪಿತಗೊಂಡಿದೆ. ಭಾರವಾದ ಕ್ರೂಜೆಯನ್ನು ಯೇಸು ಹೊತ್ತುಕೊಂಡಿರುವನು. ಈ ಭಾರವನ್ನು ಹೊರಲಾರದೇ ಬೀಳುತ್ತಿರುವ ಯೇಸುವಿಗೆ ಸಹಾಯ ಮಾಡಲು ಸೀಮೊನನು ನಿರತನಾಗಿದ್ದಾನೆ. ರಾಜಭಟನು ಕ್ರೂಜೆಯನ್ನು ಹೊತ್ತು ನಡೆಯಲು ಯೇಸುವಿಗೆ ಆಜ್ಞೆ ಮಾಡುತ್ತಿರುವಂತೆ ಚಿತ್ರಿತಗೊಂಡಿರುವನು. ಹಿನ್ನೆಲೆಯ ಪ್ರಕೃತಿ ಸನ್ನಿವೇಶವು ಗಿಡಮರಗಳು, ಬೆಟ್ಟಗಳ ಸಾಲು ಹಾಗೂ ಶುಭ್ರ ಆಕಾಶವೂ ನಿರೂಪಿತಗೊಂಡಿದೆ. ಇಲ್ಲಿ ಬೆಳಕು ನೆರಳುಗಳ ವರ್ಣಛಾಯೆಯು ಉತ್ತಮವಾಗಿ ಮೂಡಿಬಂದಿದೆ.

ಕಿಟಕಿ – ಎಂಟರಲ್ಲಿ ಕ್ರೂಜೆಯನ್ನು ಹೊತ್ತುಕೊಂಡು ನಡೆಯುತ್ತಿರುವ ಯೇಸು ದಾರಿಯಲ್ಲಿ ಏಳುತ್ತಾ ಬೀಳುತ್ತಾ ಸಾಗುತ್ತಿರುವಾಗ ಮೈಯಲ್ಲಾ ಬೆವರು, ವೆರೋನಿಕಾ ಎಂಬುವಳು ಶುಭ್ರವಾದ ಬಟ್ಟೆಯಿಂದ ಮುಖವನ್ನು ದೇಹವನ್ನು ವರೆಸುತ್ತಿರುವ ಪ್ರಸಂಗವು ಇಲ್ಲಿ ಚಿತ್ರಿತಗೊಂಡಿದೆ. ಇಲ್ಲಿ ಯೇಸುವಿನ ಮೇಲೆ ಕ್ರೂಜೆಯೊಂದಿದ್ದು, ಬೀಳುತ್ತಿರುವ ಯೇಸುವಿಗೆ ಶುಭ್ರಬಟ್ಟೆಯೊಂದಿಗೆ ಬೆವರನ್ನು ಒರೆಸಲು ಸಹಾಯ ಮಾಡುತ್ತಿರುವ ಸಾಹಸ ಈ ಮಹಿಳೆಯ ಚಿತ್ರದಲ್ಲಿ ವ್ಯಕ್ತಗೊಂಡಿದೆ. ಹಿನ್ನೆಲೆಯ ಪ್ರಕೃತಿ ದೃಶ್ಯವು ಗಿಡಮರಗಳಿಂದ ಹಾಗೂ ಬೆಟ್ಟಗಳ ಸಾಲುಗಳಿಂದ ಕೂಡಿದ ಉತ್ತಮ ವರ್ಣಗಳ ಛಾಯೆಯು ಇಲ್ಲಿ ಸಂಯೋಜನೆಗೊಂಡಿದೆ.

ಕಿಟಕಿ – ಒಂಭತ್ತರಲ್ಲಿ ಯೇಸುದೇವನು ಶಿಲುಬೆಯನ್ನು ಹೊತ್ತು ನಡೆಯುತ್ತಿರುವಾಗ ಎರಡನೆಯ ಸಲ ಬೀಳುತ್ತಿರುವ ಸನ್ನಿವೇಶವು ಚಿತ್ರಿತಗೊಂಡಿದೆ. ಇಲ್ಲಿ ಭಾರವಾದ ಕ್ರೂಜೆಯನ್ನು ಯೇಸು ಹೊತ್ತುಕೊಂಡಿರುವನು. ಕ್ರೂಜೆಯು ಭಾರವಾಗಿರುವುದರಿಂದ ಮುಗ್ಗರಿಸಿ ಬೀಳುತ್ತಿದ್ದಾನೆ. ಯೇಸುವಿಗೆ ಕ್ರೂಜೆಯು ಬೀಳದಂತೆ ಸಹಾಯಮಾಡಲು ಒಬ್ಬ ಸಹಾಯಕನಿದ್ದಾನೆ. ಮತ್ತೊಬ್ಬ ವ್ಯಕ್ತಿಯು ಯೇಸುವಿಗೆ ಆಜ್ಞೆಮಾಡುವ ಭಾವಭಂಗಿಯಲ್ಲಿ ಚಿತ್ರಿತಗೊಂಡಿದ್ದಾನೆ. ಚಿತ್ರದ ಹಿನ್ನೆಲೆಯು ವಾಸ್ತು ಕಟ್ಟಡಗಳಿಂದ ಹಾಗೂ ಬೆಟ್ಟಗಳ ಸಾಲುಗಳಿಂದ ಸಂಯೋಜನೆಗೊಂಡಿದೆ. ಕೆಂಪು, ನೀಲಿ, ಹಸಿರು, ಹಳದಿ, ಕಂದು ಬಣ್ಣಗಳ ವರ್ಣಗಳ ಛಾಯೇಯು ಅಭಿವ್ಯಕ್ತಗೊಂಡಿದೆ. ಈ ಚಿತ್ರದಲ್ಲಿ ಉತ್ತಮ ಭಾವ ನಿರೂಪಣೆಯು ಸಾಂದರ್ಭಿಕವಾಗಿ ಮೂಡಿಬಂದಿದೆ.

ಕಿಟಕಿ – ಹತ್ತರಲ್ಲಿ ಯೆರು ಸಲೋಮಿನ ಸ್ತ್ರೀಯರಿಗೆ ಯೇಸು ಸಾಂತ್ವಾನ ಹೇಳುತ್ತಿರುವ ಪ್ರಸಂಗವನ್ನು ಚಿತ್ರಿಸಲಾಗಿದೆ. ಇಲ್ಲಿ ಯೇಸು ಭಾರವಾದ ಕ್ರೂಜೆಯನ್ನು ಹೆಗಲ ಮೇಲೆ ಹೊತ್ತಿರುವನು. ತಲೆಗೆ ಮುಳ್ಳಿನ ತಂತಿಯನ್ನು ಬಿಗಿಯಲಾಗಿದೆ. ಇಬ್ಬರೂ ಸ್ತ್ರೀಯರು

ದುಃಖಭರತಿರಾಗಿ ಯೇಸುವನ್ನು ಕಾಣುವ ಉತ್ಕಟತೆಯನ್ನು ವ್ಯಕ್ತಪಡಿಸುತ್ತಿದ್ದಾರೆ. ಇವರನ್ನು ಶಾಂತ ಮನಸ್ಕರಿಂದ ಸಮಾಧಾನ ಮಾಡುತ್ತಿರುವಂತೆ ಯೇಸು ರೂಪಗೊಂಡಿರುವನು. ಯೇಸುವಿನ ಉಡುಪುಗಳ ನೀರಿಗೆಗಳು ನೈಜ ಸ್ವರೂಪದಲ್ಲಿ ಮೂಡಿಬಂದಿದ್ದು, ಕಂದುಗೆಂಪು ಬಣ್ಣದ ಕೇಶವಿನ್ಯಾಸವು ಕಲಾತ್ಮಕವಾಗಿ ಚಿತ್ರಿತಗೊಂಡಿದೆ. ಇಲ್ಲಿ ಇಬ್ಬರೂ ಯುವತಿಯರ ವೇಷಭೂಷಣಗಳು, ಕೇಶ ವಿನ್ಯಾಸವು ಹಾಗೂ ಭಾವ ಲಕ್ಷಣಗಳು ಉತ್ತಮವಾಗಿ ನಿರೂಪಣೆಗೊಂಡಿವೆ. ಹಿನ್ನೆಲೆಯ ಪ್ರಕೃತಿ ದೃಶ್ಯವು ಉತ್ತಮ ವರ್ಣ ಸಂಯೋಜನೆಯಿಂದ ರಚನೆಗೊಂಡಿದೆ.

ಕಿಟಕಿ – ಹನ್ನೊಂದರಲ್ಲಿ ಕ್ರೂಜೆಯನ್ನು ಹೊತ್ತ ಯೇಸು ಕ್ರೂಜೆಯನ್ನು ಹೊರಲಾರದೇ ಹೊತ್ತುಕೊಂಡು ಬೀಳುತ್ತಿರುವನು ಹಾಗೂ ಮೂರ್ಚಿತನಾಗಿರುವನು. ಕ್ರೂಜೆಯು ಪಕ್ಕಕ್ಕೆ ಬಿದ್ದಿದೆ. ರಾಜಭಟನು ನಿರುತ್ಸಾಹ ವ್ಯಕ್ತಪಡಿಸುತ್ತಿರುವನು. ಯೇಸುವಿನ ಅನುಯಾಯಿಯು ಭಯ ಬೀತನಾಗಿರುವಂತೆ ಚಿತ್ರಿತಗೊಂಡಿರುವನು. ಚಿತ್ರವು ಭಾವನಾತ್ಮಕವಾಗಿ ಮೂಡಿಬಂದಿದ್ದು, ವರ್ಣಗಳ ಬೆಳಕು ನೆರಳುಗಳ ಛಾಯೇಯು ಉತ್ತಮವಾಗಿ ಅನಾವರಣಗೊಂಡಿದೆ. ಚಿತ್ರದ ಹಿನ್ನೆಲೆಯು ಉತ್ತಮ ಭೂದೃಶ್ಯವನ್ನು ಹೊಂದಿದೆ.

ಕಿಟಕಿ ಹನ್ನೆರಡರಲ್ಲಿ ಯೇಸುವನ್ನು ಶಿಲುಬೆಗೆ ಜಡಿಯುವ ಮೊದಲು ಅವನ ಬಟ್ಟೆಗಳನ್ನು ಕಳಚುತ್ತಿರುವ ಸನ್ನಿವೇಶವು ಈ ಚಿತ್ರದಲ್ಲಿ ಮೂಡಿಬಂದಿದೆ. ಇಲ್ಲಿ ಯೇಸು ಶಾಂತ ಭಾವದಲ್ಲಿ ನಿಂತಿರುವನು. ಇಬ್ಬರು ಭಂಟರು ಅವನ ಬಟ್ಟೆಯನ್ನು ಕಳಚುತ್ತಿರುವರು. ಇನ್ನೊಬ್ಬನು ಕೈಯಲ್ಲಿ ಪಾತ್ರೆಯನ್ನು ಹಿಡಿದಿರುವನು. ಆಕೃತಿಗಳ ದೈಹಿಕ ರೂಪರೇಷಗಳು ನೈಜತೆಯಿಂದ ಪ್ರಕಟಗೊಂಡಿದ್ದು, ಬಟ್ಟೆಯ ನಿರಿಗೆಗಳು ವರ್ಣ ಛಾಯೆಗಳಿಂದ ಉತ್ತಮವಾಗಿ ಮೂಡಿಬಂದಿವೆ. ಒಟ್ಟಾರೆ ಆಕೃತಿಗಳ ಸಂಯೋಜನೆ, ಯಥಾದರ್ಶನ ಹಾಗೂ ಹಿನ್ನೆಲೆಯ ವಿವರಗಳು ಕಲಾತ್ಮಕವಾಗಿ ರೂಪಗೊಂಡಿವೆ.

ಕಿಟಕಿ ಹದಿಮೂರರಲ್ಲಿ ಪ್ರಭು ಯೇಸುವನ್ನು ಅರೆ ಬೆತ್ತಲೆ ಮಾಡಿ ಶಿಲುಬೆಗೆ ಮಲಗಿಸಿ ದೊಡ್ಡದಾದ ಮೊಳೆಗಳನ್ನು ಜಡಿಯುತ್ತಿರುವ ಪ್ರಸಂಗವನ್ನು ಇಲ್ಲಿ ಚಿತ್ರಿಸಲಾಗಿದೆ. ಇಲ್ಲಿ ಯೇಸುವನ್ನು ಕ್ರೂಜೆಯಮೇಲೆ ಮಲಗಿಸಲಾಗಿದೆ. ಒಬ್ಬನು ಯೇಸುವಿಗೆ ಮೊಳೆಯನ್ನು ಜಡಿಯುತ್ತಿದ್ದಾನೆ. ಇನ್ನೊಬ್ಬ ಭಟನು ಕ್ರೂಜೆಯನ್ನು ಹಿಡಿದಿರುವಂತೆ ಚಿತ್ರಿತಗೊಂಡಿದ್ದಾರೆ. ಯೇಸುವಿನ ಬೆತ್ತಲೆಯ ದೇಹದ ರಚನೆ ಮಾಂಸಖಂಡಗಳ ಉಬ್ಬುತಗ್ಗುಗಳನ್ನು ವರ್ಣಗಳ ಛಾಯೆಯ ಮೂಲಕ ಕಲಾವಿದನು ಪ್ರಕಟಪಡಿಸಿದ್ದು ಹಾಗೂ ಮೂವರು ರಾಜಭಟರ ಉಡುಗೆ ತೊಡುಗೆಗಳನ್ನು ಉತ್ತಮ ನಿರಿಗೆಗಳನ್ನು ವರ್ಣ ಸಂಯೋಜನೆಗಳನ್ನು ಸೃಜನಾತ್ಮಕವಾಗಿ ಚಿತ್ರಿಸಲಾಗಿದೆ. ಚಿತ್ರದ ಹಿನ್ನೆಲೆಯು ಗಿಡಮರಗಳಿಂದ ಹಾಗೂ ಬಯಲು ಭೂದೃಶ್ಯಗಳಿಂದ ರೂಪಗೊಂಡಿದೆ.

ಕಿಟಕಿ ಹದಿನಾಲ್ಕರಲ್ಲಿ ಪ್ರಭು ಯೇಸುವನ್ನು ಕ್ರೂಜೆಗೆ ಮೊಳೆಯಿಂದ ಜಡಿದು ಶಿಲುಬೆಯನ್ನು ನಿಲ್ಲಿಸಿದ್ದಾರೆ. ಇಲ್ಲಿ ಯೇಸು ಪ್ರಾಣ ತ್ಯಾಗಮಾಡಿದ ಪ್ರಸಂಗವನ್ನು ಸೂಚಿಸುತ್ತಿದೆ. ಯೇಸುವನ್ನು ನಿಲ್ಲಿಸಿದ ಶಿಲುಬೆಗೆ ಮೊಳೆಗಳಿಂದ ಜಡಿದಿದ್ದಾರೆ. ಯೇಸು ಅರೆಬೆತ್ತಲೆಯಾಗಿದ್ದು ಪ್ರಾಣಪಕ್ಷಿಯು ಹಾರಿ ಕಳೆಬರ ಮಾತ್ರ ಉಳಿದಿದೆ. ಇಬ್ಬರು ಸ್ತ್ರೀಯರು ದುಃಖಿತರಾಗಿದ್ದಾರೆ.

ಆಕೃತಿಗಳ ಉಡುಪುಗಳಲ್ಲಿ ನಿರಿಗೆಗಳ ಸಂಯೋಜನೆ, ವರ್ಣ ಸಂಯೋಜನೆ ಹಾಗೂ ಭಾವನಿರೂಪಣೆಯೂ ಉತ್ತಮವಾಗಿ ಮೂಡಿಬಂದಿದೆ. ಚಿತ್ರದ ಹಿನ್ನೆಲೆಯು ಹಸಿರು ಗಿಡಮರಗಳಿಂದ ಕೂಡಿದ್ದು, ಬೆಟ್ಟಗಳ ಸಾಲುಗಳು ಆಕರ್ಷಕವಾಗಿ ರಚನೆಗೊಂಡಿವೆ. ಆಕಾಶದಲ್ಲಿ ಶುಭ್ರತೆಯು ಎದ್ದು ತೋರುತ್ತದೆ. ಚಿತ್ರವು ವರ್ಣ ಹಾಗೂ ಭಾವನಾ ನಿರೂಪಣೆಯಿಂದ ಅನಾವರಣಗೊಂಡಿದೆ.

ಕಿಟಕಿ ಹದಿನೈದರಲ್ಲಿ ಯೇಸುವಿನ ಮೃತ ಶರೀರವನ್ನು ಕ್ರೂಜೆಯಿಂದ ಕೆಳಗೆ ಇಳಿಸಿದ ನಂತರ ತಾಯಿ ಮೇರಿ ಮಾತೆಯು ಯೇಸುವಿನ ಕಳೇಬರವನ್ನು ತನ್ನ ಮಡಿಲಲ್ಲಿ ಇರಿಸಿಕೊಂಡು ರೋಧಿಸುತ್ತಿರುವ ಪ್ರಸಂಗವು ಈ ಚಿತ್ರದಲ್ಲಿ ಮೂಡಿಬಂದಿದೆ. ಯೇಸುವಿನ ಮೃತಶರೀರವು ಅರೆಬೆತ್ತಲೆಯಾಗಿದ್ದು, ಮಾತೆಯು ತುಂಬು ಉಡುಪುಗಳನ್ನು ಧರಿಸಿದ್ದಾಳೆ, ಜೊತೆಗೆ ಇಬ್ಬರೂ ಮಹಿಳೆಯರು ತಾಯಿ ಮೇರಿ ಮಾತೆಯೊಂದಿಗೆ ದುಃಖಭರಿತರಾಗಿದ್ದಾರೆ. ಇವರು ತುಂಬುತೋಳಿನ ದೊಗಳೆ ನಿಲುವಂಗಿಯನ್ನು ಧರಿಸಿದ್ದಾರೆ. ಹಿನ್ನೆಲೆಯಲ್ಲಿ ಬೆಟ್ಟಗಳ ಸಂಯೋಜನೆ ಆಕಶವನ್ನು ನೀಲಿ, ಹಸಿರು ಹಾಗೂ ಬಿಳಿ ಮಿಶ್ರಿತ ವರ್ಣಗಳಿಂದ ಲೇಪನಮಾಡಲಾಗಿದೆ. ಚಿತ್ರವು ವರ್ಣ ಸಂಯೋಜನೆಯಿಂದ ಕೂಡಿದ ದುಃಖದ ನಿರೂಪಣೆಯು ಇಲ್ಲಿ ವ್ಯಕ್ತಗೊಂಡಿದೆ.

ಕಿಟಕಿ – ಹದಿನಾರರಲ್ಲಿ ಯೇಸುವಿನ ಕಳೆಬರವನ್ನು ಸಮಾಧಿ ಮಾಡುತ್ತಿರುವ ಸಂಗತಿಯನ್ನು ಚಿತ್ರಿಸಲಾಗಿದೆ. ಇಲ್ಲಿ ಯೇಸುವಿನ ಕಳೆಬರವನ್ನು ಒಬ್ಬ ಪಾದ್ರಿಯು ಹೊತ್ತುಕೊಂಡಿರುವನು. ಮೇರಿಮಾತೆ ಹಾಗೂ ಓರ್ವ ಹೆಣ್ಣುಮಗಳು ಇದ್ದಾರೆ. ಇಲ್ಲಿ ಹೆಣ್ಣುಮಗಳು ಚಾಮರವನ್ನು ಬೀಸುತ್ತಿದ್ದಾಳೆ. ಚಿತ್ರದ ಹಿನ್ನೆಲೆಯಲ್ಲಿ ಹೂಜಿ, ಬ್ರೆಡ್ ತುಂಡುಗಳು, ಬಟ್ಟೆಗಳು, ಮುಳ್ಳಿನ ತಂತಿ, ದೀಪದ ಪಾತ್ರೆಯನ್ನು ಸಂಯೋಜಿಸಿದ್ದು, ಸಮಾಧಿಯ ಕಟ್ಟಡವು ಸುಸಜ್ಜಿತವಾಗಿ ದೆ ಎಂಬುದನ್ನು ಈ ಚಿತ್ರದ ಮೂಲಕ ಕಲ್ಪಿಸಬಹುದು. ಇಲ್ಲಿ ದೊಡ್ಡ ದೊಡ್ಡ ಗ್ರೈನೈಟ್ ತುಂಡುಗಳಿಂದ ನಿರ್ಮಿಸಿದಂತೆ ಸಂಯೋಜನೆಗೊಂಡಿದೆ. ಚಿತ್ರವು ಕೆಂಪು, ಹಸಿರು, ನೀಲಿ, ಹಳದಿ, ಬಿಳಿ ಹಾಗೂ ಕಪ್ಪು ವರ್ಣಛಾಯೆಗಳ ಮಿಶ್ರಣದಿಂದ ಪ್ರಕಟಗೊಂಡಿದೆ.

ಕಿಟಕಿ – ಹದಿನೇಳರಲ್ಲಿ ಭಗವಾನ ಯೇಸುದೇವನ ಪುನರುತ್ಥಾನದ ಚಿತ್ರವು ಕಂಡುಬರುತ್ತಿದೆ. ಚರ್ಚದ ಮುಖ್ಯದ್ವಾರವನ್ನು ಹೊಂದಿರುವ ಗೋಡೆಯಲ್ಲಿ ಪಂಚಭುಜಗಳ ದೊಡ್ಡ ಕಿಟಕಿಯ ಗಾಜಿನ ಮೇಲೆ ಈ ಚಿತ್ರವು ರೂಪಗೊಂಡಿದೆ. ಈ ಚಿತ್ರದಲ್ಲಿ ಯೇಸು ಬಾಲಶಿಶುವಾಗಿ ಬದುಕಿನ ಕೊನೆಯವರೆಗೂ ಕಷ್ಟಕಾರ್ಪಣ್ಯಗಳನ್ನು ಎದುರಿಸಿ ಕೊನೆಗೆ ಮರಣದಂಡನೆಗೆ ಗುರಿಯಾಗಿ ಮರಣಹೊಂದಿ ಮತ್ತೊಮ್ಮೆ ದೇವನಾಗಿ ಭೂಮಿಯಲ್ಲಿ ಅವತರಿಸುವ ಪ್ರಸಂಗದ ಚಿತ್ರವಾಗಿದೆ. ಇಲ್ಲಿ ಯೇಸು ದೇವನು ಮನುಕುಲದ ಕಲ್ಯಾಣಕ್ಕಾಗಿ ಮತ್ತೊಮ್ಮೆ ಹುಟ್ಟಿ ಶಾಂತಿ, ಸಹನೆ, ಆನಂದ, ಸಮಾಧಾನ, ಪ್ರೀತಿ, ದಯೆ, ಸದ್ಗುಣ, ಪ್ರಾಮಾಣೀಕತೆ, ಸೌಜನ್ಯ, ಸಂಯಮಗಳನ್ನು ಸಾರುವ ಪ್ರತೀಕದ ನಿರೂಪಣೆಯ ಚಿತ್ರವಾಗಿದೆ.

ಇಲ್ಲಿ ನೀಲಿವರ್ಣ, ಕೆಂಪು, ಬಿಳಿ ಮತ್ತು ಆನಂದ ವರ್ಣಗಳ ಸಂಯೋಜನೆ ಪ್ರಧಾನವಾಗಿ ಸಂಯೋಜನೆಗೊಂಡಿದೆ. ಜ್ಞಾನ ಕಿರಣಗಳು ಯೇಸುವಿನ ಹೃದಯಾಂತರಾಳದಿಂದ ಹೊರಹೊಮ್ಮುವಂತೆ ಕಲಾವಿದನು ಬಿಳಿ, ನೀಲಿ ಹಾಗೂ ಕೆಂಪು ವರ್ಣಗಳಿಂದ ರಚಿಸಿದ್ದಾನೆ. ಈ

ಚರ್ಚನಲ್ಲಿ ಕಂಡುಬರುವ ಎಲ್ಲ ಚಿತ್ರಗಳು ಆಧುನಿಕ ತಂತ್ರಗಾರಿಕೆಯಿಂದ ಕೂಡಿದ್ದು ಅಲಂಕಾರಿಕತೆ, ಆಡಂಭರತೆ ಕಂಡು ಬರುವುದಿಲ್ಲವಾದರೂ ವಿಷಯದ ನಿರೂಪಣೆ ಉತ್ತಮ ರೀತಿಯಲ್ಲಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೦೪ ಯೇಸುವಿನ ಪುನರುತ್ಥಾನ**

ಈ ಚಿತ್ರವು ಮೈಸೂರಿನ ಸಂತ ಫಿಲೋಮಿನಾ ಚರ್ಚದ ಕಿಟಕಿಯ ಗಾಜಿನ ಮೇಲೆ ಕಂಡುಬರುತ್ತಿದೆ. ಇಲ್ಲಿ ಭಗವಾನ್ ಯೇಸು ದೇಹತ್ಯಾಗ ಮಾಡಿದ ನಂತರ ಪುನಃ ದೇವತಾ ಸ್ವರೂಪದಲ್ಲಿ ಉದ್ಭವಿಸಿದ ಕಾಲ್ಪನಿಕ ದೃಶ್ಯವಾಗಿದೆ. ಆ ಸ್ವರೂಪವು ಗೋಚರಿಸುವಂತೆ ಯೇಸುವನ್ನು ಶ್ವೇತವರ್ಣದ ನಿಲುವಂಗಿಯನ್ನು, ಕೆಂಪು ದುಪ್ಪಟವನ್ನು ಉಡುಪುಗಳನ್ನಾಗಿ ಚಿತ್ರಿಸಿದ್ದು, ದೇವತೆಯೆಂಬ ಕಲ್ಪನೆ ಬರಲು ಅವನ ಹಿನ್ನೆಲೆಯಲ್ಲಿ ಅಲೆ ಅಲೆಯಾಗಿ ಮೋಡಗಳನ್ನು ಚಿತ್ರಿಸಲಾಗಿದೆ. ಅವನ ಕೆಳಹಂತದಲ್ಲಿ ನೆರೆದ ದೇವಧೂತರು ಭಕ್ತಿಯಿಂದ ಭಾವಪರವಶರಾಗಿ ಭಗವಾನ ಯೇಸುವನ್ನು ನೋಡುತ್ತಿರುವಂತೆ ಚಿತ್ರಿತಗೊಂಡಿದ್ದಾರೆ. ಇಲ್ಲಿ ರಚನೆಗೊಂಡಿರುವ ದೇವಧೂತರೆಲ್ಲರೂ ದೊಗಳೆ ನಿಲುವಂಗಿ ಹಾಗೂ ದುಪ್ಪಟಗಳನ್ನು ಧರಿಸಿರುವರು. ಚಿತ್ರದ ಹಿನ್ನೆಲೆಯಲ್ಲಿ ಇಬ್ಬರೂ ದೇವತೆಗಳು ಹಾರಾಡುತ್ತಿರುವಂತೆ ಸಂಯೋಜನೆಗೊಂಡಿರುವರು. ಚಿತ್ರವು ಭಾವನಾತ್ಮಕವಾಗಿ ನಿರೂಪಣೆಗೊಂಡಿದ್ದು ಕೆಂಪು, ನೀಲಿ, ಹಳದಿ, ಹಸಿರು, ಬಿಳಿ, ಗುಲಾಬಿ ಮಿಶ್ರಣದ ವರ್ಣಗಳ ಛಾಯೆಗಳು ಬಹು ಆಕರ್ಷಕವಾಗಿ ಮೂಡಿಬಂದಿವೆ.

**ಚಿತ್ರಸಂಖ್ಯೆ ೦೫ ಯೇಸುವಿನ ಪುನರುತ್ಥಾನ**

ಈ ಚಿತ್ರವು ಸಹ ಮೈಸೂರಿನ ಸಂತ ಫಿಲೋಮಿನಾ ಚರ್ಚದ ಕಿಟಕಿಯ ಗಾಜಿನ ಮೇಲೆ ಕಂಡು ಬರುತ್ತಿದೆ. ಅರೆಬೆತ್ತಲೆಯಾದ ಯೇಸು ಆಕಾಶದಿಂದ ಇಳಿಯುತ್ತಿರುವಂತೆ ಚಿತ್ರಿತಗೊಂಡಿರುವನು. ಕೈಯಲ್ಲಿ ಕೋಲು ಹಿಡಿದು ಉದ್ದವಾದ ದುಪ್ಪಟವು ಹಾರಾಡುತ್ತಿರುವಂತೆ ಬಿಂಬಿತವಾಗಿದೆ. ಅವನ ಸುತ್ತಲು ದೇವಧೂತರು ಸಂಯೋಜನೆಗೊಂಡಿದ್ದು ಕೆಲವರ ಬೆನ್ನಹಿಂದೆ ರೆಕ್ಕೆಗಳನ್ನು ಚಿತ್ರಿಸಲಾಗಿದೆ. ಇವರೆಲ್ಲರೂ ಮೈತುಂಬುವಂತೆ ದೊಗಳೆ ಉಡುಪುಗಳನ್ನು ಧರಿಸಿದ್ದು ಯೇಸುವಿಗೆ ನಮಿಸುತ್ತಿರುವ ಭಾವಭಂಗಿಯಲ್ಲಿದ್ದಾರೆ. ಮೇಲುಗಡೆ ಇಬ್ಬರೂ ಸ್ತ್ರೀಯರು ರೂಪಗೊಂಡಿದ್ದು ಇವರು ಆಕಾಶದಲ್ಲಿ ಹಾರಾಡುತ್ತಿರುವಂತೆ ಚಿತ್ರಿತಗೊಂಡಿದ್ದಾರೆ. ಈ ಚಿತ್ರದಲ್ಲಿ ಪ್ರಧಾನವಾಗಿ ಕೆಂಪು, ನೀಲಿ, ಗುಲಾಬಿ ಹಾಗೂ ಹಳದಿ ವರ್ಣಗಳ ಬೆಳಕು ನೆರಳುಗಳ ಛಾಯೆಯು ಸಂಯೋಜಿಗೊಂಡಿದೆ. ಚಿತ್ರದಲ್ಲಿ ಆಕೃತಿಗಳನ್ನು ಸಾಂಕೇತಿಕವಾಗಿ ಸಂಯೋಜಿಸಲಾಗಿದ್ದು ಆಕೃತಿಗಳ ಪ್ರತಿಮಾ ಲಕ್ಷಣಗಳು ಉತ್ತಮವಾಗಿ ಮೂಡಿಬಂದಿವೆ.

**ಚಿತ್ರಸಂಖ್ಯೆ ೦೬ ಯೇಸುವನ್ನು ಶಿಲುಬೆಗೇರಿಸಿದ್ದು**

ಈ ಚಿತ್ರವು ಮೈಸೂರಿನ ಸಂತ ಫಿಲೋಮಿನಾ ಚರ್ಚದ ದೊಡ್ಡ ಕಿಟಕಿಯ ಗಾಜಿನ ಮೇಲೆ ಈ ದೃಶ್ಯವು ಚಿತ್ರಿತಗೊಂಡಿದೆ. ಇಲ್ಲಿ ಭಗವಾನ ಯೇಸು ಹಾಗೂ ಅವನ ಅನುಯಾಯಿಗಳನ್ನು ನಗರದ ಹೊರ ವಲಯದಲ್ಲಿನ ಬಯಲಿನಲ್ಲಿ ಶಿಲುಬೆಗೆರಿಸಿದ್ದು ಕಂಡು ಬರುತ್ತದೆ. ಇವರ ಮೃತ ಶರೀರಗಳು ಶಿಲುಬೆಗೆ ಅಂಟಿಕೊಂಟಿದ್ದು, ಮೃತ ಶರೀರಗಳು ಅರೆನಗ್ನ

ರೂಪಗಳಲ್ಲಿ ಚಿತ್ರಿತಗೊಂಡಿವೆ. ಮೃತ ಶರೀರಗಳನ್ನು ಕಂಡು ತಾಯಿ ಮೇರಿ ಹಾಗೂ ಸಂಬಂಧಿಕರು ರೋಧಿಸುತ್ತಿದ್ದಾರೆ. ಚಿತ್ರದ ಬಲಭಾಗದಲ್ಲಿ ಒಬ್ಬ ರಾಜಭಟನು ಕೈಯಲ್ಲಿ ಈಟಿಯನ್ನು ಹಿಡಿದು ಗಾಂಭೀರ್ಯದಿಂದ ನಿಂತಿರುವನು. ಬಹುತೇಕರು ತುಂಬು ಉಡುಗೆಯನ್ನು ಧರಿಸಿದ್ದು, ಆ ಉಡುಪುಗಳ ನಿರಿಗೆಗಳು ಹಾಗೂ ಅವುಗಳ ವಿರಳಿತಗಳು ಉತ್ತಮವಾಗಿ ರೂಪಗೊಂಡಿವೆ.

ಚಿತ್ರದ ಮೇಲುಗಡೆ ಇಬ್ಬರು ಗಂಧರ್ವ ಸ್ತ್ರೀಯರು ಹಾರಾಡುತ್ತಿರುವಂತೆ ಚಿತ್ರಿತಗೊಂಡಿರುವರು. ಇವರ ಬೆನ್ನಹಿಂದೆ ರೆಕ್ಕೆಗಳು ಚಿತ್ರಿತಗೊಂಡಿದ್ದು ಆಕಾಶದಲ್ಲಿ ತೇಲಾಡುತ್ತಿರುವ ಕಲ್ಪನೆಯನ್ನು ತರಲಾಗಿದೆ. ಚಿತ್ರದಲ್ಲಿ ಹಿನ್ನೆಲೆಯ ಪ್ರಕೃತಿಯನ್ನು ಸುಂದರವಾಗಿ ಚಿತ್ರಿಸಲಾಗಿದ್ದು ಶುಭ್ರ ಆಕಾಶ, ದೂರದಲ್ಲಿ ಕಾಣುವ ನಗರದ ಚಿತ್ರ ಹಾಗೂ ಹಸಿರು ಪೊದೆಗಳಿಂದಾವೃತವಾದ ಭೂದೃಶ್ಯವು ಆಕರ್ಷಕವಾಗಿ ಮೂಡಿಬಂದಿದೆ. ಆಕಾಶದಲ್ಲಿ ಅಲೆ ಅಲೆಯಾಗಿ ಹೊರ ಹೊಮ್ಮುವ ಮೋಡಗಳ ಸಂಯೋಜನೆಯು ಉತ್ತಮವಾಗಿ ಮೂಡಿ ಬಂದಿದೆ. ಚಿತ್ರದಲ್ಲಿ ನೀಲಿ, ಕೆಂಪು, ಹಳದಿ, ಹಸಿರು, ಬಿಳಿ, ನೇರಳೆ ಹಾಗೂ ಬಿಳಿ ವರ್ಣದ ಬೆಳಕು ನೆರಳುಗಳ ಛಾಯೆಯು ಉತ್ತಮವಾಗಿ ರೂಪಗೊಂಡಿದೆ. ಆಕೃತಿಗಳ ಸಂಯೋಜನೆ ಹಾಗೂ ಅವುಗಳ ಭಾವನಾತ್ಮಕ ನಿರೂಪಣೆಯು ಕಲಾತ್ಮಕವಾಗಿ ಅಭಿವ್ಯಕ್ತಗೊಂಡಿದೆ.

**ಚಿತ್ರಸಂಖ್ಯೆ ೦೭ ಸಂಯೋಜನಾ ಚಿತ್ರ**

ಈ ಗಾಜಿನ ಚಿತ್ರವು ಬೆಂಗಳೂರಿನ ಸಂತ ಬೆಸಿಲಿಕಾ ಚರ್ಚದಲ್ಲಿ ಕಂಡುಬರುತ್ತದೆ. ಇದು ಗರ್ಭಪೀಠದ ಎಡಭಾಗದ ಗೋಡೆಯಲ್ಲಿರುವ ವೃತ್ತಾಕಾರದ ಕಿಟಕಿಯ ಗಾಜಿನ ಮೇಲೆ ಚಿತ್ರಿತಗೊಂಡಿದೆ. ಈ ಚಿತ್ರವು ಯೇಸುವಿನ ಪೋಷಕರು ಅಂದರೆ ತಾಯಿ ಮೇರಿಯ ಮನದಾಳದ ತುಮುಲತೆಯನ್ನು ವ್ಯಕ್ತಪಡಿಸುವ ಸನ್ನಿವೇಶವು ಇಲ್ಲಿ ನಿರೂಪಿತಗೊಂಡಿದೆ. ಇಲ್ಲಿ ಮೇರಿಮಾತೆಯು ಕಟ್ಟೆಯ ಮೇಲೆ ಕುಳಿತಿರುವಂತೆ ಚಿತ್ರಿಸಲಾಗಿದೆ. ಕೆಂಪು ವರ್ಣದ ತುಂಬು ತೋಳಿನ ನಿಲುವಂಗಿಯನ್ನು ಧರಿಸಿದ್ದು, ಮಾನಸಿಕವಾಗಿ ಖಿನ್ನಳಾಗಿ ಕುಳಿತಿರುವಂತೆ ಭಾವಭಂಗಿಯಲ್ಲಿರುವಳು, ಇವಳನ್ನು ಸಂತೈಸುತ್ತಿರುವಂತೆ ಓರ್ವ ವೃದ್ಧರು ಹಾಗೂ ಅಲ್ಲಿನ ನಿವಾಸಿಗಳು ಸಂಯೋಜನೆಗೊಂಡಿದ್ದಾರೆ. ಅವರೆಲ್ಲರೂ ಮೈತುಂಬುವಂತೆ ಬಟ್ಟೆಗಳನ್ನು ಧರಿಸಿದ್ದು, ದೊಡ್ಡ ದೊಡ್ಡ ದುಪ್ಪಟಗಳನ್ನು ಹೊದ್ದುಕೊಂಡಿರುವಂತೆ ಚಿತ್ರಿತಗೊಂಡಿರುವರು. ಹಳದಿ, ಜಾಂಬಳಿ, ನೀಲಿ, ಕೆಂಪು, ಕಂದುಗೆಂಪು, ಹಸಿರು ಹಾಗೂ ಬಿಳಿವರ್ಣಗಳ ವರ್ಣಛಾಯೆಯು ಇಲ್ಲಿ ಕಂಡು ಬರುತ್ತಿದೆ. ಚಿತ್ರದ ಹಿನ್ನೆಲೆಯು ಕಂಬ, ನೆಲಹಾಸು, ಕಿಟಕಿ ಹಾಗೂ ಗೋಡೆಗಳಿಂದ ರಚಿತಗೊಂಡ ವಾಸ್ತು ಕಟ್ಟಡವು ಸಂಯೋಜನೆಗೊಂಡಿದೆ. ಚಿತ್ರದ ಸುತ್ತಲು ಅಲಂಕಾರಿಕ ನಕ್ಷಾವಿನ್ಯಾಸವು ಆಕರ್ಷಕವಾಗಿ ರೂಪಗೊಂಡಿದೆ. ಇಲ್ಲಿ ಸರಳ ಗೈ ನಕ್ಷಾವಿನ್ಯಾಸವು ಪ್ರಧಾನವಾಗಿ ರೂಪಗೊಂಡಿದ್ದು, ಉತ್ತಮ ಭಾವನಾ ನಿರೂಪಣೆಯಿಂದ ಕೂಡಿದ ಈ ಚಿತ್ರವು ಆಕೃತಿಗಳ ಹೊಂದಾಣಿಕೆ ಯಥಾದರ್ಶನ ಹಾಗೂ ವರ್ಣ ನಿರೂಪಣೆಯು ಉತ್ತಮವಾಗಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೦೮ ಸಂಯೋಜನಾ ಚಿತ್ರ**

ಈ ಚಿತ್ರವು ಸಹ ಬೆಂಗಳೂರಿನ ಸಂತ ಬೆಸಿಲಿಕಾ ಚರ್ಚದಲ್ಲಿ ಕಂಡು ಬರುತ್ತಿದೆ.

ಇದು ಸಹ ವೃತ್ತಾಕಾರದ ಕಿಟಕಿಯ ಗಾಜಿನ ಮೇಲೆ ಚಿತ್ರಿತಗೊಂಡಿದ್ದು, ಗರ್ಭಗೃಹದ ಬಲಭಾಗದ ಗೋಡೆಯ ಕಿಟಕಿಯಲ್ಲಿ ಕಾಣಸಿಗುತ್ತದೆ. ಚಿತ್ರದಲ್ಲಿ ಮೇರಿಮಾತೆಯು ಶಿಶು ಯೇಸುವನ್ನು ತೊಡೆಯ ಮೇಲೆ ಕೂರಿಸಿಕೊಂಡಿರುವಂತೆ ಸಂಯೋಜನೆಗೊಂಡಿದ್ದು, ಜಾಂಬಳಿ ಬಣ್ಣದ ನಿಲುವಂಗಿ, ನೀಲಿ ಬಣ್ಣದ ದುಪ್ಪಟವನ್ನು ಧರಿಸಿರುವಳು. ಇವಳ ಹಿಂದೆ ಓರ್ವ ಹೆಣ್ಣುಮಗಳು ಚಿತ್ರಿತಗೊಂಡಿದ್ದು, ಇವಳು ರೆಕ್ಕೆಯನ್ನು ಹೊಂದಿರುವಳು. ಮೇರಿಮಾತೆಯ ಬಲಪಾರ್ಶ್ವದಲ್ಲಿ ಓರ್ವವ್ಯಕ್ತಿಯು ಚಿತ್ರಿತಗೊಂಡಿದ್ದು ನೇರಳೆ ಹಳದಿ ಹಾಗೂ ಕಂದುಗೆಂಪು ಬಣ್ಣಗಳ ಉಡುಪುಗಳನ್ನು ಧರಿಸಿದ್ದಾನೆ. ಚಿತ್ರದ ಹಿನ್ನೆಲೆಯಲ್ಲಿ ಮರದ ಚಿತ್ರವಿದ್ದು, ಬೆಟ್ಟಗಳ ಸಾಲು, ಮೋಡಗಳಿಂದ ಕೂಡಿದ ಆಕಾಶ ಚಿಕ್ಕ ಚಿಕ್ಕ ಹಸಿರು ಸಸಿಗಳಿಂದ ಕೂಡಿದ ಭೂದೃಶ್ಯವು ಸಂಯೋಜನೆಗೊಂಡಿದೆ. ಚಿತ್ರದ ಸುತ್ತಲೂ ನಕ್ಷಾವಿನ್ಯಾಸವು ಸಂಯೋಜನೆಗೊಂಡಿದ್ದು ಹೂವಿನ ಬಾಹ್ಯರಚನೆಯು ಚಿತ್ರಿತಗೊಂಡಿದೆ. ಒಟ್ಟಾರೆ ಚಿತ್ರವು ಆಕೃತಿ, ವರ್ಣ ಹಾಗೂ ಭಾವ ಸಂಯೋಜನೆಯು ಉತ್ತಮವಾಗಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೦೯ ಯೇಸುವಿನ ಅಂತಿಮ ಭೋಜನ**

ಈ ಗಾಜಿನ ಮೇಲಿನ ವರ್ಣಚಿತ್ರವು ಮೈಸೂರಿನ ಸಂತ ಫಿಲೋಮಿನಾ ಚರ್ಚದಲ್ಲಿ ಕಂಡುಬರುತ್ತದೆ. ಬೃಹತ್ ಕಿಟಕಿಗೆ ಅಳವಡಿಸಿದ ಗಾಜಿನ ಮೇಲೆ ರಚನೆಗೊಂಡಿರುವ ಈ ದೃಶ್ಯದಲ್ಲಿ ಭಗವಾನ ಯೇಸು ಹಾಗೂ ಅವನ ಅನುಯಾಯಿಗಳು ದ್ರಾಕ್ಷಾರಸ ಹಾಗೂ ಹಣ್ಣು ಹಂಫಲಗಳನ್ನು ಸೇವನೆ ಮಾಡುತ್ತಿರುವಂತೆ ಚಿತ್ರಿತಗೊಂಡಿದ್ದಾರೆ. ಈ ಸನ್ನಿವೇಶವು ಯೇಸು ಮರಣ ದಂಡನೆಗೆ ಗುರಿಯಾದ ನಂತರ ಅವನ ಅನುಯಾಯಿಗಳೊಡನೆ ಭೋಜನಕೂಟದಲ್ಲಿ ತೊಡಗಿದ ಅಂತಿಮ ಕ್ಷಣವನ್ನು ಸೂಚಿಸುತ್ತದೆ. ಇಲ್ಲಿ ಭಗವಾನ ಯೇಸು ಏನೋ ಸಂದೇಶ ನೀಡುತ್ತಿರುವಂತೆ ಕಂಡು ಬರುತ್ತಿದ್ದು, ಉಳಿದವರು ಅತ್ಯಂತ ಭಾವುಕರಾಗಿ ಕೇಳುತ್ತಿರುವಂತೆ ಸಂಯೋಜಿತಗೊಂಡಿರುವರು. ಬಹುತೇಕ ಎಲ್ಲರ ವೇಷ ಭೂಷಣಗಳು ಕೆಂಪು, ಹಸಿರು, ನೀಲಿ, ಹಳದಿ ಮಿಶ್ರಿತ ವರ್ಣಗಳಿಂದ ಕಂಡು ಬರುತ್ತಿದ್ದು, ತುಂಬು ನಿಲುವಂಗಿಗಳು ದುಪ್ಪಟಗಳು ಇವರನ್ನು ಆವರಿಸಿವೆ. ಹಿನ್ನೆಲೆಯಲ್ಲಿ ಪ್ರಕೃತಿದೃಶ್ಯ ಮತ್ತು ಆಕಾಶದಲ್ಲಿ ರೆಕ್ಕೆಗಳಿಂದ ಕೂಡಿದ ದೇವತೆಗಳು ಹಾರಾಡುತ್ತಿರುವಂತೆ ಸಂಯೋಜನೆಗೊಂಡಿದ್ದಾರೆ. ಈ ಚಿತ್ರವು ರೇಖೆ, ಭಾವ, ವರ್ಣ ಹಾಗೂ ಆಕೃತಿಗಳ ಪ್ರತಿಮಾ ಲಕ್ಷಣಗಳು ಉತ್ತಮವಾಗಿ ಮೂಡಿಬಂದಿವೆ.

**ಚಿತ್ರಸಂಖ್ಯೆ ೧೦, ೧೧ ಯೇಸು**

ಈ ಎರಡೂ ಚಿತ್ರಗಳು ಮೈಸೂರಿನ ಬಾರ್ತೋಲೊಮಿವ್ ಚರ್ಚದ ಕಿಟಕಿಗಳಲ್ಲಿ ಅಳವಡಿಸಿದ ಗಾಜಿನ ಮೇಲೆ ಕಂಡು ಬರುತ್ತವೆ. ಈ ಎರಡು ಚಿತ್ರಗಳು ಆಧುನಿಕ ರಚನಾ ಪದ್ಧತಿಯಲ್ಲಿ ರೂಪಿತಗೊಂಡಿದ್ದು, ರೇಖಾ ಪ್ರಾಧಾನ್ಯತೆ ಒಡಮೂಡಿದೆ. ಚಿತ್ರ ೧೦ ರಲ್ಲಿ ಯೇಸು ಆಕರ್ಷಕ ನಿಲುವಂಗಿಯನ್ನು ಧರಿಸಿದ್ದು, ಬಲಗೈಯಲ್ಲಿ ಜೋಳದ ತೆನೆಗಳನ್ನು ಹಿಡಿದು ಕೊಂಡಿರುವನು. ಹಿನ್ನೆಲೆಯಲ್ಲಿ ಕೆಂಪು, ಹಳದಿ ಬಣ್ಣಗಳ ಕಿರಣಗಳು ಚಾಚಿಕೊಂಡಿವೆ. ಸುತ್ತಲು ನಕ್ಷತ್ರಗಳ ಸಮೂಹವು ಕಂಡು ಬರುತ್ತಿದ್ದು, ನೀಲಿ ಬಣ್ಣದ ಪಟ್ಟಿಯು ರಚನೆಗೊಂಡಿದೆ. ಈ ಚಿತ್ರವು ಯೇಸುವಿನ ಪೂರ್ಣ ಭಾವವನ್ನು ವ್ಯಕ್ತಪಡಿಸುತ್ತಿದ್ದು, ಯೇಸುವಿನ ಸಾಂಕೇತಿಕ ಭಾವನಿರೂಪಣೆಯು

ಅಭಿವ್ಯಕ್ತಗೊಂಡಿದೆ. ಚಿತ್ರ ೧೧ ರಲ್ಲಿ ಯೇಸು ಕೆಂಪು ಬಣ್ಣದ ನಿಲುವಂಗಿ ಹಾಗೂ ನೀಲಿಬಣ್ಣದ ದುಪ್ಪಟವನ್ನು ಧರಿಸಿದ್ದು, ಎಡಗೈಯಲ್ಲಿ ಕೋಲನ್ನು ಹಿಡಿದಿರುವನು. ಹಿನ್ನೆಲೆಯಲ್ಲಿ ಅಲಂಕಾರಿಕ ನಕ್ಷೆಗಳು ಚಿತ್ರಿತಗೊಂಡಿದ್ದು, ನೀಲಿ, ಹಸಿರು, ಹಳದಿ ಹಾಗೂ ಬೂದ ಬಣ್ಣಗಳು ಸಂಯೋಜನೆಗೊಂಡಿವೆ. ಇದು ಯೇಸುವಿನ ಅರ್ಧಭಾವವನ್ನು ನಿರೂಪಿಸುತ್ತದೆ. ಈ ಚಿತ್ರವು ರೇಖಾ ಪ್ರಧಾನ್ಯತೆಯಿಂದ ಕೂಡಿದ್ದು, ಪ್ರಾಥಮಿಕ ವರ್ಣಗಳ ಛಾಯೆಗಳಿಂದ ಸುಂದರವಾಗಿ ರಚನೆಗೊಂಡಿದೆ.

**ಚಿತ್ರಸಂಖ್ಯೆ ೧೨ ಯೇಸುವಿನ ಸಾಂಕೇತಿಕ ಚಿತ್ರಗಳು**

ಇಲ್ಲಿ ಚಿತ್ರಿತಗೊಂಡಿರುವ ಕ್ರಿಸ್ತನ ಸಾಂಕೇತಿಕ ಚಿತ್ರಗಳು ಮಂಗಳೂರಿನ ಸಂತ ಸೆಬಾಸ್ಟೆಯಿನ್ ಚರ್ಚದ ಕಿಟಕಿಗಳಲ್ಲಿ ಕಂಡು ಬರುತ್ತಿವೆ. ಚಿತ್ರಸಂಖ್ಯೆ ೦೧ ರಲ್ಲಿ ಯೇಸುಕ್ರಿಸ್ತ ಕುರಿಗಳನ್ನು ಕಾಯುತ್ತಿರುವ ಸಾಂಕೇತಿಕ ದೃಶ್ಯವು ಚಿತ್ರಿತಗೊಂಡಿದ್ದು, ಬಿಳಿವರ್ಣದ ನಿಲುವಂಗಿ, ಕೆಂಪು ದುಪ್ಪಟವನ್ನು ಹೊಂದಿದ್ದಾನೆ. ಕೈಯಲ್ಲಿ ಕೋಲು ಹಾಗೂ ಕುರಿಮರಿಯನ್ನು ಹೊತ್ತುಕೊಂಡಿರುವನು. ಹಿನ್ನೆಲೆಯಲ್ಲಿ ನೀಲವರ್ಣದ ಆಕಶ, ಹಸಿರು ನೆಲಹಾಸು ಚಿತ್ರಿತಗೊಂಡಿದೆ. ಚಿತ್ರಸಂಖ್ಯೆ ೦೨ ರಲ್ಲಿ ಸಿಲುಬೆ ಸ್ತಂಭವಿದ್ದು ಆ ಸ್ತಂಭಕ್ಕೆ ತುಟಿಗಳ (ಮಾನವ) ಸಂಕೇತವನ್ನು ಚಿತ್ರಿಸಲಾಗಿದೆ. ಸ್ತಂಭದ ಕೆಳಗೆ ಎರಡು ಕೈಗಳಲ್ಲಿ ದ್ರಾಕ್ಷಾರಸ ತುಂಬಿದ ಬಟ್ಟಲನ್ನು ಹಿಡಿದಿರುವುದನ್ನು ಸಂಯೋಜಿಸಲಾಗಿದೆ. ಈ ಚಿತ್ರದಲ್ಲಿ ಒಟ್ಟಾರೆ ಸಂಕೇತಗಳನ್ನು ಗಮನಿಸಿದರೆ ಕ್ರಿಸ್ತ ದೇವನನ್ನು ಕುರಿತು ಆರಾಧಿಸುವ ನಿರೂಪಣಾ ಚಿತ್ರವೆಂದು ಹೇಳಬಹುದು.

ಚಿತ್ರಸಂಖ್ಯೆ ೦೩ ರಲ್ಲಿ ಕೆಂಪು ವರ್ಣದ ಸಿಲುಬೆ ಸ್ತಂಭವನ್ನು ಚಿತ್ರಿಸಿದ್ದು, ಸ್ತಂಭದಲ್ಲಿ ಕ್ರಿಶ್ಚಿಯನ್ ಮಿಸಿನರಿಯ ಸಂಕೇತವಿದೆ. ಸ್ತಂಭದ ಕೆಳಗೆ ಎರಡು ಕೈಜೋಡಿಸಿ ನಮಿಸುವ ಸಂಕೇತದ ಚಿತ್ರವಿದೆ. ಕರಿದ್ರಾಕ್ಷಿಯ ಹಣ್ಣು ಹಾಗೂ ಬಳ್ಳಿಗಳನ್ನು ಚಿತ್ರಿಸಲಾಗಿದೆ. ಈ ಚಿತ್ರವೂ ಸಹ ಕ್ರಿಸ್ತನನ್ನು ಧ್ಯಾನಿಸುವ ಸಾಂಕೇತಿಕ ಭಾವವು ಎದ್ದು ತೋರುತ್ತದೆ. ಚಿತ್ರಸಂಖ್ಯೆ ೦೪ ರಲ್ಲಿ ಕೆಂಪು ವರ್ಣದ ದೊಡ್ಡ ಸಿಲುಬೆ, ಸಿಲುಬೆಯಲ್ಲಿ ತುಟಿಗಳಿಗೆ ಹೊಲಿಗೆ ಹಾಕಿದ ಚಿತ್ರವಿದೆ. ಇದು ಕೆಂಪು ವರ್ಣದಿಂದ ಲೇಪಿತಗೊಂಡಿದ್ದು, ಸಿಲುಬೆಯ ಕೆಳಗೆ ಶ್ವೇತವರ್ಣದ ಪಾರಿವಾಳ, ಪಿಂಗಾಣಿ ಬಟ್ಟಲು, ಉರಿಯುತ್ತಿರುವ ಮೇಣದ ಬತ್ತಿ, ದ್ರಾಕ್ಷಿಗೊಂಚಲು ಮತ್ತು ಬತ್ತದ ತೆನೆಗಳನ್ನು ಸಾಂಕೇತಿಕವಾಗಿ ಚಿತ್ರಿಸಲಾಗಿದ್ದು, ಇವು ಕ್ರಿಸ್ತನ ಜ್ಞಾನ ಸಂದೇಶ ಹಾಗೂ ಶಾಂತಿಯ ಭಾವ ಸಂಕೇತವನ್ನು ಸೂಚಿಸುತ್ತವೆ.

ಚಿತ್ರಸಂಖ್ಯೆ ೦೫ ರಲ್ಲಿ ಕೈಯಲ್ಲಿ ಹಿಡಿದಿರುವ ಜಪಮಣಿಗೆ ಚಿಕ್ಕದಾದ ಸಿಲುಬೆಯು ಹೂಜಿಯಂತಹ ಪಾತ್ರೆಯಲ್ಲಿ ನೇತಾಡುತ್ತಿದೆ. ಕರಿದ್ರಾಕ್ಷಿಯ ಗೊಂಚಲು ಹಾಗೂ ಗೋಧಿ ತೆನೆಗಳನ್ನು ಚಿತ್ರಿಸಲಾಗಿದೆ. ಈ ಚಿತ್ರವನ್ನು ಗಮನಿಸಿದರೆ ದೇವರನ್ನು ಕುರಿತು ಜಪ ಮಾಡುವ ಭಾವ ನಿರೂಪಣೆಯು ವ್ಯಕ್ತಪಡಿಸುತ್ತಿದೆ. ಚಿತ್ರಸಂಖ್ಯೆ ೦೬ ರಲ್ಲಿ ಯೇಸುಕ್ರಿಸ್ತನು ಶ್ವೇತ ವಸ್ತ್ರಧಾರಿಯಾಗಿ ಕೈಯಲ್ಲಿ ಕೋಲು ಹಿಡಿದು ಭೂಮಿಯಲ್ಲಿ ಅವತರಿಸಿದಂತೆ ಸಂಯೋಜನೆಗೊಂಡಿರುವನು. ಅವನ ಸುತ್ತಲೂ ಚಿಕ್ಕಗಾತ್ರದ ರೆಕ್ಕೆ ಹೊಂದಿದ ದೇವಧೂತರನ್ನು ಚಿತ್ರಿಸಲಾಗಿದೆ. ಈ ಚಿತ್ರವೂ ಕೂಡಾ ಕ್ರಿಸ್ತದೇವನ ನಿರೂಪಣಾ ಚಿತ್ರವಾಗಿದ್ದು, ತಿಳಿಹಳದಿ, ಕೆಂಪು, ಕಂದು ಹಾಗೂ ಬಿಳಿವರ್ಣಗಳ ಸಂಯೋಜನೆಯನ್ನು

ಮಾಡಲಾಗಿದೆ.

ಒಟ್ಟಾರೆ ಆರು ಚಿತ್ರಗಳು ನಿರೂಪಿಸುವುದೆನೆಂದರೆ, ಯೇಸುಕ್ರೈಸ್ತನು ತನ್ನ ಜೀವಿತಕಾಲದಲ್ಲಿ ಸಾಕಷ್ಟು ಮಾನಸಿಕ ಹಾಗೂ ದೈಹಿಕ ಹಿಂಸೆಗಳನ್ನು ಅನುಭವಿಸಿದರೂ ಜಗತ್ತಿನ ಮಾನವ ಕುಲದ ಶಾಂತಿ, ಪ್ರೀತಿಯನ್ನು ಬಯಸಿದನು. ಜಗತ್ತಿನ ಕಲ್ಯಾಣಕ್ಕಾಗಿ ತನ್ನ ಪ್ರಾಣ ತ್ಯಾಗ ಮಾಡಿದನು. ಮೇಣದ ಭತ್ತಿಯು ತನ್ನನ್ನು ಸುಟ್ಟುಕೊಂಡು ಹೇಗೆ ಬೆಳಕನ್ನು ಕೊಡುತ್ತದೆಯೋ ಅದೇ ರೀತಿ ಕ್ರಿಸ್ತದೇವನು ಜ್ಞಾನದ ಸಾರವನ್ನು ಉಣಬಡಿಸಿದನು. ಆ ಸಾಂಕೇತಿಕ ಭಾವನಿರೂಪಣೆಯನ್ನು ಕಲಾವಿದನು ಈ ಚಿತ್ರಗಳಲ್ಲಿ ಪ್ರಕಟಪಡಿಸಿದ್ದಾನೆ.

**ಚಿತ್ರಸಂಖ್ಯೆ ೧೩ ಸಂತ ಮಾರ್ಗರಿಟಾ ಮರಿಯಾ ಅಲಾಕೊಕ್ಯೂ**

ಈ ಗಾಜಿನ ಚಿತ್ರವು ಮಂಗಳೂರಿನ ಸಂತ ಎಲೋಸಿಯಸ್ ಚರ್ಚದ ಕಿಟಕಿಯೊಂದರಲ್ಲಿ ಕಂಡು ಬರುತ್ತಿದೆ. ಅಲಂಕಾರ ಪ್ರಧಾನವಾದ ಈ ಚಿತ್ರವು ಕ್ರಿಸ್ತನ ಅನುಯಾಯಿ ಸ್ತ್ರೀಯಳ ನಿರೂಪಣೆಯು ಕಂಡು ಬರುತ್ತಿದೆ. ಮಾರ್ಗರೇಟಾಳು ತುಂಬು ಉಡುಪುಗಳನ್ನು ಧರಿಸಿದ್ದು ಕೈಗಳಲ್ಲಿ ಹೂಗುಚ್ಚ ಹಾಗೂ ಜ್ಯೋತಿಯನ್ನು ಹಿಡಿದಿರುವಳು. ಮುಖಭಾವು ತೇಜಸ್ಸಿನಿಂದ ಕೂಡಿದ್ದು, ವರ್ಣ ಸಂಯೋಜನೆಯು ಭಾವಪೂರ್ಣವಾಗಿ ಮೂಡಿಬಂದಿದೆ. ಹಿನ್ನೆಲೆಯಲ್ಲಿ ಅಲಂಕಾರಿಕ ನಕ್ಷಾವಿನ್ಯಾಸಗಳನ್ನು ಆಕರ್ಷಕವಾಗಿ ಸಂಯೋಜನೆ ಮಾಡಲಾಗಿದೆ.

**ಚಿತ್ರಸಂಖ್ಯೆ ೧೪ ಬಿಟಸ್ ಕಾಲುಡಿಅಸ್ ಡಿ–ಲಾ– ಕೋಲೊಂಬಿರೊ ನ ಭಾವಚಿತ್ರ**

ಈ ಚಿತ್ರವು ಸಹ ಮಂಗಳೂರಿನ ಎಲೋಸಿಯಸ್ ಚರ್ಚದ ಕಿಟಕಿಯಲ್ಲಿ ಕಂಡುಬರುತ್ತಿದೆ. ಇದು ಕ್ರಿಸ್ತನ ಅನುಯಾಯಿ ಪುರುಷ ಸಂತ ಬಿಟಸ್ ಕಾಲುಡಿಅಸ್ ಡಿ–ಲಾ–ಕೊಲೊಂಬಿರೋ ನ ಭಾವಚಿತ್ರವಾಗಿದೆ. ಈ ಪುರುಷನನ್ನು ಶ್ವೇತವರ್ಣದ ನಿಲುವಂಗಿ ಹಾಗೂ ಪಾದದ ತನಕ ತೊಟ್ಟ ದೊಗಳೆ ಪ್ಯಾಂಟ (ಪಾಯಿಜಾಮ), ಭುಜದ ಮೇಲೆ ನೇರಳೆ ಸ್ಕಾರ್ಪ ಧರಿಸಿದಂತೆ ಚಿತ್ರಿಸಲಾಗಿದ್ದು, ಕೈಯಲ್ಲಿ ಕ್ರೈಸ್ತ ಸಂಕೇತವಾದ ಸಿಲುಬೆಯನ್ನು ಹಿಡಿದು ಕೊಂಡಿರುವನು. ಮುಖದಲ್ಲಿ ಮಂದಹಾಸವು ವ್ಯಕ್ತಗೊಂಡಿದ್ದು, ಆಕರ್ಷಕ ನಿಲುವನ್ನು ನಿರೂಪಿಸಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ಅಲಂಕಾರಿಕ ನಕ್ಷಾವಿನ್ಯಾಸಗಳನ್ನು ಚಿತ್ರಿಸಿ, ಕೆಂಪು, ಹಳದಿ, ನೀಲಿ, ಬಿಳಿ, ನೇರಳೆ, ಹಸಿರು ವರ್ಣಗಳ ಸಂಯೋಜನೆಯನ್ನು ಮಾಡಲಾಗಿದೆ. ಈ ಚಿತ್ರವು ಉತ್ತಮ ಭಾವ ನಿರೂಪಣೆಯಿಂದ ಚಿತ್ರಿತಗೊಂಡಿದೆ.

**ಚಿತ್ರಸಂಖ್ಯೆ ೧೫ ಧಾರ್ಮಿಕ ಸ್ತ್ರೀಪುರುಷರ ಚಿತ್ರಗಳು**

ಇಲ್ಲಿ ರಚನೆಗೊಂಡಿರುವ ಆರು ಚಿತ್ರಗಳು ಮಂಗಳೂರಿನ ಹಾಲಿಕ್ರಾಸ್ ಚರ್ಚದ ಕಿಟಕಿಗಳಲ್ಲಿ ಕಂಡು ಬರುತ್ತಿವೆ. ಈ ಎಲ್ಲ ಚಿತ್ರಗಳು ಕ್ರಿಸ್ತ ಧರ್ಮಿಯರ ಸ್ತ್ರೀಪುರುಷರ ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತಿವೆ. ಸಂತ ಫ್ರಾನ್ಸಿಸ್ ಕ್ಸಾರೊ, ಸಂತ ಎಲೆಲಾ, ಸಂತ ಅನ್ನಾ, ಕಿಂಗ್ ಡಾವಿಡ್, ಸಂತ ಇಗ್ನೋಟಿಸ್ ಲೊಯೊಲಾ ಹಾಗೂ ಸಂತ ಫ್ರಾನ್ಸಿಸ್ ಆಫ್ ಅಸ್ಸಿಸಿಯರ ಜೀವನ ಕ್ರಮವನ್ನು ನಿರೂಪಿಸುತ್ತಿವೆ. ಆರು ಚಿತ್ರಗಳಲ್ಲಿ ಆಕೃತಿಗಳ ಉಡುಪುಗಳು ಹಾಗೂ ಅವುಗಳ ನಿರಿಗೆಗಳು ಆಕರ್ಷಕವಾಗಿ ರೂಪಗೊಂಡಿದ್ದು, ಅವುಗಳಲ್ಲಿನ ವರ್ಣಛಾಯೆಗಳು ಸಂದರ್ಭಕ್ಕನುಸಾರವಾಗಿ

ಸಂಯೋಜನೆಗೊಂಡಿವೆ. ಚಿತ್ರ ೦೧ ರಲ್ಲಿ ಅಲಂಕಾರದ ಆಶಯ ಉದ್ದೀಪನಗೊಂಡಿದ್ದು ಆಕೃತಿಗಳ ಸಂಯೋಜನೆ ಹಿನ್ನೆಲೆಯ ಭೂದೃಶ್ಯ ಹಾಗೂ ಅರಮನೆಯ ಸಾಂಕೇತಿಕ ನಿರೂಪಣೆಯು ಕಲಾತ್ಮಕವಾಗಿ ಮೂಡಿ ಬಂದಿದೆ. ಮತ್ತು ತ್ರಿಆಯಾಮ ವರ್ಣಛಾಯೆಯು ಎದ್ದು ತೋರುತ್ತಿದೆ. ಚಿತ್ರ ೦೨ ರಲ್ಲಿ ಆಕೃತಿಗಳ ಉಡುಪುಗಳು ಆಕರ್ಷಕವಾಗಿ ಮೂಡಿಬಂದಿದ್ದು ಅರಮನೆಯ ಒಳಾಂಗಣ ದೃಶ್ಯವು ವೈಭವದ ಚಿತ್ರಣವನ್ನು ನಿರ್ದೇಶಿಸುತ್ತಿದೆ. ಹಿನ್ನೆಲೆಯ ಆಕೃತಿ ದೃಶ್ಯವು ಅತ್ಯಂತ ನೈಜವಾಗಿ ನಿರೂಪಿತಗೊಂಡಿದ್ದು ನೋಡುಗನನ್ನು ವಿಸ್ಮಯಗೊಳಿಸುತ್ತದೆ. ವರ್ಣಗಳ ಬಳಕೆ ಉಜ್ವಲವಾಗಿ ಮೂಡಿಬಂದಿದ್ದು, ಆಕರ್ಷಕ ಸಂಯೋಜನೆ ಪ್ರಕಟಗೊಂಡಿದೆ. ಚಿತ್ರ ೦೩ ರಲ್ಲಿ ಹಿಂದಿನ ಚಿತ್ರದಂತೆ ಮೂಡಿಬಂದಿದೆ ಆದರೂ ಭಾವನಾ ನಿರೂಪಣೆಯು ಉತ್ತಮವಾಗಿ ರೂಪಗೊಂಡಿದೆ. ಕೆಂಪು, ಹಸಿರು, ಬಿಳಿ, ನೀಲಿ, ಕಂದು ಬಣ್ಣಗಳು ಇಲ್ಲಿ ಬಳಕೆಗೊಂಡಿವೆ. ಚಿತ್ರ ೦೪ ರಲ್ಲಿ ವ್ಯಕ್ತಿಯ ಆಕರ್ಷಕ ನಿಲುವು, ಭಾವಯೋಜನೆ ಚಲನೆಯಿಂದ ಕೂಡಿದ್ದು, ಅರಮನೆಯ ದೃಶ್ಯವು ವೈಭವವನ್ನು ವ್ಯಕ್ತಪಡಿಸುತ್ತದೆ. ಇಲ್ಲಿ ವಿಶೇಷವೆದರೆ ಹಿನ್ನೆಲೆಯಲ್ಲಿ ಕಂಡು ಬರುವ ಮೋಡಗಳ ಸಂಯೋಜನೆ, ಅವುಗಳ ನೈಜತೆ, ಚಲನೆ ಹಾಗೂ ದಟ್ಟತೆಯನ್ನು ಅತ್ಯಂತ ಸುಂದರವಾಗಿ ಚಿತ್ರಿಸಲಾಗಿದೆ

ಚಿತ್ರ ೦೫ ರಲ್ಲಿ ಆಕಾಶದಿಂದ ಹೊರಡುವ ಪ್ರಕಾಶಯುತ ಕಿರಣಗಳು ಈ ಧಾರ್ಮಿಕ ಪುರುಷನನ್ನು ಪ್ರವೇಶ ಮಾಡುತ್ತಿರುವಂತೆ ರಚನೆಗೊಂಡಿವೆ. ಪ್ರಕೃತಿಯ ದೃಶ್ಯವು ಅತ್ಯಂತ ಸುಂದರವಾಗಿ ರೂಪಗೊಂಡಿದೆ. ಕಂದು, ನೀಲಿ ಬಣ್ಣಗಳು ಚಿತ್ರದಲ್ಲಿ ಪ್ರಧಾನವಾಗಿ ಸಂಯೋಜನೆಗೊಂಡಿವೆ. ಉಳಿದಂತೆ ಚಿತ್ರದ ಸುತ್ತಲೂ ಅಲಂಕಾರಿಕ ಕಂಬಗಳ ನಿರೂಪಣೆ ವ್ಯಕತಗೊಂಡಿದೆ. ಚಿತ್ರ ೦೬ ರಲ್ಲಿ ಅರಮನೆಯ ಒಳಾಂಗಣ ದೃಶ್ಯವು ಅತ್ಯಂತ ಕಲಾತ್ಮಕ ಹಾಗೂ ವೈಭವದ ಸಾಂಕೇತಿಕ ರೂಪಲಕ್ಷಣಗಳು ಚಿತ್ರಿತಗೊಂಡಿವೆ. ದೊಡ್ಡ ದೊಡ್ಡ ಗೋಡೆಗಳು, ಕಂಬಗಳು, ಮರದ ಡಯಾಸಗಳು, ಪಿಠೋಪಕರಣಗಳು, ವರ್ಣರಂಜಿತ ಪರದೆಗಳು ಮೂಡಿಬಂದಿವೆ. ಇಲ್ಲಿ ಬಳಕೆಗೊಂಡಿರುವ ವರ್ಣಗಳ ಛಾಯೆಯ ಮೂಲಕ ತ್ರಿಕರಣರೂಪವು ಅನಾವರಣಗೊಂಡಿದೆ. ಒಟ್ಟಾರೆ ಆರು ಚಿತ್ರಗಳು ಆಕೃತಿಗಳ ಸಂಯೋಜನೆ, ವೇಷ ಭೂಷಣಗಳು, ವರ್ಣ ನಿರೂಪಣೆಯು, ಅಲಂಕಾರದ ಆಶಯ, ಬೆಳಕು, ನೆರಳು ಹಾಗೂ ಯಥಾದೃಷ್ಟಿಯು ಉತ್ತಮವಾಗಿ ಪ್ರಕಟಗೊಂಡಿದೆ.

**ಚಿತ್ರಸಂಖ್ಯೆ ೧೬ ಸಂತ ಬಾರ್ಥೋಲೊಮಿವ್**

ಈ ಚಿತ್ರವು ಮೈಸೂರಿನ ಸಂತ ಬಾರ್ಥೋಲೊಮಿವ್ ಚರ್ಚದಲ್ಲಿ ಕಂಡುಬರುತ್ತಿದೆ. ಈ ಪೂರ್ಣಭಾವಚಿತ್ರವು ಸಂತ ಬಾರ್ಥೋಲೊಮಿವ್‌ರ ವ್ಯಕ್ತಿತ್ವವನ್ನು ನಿರೂಪಿಸುತ್ತದೆ. ಇಲ್ಲಿ ಬಾರ್ಥೋಲೋಮಿವ್‌ರು ಧರಿಸಿದ ನಿಲುವಂಗಿ ಹಾಗೂ ದುಪ್ಪಟಗಳ ಸಂಯೋಜನೆ ಉತ್ತಮವಾಗಿ ಮೂಡಿಬಂದಿದ್ದು, ಆ ಉಡುಪುಗಳ ಅಂಚು ವಜ್ರದ ಹರಳುಗಳಿಂದ ರೂಪಗೊಂಡಿರುವಂತೆ ರಚನೆಗೊಂಡಿದೆ. ಉಡುಪುಗಳ ನಿರಿಗೆಗಳು ಆಕರ್ಷಕವಾಗಿ ಸಂಯೋಜನೆಗೊಂಡಿದ್ದು, ಆಕರ್ಷಕ ವರ್ಣಸಂಯೋಜನೆ ಮಾಡಲಾಗಿದೆ. ಕೈಯಲ್ಲಿ ಕೋಲು, ಚಿನ್ನದ ಪೆಟ್ಟಿಗೆ, ಪಾದರಕ್ಷೆಗಳು ಹಾಗೂ ತಲೆಗೂದಲು, ಮೀಸೆ, ಗಡ್ಡಗಳು ಸೂಕ್ಷ್ಮ ರೇಖೆಗಳಿಂದ ಅವುಗಳ ಏರಿಳಿತವನ್ನು ಉತ್ತಮವಾಗಿ ಚಿತ್ರಿಸಲಾಗಿದೆ. ಮುಖಭಾವವು ಅತ್ಯಂತ ಶಾಂತರೂಪವನ್ನು ವ್ಯಕ್ತಪಡಿಸುತ್ತಿದೆ. ಹಿನ್ನೆಲೆಯಲ್ಲಿ

ಸೂಕ್ಷ್ಮರೇಖೆಗಳಿಂದ ಕಿರಣಗಳು ಚಾಚಿಕೊಂಡಿದ್ದು, ಚಿತ್ರದ ಸುತ್ತಲೂ ನಕ್ಷಾವಿನ್ಯಾಸವು ಚಿತ್ರಿತಗೊಂಡಿದೆ. ಈಚಿತ್ರವು ರೇಖೆ, ವರ್ಣ ಹಾಗೂ ನೆರಳು ಬೆಳಕುಗಳಿಂದ ನೈಜ ಸ್ವರೂಪವೂ ಉದ್ದೀಪನಗೊಂಡಿದೆ.

**ಚಿತ್ರಸಂಖ್ಯೆ ೧೭, ೧೮ ಭಗವಾನ ಯೇಸುವನ್ನು ಪಾದ್ರಿಗಳು ಪ್ರಾರ್ಥಿಸುತ್ತಿರುವದು.**

ಈ ಎರಡು ಚಿತ್ರಗಳು ಮಂಗಳೂರಿನ ಕಂಕನಾಡಿಯ ಕ್ಲೊಯಿಸ್ಟ್ರಡ್ ಕಾರ್ಮೆಲ್ ಚರ್ಚದಲ್ಲಿ ಕಂಡು ಬರುತ್ತವೆ. ಚಿತ್ರ ೦೧ ರಲ್ಲಿ ಓರ್ವ ಕ್ರಿಸ್ತಸಂತಳು ಯೇಸುದೇವನನ್ನು ಪ್ರಾರ್ಥಿಸುತ್ತಿರುವಳು. ಕಟ್ಟಡದ ಮೇಲಿಂದ ಮೋಡಗಳ ಮರೆಯಲ್ಲಿ ಉದ್ಭವಿಸಿದ ಭಗವಾನ ಯೇಸು ಅವಳನ್ನು ಹರಸುತ್ತಿರುವಂತೆ ಚಿತ್ರಿತಗೊಂಡಿರುವನು. ಈ ಕಲ್ಪನಾ ಚಿತ್ರದಲ್ಲಿ ಸಂತಳು ಮಂಡಿಯೂರಿದ್ದಾಳೆ ತುಂಬು ಉಡುಪುಗಳನ್ನು ಧರಿಸಿದ್ದಾಳೆ. ಮುಂದುಗಡೆ ಪುಸ್ತಕವನ್ನು ಸಂಯೋಜಿಸಿದ್ದು, ಬೃಹತ್ ಕಟ್ಟಡದ ಒಳಾಂಗಣವು ನೈಜರೂಪದಲ್ಲಿ ಚಿತ್ರಿತಗೊಂಡಿದೆ. ಕಟ್ಟಡದಿಂದ ಹೊರ ಹೊಮ್ಮುತ್ತಿರುವ ಯೇಸು ದೇವನು ಕೆಂಪು ನಿಲುವಂಗಿ ಹಾಗೂ ದುಪ್ಪಟವನ್ನು ಹೊಂದಿರುವನು. ಇವರ ಉಡುಪುಗಳು ಆಕರ್ಷಕ ನಿರಿಗೆಗಳಿಂದ ರೂಪಗೊಂಡಿವೆ. ಮೋಡಗಳ ಚಲನೆ, ಅವುಗಳದಟ್ಟತೆಯಲ್ಲಿ ರೆಕ್ಕೆಗಳಿಂದ ಕೂಡಿದ ಶಿಸುಗಳು ಸಂಯೋಜನೆಗೊಂಡಿರುವರು. ಚಿತ್ರದ ಸುತ್ತಲೂ ಅಲಂಕಾರಿಕ ನಕ್ಷಾವಿನ್ಯಾಸವನ್ನು ಚಿತ್ರಿಸಲಾಗಿದೆ. ಚಿತ್ರವು ವರ್ಣ ಸಂಯೋಜನೆಯಿಂದ ಬೆಳಕು ನೆರಳುಗಳ ಕಲ್ಪನೆಯು ಮತ್ತು ತ್ರಿಕರಣ ರೂಪವು ಅಭೂತವಾಗಿ ಮೂಡಿಬಂದಿದೆ.

ಚಿತ್ರಸಂಖ್ಯೆ ೦೮ ರಲ್ಲಿ ಹಿಂದಿನ ಚಿತ್ರದಲ್ಲಿನ ರಚನಾಕ್ರಮವನ್ನು ಅನುಸರಿಸಿದರೂ ಸಹ ಆಕೃತಿಗಳ ಸಂಯೋಜನೆಯು ವೈವಿಧ್ಯತೆಯಿಂದ ಪ್ರಕಟಗೊಂಡಿವೆ. ಇಲ್ಲಿ ಈ ಈರ್ವರು ಸಂತರು ಧ್ಯಾನಾಸಕ್ತರಾಗಿದ್ದು, ಪ್ರಭು ಯೇಸುವನ್ನು ಸ್ಮರಿಸುತ್ತಿದ್ದಾರೆ. ಇಬ್ಬರೂ ತುಂಬು ಉಡುಪುಗಳನ್ನು ಧರಿಸಿದ್ದು, ಭಕ್ತಿ ಭಾವವು ಇವರಲ್ಲಿ ಇದ್ದು ತೋರುತ್ತಿದೆ. ಚಿತ್ರದ ಮೇಲುಗಡೆ ಭಗವಾನ್ ಯೇಸು ಹಾಗೂ ಅವನ ಜನ್ಮದಾತರನ್ನು ಸಂಯೋಜಿಸಲಾಗಿದೆ. ಇವರನ್ನು ಸಹ ನಿಲುವಂಗಿ, ದುಪ್ಪಟಗಳಿಂದ ಅಲಂಕರಿಸಿದ್ದು ಅಲ್ಲಲ್ಲಿ ನಕ್ಷಾವಿನ್ಯಾಸವನ್ನು ಚಿತ್ರಿಸಲಾಗಿದೆ. ಈ ಮೂವರನ್ನು ಹರಿಸುತ್ತಿರುವಂತೆ ಬಿಂಬಿತಗೊಂಡಿರುವರು. ಚಿತ್ರದ ಹಿನ್ನೆಲೆಯಲ್ಲಿ ಕಟ್ಟಡದ ಒಳನೋಟ ಹಾಗೂ ಮೋಡಗಳ ಕಲ್ಪನೆ ಕಲಾತ್ಮಕವಾಗಿ ಮೂಡಿಬಂದಿದೆ. ಚಿತ್ರದ ಸುತ್ತಲೂ ಆಕರ್ಷಕ ಚಿತ್ರವಿನ್ಯಾಸವು ಸಂಯೋಜನೆಗೊಂಡಿದೆ. ಎರಡೂ ಚಿತ್ರಗಳು ರೇಖೆ, ವರ್ಣ ಭಾವನಿರೂಪಣೆ, ಯಥಾದೃಷ್ಟಿಯು ಅತ್ಯಂತ ನೈಜತೆಯಿಂದ ಅನಾವರಣಗೊಂಡಿದೆ.

**ಚಿತ್ರಸಂಖ್ಯೆ ೧೯, ೨೦ ಧಾರ್ಮಿಕ ಪ್ರವರ್ತಕರು, (ಕ್ರೈಸ್ತ ಸಂತರು)**

ಈ ಎರಡು ಚಿತ್ರಗಳು ಬೆಂಗಳೂರಿನ ಸಂತ ಮೇರಿ ಬೆಸಲಿಕಾ ಚರ್ಚದಲ್ಲಿ ಕಾಣಸಿಗುತ್ತವೆ. ಚಿತ್ರ ೦೯ ರಲ್ಲಿ ಓರ್ವ ಪಾದ್ರಿಯು ರೂಪಗೊಂಡಿದ್ದು, ಹಸಿರು ವರ್ಣದ ನಿಲುವಂಗಿ ಹಾಗೂ ದಟ್ಟ ಗುಲಾಬಿ ಬಣ್ಣದ ದುಪ್ಪಟವನ್ನು ಹೊದ್ದಿರುವನು. ಕೈಯಲ್ಲಿ ಪುಸ್ತಕ ಹಾಗೂ ಹಕ್ಕಿಯ ರೆಕ್ಕೆಯ ಲೇಖನಿಯಿಂದ ಬರೆಯುತ್ತಿರುವ ಭಂಗಿಯಲ್ಲಿ ನಿರೂಪಿತಗೊಂಡಿರುವನು. ಉಜ್ವಲಭಾವವು ಮುಖದಲ್ಲಿ ಎದ್ದು ತೋರುತ್ತಿದ್ದು. ದೇಹ ಚಲನೆಯು ಆಕರ್ಷಕ ನಿಲುಪಿನಿಂದ ಕೂಡಿದೆ. ಚಿತ್ರದ ಹಿನ್ನೆಲೆಯಲ್ಲಿ ಕ್ರಿಸ್ತದೇಗುಲದ ವಾಸ್ತು ರಚನೆಯು ರೂಪಗೊಂಡಿದ್ದು, ಅಲಂಕಾರಿಕ

ಆಶಯ ಹಾಗೂ ಭವ್ಯತೆಯು ಅಭಿವ್ಯಕ್ತಗೊಂಡಿದೆ. ಜೊತೆಗೆ ದೊಡ್ಡದಾದ ಗರುಡ ಪಕ್ಷಿಯನ್ನು ಇಲ್ಲಿ ಸಂಯೋಜಿಸಲಾಗಿದೆ.

ಚಿತ್ರ ೧೧೦ ರಲ್ಲಿ ಹಿಂದಿನ ಚಿತ್ರದಂತೆ ರಚನಾ ವಿಧಾನವನ್ನು ಅನುಸರಿಸಿದ್ದು ಸಂತನ ಭಾವಭಂಗಿಯು ವಿಶಿಷ್ಟವಾಗಿ ಮೂಡಿಬಂದಿದೆ. ಇಲ್ಲಿ ಸಂತನು ಮೈತುಂಬುವಂತೆ ಉಡುಪುಗಳನ್ನು ಧರಿಸಿದ್ದು ಆಕರ್ಷಕ ನಿರಿಗೆಗಳಿಂದ ಕಂಗೊಳಿಸುತ್ತಿವೆ. ಚಿತ್ರದ ಹಿನ್ನೆಲೆಯಲ್ಲಿ ಚರ್ಚಿನ ವಾಸ್ತು ವಿನ್ಯಾಸ ಹಾಗೂ ಅಲಂಕಾರ ರಚನೆಯು ಮೂಡಿಬಂದಿದೆ. ಇಲ್ಲಿ ನೇರಳೆ, ಕೆಂಪು, ಬಿಳಿ, ಹಳದಿ, ಕಂದು, ಮಿಶ್ರಿತ ಬಣ್ಣಗಳು ಪ್ರಧಾನವಾಗಿ ಸಂಯೋಜನೆಗೊಂಡಿವೆ. ಈ ಚರ್ಚದಲ್ಲಿ ಇದೇ ರೀತಿಯ ಧಾರ್ಮಿಕ ಚಿತ್ರಗಳು ಇನ್ನು ಕೆಲವು ಕಿಟಕಿಗಳಲ್ಲಿ ಅಳವಡಿಸಿದ ಗಾಜಿನ ಮೇಲೆ ಚಿತ್ರಿತಗೊಂಡಿವೆ. ಈ ಚಿತ್ರಗಳು ಸಹ ಎರಡೂ ಚಿತ್ರಗಳ ಆಶಯಗಳನ್ನು ಹೊಂದಿವೆ.

ಕರ್ನಾಟಕದಲ್ಲಿ ಕಂಡುಬರುವ ಗಾಜಿನ ಮೇಲಿನ ಕ್ರೈಸ್ತ ಧರ್ಮದ ಚಿತ್ರಗಳು ಎರಡು ರೀತಿಯಲ್ಲಿ ಕಂಡುಬರುತ್ತಿವೆ. ಒಂದು ವಿದೇಶಿ ಕಲಾವಿದರಿಂದ ರಚಿಸಲ್ಪಟ್ಟಿರುವಂತಹವು ಇನ್ನೊಂದು ಸ್ಥಳೀಯ ಕಲಾವಿದರಂದ ರಚಿಸಲ್ಪಟ್ಟಂತಹ ಚಿತ್ರಗಳು. ಈ ಎರಡು ಬಗೆಯ ಚಿತ್ರಗಳು ಕರ್ನಾಟಕದಲ್ಲಿ ಕಂಡುಬರುವ ಹಳೆಯ ಹಾಗೂ ಆಧುನಿಕ ಕಟ್ಟಡಗಳಲ್ಲಿ ರಚನೆಗೊಂಡಿರುವುದನ್ನು ಮಣಗಾನಬಹುದು. ಇಲ್ಲಿ ಬಳಸಲ್ಪಟ್ಟ ಗಾಜುಗಳು ಎರಡು ರೀತಿಯಲ್ಲಿ ಕಂಡುಬರುತ್ತವೆ. ಗಾಜನ್ನು ಬೇಕಾದ ಆಕಾರಕ್ಕೆ ಕತ್ತರಿಸಿಕೊಂಡು ಮೆದುವಾದ ಸತುವಿನಿಂದ ಬಂಧಿಸಿ ಆಮ್ಲ ವರ್ಣಗಳಿಂದ ರಚಿಸಲ್ಪಟ್ಟ ಚಿತ್ರಗಳು, ಇನ್ನೊಂದು ಏಕರೂಪದ ಗಾಜಿನಲ್ಲಿ ದಪ್ಪನೆಯ ರೇಖೆಗಳಿಂದ ಆಕಾರ ತಂದು ಏನಾಮಲ್(ಗ್ಲಾಸ್‌ಪೆಯಿಂಟ್) ವರ್ಣಗಳನ್ನು ಬಳಸಿಕೊಂಡು ಚರಿಸಲ್ಪಟ್ಟಚಿತ್ರಗಳು. ಈ ಎರಡು ಬಗೆಯ ಗಾಜಿನ ಮೇಲಿನ ಚಿತ್ರಗಳು ಇಲ್ಲಿ ಕಂಡುಬರುತ್ತಿದ್ದು, ನನಗೆ ಲಭ್ಯವಾದ ಚಿತ್ರಗಳನ್ನು ಈ ಅಧ್ಯಾಯದಲ್ಲಿ ವಿವೇಚನೆ ಮಾಡಲಾಗಿದೆ.

## ೦೩. ಗಾಜಿನ ಮೇಲಿನ ಇಸ್ಲಾಂ ಧರ್ಮದ ಚಿತ್ರಗಳು

ಇಸ್ಲಾಂ ಧರ್ಮದಲ್ಲಿ ಧಾರ್ಮಿಕ ಕಥಾವಸ್ತುವನ್ನು ಇಟ್ಟುಕೊಂಡು ಗಾಜಿನ ಮೇಲೆ ಚಿತ್ರಿಸಿದ್ದು ತೀರಾ ಅಪರೂಪ ಅದರಲ್ಲೂ ಮಾನವ ರೂಪವನ್ನಿಟ್ಟುಕೊಂಡು ರಚಿಸಿದ್ದು ತೀರ ವಿರಳವೆಂದು ಹೇಳಬಹುದು ಅವರು ರಚಿಸಿದ ಚಿತ್ರಗಳು ಕ್ಯಾಲಿಗ್ರಾಫಿ ಹಾಗೂ ಪ್ರಾರ್ಥನಾ ಸ್ಥಳದ ಬಾಹ್ಯ ರೂಪವನ್ನು ಗಾಜಿನ ಮೇಲೆ ರಚಿಸಿದ್ದು ಕರ್ನಾಟಕದಲ್ಲಿ ಅಲ್ಪ ಸ್ವಲ್ಪ ಕಂಡುಬರುತ್ತವೆ. ಇವರ ಚಾರಿತ್ರಿಕ ಹಿನ್ನೆಲೆಯನ್ನು ಗಮನಿಸಿದಾಗ ಬೇರೆ ಬೇರೆ ಅರಸರ ಕಾಲಮಾನಗಳಲ್ಲಿ ಅಲಂಕಾರಿಕ ಗಾಜಿನ ವಸ್ತುಗಳು ಐತಿಹಾಸಿಕ ಘಟನೆಯ ಚಿತ್ರಗಳು ಹಾಗೂ ನಕ್ಷವಿನ್ಯಾಸಗಳಂತಹ ವಿಷಯಾಧಾರಿತ ಚಿತ್ರಗಳನ್ನು ರಚನೆಗೊಂಡಿದ್ದನ್ನು ನೋಡುತ್ತೇವೆ. ಇಲ್ಲಿ ಅಧ್ಯಯನದ ಸಂಧರ್ಭದಲ್ಲಿ ಲಭ್ಯವಾದ ಕ್ಯಾಲಿಗ್ರಾಫಿ ಚಿತ್ರಗಳನ್ನು ಕುರಿತು ವಿವೇಚಿಸಲಾಗಿದೆ.

**ಗಾಜಿನ ಮೇಜಿನ ಕ್ಯಾಲಿಗ್ರಾಫಿ ಚಿತ್ರಗಳು.**

ಇಸ್ಲಾಂ ಧರ್ಮಸಾರವನ್ನು ಅಕ್ಷರಗಳ ಮೂಲಕ ಹಾಗೂ ಪ್ರಾಣಿಪಕ್ಷಿಗಳನ್ನು ಬಳಸಿಕೊಂಡು ಗಾಜಿನ ಮೇಲೆ ಚಿತ್ರಗಳನ್ನು ಬರೆದಿದ್ದನ್ನು ಕಾಣುತ್ತೇವೆ. ಇಲ್ಲಿ ಚರ್ಚಿಸಿದೆ.

**ಚಿತ್ರಸಂಖ್ಯೆ ೦೧ ಹುಲಿ ರೂಪದಲ್ಲಿರುವ ಚಿತ್ರ**

ಈ ಚಿತ್ರದಲ್ಲಿ ಚಲನೆಯುಕ್ತವಾಗಿ ಹುಲಿಯ ಚಿತ್ರವಿದ್ದು ಇದನ್ನು ಹಳದಿ ಬಣ್ಣದಿಂದ ಲೇಪನಮಾಡಲಾಗಿದೆ. ಆ ಹುಲಿಯ ದೇಹ ತುಂಬಾ ಇಸ್ಲಾಂ ಧರ್ಮವನ್ನು ಸಾರುವ ಉರ್ದು ಲಿಪಿಯನ್ನು ಬರೆಯಲಾಗಿದ್ದು, ಆ ಲಿಪಿಯು ಹಸಿರುವರ್ಣದಿಂದ ಕೂಡಿದೆ. ಚಿತ್ರದ ಹಿನ್ನೆಲೆಯಲ್ಲಿ ನೈಸರ್ಗಿಕ ಚಿತ್ರ ವಿನ್ಯಾಸವು ಆವರಿಸಿಕೊಂಡಿದ್ದು, ಹಿನ್ನೆಲೆಯನ್ನು ಬಿಳಿವರ್ಣದಿಂದ ಏಕರೂಪವಾಗಿ ಲೇಪನಮಾಡಲಾಗಿದೆ. ಕಪ್ಪುಬಣ್ಣದ ದಪ್ಪಗೆರೆಗಳಿಂದ ಚಿತ್ರವಿನ್ಯಾಸ ಹಾಗೂ ವಿನ್ಯಾಸವನ್ನು ಸಂಯೋಜಿಸಲಾಗಿದೆ.

**ಚಿತ್ರಸಂಖ್ಯೆ ೦೨ ನವಿಲಿನ ರೂಪದಲ್ಲಿರುವ ಚಿತ್ರ**

ಈ ಚಿತ್ರವು ಸಹ ಚಿತ್ರ ೦೧ ರಂತೆ ರಚನಾವಿಧಾನ ಹೊಂದಿದ್ದು, ವರ್ಣ ವೈವಿಧ್ಯತೆಯು ಯಥಾವತ್ತಾಗಿ ರೂಪಿತಗೊಂಡಿದೆ. ಇಲ್ಲಿ ಸ್ತ್ರೀ ರೂಪದ ಮುಖ, ಪ್ರಾಣಿರೂಪದ ದೇಹ, ನವಿಲಿನ ರೆಕ್ಕೆಗಳಿಂದ ಕೂಡಿದ ಬಾಲ ಎದೆಭಾಗದಲ್ಲಿ ನವಿಲಿನ ಪುಕ್ಕಗಳ ಸಂಯೋಜನೆ ಹಾಗೂ ದೇಹ ಭಾಗದಲ್ಲಿ ಉರ್ದೂ ಲಿಪಿಯನ್ನು ಹೊಂದಿದೆ. ಚಿತ್ರದ ಹಿನ್ನೆಲೆಯಲ್ಲಿ ನೈಸರ್ಗಿಕ ಚಿತ್ರವಿನ್ಯಾಸವು ರೂಪುಗೊಂಡಿದ್ದು, ಚಿತ್ರವು ರೇಖಾ ಪ್ರಾಧಾನ್ಯತೆಯಿಂದ ಪ್ರಕಟಗೊಂಡಿದೆ.

**ಚಿತ್ರಸಂಖ್ಯೆ ೦೩. ಒಂಟೆ ರೂಪದಲ್ಲಿರುವ ಚಿತ್ರ**

ಕಪ್ಪು ಬಣ್ಣದ ರೇಖಾ ಪ್ರಧಾನವಾದ ಈ ಚಿತ್ರದಲ್ಲಿ ಚಲನೆಯುಕ್ತ ಒಂಟೆಯ ಚಿತ್ರವನ್ನು ರಚಿಸಿದ್ದು, ಅದರ ದುಬ್ಬವನ್ನು ನೀಲವರ್ಣದಿಂದ ಸಂಯೋಜಿಸಲಾಗಿದೆ. ಉಳಿದಂತೆ ಉರ್ದುಲಿಪಿಯನ್ನು ಸಂಯೋಜಿಸಲಾಗಿದ್ದು, ಹಿನ್ನೆಲೆಯಲ್ಲಿ ಹಸಿರು ಬಣ್ಣದ ನೈಸರ್ಗಿಕ ಚಿತ್ರವಿನ್ಯಾಸವು ಚಿತ್ರಿತಗೊಂಡಿದೆ. ಹಿನ್ನೆಲೆಯು ಬಿಳಿವರ್ಣದಿಂದ ಲೇಪನಗೊಂಡಿದೆ.

**ಚಿತ್ರಸಂಖ್ಯೆ ೦೪ ಕುದುರೆ ರೂಪದಲ್ಲಿರುವ ಚಿತ್ರ**

ಈ ಚಿತ್ರದಲ್ಲಿ ರೇಖಾಪ್ರಧಾನವಾದ ಕುದುರೆಯ ಚಿತ್ರವು ಚಲನೆಯುಕ್ತವಾಗಿದ್ದು, ದಷ್ಟಪುಷ್ಟ ಅಂಗಸೌಷ್ಠವನ್ನು ಹೊಂದಿದೆ. ಇಲ್ಲಿ ಕುದುರೆಯನ್ನು ಕುಣಿಯುತ್ತಿರುವಂತೆ ಭಂಗಿಯಲ್ಲಿ ಚಿತ್ರಿಸಲಾಗಿದೆ. ದೇಹದಲ್ಲಿ ಉರ್ದು ಲಿಪಿಯನ್ನು ಬರೆಯಲಾಗಿದ್ದು, ದಪ್ಪರೇಖೆಗಳಿಂದ ವಿನ್ಯಸಗೊಂಡಿದೆ. ಹಿನ್ನೆಲೆಯಲ್ಲಿ ನೈಸರ್ಗಿಕ ನಕ್ಷೆಯು ಹಸಿರು ಬಣ್ಣದಿಂದ ಲೇಪನಗೊಂಡಿದೆ. ಚಿತ್ರದ ಸುತ್ತಲೂ ಎಲೆಗಳಿಂದ ಕೂಡಿದ ಚಿತ್ರವಿನ್ಯಾಸವು ರಚನೆಗೊಂಡಿದೆ.

## II. ಗಾಜಿನ ಮೇಲಿನ ಧಾರ್ಮಿಕೇತರ ಚಿತ್ರಗಳು

ಗಾಜಿನ ಮೇಲಿನ ಧಾರ್ಮಿಕೇತರ ಚಿತ್ರಗಳನ್ನು ನಾಲ್ಕು ರೀತಿಯಲ್ಲಿ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲು ಯತ್ನಿಸಿದೆ.

**೦೧. ಗಾಜಿನ ಮೇಲಿನ ಸಾಮಾಜಿಕ ಚಿತ್ರಗಳು**

**೦೨. ಗಾಜಿನ ಮೇಲಿನ ಐತಿಹಾಸಿಕ ಚಿತ್ರಗಳು**

**೦೩. ಗಾಜಿನ ಮೇಲಿನ ನಿಸರ್ಗದೃಶ್ಯ ಚಿತ್ರಗಳು**

**೦೪. ಗಾಜಿನ ಮೇಲಿನ ಅಲಂಕಾರಿಕ ಚಿತ್ರಗಳೆಂದು**

### ೦೧. ಗಾಜಿನ ಮೇಲಿನ ಸಾಮಾಜಿಕ ಚಿತ್ರಗಳು

ಮನುಷ್ಯನ ಸಾಮಾಜಿಕ ಬದುಕಿನ ಆಯಾಕಾಲಮಾನದ ಚಿತ್ರಣವನ್ನು ಕಟ್ಟಿಕೊಡುವ ಅನೇಕ ಗಾಜಿನ ಮೇಲಿನ ಚಿತ್ರಗಳು ಕರ್ನಾಟಕದಲ್ಲಿ ಕಂಡುಬರುತ್ತವೆ. ಅಂದರೆ ಮನುಷ್ಯನ ಶೃಂಗಾರಮಯ ಬದುಕು, ವ್ಯಕ್ತಿತ್ವ ಹಾಗೂ ಅವರ ವೈಭವದ ಬದುಕನ್ನು ಕಟ್ಟಿಕೊಡುವ ರೀತಿಯನ್ನು ಇಲ್ಲಿ ಕಂಡು ಬರುವ ಗಾಜಿನ ಚಿತ್ರಗಳು ನಿರ್ದೇಶಿಸುತ್ತವೆ. ಅವುಗಳನ್ನು ಪ್ರತಿನಿಧಿಸುವ ಗಾಜಿನ ಚಿತ್ರಗಳನ್ನು ಅ. ಸ್ತ್ರೀ ಪುರುಷರ ಶೃಂಗಾರದ ಚಿತ್ರಗಳು, ಬ. ಸ್ತ್ರೀ ಪುರುಷರ ಶೃಂಗಾರೇತರ ಚಿತ್ರಗಳೆಂದು ವಿಭಾಗಿಸಿಕೊಂಡು ಇಲ್ಲಿ ಅಧ್ಯಯನ ಮಾಡಲಾಗಿದೆ.

### ಅ. ಸ್ತ್ರೀ – ಪುರುಷರ ಶೃಂಗಾರದ ಚಿತ್ರಗಳು

ಮನುಷ್ಯನು ಭಾವುಕ ಜೀವಿ. ಹಣ, ಅಂತಸ್ತು, ಅಧಿಕಾರದ ಜೊತೆಗೆ ವಿಲಾಸಿ ಬದುಕನ್ನು ಕಳೆಯಲು ಪ್ರಯತ್ನಿಸಿದವನು. ಅದಕ್ಕೆ ನಮ್ಮ ಪೂರ್ವಜರೂ ಹೊರತಾಗಿಲ್ಲ. ಅವರಿಗಿದ್ದ ಸೌಂದರ್ಯಪ್ರಜ್ಞೆ, ಅಲಂಕಾರ ಪ್ರಜ್ಞೆ, ಗಂಡು ಹೆಣ್ಣುಗಳ ಪ್ರೇಮಮಯ ಬದುಕು, ಕಲಾ ಪ್ರೇಮ, ಕಾಮ ಇತ್ಯಾದಿ ಸಂಗತಿಗಳು ಉತ್ಕೃಷ್ಟ ರೂಪದಲ್ಲಿದ್ದವೆಂದು ಹೇಳಬಹುದು. ಅವರ ಶೃಂಗಾರಮಯ ಬದುಕನ್ನು ಇಲ್ಲಿ ಕಂಡು ಬರುವ ಗಾಜಿನ ಮೇಲಿನ ಚಿತ್ರಗಳು ತಿಳಿಸಿಕೊಡುತ್ತವೆ.

ಶೃಂಗಾರಮಯ ಬದುಕನ್ನು ಅರಹುವ ಗಾಜಿನ ಮೇಲಿನ ಚಿತ್ರಗಳಲ್ಲಿ ಗಂಡು ಹೆಣ್ಣುಗಳ ಪರಸ್ಪರ ಪ್ರೇಮ ಸಲ್ಲಾಪಕ್ಕೆ ಸಂಬಂಧಿಸಿದ ಹಾಗೂ ಸಂಗೀತ, ನೃತ್ಯ, ಆಭರಣಗಳ ಹಾಗೂ ವೇಷ ಭೂಷಣಗಳಿಂದ ಶೃಂಗಾರಗೊಂಡ ಸ್ತ್ರೀ–ಪುರುಷರ ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತವೆ. ಅವುಗಳನ್ನು ಇಲ್ಲಿ ವಿವೇಚಿಸಲಾಗಿದೆ. ಈ ಬಗೆಯ ನೂರಾರು ಕಲಾಕೃತಿಗಳು ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಕಂಡು ಬರುತ್ತವೆ.

### ಚಿತ್ರಸಂಖ್ಯೆ ೦೧, ೦೨, ೦೩ ಪ್ರೇಮ ಸಲ್ಲಾಪದಲ್ಲಿ ನಿರತ ದಂಪತಿಗಳು

ಇಲ್ಲಿ ರಚನೆಗೊಂಡಿರುವ ಚಿತ್ರಗಳಲ್ಲಿ ಪ್ರೇಮಿಗಳು ಪರಸ್ಪರ ಅಪ್ಪುಗೆಯಲ್ಲಿರುವ ಮೈಯಾರದ ಭಾವ ಭಂಗಿಯಲ್ಲಿರುವ ಹಾಗೂ ಒಬ್ಬರಿಗೊಬ್ಬರು ಕಾಮ ಭಾವನೆಗಳನ್ನು ವಿನಿಮಯಮಾಡಿಕೊಳ್ಳುತ್ತಿರುವ ಸಂಗತಿಯನ್ನು ನಿರ್ದೇಶಿಸುತ್ತವೆ. ಈ ಮೂರು ಚಿತ್ರಗಳಲ್ಲಿ ಪ್ರೇಮಿಗಳ ಉಡುಗೆ ತೊಡುಗೆಗಳು ಒಂದೇ ರೀತಿಯಲ್ಲಿ ರಚನೆಗೊಂಡಿವೆ. ರೇಖಾ ವಿನ್ಯಾಸ, ವರ್ಣವೈವಿಧ್ಯತೆ, ಚಿತ್ರವಿನ್ಯಾಸಗಳು ಹಾಗೂ ಪ್ರತಿಮಾಲಕ್ಷಣಗಳು ಒಂದೇಯಾಗಿದ್ದು, ಈ ಚಿತ್ರಗಳನ್ನು ಒಬ್ಬನೇ

ಕಲಾವಿದ ರಚಿಸಿರಬಹುದೆಂದು ತೋರುತ್ತದೆ. ಈ ಚಿತ್ರಗಳ ಅಳತೆಯು ಒಂದೇ ರೀತಿಯಲ್ಲಿ ಕಂಡು ಬರುತ್ತಿದೆ. ಚಿತ್ರ ೦೧ ರಲ್ಲಿ ಪುರುಷನು ಕಪ್ಪು ಕುರ್ತಾ, ಕೆಂಪು ಪಾಯಿಜಾಮನ್ನು ಧರಿಸಿರುವನು. ಕುರ್ತಾವು ಬೆಲೆವುಳ್ಳದ್ದೆಂದು ತಿಳಿಸಲು ಚಿನ್ನದ ಕಸೂತಿಯ ಚಿತ್ತಾರಗಳು ಹಾಗೂ ಅಂಚಿನಲ್ಲಿ ಚಿನ್ನದ ಎಲೆಗಳಿಂದ ಹೆಣೆದ ನೆಯ್ಗೆಚಿತ್ತಾರವು ಕಪ್ಪು ಬಣ್ಣದ ಕುರ್ತಾದಲ್ಲಿ ಕಂಡು ಬರುತ್ತವೆ. ಮೀಸೆ, ಬಾಚಿದ ತಲೆಗೂದಲು ಆ ವ್ಯಕ್ತಿಯ ಶ್ರೀಮಂತ ಪೌರುಷವನ್ನು ತೋರಿಸುತ್ತವೆ. ಇಲ್ಲಿ ಸ್ತ್ರೀಯು ಹಸಿರು, ರವಿಕೆ, ಬಿಳಿ ಲಂಗ ಹಾಗೂ ಕೆಂಪು ದಾವಣಿಯನ್ನು ಹೊಂದಿದ್ದು, ಇವುಗಳ ಒಡಲು ಹಾಗೂ ಅಂಚುಗಳಲ್ಲಿ ವರ್ಣಮಯ ಚಿತ್ರ ಪಟ್ಟಿಕೆಗಳು ರಚನೆಗೊಂಡಿವೆ. ಬೆಲೆಬಾಳುವ ಕಂಠಾಭರಣ, ಚಿನ್ನದ ಬಳೆ, ಚಿನ್ನದ ಗಾಲ್ಗೆಜ್ಜೆ, ಕರ್ಣಾಭರಣಗಳಿಂದ ಶೃಂಗಾರಗೊಂಡಿರುವಳು. ಇವರಿಬ್ಬರೂ ಪರಸ್ಪರ ಅಪ್ಪಿಕೊಂಡು ಮುದ್ದು ಮಾಡುತ್ತಿರುವ ಭಂಗಿಯಲ್ಲಿ ಚಿತ್ರಿತಗೊಂಡಿರುವರು. ಹಿನ್ನೆಲೆಯಲ್ಲಿ ನೀಲಿ ಬಣ್ಣವನ್ನು ಲೇಪಿಸಿದ್ದು, ಕೆಂಪು ನೆಲಹಾಸನ್ನು ರಚಿಸಲಾಗಿದೆ. ಇದೇ ವಿವರವನ್ನು ಚಿತ್ರ ೦೨ ಹಾಗೂ ೦೩ ರಲ್ಲಿ ಬಿಂಬಿಸಲಾಗಿದೆ. ಚಿತ್ರ ೦೨ ರಲ್ಲಿ ಪುರುಷನು ಮಂಚದ ಮೇಲೆ ಕುಳಿತು ಪ್ರೇಯಸಿಯನ್ನು ಬಲವಾಗಿ ಅಪ್ಪಿಕೊಂಡಿರುವನು. ಪ್ರೇಯಸಿಯ ಗಲ್ಲಕ್ಕೆ ಗಲ್ಲಕೊಟ್ಟು ಮೋಹಮಾಡುತ್ತಿರುವನು. ಎಡಗೈಯನ್ನು ಟೊಂಕಕ್ಕೆ ಇಟ್ಟುಕೊಂಡು ಪೌರುಷವನ್ನು ಪ್ರದರ್ಶಿಸುತ್ತಿರುವಂತೆ ಬಿಂಬಿತವಾಗಿದ್ದಾನೆ. ಹಿನ್ನೆಲೆಯಲ್ಲಿ ಗಾಜಿನ ತೂಗುದೀಪಗಳು, ಅಲಂಕಾರಿಕ ಕಂಬಗಳ ವಿನ್ಯಾಸಗಳು ರಚನೆಗೊಂಡಿವೆ. ಈ ಚಿತ್ರವು ಸಹ ಶ್ರೀಮಂತರ ಶೃಂಗಾರಮಯ ಬದುಕನ್ನು ಪ್ರಕಟಪಡಿಸುತ್ತಿವೆ. ಚಿತ್ರ ೦೩ ರಲ್ಲಿ ಪ್ರೇಮಿಯು ಬೆಲೆಬಾಳುವ ಕುರ್ಚಿಯ ಮೇಲೆ ಕಾಲುಮೇಲೆ ಕಾಲುಹಾಕಿ ಗಾಂಭೀರ್ಯದಿಂದ ಕುಳಿತಿರುವನು. ಪ್ರೇಯಸಿಯು ಪ್ರೇಮಿಯ ಭುಜದ ಮೇಲೆ ಕೈ ಆಣಿಸಿ ಎಡಗೈಯನ್ನು ಟೊಂಕದ ಮೇಲೆ ಇರಿಸಿ ವೈಯಾರ ಮಾಡುತ್ತಿರುವಂತೆ ಚಿತ್ರಿತಗೊಂಡಿರುವಳು. ಇವರಿಬ್ಬರ ವೇಷ ಭೂಷಣಗಳು, ಹಿನ್ನೆಲೆಯ ವೈಭವದ ಪೀಠೋಪಕರಣಗಳು ರೇಖೆ, ವರ್ಣ ಹಾಗೂ ಅಲಂಕಾರತೆಯು ಉತ್ತಮವಾಗಿ ಮೂಡಿಬಂದಿವೆ. ಈ ಮೂರು ಚಿತ್ರಗಳಲ್ಲಿ ಬಿಂಬಿತವಾಗಿರುವ ಪ್ರೇಮಿಗಳ ಭಾವಲಕ್ಷಣಗಳು ವೈವಿಧ್ಯಮಯವಾಗಿ ನಿರೂಪಿತಗೊಂಡಿವೆ.

**ಚಿತ್ರಸಂಖ್ಯೆ ೦೪, ೦೫ ಯುವ ಪ್ರೇಮಿಗಳ ಸಲ್ಲಾಪ**

ಈ ಎರಡು ಚಿತ್ರಗಳು ಗುಳೇದಗುಡ್ಡದ ಶ್ರೀ ಬಸವಪ್ರಭು ಗಂಗಾವತಿಯವರ ಮನೆಯಲ್ಲಿ ಸಂಗ್ರಹಗೊಂಡಿವೆ. ಎರಡು ಚಿತ್ರಗಳು ೪೮ x ೬೫ ಸೆಂ.ಮೀ ಅಳತೆಯನ್ನು ಹೊಂದಿವೆ. ಚಿತ್ರ ೦೪ ರಲ್ಲಿ ಕಪ್ಪುಕೋಟು, ಕಪ್ಪುಪ್ಯಾಂಟು ಧರಿಸಿದ ಹಾಗೂ ಆಭರಣಗಳಿಂದ ಭೂಷಿತನಾದ ಯುವ ಪ್ರೇಮಿಯು ಪ್ರೇಯಸಿಯನ್ನು ಭಜಬಳಸಿ ಬರಸೆಳೆಯುತ್ತಿರುವನು. ಪ್ರೇಯಸಿಯು ಬಿಳಿ ರವಿಕೆ, ಕೆಂಪು ಬಣ್ಣದ ಲಂಗವನ್ನು ಹಾಗೂ ದಾವಣಿಯನ್ನು ಹೊಂದಿದ್ದು ಅವುಗಳು ಅಲಂಕಾರಿಕ ಹಾಗೂ ಜ್ಯಾಮಿತಿಕ ಚಿತ್ರ ಪಟ್ಟಿಕೆಗಳಿಂದ ಕೂಡಿದ ನಕ್ಷೆಗಳು ರಚನೆಗೊಂಡಿವೆ. ಕಂಠಾಭರಣಗಳು, ಬೈತಲೆಮಣಿ, ಚಿನ್ನ ಹಾಗೂ ಮುತ್ತಿನ ಬಳೆಗಳಿಂದ ಅಲಂಕಾರ ಭೂಷಿತಳಾಗಿದ್ದಾಳೆ. ಬಲಗೈ ಬೆರಳ ಮೇಲೆ ಗಿಳಿಯ ಚಿತ್ರವಿದ್ದು ಪ್ರೇಮದ ಸಾಂಕೇತಿಕತೆಯನ್ನು ಬಿಂಬಿಸುತ್ತದೆ. ಇಬ್ಬರ ಮುಖಭಾವ ಲಕ್ಷಣಗಳಲ್ಲಿ ಪ್ರೇಮ ಭಾವನೆಯು ಉದ್ದೀಪನಗೊಂಡಿದೆ. ಬಟ್ಟಲು ಕಂಗಳು, ಕೆಂಪುತುಟಿಗಳು

ಹಾಗೂ ನಖಶಿಖಗಳು ಈ ಸನ್ನಿವೇಶಕ್ಕೆ ತಕ್ಕಂತೆ ಮೂಡಿಬಂದಿವೆ. ಇಲ್ಲಿ ಕಲಾವಿದನು ಸೂಕ್ಷ್ಮರೇಖೆ ಹಾಗೂ ವರ್ಣ ಸಂಯೋಜನೆಗಳಿಂದ ಆಕರ್ಷಕವಾಗಿ ನಿರೂಪಣೆ ಮಾಡಿದ್ದಾನೆ.

ಚಿತ್ರ ೦೫ ರಲ್ಲಿ ಪ್ರೇಯಸಿಯನ್ನು ಪ್ರೇಮಿಯು ಕದ್ದು ಮುಚ್ಚಿ ಸಂದಿಸುತ್ತಿರುವಂತೆ ಚಿತ್ರಿತಗೊಂಡಿರುವರು. ಇಲ್ಲಿ ಯುವ ಪ್ರೀಯತಮನು ಏಣಿ ಏರಿಕೊಂಡು ಗುಟ್ಟಾಗಿ ತನ್ನ ಪ್ರೀಯತಮೆಯನ್ನು ಮುದ್ದು ಮಾಡುತ್ತಿರುವನು. ಪ್ರತಿಯಾಗಿ ಅವನ ಪ್ರೇಯಸಿಯೂ ಸಹ ಅವನನ್ನು ಅಪ್ಪಿಕೊಂಡು ಮುದ್ದು ಮಾಡುತ್ತಿರುವಳು. ಇಲ್ಲಿ ಪ್ರೀಯತಮನು ಕಪ್ಪು ಕೋಟು ಹಸಿರು ಪಾಯಿಜಾಮ ಹಾಗೂ ಕಪ್ಪು ಬೂಟೂಗಳನ್ನು ಧರಿಸಿರುವನು. ಚೂಪುಮೀಸೆ, ಬಾಚಿದ ಕೂದಲು, ಕೆಂಪು ಶಲ್ಯವು ಹಾಗೂ ಕತ್ತಿಯು ಅವನ ಉತ್ಕಟ ಪ್ರೇಮಯಾಚನೆಯನ್ನು ಪ್ರಕಟಪಡಿಸುತ್ತವೆ. ಪ್ರೇಯಸಿಯೂ ಸಹ ಸರ್ವಾಲಂಕೃತಳಾಗಿ ಪ್ರೇಮಿಯನ್ನು ಸಂದಿಸುವ ತವಕ ಮುಖದ ಭಾವನೆಯಲ್ಲಿ ತೋರ್ಪಡಿಸುತ್ತದೆ. ಹಿನ್ನೆಲೆಯಲ್ಲಿ ಅರಮನೆಯ ಒಳಾಂಗಣದ ವೈಭವದ ವಾಸ್ತುದೃಶ್ಯವು ಚಿತ್ರಿತಗೊಂಡಿದೆ. ವರ್ಣಮಯ ಪರದೆಗಳು ಸಂಯೋಜನೆಗೊಂಡಿವೆ. ಇಲ್ಲಿ ಕಲಾವಿದನು ಸೂಕ್ಷ್ಮರೇಖೆಗಳಿಂದ, ವರ್ಣಛಾಯೆಗಳಿಂದ ಪ್ರೇಮಿಗಳ ಉತ್ಕಟ ಪ್ರೇಮಭಾವನೆಯನ್ನು ನಿರೂಪಿಸಿದ್ದಾನೆ.

**ಚಿತ್ರಸಂಖ್ಯೆ ೦೬, ೦೭, ೦೮, ೦೯, ೧೦ ಸರಸ ಸಲ್ಲಾಪದಲ್ಲಿ ನಿರತರಾದ ಪ್ರೇಮಿಗಳು**

ಈ ಐದು ಚಿತ್ರಗಳು ಗುಳೇದಗುಡ್ಡದ ಶ್ರೀ ಅಶೋಕ ತಿಪ್ಪಾರವರ ಮನೆಯಲ್ಲಿ ಕಂಡುಬರುತ್ತಿವೆ. ಈ ಐದು ಚಿತ್ರಗಳು ೪೮ x ೬೫ ಸೆಂ.ಮೀ ಅಳತೆಯಲ್ಲಿ ಸಿದ್ಧಗೊಂಡಿವೆ. ಚಿತ್ರ ೦೬ ರಲ್ಲಿ ಸರ್ವಾಲಂಕೃತಳಾದ ಪ್ರೇಯಸಿಯು ತಾವರೆಯನ್ನು ಹಿಡಿದು ಪ್ರೇಮಿಗೆ ನೀಡುತ್ತಿರುವಂತೆ ಚಿತ್ರಿತಗೊಂಡಿರುವಳು. ಪ್ರೇಮಿಯು ಮುತ್ತು ರತ್ನ ಹಾಗೂ ವಜ್ರಖಚಿತ ವಸ್ತ್ರಾಭರಣಗಳಿಂದ ಭೂಷಣಗೊಂಡು ಪ್ರೇಮಿಯನ್ನು ಮೈದಡುವುತ್ತಿರುವಂತೆ ಬಿಂಬಿತಗೊಂಡಿರುವನು. ಚಿತ್ರದಲ್ಲಿ ಅಲಂಕಾರದ ಆಶಯ ವೈಭವಿಕರಣಗೊಂಡಿದೆ. ಹಾಲು ಬಿಳುಪು ಮೈಬಣ್ಣವನ್ನು ಹೊಂದಿರುವ ಯುವ ಪ್ರೇಮಿಗಳು ಪ್ರೇಮಯಾಚನೆಯಲ್ಲಿ ತೊಡಗಿರುವರು. ಉತ್ತಮ ಹಾಗೂ ಆರೋಗ್ಯಪೂರ್ಣ ದೈಹಿಕ ಲಕ್ಷಣಗಳನ್ನು ಈ ಆಕೃತಿಗಳಲ್ಲಿ ಕಲಾಕಾರನು ತರಲು ಪ್ರಯತ್ನಿಸಿದ್ದಾನೆ. ರೇಖಾ ಲಾವಣ್ಯ, ಸೂಕ್ಷ್ಮಚಿತ್ರವಿನ್ಯಾಸ, ಕೆಂಪು ಹಾಗೂ ಹಳದಿ ವರ್ಣಗಳ ಸಂಯೋಜನೆ ಭಾವಪೂರ್ಣವಾಗಿ ಮೂಡಿಬಂದಿದೆ.

ಚಿತ್ರ ೦೭ ರಲ್ಲಿ ಯುವ ಪ್ರೇಮಿಯು ತನ್ನ ಪ್ರೇಯಸಿಯನ್ನು ಅಪ್ಪಿಕೊಂಡು ಬರಸೆಳೆಯುತ್ತಿರುವಂತೆ ಚಿತ್ರಿತಗೊಂಡಿರುವನು. ಇಲ್ಲಿ ಪ್ರೇಯಸಿಯು ನಾಚಿಕೊಂಡು ಮೈಮರೆತಿರುವಂತೆ ಬಿಂಬಿತಗೊಂಡಿರುವಳು. ಬಿಳಿ ಲಂಗ, ಕೆಂಪು ರವಿಕೆ, ಕಪ್ಪುರೇಖೆಗಳಿಂದ ಕೂಡಿದ ದುಪ್ಪಟ, ಡಾಬು, ಚಿನ್ನಾಭರಣಗಳು ಹಾಗೂ ದೈಹಿಕ ಚಲನೆಯು ಆಕರ್ಷಕವಾಗಿ ಚಿತ್ರಿತಗೊಂಡಿವೆ. ಪ್ರೀಯತಮನು ಸ್ವರ್ಣ ರೇಖಾವಿನ್ಯಾಸದಿಂದ ಕೂಡಿದ ಕಪ್ಪುಕೋಟು, ತಿಳಿಗುಲಾಬಿ ಪ್ಯಾಂಟು ಹಾಗೂ ಕಸಿಕಟ್ಟಿದ ಬೂಟುಗಳನ್ನು ಧರಿಸಿ ಆಕರ್ಷಕ ವ್ಯಕ್ತಿತ್ವವನ್ನು ಪ್ರದರ್ಶಿಸುತ್ತಿದ್ದಾನೆ. ಕುಡಿಮೀಸೆ, ಬಾಚಿದ ಕೂದಲು, ಗುಂಡು ಟೋಪಿ ಮತ್ತು ತುಟಿಗಳಲ್ಲಿ ಮಂದಹಾಸವು ಎದ್ದು ತೋರುತ್ತಿದೆ. ಈ ಚಿತ್ರವು ಪ್ರಭಾವಿ ವ್ಯಕ್ತಿಯ ಬದುಕನ್ನು ನಿರೂಪಿಸುತ್ತದೆ.

ಚಿತ್ರ ೦೮ ರಲ್ಲಿ ಕಮಕೋಟು, ಮತ್ತು ಹರಳುಗಳಿಂದ ಕೂಡಿದ ಗುಂಡು ಟೋಪಿ, ಬಿಗಿಯಾದ ಪಾಯಿಜಾಮ, ಬೂಟು, ಮುತ್ತು ಹಾಗೂ ಚಿನ್ನದ ಸರಗಳಿಂದ ಭೂಷಿತನಾದ ಪ್ರೀಯತಮನು ತನ್ನ ಪ್ರೀಯತಮೆಯನ್ನು ಬರಸೆಳೆಯುತ್ತಿರುವನು. ಇವಳು ಚಿತ್ರವಿನ್ಯಾಸಗಳಿಂದ ಕೂಡಿದ ಕೆಂಪು ರವಿಕೆ, ಕಚ್ಚೆಹಾಕಿದ ಕೆಂಪು ಸೀರೆಯನ್ನು ಧರಿಸಿದ್ದು, ಚಿನ್ನಾಭರಣಗಳಿಂದ ಭೂಷಿತಗಳಾಗಿ ಶ್ವೇತಗುಲಾಬಿಯನ್ನು ಕೈಯಲ್ಲಿ ಹಿಡಿದು ಪ್ರೇಮಯಾಚನೆಯನ್ನು ಮಾಡುತ್ತಿರುವಳು. ಇಬ್ಬರೂ ಹಾಲು ಬಿಳುಪಿನ ಮೈಬಣ್ಣವನ್ನು ಹೊಂದಿದ್ದು, ಆರೋಗ್ಯ ಪೂರ್ಣದೇಹ ಸಿರಿಯನ್ನು ಈ ಆಕೃತಿಗಳು ಪ್ರತಿನಿಧಿಸುತ್ತವೆ. ಚಿತ್ರವು ಆ ಕಾಲದ ಶ್ರೀಮಂತ ಕುಟುಂಬದ ದಂಪತಿಗಳ ವಿಲಾಸಿ ಬದುಕನ್ನು ಕಲ್ಪಿಸುತ್ತವೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ಭಾವನಾಪೂರ್ಣವಾಗಿ ಮೂಡಿಬಂದಿದ್ದು, ಇದೇ ವಿವರವನ್ನು ಚಿತ್ರ ೧೦ ರಲ್ಲಿ ತರಲಾಗಿದೆ. ಇಲ್ಲಿ ಬಿಂಬಿತವಾಗಿರುವ ಪ್ರೇಮಿಗಳು ನೃತ್ಯ ಮಾಡುತ್ತಿರುವಂತೆ ಚಿತ್ರಿತಗೊಂಡಿರುವರು. ಪ್ರೇಯಸಿಯ ಮುಖದಲ್ಲಿ ಹೆಣ್ತನದ ಲಜ್ಜೆಯು ಉತ್ತಮವಾಗಿ ಪ್ರಕಟಗೊಂಡಿದ್ದು, ನಮ್ಮ ಗಾಜಿನ ಕಲಾವಿದರು ಅಂದಿನ ಶ್ರೀಮಂತ ಗಂಡು ಹೆಣ್ಣುಗಳ ಸೂಕ್ಷ್ಮ ಸಂವೇದನೆಗಳನ್ನು ಅರಿತುಕೊಂಡು ರೇಖೆ ಹಾಗೂ ವರ್ಣಗಳಿಂದ ಚಿತ್ರಣ ಮಾಡಿದ್ದಾರೆಂದು ತೋರುತ್ತದೆ ಹಾಗೂ ಅವರ ಮಾನಸಿಕ ತುಮುಲಗಳನ್ನು ಚನ್ನಾಗಿ ಅರಿತಿರಬೇಕೆಂದು ಈ ಚಿತ್ರಗಳಿಂದ ತಿಳಿಯಬಹುದು.

ಚಿತ್ರ ೦೯ ರಲ್ಲಿ ಪ್ರೇಯಸಿಯು ಆಕರ್ಷಕ ದೈಹಿಕ ಲಕ್ಷಣಗಳನ್ನು ಹೊಂದಿದ್ದು, ವಸ್ತ್ರಾಭರಣಗಳಿಂದ ಸರ್ವಾಲಾಂಕೃತಗೊಂಡು ಪ್ರೇಮಯಾಚನೆಯನ್ನು ಮಾಡುತ್ತಿರುವಂತೆ ಚಿತ್ರಿತಗೊಂಡಿರುವಳು. ಕಪ್ಪು ರವಿಕೆ, ಚಿತ್ರವಿನ್ಯಾಸಗಳಿಂದ ಕೂಡಿದ ಕೆಂಪು ಸೀರೆ ಹಾಗೂ ದುಪ್ಪಟವನ್ನು ಧರಿಸಿದ್ದಾಳೆ. ತಲೆಯ ಮೇಲೆ ಟೋಪಿ, ಕಂಠಾಭರಣಗಳು, ಡಾಬು, ಒಡ್ಯಾಣ, ಚಿನ್ನದ ಬಳೆಗಳು ಚಿನ್ನದ ಕಾಲ್ಗೆಜ್ಜೆಗಳಿಂದ ಕಂಗೊಳಿಸುತ್ತಿರುವಳು. ಮುಖದಲ್ಲಿ ಪ್ರೇಮಭಾವವು ಉದ್ದೀಪನಗೊಂಡಿದೆ. ಹಿನ್ನೆಲೆಯಲ್ಲಿ ಪ್ರೇಮಿಯು ಚಿನ್ನದ ದೋಣಿಯಲ್ಲಿ ಬೆಲೆಬಾಳುವ ವಸ್ತ್ರಾಭರಣಗಳನ್ನು ಧರಿಸಿ ವೀಣೆಯನ್ನು ನುಡಿಸುತ್ತಾ ನಿಂತಿರುವಂತೆ ಚಿತ್ರಿತಗೊಂಡಿರುವನು. ಅಲಂಕೃತ ಕಂಬ, ವರ್ಣಮಯ ಪರದೆಗಳು ಸಂಯೋಜನೆಗೊಂಡಿದ್ದು, ನದಿಯ ಕಲ್ಪನೆಯನ್ನು ಈ ಚಿತ್ರದಲ್ಲಿ ತರಲಾಗಿದೆ. ಸೂಕ್ಷ್ಮರೇಖಾ ವಿನ್ಯಾಸ, ಚಿತ್ರ ಪಟ್ಟಿಕೆಗಳು, ಆಕೃತಿಗಳಲ್ಲಿ ದೇಹದ ದುಂಡುತನ ಹಾಗೂ ವರ್ಣಛಾಯೆಗಳಿಂದ ಉತ್ತಮ ಭಾವಾಭಿವ್ಯಕ್ತಿಯು ವೃದ್ಧಿಗೊಂಡಿದೆ. ಈ ಚಿತ್ರದಲ್ಲಿ ಅಲಂಕಾರದ ವೈಭವವು ಉದ್ದೀಪನಗೊಂಡಿದೆ.

**ಚಿತ್ರ ಸಂಖ್ಯೆ ೧೧, ೧೨, ೧೩, ೧೪ ಸರಸ ಸಲ್ಲಾಪದಲ್ಲಿ ನಿರತ ಯುವ ಪ್ರೇಮಿಗಳು**

ಇಲ್ಲಿ ಚಿತ್ರಿತಗೊಂಡಿರುವ ಈ ನಾಲ್ಕು ಚಿತ್ರಗಳು ಬಾಗಲಕೋಟೆಯ ಶ್ರೀ ಎಸ್. ಬಿ. ಹೊಕ್ರಾಣಿಯವರ ಮನೆಯಲ್ಲಿ ಲಭ್ಯ ಇವೆ. ನಾಲ್ಕೂ ಚಿತ್ರಗಳು ಹಿಂದಿನ ಕಾಲದ ಪ್ರಭಾವಿ ವ್ಯಕ್ತಿಗಳು ತಮ್ಮ ವೈಭೋಗವನ್ನು ಅನುಭವಿಸುತ್ತಿದ್ದ ವಿವಿಧ ಸ್ಥರಗಳನ್ನು ಕಲಾವಿದರು ಇಲ್ಲಿ ಪ್ರಕಟಪಡಿಸಿದ್ದಾರೆ. ಆ ಬದುಕನ್ನು ಈ ಗಾಜಿನ ಚಿತ್ರಗಳು ಪ್ರತಿನಿಧಿಸುತ್ತವೆಂದರೆ ತಪ್ಪಾಗಲಾರದು. ಚಿತ್ರ ೧೧ ರಲ್ಲಿ ಕೋಟು ಸೂಟುಗಳಿಂದ ಭೂಷಿತನಾದ ಯುವಕನು ವಸ್ತ್ರಾಲಂಕೃತಳಾದ ಯುವತಿಯ

ಜೊತೆಗೆ ಮೋಜು ಮಾಡುತ್ತಿರುವನು. ಯಾಕೆಂದರೆ ಅವರ ಭಾವಲಕ್ಷಣಗಳು ಇಲ್ಲಿ ಅಭಿವ್ಯಕ್ತಪಡಿಸುತ್ತವೆ. ಕಪ್ಪು, ಕೆಂಪು, ಬಿಳಿ ಹಾಗೂ ಚಿನ್ನದ ರೇಖಿನಿಂದ ಬಿಂಬಿತವಾದ ಈ ಸಂಯೋಜನೆಯು ಸೂಕ್ಷ್ಮರೇಖೆಯ ವಿನ್ಯಾಸಗಳಿಂದ, ಅಲಂಕಾರಿಕ ಹಾಗೂ ಜಾಮಿತಿಕ ಚಿತ್ರಪಟ್ಟಿಕೆಗಳಿಂದ ಸುಂದರವಾಗಿ ರೂಪಗೊಂಡಿದೆ.

ಚಿತ್ರ ೧೨ ರಲ್ಲಿ ಯುವ ಪ್ರೇಮಿಯು ಆ ಯುವತಿಯನ್ನು ಎರಡು ಕಾಲುಗಳಿಂದ ಬಂಧಿಸಿ ಬಿಗಿಯಾಗಿ ಅಪ್ಪಿಕೊಂಡಿದ್ದಾನೆ. ಇಬ್ಬರೂ ಕೆಂಪು ಬಣ್ಣದ ಕುರ್ಚಿಯ ಮೇಲೆ ಕುಳಿತಿರುವರು. ಇಲ್ಲಿ ಯಥಾದೃಷ್ಟಿಯಿಂದ ಸಂಯೋಜನೆಯು ಪ್ರಬುದ್ಧವಾಗಿ ಮೂಡಿಬಂದಿಲ್ಲವಾದರೂ, ಆ ಕಲ್ಪನೆಯನ್ನು ತರಲು ಕಲಾವಿದನು ಪ್ರಯತ್ನಿಸಿದ್ದಾನೆ. ಇಬ್ಬರ ವಸ್ತ್ರಾಭರಣಗಳು ಚಿತ್ರ ೧೧ ರಂತೆ ಮೂಡಿಬಂದಿವೆ. ಇಬ್ಬರ ರೂಪಲಕ್ಷಣಗಳು ಒಂದೇ ರೀತಿಯಲ್ಲಿ ರಚನೆಗೊಂಡಿವೆ. ಹಿನ್ನೆಲೆಯಲ್ಲಿ ಅಲಂಕೃತ ಕಂಬಗಳ ವಿನ್ಯಾಸ, ವರ್ಣರಂಜಿತ ಪರದೆಯು ಸಂಯೋಜನೆಗೊಂಡಿದ್ದು, ಶ್ರೀಮಂತಿಕೆಯ ವೈಭವವನ್ನು ಮೆರೆಯುತ್ತಿದೆ. ಆಕೃತಿಗಳ ಯಥಾದೃಷ್ಟಿಯು ಉತ್ತಮವಾಗಿ ಮೂಡಿಲ್ಲವಾದರೂ ಆಕರ್ಷಕ ಭಾವನಿರೂಪಣೆಯನ್ನು ಪ್ರಕಟಪಡಿಸುತ್ತದೆ.

ಚಿತ್ರ ೧೩ ರಲ್ಲಿ ಯುವತಿಯು ಮಿನಿ ಸ್ಕರ್ಟ (ತುಂಡು ಲಂಗ) ರವಿಕೆ, ಹಸಿರು, ಪ್ಯಾಂಟು, ಟೊಪ್ಪಿಗೆ ಹಾಗೂ ಆಕರ್ಷಕ ಬೂಟುಗಳನ್ನು ಧರಿಸಿರುವಳು ಕಂಠ ಹಾಗೂ ಕರ್ಣಾಭರಣಗಳಿಂದ ಅಲಂಕೃತಗೊಂಡಿರುವಳು. ಇವಳ ರೂಪ ಲಕ್ಷಣಗಳು ಪಾಶ್ಚಾತ್ಯ ಸಂಸ್ಕೃತಿಯನ್ನು ಕಲ್ಪಿಸುತ್ತವೆ. ಇಲ್ಲಿ ಯುವಕನು ಬೆಲೆಬಾಳುವ ಕಪ್ಪು ಕೋಟು, ಪ್ಯಾಂಟು ಹಾಗೂ ಬಿಗಿಯಾದ ಕಾಲು ಚೀಲವನ್ನು ಧರಿಸಿರುವನು. ಸೊಂಟಕ್ಕೆ ಖಡ್ಗವನ್ನು ಸಿಕ್ಕಿಸಿಕೊಂಡಿರುವನು ಹಸಿರು ಬೂಟು, ಮುತ್ತಿನ ಟೋಪಿ ಅದಕ್ಕೆ ಹಕ್ಕಿಯ ಮೃದುತುಪ್ಪಳ ಗುಚ್ಚವನ್ನು ಸಿಕ್ಕಿಸಿದ್ದು ಇವನು ಆ ಕಾಲದ ಪ್ರಭಾವಿ ವ್ಯಕ್ತಿಯೆಂದು ಕಲ್ಪಿಸುತ್ತದೆ. ಕುಡಿಮೀಸೆ, ಬಟ್ಟಲು ಕಂಗಳು ಹಾಗೂ ಆಕರ್ಷಕ ನಿಲುವನ್ನು ಹೊಂದಿದ ಇವನು ಆ ಯುವತಿಯ ಜೊತೆ ಮೋಜಿನಲ್ಲಿ ನಿರತನಾಗಿರುವಂತೆ ಬಿಂಬಿತವಾಗಿದ್ದಾನೆ. ರೇಖೆ, ವರ್ಣ ಹಾಗೂ ಅಲಂಕಾರದ ಆಶ್ರಯವು ಈ ಚಿತ್ರದಲ್ಲಿ ಉತ್ತಮವಾಗಿ ಮೂಡಿ ಬಂದಿದೆ.

ಚಿತ್ರ ೧೪ ರಲ್ಲಿ ಯುವ ಪ್ರೇಮಿಗಳು ಚಿತ್ರ ೧೧, ೧೨ ರಂತೆ ರೂಪಲಕ್ಷಣಗಳನ್ನು ಹಾಗೂ ರಚನಾ ಕ್ರಮವನ್ನು ಹೊಂದಿದ್ದು, ಭಾವಭಂಗಿಯಲ್ಲಿ ವೈವಿಧ್ಯತೆಯನ್ನು ಕಾಣಬಹುದಾಗಿದೆ. ಇಲ್ಲಿ ಯುವತಿಯು ಸರ್ವಾಲಂಕೃತಳಾಗಿ ಕೈಯಲ್ಲಿ ಬೀಸಣಿಕೆಯನ್ನು ಹಿಡಿದು, ಚಿನ್ನದ ಮಂಚದ ಮೇಲೆ ಆಶೀನರಾಗಿರುವಳು. ಯುವ ಪ್ರೇಮಿಯು ಠಿವಿಯಿಂದ ಮಂಚದ ಕಂಬಿಗೆ ಕೈ ಆಣಿಸಿ ಒಂದು ಕಾಲನ್ನು ಮಂಚದ ಮೇಲೆ ಇರಿಸಿ ನಿಂತಿರುವನು. ಇಲ್ಲಿನ ಸನ್ನಿವೇಶವು ಆ ವ್ಯಕ್ತಿಯ ಪ್ರಭುತ್ವ ಹಾಗೂ ದರ್ಪವನ್ನು ಪ್ರತಿಬಿಂಬಿಸುತ್ತದೆ. ಚಿತ್ರದ ಹಿನ್ನೆಲೆಯಲ್ಲಿ ಅಲಂಕೃತ ಕಂಬ ಹಾಗೂ ಚಿತ್ರವಿನ್ಯಾಸಗಳಿಂದ ಕೂಡಿದ ಪರದೆಗಳು ಸಂಯೋಜನೆಗೊಂಡಿವೆ. ಅಲಂಕಾರ ಪ್ರಜ್ಞೆಯೂ ಈ ಚಿತ್ರದಲ್ಲಿ ಎದ್ದು ತೋರುತ್ತದೆ.

**ಚಿತ್ರಸಂಖ್ಯೆ ೧೫, ೧೬, ೧೭, ೧೮ ಪ್ರೇಮಾಲಾಪನೆಯಲ್ಲಿ ನಿರತ ದಂಪತಿಗಳು.**

ಇಲ್ಲಿ ರಚನೆಗೊಂಡಿರುವ ನಾಲ್ಕು ಚಿತ್ರಗಳು ಗುಳೇದಗುಡ್ಡದ ಶ್ರೀ ವೀರಸಂಗಪ್ಪ,

ಭಾವಿಯವರ ಮನೆಯಲ್ಲಿ ಲಭ್ಯ ಇವೆ. ಪ್ರೇಮಾಲಾಪಣೆಯಲ್ಲಿ ತೊಡಗಿದ ವಿವಿಧ ಸಂಗತಿಗಳನ್ನು ತೋರುವ ಅನೇಕ ಗಾಜಿನ ಚಿತ್ರಗಳು ಚಿತ್ರಿತಗೊಂಡಿದ್ದರೂ ಪ್ರತಿಯೊಂದು ಚಿತ್ರಗಳಲ್ಲಿ ಕೆಲವು ಸೂಕ್ಷ್ಮ ವೈಪರಿತ್ಯತೆಯನ್ನು ಕಾಣುತ್ತೇವೆ. ವೇಷಭೂಷಣಗಳಲ್ಲಿ, ವಸ್ತ್ರಾಭರಣಗಳಲ್ಲಿ, ವರ್ಣಗಳಲ್ಲಿ ಸಂಯೋಜನೆಯಲ್ಲಿ ಈ ವೈವಿಧ್ಯತೆಯು ತೋರುತ್ತವೆ.

ಚಿತ್ರ ೧೫ ರಲ್ಲಿ ಯುವತಿಯು ತೋಳಿಲ್ಲದ ನಿಲುವಂಗಿಯನ್ನು ಧರಿಸಿದ್ದು ಅಂಗಾಗಗಳು ಸೂಸ್ಪಷ್ಟವಾಗಿ ಎದ್ದು ಕಾಣುವಂತೆ ಬಿಗಿಉಡುಪು ಇದಾಗಿದೆ. ನಿಲುವಂಗಿಯ ಅಂಚು ಹಾಗೂ ಒಡಲು ಚಿತ್ರವಿನ್ಯಾಸಗಳಿಂದ ರಚನೆಗೊಂಡಿದ್ದು, ಹೊಳಪುಳ್ಳ ಗಾಜಿನ ತುಂಡುಗಳಿಂದ ಬಂಧಿಸಿದಂತೆ ಆ ಉಡುಪು ಕಂಡುಬರುತ್ತಿದೆ. ತಲೆಯ ಮೇಲೆ ಗುಂಡು ಟೊಪ್ಪಿಗೆ ಅದಕ್ಕೆ ಮುತ್ತಿನ ತೋರಣ, ಕಂಠ ಹಾಗೂ ಕರ್ಣಾಭರಣಗಳು ಅಲಂಕೃತಗೊಂಡಿವೆ. ಕಪ್ಪು ಕೂದಲು ರಾಸಿಯು ಭುಜದ ಮೇಲೆ ಹರಡಿದೆ. ಈ ಯುವತಿಯು ಅಲಂಕೃತ ಕುರ್ಚಿಯ ಮೇಲೆ ಆಶೀನಳಾಗಿ ವೀಣೆಯನ್ನು ನುಡಿಸುತ್ತಿರುವಂತೆ ಬಿಂಬಿತವಾಗಿದ್ದಾಳೆ. ಇಲ್ಲಿ ಯುವಕನು ಕಪ್ಪು ಕೋಟು, ಕಪ್ಪು ಪ್ಯಾಂಟು ಹಾಗೂ ಮುತ್ತು ರತ್ನಗಳಿಂದ ಹೆಣೆದ ಕಾಲುಚೀಲ ಧರಿಸಿ ಕೈಯಲ್ಲಿ ತಾವರೆಯನ್ನು ಹಿಡಿದು ಪ್ರೇಮಯಾಚನೆಯನ್ನು ಮಾಡುತ್ತಿರುವಂತೆ ಚಿತ್ರಣಗೊಂಡಿದ್ದಾನೆ. ಇಬ್ಬರೂ ಆಕರ್ಷಕ ಮುಖಭಾವವನ್ನು ಹೊಂದಿದ್ದು, ಹಾಲು ಬಿಳುಪಿನ ಮೈಬಣ್ಣದಿಂದ, ವಸ್ತ್ರಾಭರಣಗಳಿಂದ ರೂಪಿತಗೊಂಡಿರುವರು. ಹಿನ್ನೆಲೆಯಲ್ಲಿ ಕೆಂಪು ಪರದೆಯನ್ನು ಸಂಯೋಜಿಸಿದ್ದು ಶ್ರೀಮಂತರ ವೈಭೋಗವನ್ನು ಸಾರುತ್ತದೆ.

ಚಿತ್ರ ೧೬ ಇಲ್ಲಿ ಯುವತಿಯು ವಸ್ತ್ರಾಭರಣಗಳಿಂದ ಅಲಂಕೃತಗೊಂಡು ವೈಯಾರದಿಂದ ಟೊಂಕದ ಮೇಲೆ ಕೈಯಿಟ್ಟು ನಿಂತಿರುವಳು. ಇವಳನ್ನು ಯುವ ಪ್ರೇಮಿ ಅಪ್ಪಿಕೊಂಡು ಮುದ್ದು ಮಾಡುತ್ತಿರುವಂತೆ ಚಿತ್ರಿತಗೊಂಡಿರುವನು. ಇವನ ವೇಷಭೂಷಣಗಳು ಅಲಂಕಾರಿಕವಾಗಿ ಬಿಂಬಿತವಾಗಿದ್ದು, ಆಕರ್ಷಕ ಮುಖಲಕ್ಷಣವನ್ನು ಹೊಂದಿರುವನು. ಇಲ್ಲಿ ಇವರಿಬ್ಬರ ವರ್ಣವೈವಿಧ್ಯತೆಯಲ್ಲಿ ಅತ್ಯಂತ ಸೂಕ್ಷ್ಮ ಹಾಗೂ ನಯಗಾರಿಕೆಯನ್ನು ಕಲಾಕರನು ತಂದಿದ್ದಾನೆ. ಅವರ ಅಂಗಾಂಗಗಳ ದುಂಡುತನವು ಮೋಹಕವಾಗಿ ಮೂಡಿಬಂದಿದೆ. ಉಳಿದಂತೆ ಆಭರಣಗಳ ವಿನ್ಯಾಸ ಮತ್ತು ವಸ್ತ್ರಗಳ ವಿನ್ಯಾಸಗಳಲ್ಲಿ ಸೂಕ್ಷ್ಮರೇಖೆಗಳ ವೈಖರಿ ಎದ್ದು ತೋರುತ್ತಿದ್ದು ಅಲಂಕಾರದ ಆಶಯ ವೈಭವದಿಂದ ಪ್ರಕಟಗೊಂಡಿವೆ.

ಚಿತ್ರ ೧೭ ರಲ್ಲಿ ಯುವಕನು, ಯುವತಿಯನ್ನು ಬರಸೆಳೆಯುತ್ತಿರುವಂತೆ ಚಿತ್ರಿತಗೊಂಡಿರುವನು. ಯುವತಿಯು ಲಂಗ, ದಾವಣಿ ಹಾಗೂ ರವಿಕೆಯಿಂದ ರೂಪಗೊಂಡಿದ್ದು, ಆಭರಣಗಳಿಂದ ಅಲಂಕೃತಗೊಂಡಿರುವಳು. ಯುವಕನು ಸಹ ಕೋಟು ಸೂಟುಗಳಿಂದ ಅಲಂಕಾರಗೊಂಡು ಪ್ರೇಮಯೋಚನೆ ಮಾಡುತ್ತಿರುವಂತೆ ಬಿಂಬಿತವಾಗಿದ್ದಾನೆ. ಚಿತ್ರದಲ್ಲಿ ಕೆಂಪು, ಕಪ್ಪು, ಹಸಿರು, ಬಿಳಿ ಹಾಗೂ ಚಿನ್ನದ ರೇಖವು ಸರಿಯೋಜನೆಗೊಂಡಿದ್ದು, ಚಿತ್ರವಿನ್ಯಾಸಗಳು ಸೂಕ್ಷ್ಮರೇಖಾ ವಿನ್ಯಾಸದಿಂದ ರೂಪಗೊಂಡಿವೆ.

ಚಿತ್ರ ೧೮ ರಲ್ಲಿ ಯುವಕನು ವಸ್ತ್ರಾಭರಣಗಳಿಂದ ಭೂಷಿತಗೊಂಡು ರತ್ನಖಚಿತ ಕುರ್ಚಿಯ ಮೇಲೆ ಠೀವಿಯಿಂದ ಕುಳಿತು ಕೈಯಲ್ಲಿ ತಾವರೆಯನ್ನು ಹಿಡಿದಿರುವನು. ಇಲ್ಲಿ ಯುವತಿಯು ತುಂಡು ಲಂಗ, ರವಿಕೆ ಬಿಗಿಯಾದ ಕಾಲು ಚೀಲ, ಕಪ್ಪು ಬೂಟುಗಳನ್ನು ಧರಿಸಿ ಯುವಕನಿಗೆ ಆಣಿಸಿ ನಿಂತಿರುವಳು. ಭುಜದ ಹಿಂದೆ ಚಿತ್ರಾಲಂಕೃತ ಕೆಂಪು ದುಪ್ಪಟವು ಸಂಯೋಜನೆ ಗೊಂಡಿದೆ. ಮುತ್ತಿನ ಟೋಪಿ, ಕಂಠ ಹಾಗೂ ಕರ್ಣಾಭರಣಗಳು ಜೊತೆಗೆ ಬೆರಳುಂಗುರ, ಚಿನ್ನದ ಬಳೆಗಳನ್ನು ಧರಿಸಿರುವಳು. ಇವಳ ವೇಷ ಭೂಷಣಗಳು ಪಾಶ್ಚಾತ್ಯ ಸಂಸ್ಕೃತಿಯನ್ನು ಹೋಲುತ್ತವೆ. ರೇಖೆ, ವರ್ಣ ಹಾಗೂ ಅಂಗಾಂಗಳ ರೂಪಲಕ್ಷಣಗಳು ಆಕರ್ಷಕವಾಗಿ ಮೂಡಿಬಂದಿವೆ. ಚಿತ್ರದ ಹಿನ್ನೆಲೆಯಲ್ಲಿ ವೈಭವದ ಸಂಕೇತವಾಗಿ ಪರದೆಗಳು ಸಂಯೋಜಿತಗೊಂಡಿವೆ.

**ಚಿತ್ರಸಂಖ್ಯೆ ೧೯ ಯುವ ದಂಪತಿಗಳ ಕುಶಲೋಪರಿ**

ಈ ಚಿತ್ರವು ಗುಳೇದಗುಡ್ಡದ ಶ್ರೀ ಶೇಖರಪ್ಪ. ಉಮಚಗಿಯವರ ಮನೆಯಲ್ಲಿ ಲಭ್ಯವಿದೆ. ಇಲ್ಲಿ ಯುವ ಪ್ರೇಮಿಗಳಿಬ್ಬರೂ ರತ್ನಖಚಿತ ಅಲಂಕಾರಿಕ ಕುರ್ಚಿಯ ಮೇಲೆ ಆಶೀನರಾಗಿದ್ದು, ಒಬ್ಬರನ್ನೊಬ್ಬರು ಕೈಗಳಿಂದ ಬಳಸಿಕೊಂಡು ಪ್ರೇಮದ ಕುಶಲೋಪರಿಯಲ್ಲಿ ನಿರತರಾಗಿರುವಂತೆ ಚಿತ್ರಿತಗೊಂಡಿರುವರು. ಪ್ರೀಯತಮನು ಕಪ್ಪು ಬಣ್ಣದ ಕೋಟು, ಬಿಳಿಬಣ್ಣದ ಬಿಗಿಯಾದ ಪೈಜಾಮ, ಕೆಂಪು ವರ್ಣದ ಕಾಲುಚೀಲ, ಕಪ್ಪು ಬೂಟುಗಳು ಹಾಗೂ ಗುಂಡು ಟೊಪ್ಪಿಗೆಯನ್ನು ಧರಿಸಿದ್ದು, ಬಟ್ಟಲು ಕಂಗಳಿಂದ, ಕೋರೆಮೀಸೆಯಿಂದ ಶ್ರೀಮಂತಿಕೆಯ ಗಾಂಭೀರ್ಯವು ಒಡಮೂಡಿದೆ. ಇಲ್ಲಿ ಪ್ರೀಯತಮೆಯು ಹಸಿರು ರವಿಕೆ, ಕೆಂಪು ಹಳದಿ ಪಟ್ಟಿಕೆಗಳಿಂದ ಕೂಡಿದ ಲಂಗ ಹಾಗೂ ದಾವಣಿಯನ್ನು ಧರಿಸಿದ್ದು ವಿಶೇಷವಾಗಿ ಕಂಠಾಭರಣಗಳು, ಕರ್ಣಾಭರಣಗಳು ಹಾಗೂ ಬೈತಲಮಣಿ, ವಿವಿಧ ಪುಷ್ಪಗಳಿಂದ ಕಟ್ಟಿದ ಹೂಮಾಲೆಯು ತುರುಬನ್ನು ಅಲಂಕರಿಸಿದೆ. ಇಲ್ಲಿ ಕಲಾವಿದನು ಇವುಗಳಿಗೆ ವಿಶೇಷ ಆಸ್ಥೆಯನ್ನು ತೋರಿದ್ದಾನೆ. ವಿಶಾಲ ಹಾಗೂ ಶುಭ್ರವಾದ ನೇತ್ರಗಳು ತಿದ್ದಿ ತೀಡಿದ ಹುಬ್ಬುಗಳಿಂದ ಲಜ್ಜಿತನವು ಒಡಮೂಡಿದೆ. ದೊಡ್ಡ ಹೂವಿನಹಾರವು (ಮಾಲೆ) ಭುಜದಿಂದ ಒಡ್ಯಾಣದನತಕ ಆವರಿಸಿದೆ. ಕೈಯಲ್ಲಿ ಪುಷ್ಪಗುಚ್ಛವನ್ನು ಹಿಡಿದಿರುವಳು.ಈ ಚಿತ್ರದಲ್ಲಿ ಕಲಾವಿದನು ಶೃಂಗಾರದ ಆಶಯ, ಅಲಂಕಾರ ಪ್ರಜ್ಞೆಯನ್ನು ಮೆರೆದಿದ್ದಾನೆ. ಚಿತ್ರದ ಹಿನ್ನೆಲೆಯಲ್ಲಿ ಗಾಜಿನ ತೂಗುದೀಪಗಳನ್ನು ಸಂಯೋಜಿಸಿದ್ದು, ಚಿತ್ರದ ಸುತ್ತಲೂ ಅಲಂಕಾರಿಕ ಕಂಬಗಳ ವಿನ್ಯಾಸವು ರಚನೆಗೊಂಡಿದೆ. ಚಿತ್ರದಲ್ಲಿ ರೇಖೆ, ವರ್ಣ ಹಾಗೂ ಭಾವನಾ ನಿರೂಪಣೆಯು ಉತ್ತಮವಾಗಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೨೦ ಸರಸದಲ್ಲಿ ನಿರತ ದಂಪತಿಗಳು**

ಈ ಗಾಜಿನ ಚಿತ್ರವು ಮೈಸೂರಿನ ಜಾನಪದ ವಸ್ತು ಸಂಗ್ರಹಾಲಯದಲ್ಲಿ ಲಭ್ಯವಿದೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ಸ್ಪಷ್ಟ ವಿವರಣೆಯನ್ನು ನೀಡದಿದ್ದರೂ ಪ್ರೇಮಿಗಳ ಶೃಂಗಾರ ದೃಶ್ಯವು ಅಭಿವ್ಯಕ್ತಗೊಂಡಿದೆ. ಇವರ ವೇಷಭೂಷಣಗಳನ್ನು ಗಮನಿಸಿದರೆ ಪ್ರಭಾವಿ ವ್ಯಕ್ತಿಗಳಂತೆ ಕಂಡುಬರುತ್ತಾರೆ. ಇಲ್ಲಿ ಪುರುಷ ವ್ಯಕ್ತಿಯು ನೀಲಿಬಣ್ಣದ ಬಿಗಿಯಾದ ನಿಲುವಂಗಿ ಹಾಗೂ ಬಿಳಿಬಣ್ಣದ ಶಲ್ಯವನ್ನು ಹೊದ್ದಿರುವನು. ತಲೆಯ ಮೇಲೆ ವಿಶೇಷ ಪೇಠ ಹುರಿಮಾಡಿದ ದಪ್ಪ

ಮೀಸೆ, ಆಭರಣಗಳು ಚಿತ್ರಿತಗೊಂಡಿದ್ದು, ಅಲಂಕಾರಿಕತೆ, ಸ್ಪಷ್ಟತೆ, ರೇಖಾಲಾವಣ್ಯತೆ ಕಂಡು ಬರುವುದಿಲ್ಲ. ಇವನು ಆ ಸ್ತ್ರೀಯನ್ನು ಅಪ್ಪಿಕೊಂಡು ಮುದ್ದಿಸುತ್ತಿರುವ ರೀತಿ ಅತ್ಯಂತ ಗಡಸುತನದಿಂದ ಕೂಡಿದ್ದು ಭಾವಾವೇಷವು ಅಭಿವ್ಯಕ್ತಗೊಂಡಿದೆ. ಅಪ್ಪುಗೆಯಲ್ಲಿ ಮೃದುತ್ವ ಕಂಡುಬರುವುದಿಲ್ಲ. ಇಲ್ಲಿ ಸ್ತ್ರೀಯು ಹಳದಿ ರವಿಕೆ, ಹಳದಿ ಸೀರೆಯನ್ನು ಧರಿಸಿದ್ದು ಎತ್ತಿ ಕಟ್ಟದ ತುರುಬು ಅದಕ್ಕೆ ಮುತ್ತಿನ ಸರವನ್ನು ಅಲಂಕರಿಸಲಾಗಿದೆ. ಕೊರಳಲ್ಲಿ ಹೂವಿನ ಮಾಲೆ, ಕಂಠ ಹಾಗೂ ಕರ್ಣಾಭರಣಗಳು ಚಿತ್ರಿತಗೊಂಡಿವೆ. ಈ ಆಕೃತಿಯಲ್ಲಿ ಮಧ್ಯವಯಸ್ಸಿನ ಮಹಿಳೆಯ ದೈಹಿಕ ಲಕ್ಷಣಗಳನ್ನು ತರಲಾಗಿದೆ. ಮುಖದಲ್ಲಿ ಭಯದ ಛಾಯೆಯು ವ್ಯಕ್ತಗೊಂಡಿದೆ. ಹಿನ್ನೆಲೆಯಲ್ಲಿ ಹಳದಿ ಹಾಗೂ ನೀಲಿಬಣ್ಣಗಳ ಪರದೆಗಳು ಸಂಯೋಜಿತಗೊಂಡಿವೆ. ಚಿತ್ರವು ಸೂಕ್ಷ್ಮರೇಖೆಗಳಿಂದ ರಚನೆಗೊಂಡಿದ್ದರೂ ಸ್ಪಷ್ಟತೆ ಕಂಡುಬರುವುದಿಲ್ಲ. ವರ್ಣಲೇಪನವು ಚಪ್ಪಟೆಯಾಗಿ ಲೇಪನಗೊಂಡಿದ್ದು, ಅಲ್ಲಲ್ಲಿ ನೀಲಿ ಹಾಗೂ ಕಪ್ಪು ರೇಖೆಗಳ ಬಳಕೆ ಕಂಡು ಬರುತ್ತಿದೆ. ಇದು ಅರ್ಥಭಾವನೆಯ ವಿವರಗಳನ್ನು ನೀಡುತ್ತಿದೆ.

**ಚಿತ್ರಸಂಖ್ಯೆ ೨೧ ನೃತ್ಯ ದಂಪತಿಗಳು**

ಈ ಚಿತ್ರವು ಅಮೀನಗಡದ ಶ್ರೀ ಶೀಲವಂತಪ್ಪ ಗರಡಿಯವರ ಮನೆಯಲ್ಲಿ ಲಭ್ಯವಿದೆ. ಇಲ್ಲಿ ಪುರುಷ ವ್ಯಕ್ತಿಯು ಕೆಂಪು ಅಂಗಿ, ಬಿಗಿಯಾಗಿ ಕಟ್ಟಿದ ಪಂಜೆ ಹಾಗೂ ಚೌಕಾಣಿ ಹೊಂದಿದ್ದ ಚಡ್ಡಿಯನ್ನು ಧರಿಸಿದ್ದು, ನಡುವಿಗೆ ಅಲಂಕಾರಿಕ ಗೆಜ್ಜೆ ಪಟ್ಟಿಯನ್ನು ಕಟ್ಟಿಕೊಂಡಿರುವನು. ಇವನ ವಸ್ತ್ರಗಳ ಅಂಚು ಚಿತ್ರವಿನ್ಯಾಸದಿಂದ ಕೂಡಿದೆ. ಕೈಯಲ್ಲಿ ಚಿಕ್ಕ ಗದೆಯನ್ನು ಹಿಡಿದಿದ್ದು, ಅದು ಪ್ರಮಾಣತೆ ಕಳೆದುಕೊಂಡಿದೆ, ಆಕರ್ಷಕ ದೈಹಿಕ ಲಕ್ಷಣಗಳನ್ನು ಹೊಂದಿರುವ ಇವನು ಬಟ್ಟಲು ಕಂಗಳು, ಚೂಪುಮೀಸೆ, ಉದ್ದವಾದ ತಲೆಕೂದಲಿನಿಂದ ಆಕರ್ಷಕನಾಗಿದ್ದಾನೆ. ಇಲ್ಲಿ ಸ್ತ್ರೀಯ ರೂಪಲಕ್ಷಣಗಳು, ವೇಷಭೂಷಣಗಳು, ಅಲಂಕರಣಗಳು ಪುರುಷ ವ್ಯಕ್ತಿಯಂತೆ ರಚನೆಗೊಂಡಿವೆ. ದೈಹಿಕ ಲಕ್ಷಣಗಳಲ್ಲಿ ಹೆಣ್ತನದ ರೂಪವು ಬಿಂಬಿತವಾಗಿದೆ. ತಲೆಯ ಮೇಲೆ ಆಕರ್ಷಕ ಟೊಪ್ಪಿಗೆ, ಆಭರಣಗಳು, ನಡುವಿನ ತನಕ ಬಂದ ರವಿಕೆಯು ವಿಶೇಷ ಚಿತ್ರವಿನ್ಯಾಸವನ್ನು ಹೊಂದಿದೆ. ಇವಳು ನಿಂತಿರುವ ಭಂಗಿಯು ಆ ಪುರುಷನ ತಲೆಯ ಮೇಲೆ ಕೈ ಇಟ್ಟು ಇನ್ನೊಂದು ಕೈಯನ್ನು ಟೊಂಕದ ಮೇಲಿಟ್ಟು ವೈಯಾರದಿಂದ ನಿಂತಿರುವಂತೆ ಚಿತ್ರಿತಗೊಂಡಿದ್ದಾಳೆ. ಪುರುಷ ವ್ಯಕ್ತಿಯು ಅಲಂಕೃತ ಕುರ್ಚಿಯ ಮೇಲೆ ಕುಳಿತಿದ್ದು, ಚಿತ್ರವಿನ್ಯಾಸದಿಂದ ಕೂಡಿದ ಅವನ ಟೊಪ್ಪಿಗೆಯು ಕುರ್ಚಿಯ ಕೆಳಗೆ ರಚನೆಗೊಂಡಿದೆ. ಹಿನ್ನೆಲೆಯಲ್ಲಿ ಆಕರ್ಷಕ ಕಂಬಗಳ ವಿನ್ಯಾಸ, ಚಿತ್ರವಿನ್ಯಾಸಗಳಿಂದ ಕೂಡಿದ ವರ್ಣಮಯ ಪರದೆಗಳನ್ನು ಸಂಯೋಜನೆ ಮಾಡಲಾಗಿದೆ. ಈ ಚಿತ್ರದಲ್ಲಿ ಕೆಂಪು, ಕಪ್ಪು ಹಸಿರು, ಬಿಳಿ, ಹಳದಿ, ಚಿನ್ನದ ರೇಖು ಹಾಗೂ ಹೊಳಪುಳ್ಳ ಲೋಹದ ಹಾಳೆಗಳಿಂದ ಸಂಯೋಜನೆ ಮಾಡಲಾದ ರೇಖಾ ವಿನ್ಯಾಸವು ಪ್ರಧಾನವಾಗಿ ಮೂಡಿಬಂದಿದೆ. ಸ್ತ್ರೀಪುರುಷರ ಭಾವ ನಿರೂಪಣೆಯು ಸಾಂದರ್ಭಿಕ ವಿವರಣೆಯನ್ನು ಅಭಿವ್ಯಕ್ತಿಸುತ್ತಿದೆ.

*****

ಗಾಜಿನ ಮೇಲೆ ರಚನೆಗೊಂಡ ಶೃಂಗಾರಮಯ ಸ್ತ್ರೀ ಚಿತ್ರಗಳಲ್ಲಿ ಅವರ ವೇಷಭೂಷಣಗಳ ಹಿಂದೆ ರೆಕ್ಕೆಗಳು ರಚನೆಗೊಂಡಿದ್ದು ಕಂಡು ಬರುತ್ತವೆ. ಈ ಚಿತ್ರಗಳು ಪಾಶ್ಚಿಮಾತ್ಯ

ಪ್ರತಿಮಾಲಕ್ಷಣಗಳನ್ನು ಅನುಸರಿಸಿದ್ದೆಂದು ತೋರುತ್ತದೆ. ಇಂಥ ಚಿತ್ರಗಳು ಸಾಕಷ್ಟು ಸಂಖ್ಯೆಗಳಲ್ಲಿ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಕಾಣಸಿಗುತ್ತವೆ. ನನಗೆ ಲಭ್ಯವಾದ ಇಂಥ ಚಿತ್ರಗಳನ್ನು ಇಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ. ಈ ಚಿತ್ರಗಳು ನೋಡಲು ಗಂಧರ್ವ ಚಿತ್ರಗಳಂತೆ ಕಂಡು ಬರುತ್ತವಾದರೂ ಗಾಜಿನ ಕಲಾವಿದರೂ ತಮಗೆ ಸುಂದರವಾದುದನ್ನು ನೇರವಾಗಿ ಚಿತ್ರರಚನೆಯಲ್ಲಿ ಬಳಸಿಕೊಂಡಿದ್ದಾರೆ. ವೇಷಭೂಷಣಗಳಾಗಿರಬಹುದು. ಹಿನ್ನೆಲೆಯ ಪೀಠೋಪಕರಣಗಳಿರಬಹುದು. ವಾಸ್ತುದೃಶ್ಯಗಳಾಗಿರಬಹುದು, ಮತ್ತು ಪ್ರಕೃತಿಯ ದೃಶ್ಯವಾಗಿರಬಹುದು ಇವುಗಳನ್ನು ಯಾವುದೇ ಪಾಶ್ಚಿಮಾತ್ಯ ಹಾಗೂ ಪೌರವಾರ್ತ್ಯ ಚಿತ್ರಶೈಲಿಗಳಲ್ಲಿ ಯಥಾವತ್ತಾಗಿ ಕಲಾವಿದರು ಬಳಸಿಕೊಂಡು ಚಿತ್ರರಚನೆ ಮಾಡಿದ್ದಾರೆ. ಈ ಕಲಾವಿದರು ಸ್ವತಂತ್ರ ವಿಚಾರಕ್ಕಿಂತ ಅನುಕರಣೆಯನ್ನೇ ಮಾಡಿದ್ದುದು ಹೆಚ್ಚಿಗೆ ಕಂಡುಬರುತ್ತದೆ. ಇಲ್ಲಿ ರೂಪಗೊಂಡಿರುವ ರೆಕ್ಕೆಗಳನ್ನೊಳಗೊಂಡ ಸ್ತ್ರೀಯರ ಚಿತ್ರಗಳು ಅವರ ಜೊತೆ ಸಲ್ಲಾಪದಲ್ಲಿ ತೊಡಗಿದ ಪುರುಷ ಚಿತ್ರಗಳು ಒಂದು ರೀತಿಯಾಗಿ ನೋಡುಗರನ್ನು ಕಾಲ್ಪನಿಕ ಲೋಕಕ್ಕೆ ಕೊಂಡೊಯ್ಯುತ್ತವೆ. ಇಲ್ಲಿ ಅವುಗಳನ್ನು ವಿವೇಚಿಸಲಾಗಿದೆ.

******

**ಚಿತ್ರಸಂಖ್ಯೆ ೨೨, ೨೩, ೨೪ ಗಂಧರ್ವ ಕನ್ನೆಯೊಂದಿಗೆ (ದಂಪತಿಗಳು)**

ಇಲ್ಲಿ ಚಿತ್ರಿತಗೊಂಡಿರುವ ಗಂಧರ್ವ ದಂಪತಿಗಳ ಮೂರು ಚಿತ್ರಗಳು ಕಾಲ್ಪನಿಕ ಕಥೆಗಳನ್ನು ಸೃಷ್ಟಿಸುತ್ತವೆ. ಸ್ತ್ರೀ ಚಿತ್ರಗಳಲ್ಲಿ ಚಿತ್ರವಿನ್ಯಾಸಗಳಿಂದ ಕೂಡಿದ ತುಂಡು ಲಂಗ (ಮಿನಿಸ್ಕರ್ಟ) ಹಸಿರು ವರ್ಣದ ಪೈಜಾಮ, ಗುಂಡು ಟೊಪ್ಪಿಗೆ, ಕಪ್ಪು ಬೂಟುಗಳನ್ನು ಚಿತ್ರಿಸಿದ್ದು, ಬೆಣ್ಣ ಹಿಂದೆ ದೊಡ್ಡ ರೆಕ್ಕೆಗಳನ್ನು ದೊಡ್ಡದಾದ ಹೂವಿನ ಮಾಲೆಯನ್ನು ಸಂಯೋಜನೆ ಮಾಡಲಾಗಿದೆ. ಪುರುಷ ವ್ಯಕ್ತಿಯು ಕಪ್ಪು ಕೋಟು, ಕಪ್ಪು ಪ್ಯಾಂಟನ್ನು ಧರಿಸಿದ್ದು, ಅವುಗಳ ಅಂಚು ಸೂಕ್ಷ್ಮರೇಖಾವಿನ್ಯಾಸಗಳ ಚಿತ್ರಪಟ್ಟಿಕೆಗಳು ರಚನೆಗೊಂಡಿವೆ. ಈ ವ್ಯಕ್ತಿಗೂ ಗುಂಡು ಟೊಪ್ಪಿಗೆಯನ್ನು ಸಂಯೋಜಿಸಲಾಗಿದ್ದು, ಕೊರಳಲ್ಲಿ ಚೈನು, ಕರ್ಣಕುಂಡಲಗಳನ್ನು ರಚಿಸಲಾಗಿದೆ. ಜೊತೆಗೆ ಸೊಂಟಪಟ್ಟಿಯಲ್ಲಿ ಚಿಕ್ಕ ಕತ್ತಿಯನ್ನು ಹೊಂದಿರುವನು. ಈ ಮೂರು ಚಿತ್ರಗಳಲ್ಲಿ ರೂಪಿತಗೊಂಡಿರುವ ಸ್ತ್ರಿಪುರುಷ ರೂಪಲಕ್ಷಣಗಳು ಪ್ರಭಾವಿ ವ್ಯಕ್ತಿಗಳ ಜೀವನ ಶೈಲಿಯನ್ನು ನಿರೂಪಿಸುತ್ತವೆ. ಈ ಚಿತ್ರಗಳಲ್ಲಿ ರೆಕ್ಕೆಗಳನ್ನು ಸೌಂದರ್ಯ ಪ್ರತೀಕವಾಗಿ ಕಲಾವಿದನು ಬಳಸಿರಬಹುದೆಂದು ತೋರುತ್ತದೆ. ಈ ಮೂರು ಚಿತ್ರಗಳಲ್ಲಿ ರೇಖೆಗಳ ಚಲನೆ ಶಕ್ತಿಯುತವಾಗಿ ಮೂಡಿ ಬಂದಿದ್ದರೂ ಸಹ, ನೈಜತೆ, ಅಲಂಕಾರಿಕತೆ, ಸೌಂದರ್ಯತೆಗೆ ಪ್ರಧಾನ್ಯತೆ ಪ್ರಕಟಗೊಂಡಿಲ್ಲವೆನ್ನಬಹುದು. ಯಾಕೆಂದರೆ ಕಲಾವಿದನ ರೇಖೆಯ ಮೇಲಿನ ಹಿಡಿತ ಹಾಗೂ ಅನನುಭವವು ಕಾರಣವೆನ್ನಬಹುದು. ಆದರೆ ಇಲ್ಲಿ ಕಲಾವಿದನು ನೋಡುಗರನ್ನು ಆಕರ್ಷಿಸುವಂತೆ ರೇಖೆ ಮತ್ತು ವರ್ಣಗಳನ್ನು ವಿಶಿಷ್ಟವಾಗಿ ಬಳಸಿದ್ದಾನೆ. ಈ ಮೂರು ಚಿತ್ರಗಳ ಪುರುಷ ವ್ಯಕ್ತಿಯ ಭಾವನೆಗಳಲ್ಲಿ ಗಡಸುತನ ಬಿಂಬಿತವಾಗಿದೆ. ಸ್ತ್ರೀಯ ಮುಖ ಲಕ್ಷಣಗಳಲ್ಲಿ ಮಂದಹಾಸವು ಮೂಡಿಬಂದಿದೆ.

ಚಿತ್ರ ೨೨ ರಲ್ಲಿ ಪುರುಷ ವ್ಯಕ್ತಿಯು ಅತ್ಯಂತ ಒರಟುತನದಿಂದ ಕುರ್ಚಿಯ ಮೇಲೆ ಕುಳಿತು ಸ್ತ್ರೀಯನ್ನು ಕಾಲುಗಳಿಂದ ಬಳಸಿ ಅವಳ ಭುಜದ ಮೇಲೆ ಕೈ ಇಟ್ಟಿರುವನು. ಇಲ್ಲಿ ಅವನ ಒರಟುತನ ಅಧಿಕವಾಗಿ ವ್ಯಕ್ತಗೊಂಡಿದೆ. ಸ್ತ್ರೀಯು ಮಂದಹಾಸ ಬೀರಿ ಸಹನೆಯಿಂದ ನಿಂತಿರುವಂತೆ ಚಿತ್ರಿತಗೊಂಡಿರುವಳು. ಹಿನ್ನೆಲೆಯಲ್ಲಿ ವರ್ಣಮಯ ಪರದೆಗಳು, ನೀಲಿ ಗೋಡೆಯನ್ನು ಸಂಯೋಜಿಸಲಾಗಿದ್ದು, ಹಳದಿ ವರ್ಣದ ನೆಲಹಾಸಿನ ಮೇಲೆ ಗುಲಾಬಿ ವರ್ಣದ ಪುಷ್ಪಗಳನ್ನು ಚಿತ್ರಿಸಲಾಗಿದೆ. ಪ್ರಖರ ವರ್ಣಗಳಿಂದ ಚಿತ್ರವು ಆಕರ್ಷಕವಾಗಿ ಅನಾವರಣಗೊಂಡಿದೆ.

ಚಿತ್ರ ೨೩ ರಲ್ಲಿ ಪುರುಷ ವ್ಯಕ್ತಿಯು ಗುಲಾಬಿ ಹೂವುವನ್ನು ಪ್ರೀಯತಮೆಗೆ ಕೊಡುತ್ತಿರುವಂತೆ ಚಿತ್ರಿತಗೊಂಡಿರುವನು. ಇಲ್ಲಿ ಇಬ್ಬರೂ ಪಾರ್ಶ್ವ ಮುಖಭಾವವನ್ನು ಹೊಂದಿದ್ದು ಪ್ರೀಯತಮೆಯ ಮುಖದಲ್ಲಿ ಭಯದ ಛಾಯೆಯು ಎದ್ದು ತೋರುತ್ತಿದೆ. ಸ್ತ್ರೀಯ ಲಂಗವು ಎರಡು ಭಾಗಗಳಲ್ಲಿ ಚಿತ್ರಿತಗೊಂಡಿದೆ. ಈ ಚಿತ್ರದಲ್ಲಿ ಪುರುಷ ವ್ಯಕ್ತಿಯ ಸೊಂಟದಲ್ಲಿ ಕತ್ತಿ ಹಾಗೂ ಗುರಾಣಿಗಳನ್ನು ಸಂಯೋಜಿಸಲಾಗಿದೆ. ಇನ್ನುಳಿದಂತೆ ಚಿತ್ರ ೨೨ ರಂತೆ ರಚನಾಕ್ರಮವನ್ನು ಯಥಾವತ್ತಾಗಿ ಅನುಸರಿಸಿದೆ.

ಚಿತ್ರ ೨೪ ರಲ್ಲಿ ಪುರುಷ ವ್ಯಕ್ತಿಯು ಸ್ತ್ರೀಯ ಭುಜದ ಮೇಲೆ ಕೈಹಾಕಿ ಇನ್ನೊಂದು ಕೈಯಿಂದ ಕತ್ತಿಯನ್ನು ಹಿಡಿದಿರುವನು. ಇವನು ಪಾರ್ಶ್ವಮುಖವನ್ನು ಹೊಂದಿದ್ದು, ಮುಖದಲ್ಲಿ ಒರಟುತನ ಬಿಂಬಿತವಾಗಿದೆ. ಸ್ತ್ರೀಯ ಚಿತ್ರವು ಚಿತ್ರ ೨೩ ರಲ್ಲಿರುವಂತೆ ರಚನೆಗೊಂಡಿದ್ದು, ಜೋಟು ಜಡೆಯು ಇಲ್ಲಿ ಬಿಂಬಿತವಾಗಿದೆ. ಚಿತ್ರದ ಹಿನ್ನೆಲೆಯು ವರ್ಣಮಯ ಪರದೆಗಳನ್ನು ಹೊಂದಿದೆ. ಈ ಮೂರು ಚಿತ್ರಗಳಲ್ಲಿ ಕೆಂಪು, ಹಸಿರು, ಬಿಳಿ, ಕಪ್ಪು, ಹಳದಿ ಮಿಶ್ರಿತ ವರ್ಣಛಾಯೆಗಳು ಪ್ರಧಾನವಾಗಿ ಕಂಡುಬರುತ್ತಿದ್ದು, ಚಿನ್ನದ ಹೊಳಪುಳ್ಳ ಹಾಳೆಯನ್ನು ಅಲ್ಲಲ್ಲಿ ಬಳಸಲಾಗಿದೆ. ಒಟ್ಟಾರೆ ಈ ಮೂರು ಚಿತ್ರಗಳಲ್ಲಿ ರೇಖೆ, ವರ್ಣ, ಭಾವ ಸಂಯೋಜನೆ ಮತ್ತು ಯಥಾದೃಷ್ಟಿಯು ಪ್ರಬುದ್ಧವಾಗಿ ಮೂಡಿಬಂದಿಲ್ಲವಾದರೂ ಆಕರ್ಷಕವಾಗಿ ರೂಪಗೊಂಡಿವೆ. ಇಲ್ಲಿ ಕಂಡುಬರುವ ಮೂರು ಚಿತ್ರಗಳು ಗುಳೇದಗುಡ್ಡದ ಶ್ರೀ ಬಸವಪ್ರಭು ಗಂಗಾವತಿಯವರ ಮನೆಯಲ್ಲಿ ಲಭ್ಯವಿದ್ದು, ಇವು ೧೮ x ೨೩ ಸೆಂ.ಮೀ ಅಳತೆಯನ್ನು ಹೊಂದಿವೆ.

**ಚಿತ್ರಸಂಖ್ಯೆ ೨೫ ಗಂಧರ್ವ ಸ್ತ್ರೀಯೊಂದಿಗೆ ಯುವಕ**

ಈ ಚಿತ್ರದಲ್ಲಿ ಸ್ತ್ರೀಪುರುಷರಿಬ್ಬರೂ ತಮ್ಮ ವ್ಯಕ್ತಿತ್ವ ಪ್ರದರ್ಶಿಸುತ್ತಿರುವಂತೆ ಚಿತ್ರಿತಗೊಂಡಿದ್ದಾರೆ. ಇಲ್ಲಿ ಗಂಧರ್ವ ಸ್ತ್ರೀಯು ಚಿತ್ರವಿನ್ಯಾಸಗಳಿಂದ ಕೂಡಿದ ಲಂಗ, ಸೊಂಟದ ತನಕ ಆವರಿಸಿದ ರವಿಕೆಯನ್ನು ಹೊಂದಿದ್ದು ಮಿತವಾದ ಆಭರಣಗಳನ್ನು ಸಂಯೋಜಿಸಲಾಗಿದೆ. ವಿಶೇಷವಾಗಿ ಸ್ತ್ರೀಯ ತಲೆಯ ಮೇಲೆ ಮೈಸೂರು ಪೇಟದ ವಿನ್ಯಾಸದಂತೆ ಕಂಡುಬರುವ ಮುತ್ತಿನ ಪೇಟವು ಚಿತ್ರಿತಗೊಂಡಿದೆ. ಹಿನ್ನೆಲೆಯಲ್ಲಿ ರೆಕ್ಕೆಗಳನ್ನು ಚಿತ್ರಿಸಲಾಗಿದೆ. ಮುಖದಲ್ಲಿ ಮಂದಹಾಸವು ವೃದ್ಧಿಗೊಂಡಿದ್ದು, ಪುರುಷ ವ್ಯಕ್ತಿಯು ಚಿತ್ರವಿನ್ಯಾಸಗಳಿಂದ ಕರಿಕೋಟು, ಕೆಂಪು ಪ್ಯಾಂಟನ್ನು ಧರಿಸಿದ್ದು, ಅವುಗಳ ಅಂಚು ಚಿನ್ನದ ಮೆರಗು ಕಾಗದ ಹಾಗೂ ಕೆಂಪು ಬಣ್ಣದಿಂದ ಚಿತ್ರ ಪಟ್ಟಿಕೆಗಳು ಮೂಡಿಬಂದಿವೆ. ದೈಹಿಕ ಲಕ್ಷಣಗಳಲ್ಲಿ ಕುಡಿಮೀಸೆ, ದೊಡ್ಡಕಂಗಳು, ಹಾಲು ಬಿಳುಪು

ಹೊಂದಿದ ಮೈಬಣ್ಣವು ದುಂಡುತನದಿಂದ ಕೂಡಿದೆ. ಚಿತ್ರವು ಅಲಂಕಾರಿಕ ರೇಖೆ ಹಾಗೂ ವರ್ಣಗಳಿಂದ ಆಕರ್ಷಕವಾಗಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೨೬ ದಂಪತಿ(ಪ್ರೇಮಿ)ಗಳ ಅಪ್ಪುಗೆಯ ಉನ್ಮಾದ**

ಈ ಚಿತ್ರದಲ್ಲಿ ಪ್ರೀಯತಮನು ಅಲಂಕಾರಿಕ ಕುರ್ಚಿಯ ಮೇಲೆ ಕುಳಿತು ಪ್ರೀಯತಮೆಯನ್ನು ಗಾಢವಾಗಿ ಕೈಕಾಲುಗಳಿಂದ ಬಂಧಿಸಿದ್ದಾನೆ. ಚಿತ್ರದಲ್ಲಿ ಪುರುಷನು ಪ್ರಭಾವಿ ವ್ಯಕ್ತಿಯಂತೆ ರೂಪಗೊಂಡಿದ್ದು, ಪೌರುಷ ಛಾಯೆಯು ಎದ್ದು ತೋರುತ್ತಿದೆ. ಇವನ ವಸ್ತ್ರಾಭರಣಗಳು ಶ್ರೀಮಂತಿಕೆಯ ಸ್ವರೂಪವನ್ನು ಪ್ರತಿನಿಧಿಸುತ್ತವೆ. ಇಲ್ಲಿ ಸ್ತ್ರೀಯು ಆಕರ್ಷಕ ದೈಹಿಕ ಲಕ್ಷಣಗಳನ್ನು ಹೊಂದಿದ್ದು, ಮುಖದಲ್ಲಿ ಮಂದಹಾಸವು ಅಭಿವ್ಯಕ್ತಿಗೊಂಡಿದೆ. ಸ್ತ್ರೀಯ ವೇಷಭೂಷಣ ಕಲ್ಪಿಸುವಲ್ಲಿ ಕಲಾವಿದನು ಆಧುನಿಕತೆಯನ್ನು ಮೆರೆದಿದ್ದಾನೆ. ಹಸಿರು ರವಿಕೆಯನ್ನು ಚಿತ್ರಿಸಿ ಎದೆಮಟ್ಟದಿಂದ ಪಾದದ ತನಕ ಬಿಗಿಯಾದ ಲಂಗವನ್ನು ಸಂಯೋಜಿಸಿರುವನು. ಈ ಬಿಗಿ ಉಡುಪುನಿಂದ ಅವಳ ದೇಹಸಿರಿಯು ಅತ್ಯಂತ ಮೋಹಕವಾಗಿ ಕಂಡು ಬರುತ್ತದೆ. ಆಕೃತಿಗಳ ಬಾಹ್ಯ ರೇಖೆಯು ಕಪ್ಪು ಬಣ್ಣದಿಂದ ಸಂಯೋಜಿಸಿದ್ದು, ವಸ್ತ್ರಾಭರಣಗಳ ಒಡಲಿನಲ್ಲಿ ಚಿತ್ರವಿನ್ಯಾಸಗಳನ್ನು ರಚಿಸಲಾಗಿದೆ. ಸ್ತ್ರೀಯ ಬೆನ್ನಿಗೆ ದೊಡ್ಡದಾದ ರೆಕ್ಕೆಗಳನ್ನು ಸಂಯೋಜಿಸಲಾಗಿದ್ದು, ಸ್ತ್ರೀಯ ಕೇಶವಿನ್ಯಾಸವು ಉದ್ದವಾಗಿ ಮೂಡಿಬಂದಿದೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ವರ್ಣರಂಜಿತವಾಗಿ ಸಂಯೋಜನೆಗೊಂಡಿದೆ.

**ಚಿತ್ರಸಂಖ್ಯೆ ೨೭ ಗಂಧರ್ವ ಸ್ತ್ರೀಯನ್ನು ಮೋಹಿಸುತ್ತಿರುವುದು**

ಈ ಚಿತ್ರದಲ್ಲಿ ಯುವರಾಜನು ಗಂಧರ್ವ ಸ್ತ್ರೀಯ ಗದ್ದ ಹಿಡಿದು ಮೋಹವನ್ನು ವ್ಯಕ್ತಪಡಿಸುತ್ತಿರುವನು. ಗಂಧರ್ವ ಸ್ತ್ರೀಯು ಲಜ್ಜೆತನದಿಂದ ನಾಚಿ ನೀರಾಗಿರುವಂತೆ ಬಿಂಬಿತವಾಗಿದ್ದಾಳೆ. ಇಬ್ಬರ ಮೈಬಣ್ಣವು ಹಾಲುಬಿಳುಪು ಮೈಬಣ್ಣವನ್ನು ಹೊಂದಿದ್ದು, ಆಕರ್ಷಕ ದೇಹ ಸಂಪತ್ತನ್ನು ಹೊಂದಿರುವ ಕಲ್ಪನೆಯು ವ್ಯಕ್ತಗೊಂಡಿದೆ. ಪ್ರೀಯತಮನು ಕಪ್ಪುಕೋಟು, ಗುಲಾಬಿ ವರ್ಣದ ಪ್ಯಾಂಟನ್ನು ಧರಿಸಿದರೆ, ಪ್ರೀಯತಮೆಯು ರವಿಕೆ, ಲಂಗವನ್ನು ಹೊಂದಿದ್ದು, ವಿಶೇಷವಾಗಿ ದುಪ್ಪಟವನ್ನು ಆಕರ್ಷಕವಾಗಿ ಚಿತ್ರಿಸಲಾಗಿದೆ. ನಡುವಿಗೆ ಚಿನ್ನದ ಡಾಬು, ಒಡ್ಯಾಣ, ಕಂಠಾಭರಣಗಳು, ಕರ್ಣಾಭರಣಗಳು, ಚಿನ್ನದ ಬಳೆಗಳು, ಚಿನ್ನದ ಬೆರಳುಂಗುರಗಳಿಂದ ಶೃಂಗಾರ ಕಲ್ಪನೆಯು ಉದ್ದೀಪನಗೊಂಡಿದೆ. ನೆರಳು ಬೆಳಕುಗಳ ವರ್ಣಛಾಯೆಗಳಿಂದ ಕೂಡಿದ ದೊಡ್ಡ ರೆಕ್ಕೆಗಳು ಬೆನ್ನಹಿಂದೆ ಸಂಯೋಜಿತಗೊಂಡಿವೆ. ಈ ಚಿತ್ರದಲ್ಲಿ ಮುಖರೂಪಕ್ಕೆ ಕಲಾವಿದನು ಹೆಚ್ಚು ಪ್ರಾಧಾನ್ಯತೆಯನ್ನು ನೀಡಿರುವಂತೆ ತೋರುತ್ತದೆ. ಯಾಕೆಂದರೆ ರೇಖೆಗಳ ಚಲನೆ, ಲಯಗಾರಿಕೆ, ದಟ್ಟತನ, ಸೂಕ್ಷ್ಮತೆ ಮತ್ತು ನೈಜತೆಯನ್ನು ಗಮನಿಸಿದರೆ ಅವನ ತಾಳ್ಮೆ, ಸೌಂದರ್ಯ ಹಾಗೂ ಅಲಂಕಾರಿಕ ಪ್ರಜ್ಞೆಯು ಉತ್ತಮ ರೂಪದಲ್ಲಿ ಕಂಡು ಬರುತ್ತಿದೆ. ಈ ಅಂಶವನ್ನು ಹಲವಾರು ಚಿತ್ರಗಳಲ್ಲಿ ಗಮನಿಸಬಹುದಾಗಿದೆ. ಚಿತ್ರವು ಅಲಂಕಾರ ದೃಷ್ಟಿರೂಪದಲ್ಲಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೨೮ ಪ್ರೇಮಿಗಳ ಮಾತುಕತೆ**

ಇಲ್ಲಿ ಚಿತ್ರಿತಗೊಂಡಿರುವ ದೃಶ್ಯದಲ್ಲಿ ಯುವ ಪ್ರೇಮಿಯು ಪ್ರೇಯಸಿಯೊಡನೆ ಕುಶಲೋಪರಿಯಲ್ಲಿ ತೊಡಗಿರುವಂತೆ ಬಿಂಬಿತವಾಗಿದ್ದಾನೆ. ಈ ದೃಶ್ಯದಲ್ಲಿ ಸ್ತ್ರೀ-ಪುರುಷರಿಬ್ಬರ

ದೈಹಿಕ ಲಕ್ಷಣಗಳು ದಷ್ಟಪುಷ್ಟವಾಗಿ, ಬಹು ಆಕರ್ಷಕವಾಗಿ ರೂಪಗೊಂಡಿದ್ದು, ಆಕರ್ಷಕ ಮುಖಭಾವವನ್ನು ಹೊಂದಿದ್ದಾರೆ. ಪ್ರೀಯತಮನು ಚಿತ್ತಾರವುಳ್ಳ ಕೋಟು, ಕೆಂಪು ಪ್ಯಾಂಟು, ಬೂಟುಗಳನ್ನು ಹಾಗೂ ಆಭರಣಗಳನ್ನು ಧರಿಸಿದರೆ ಸ್ತ್ರೀಯು ತುಂಡು ಲಂಗ, ಟೊಂಕದ ತನಕ ರವಿಕೆ, ಹಸಿರು ಕಾಲುಚೀಲವನ್ನು ಧರಿಸಿದ್ದಾಳೆ. ಪುರುಷ ಉಡುಪಿನಲ್ಲಿ ಸೂಕ್ಷ್ಮರೇಖೆಗಳಿಂದ ಕೂಡಿದ ಚಿತ್ರಪಟ್ಟಿಕೆಗಳು ಕಂಡು ಬಂದರೆ, ಸ್ತ್ರೀಯ ಉಡುಪಿನಲ್ಲಿ ವೃತ್ತಾಕಾರದ ಚುಕ್ಕೆಗಳು, ಉದ್ದ ಹಾಗೂ ಅಡ್ಡವಾದ ಪಟ್ಟಿಕೆಗಳು ರೂಪಿತಗೂಂಡಿವೆ. ಇಬ್ಬರೂ ಮುತ್ತಿನಿಂದ ಅಲಂಕೃತವಾದ ಗುಂಡು ಟೊಪ್ಪಿಗೆಗಳನ್ನು ಧರಿಸಿದ್ದು, ಸ್ತ್ರೀಯ ಟೊಪ್ಪಿಗೆಯಲ್ಲಿ ಬಿಳಿಪುಚ್ಚವನ್ನು ಹೊಂದಿದೆ. ಪುರುಷ ಟೊಪ್ಪಿಗೆಯ ಮೇಲೆ ಉದ್ದವಾದ ಪುಚ್ಚದ ಜೊತೆಗೆ ಮುತ್ತಿನ ಗೊಂಚಲನ್ನು ಹೊಂದಿದೆ. ಸ್ತ್ರೀಯ ಚಿತ್ರದಲ್ಲಿ ದೊಡ್ಡದಾದ ವಿವಿಧ ವರ್ಣಗಳಿಂದ ಕೂಡಿದ ಹೂವಿನ ಮಾಲೆಯು ಸಂಯೋಜನೆಗೊಂಡಿದೆ. ಮುಖಭಾವದಲ್ಲಿ ಕಂಡುಬರುವ ನೈಜತೆಯು ಚಿತ್ರದ ಇನ್ನುಳಿದ ಭಾಗದಲ್ಲಿ ಕಂಡು ಬರುವುದಿಲ್ಲ. ಹಿನ್ನೆಲೆಯಲ್ಲಿ ಸಂಯೋಜನೆಗೊಂಡ ಕುರ್ಚಿಯ ಚಿತ್ರವು, ನೆಲಹಾಸು ಸಾಂಕೇತಿಕವಾಗಿ ಮೂಡಿಬಂದಿದೆ ಎನ್ನಬಹುದು. ಇಲ್ಲಿ ಯಥಾದೃಷ್ಟಿ, ರೇಖೆಯ ಕೂಡುವಿಕೆ, ಬಾಗುವಿಕೆ ಹಾಗೂ ಲಯಗಾರಿಕೆ ತೀರಾ ಗೌಣವೆನ್ನಬಹುದು. ಚಿತ್ರವು ಪ್ರಖರವರ್ಣಗಳಿಂದ ಅಲಂಕಾರ ಪ್ರಜ್ಞೆಯು ವೈಭವಿಕರಣಗೊಂಡಿದೆ. ಗಾಜಿನ ಕಲಾವಿದರು ಚಿತ್ರರಚನೆಯಲ್ಲಿ ವೈಭವದ ಮನೋಪ್ರವೃತ್ತಿಯನ್ನು ತಳೆದಿದ್ದಾರೆ. ಚಿತ್ರಸಂಖ್ಯೆ ೨೫, ೨೬, ೨೭, ೨೮ ಈ ನಾಲ್ಕು ಚಿತ್ರಗಳು ಗುಳೇದಗುಡ್ಡದ ವೀರಸಂಗಪ್ಪ. ಭಾವಿಯವರ ಮನೆಯಲ್ಲಿ ಲಭ್ಯ ಇವೆ.

**ಚಿತ್ರಸಂಖ್ಯೆ ೨೯ ಇಬ್ಬರು ಗಂಧರ್ವ ಸ್ತ್ರೀಯರೊಂದಿಗೆ ಪುರುಷ**

ಈ ಚಿತ್ರದಲ್ಲಿ ಇಬ್ಬರು ಗಂಧರ್ವ ಸ್ತ್ರೀಯರೊಂದಿಗೆ ಪುರುಷ ವ್ಯಕ್ತಿಯು ತನ್ನ ಪೌರುಷವನ್ನು ಪ್ರದರ್ಶಿಸುತ್ತಿರುವಂತೆ ಬಿಂಬಿತವಾಗಿದ್ದಾನೆ. ಪುರುಷ ವ್ಯಕ್ತಿಯು ಕೋಟು, ಪ್ಯಾಂಟನ್ನು ಧರಿಸಿ, ಒಳ್ಳೆಯ ರೀವಿಯಿಂದ ನಿಂತಿದ್ದು, ಇವನ ಎಡ ಹಾಗೂ ಬಲ ಪಾರ್ಶ್ವಗಳಲ್ಲಿ ವಿಶಿಷ್ಟ ಉಡುಗೆ ತೊಡುಗೆಗಳನ್ನು ಧರಿಸಿ ಆ ವ್ಯಕ್ತಿಯ ಕೈಗಳನ್ನು ಬಳಸಿದ್ದಾರೆ. ಈ ಮೂರು ಆಕೃತಿಗಳಲ್ಲಿ ರೇಖಾ ಲಾವಣ್ಯತೆ, ಚಲನೆ, ಬಾಗುವಿಕೆ ಹಾಗೂ ಬಳುಕುವಿಕೆಯು ಅಭಿವ್ಯಕ್ತಗೊಂಡಿದೆ. ಇವರ ವೇಷಭೂಷಣಗಳ ಅಂಚುಗಳಲ್ಲಿ ಸೂಕ್ಷ್ಮರೇಖೆಗಳ ವೈಖರಿ ಉದ್ದೀಪನಗೊಂಡಿದೆ. ಸ್ತ್ರೀಯರುತುಂಡು ಲಂಗ ಹಾಗೂ ರವಿಕೆಯನ್ನು ಧರಿಸಿ ಕೆಂಪು ಪೈಜಾಮನ್ನು ಹೊಂದಿದ್ದರೆ. ಪುರುಷ ವ್ಯಕ್ತಿಯು ಕಪ್ಪು ಕೋಟು, ಕೆಂಪು ಪ್ಯಾಂಟನ್ನು ಹೊಂದಿದ್ದಾನೆ. ಸೊಂಟದಲ್ಲಿ ಉದ್ದವಾದ ಕತ್ತಿಯನ್ನು ಬಿಂಬಿಸಲಾಗಿದೆ. ಮೂವರ ಮುಖ ಲಕ್ಷಣಗಳು ಮಂದಹಾಸದಿಂದ ಕೂಡಿದ್ದು, ವರ್ಣಗಾರಿಕೆಯಲ್ಲಿ ದುಂಡುತನವನ್ನು ತರುವುದರ ಜೊತೆಗೆ ನೈಜತೆಯು ಎದ್ದು ತೋರುತ್ತದೆ. ಚಿತ್ರದ ಹಿನ್ನೆಲೆಯಲ್ಲಿ ಕಪ್ಪು ಬಣ್ಣವನ್ನು ಏಕರೂಪವಾಗಿ ಲೇಪನಮಾಡಿರುವುದರಿಂದ ಆಕೃತಿಗಳು ಉಜ್ವಲವಾಗಿ ಕಾಣುತ್ತವೆ.

**ಚಿತ್ರಸಂಖ್ಯೆ ೩೦ ಪ್ರೇಮಿಗಳ ಅಪ್ಪುಗೆ**

ಇಲ್ಲಿ ಕಂಡುಬರುವ ಗಾಜಿನ ಚಿತ್ರದಲ್ಲಿ ಯುವ ಪ್ರೇಮಿಗಳಿಬ್ಬರು ಪರಸ್ಪರ ಮೋಹಿತರಾಗಿದ್ದಾರೆ. ಪ್ರೇಮಿಯು ಪ್ರೇಯಸಿಯನ್ನು ಬರಸೆಳೆಯುತ್ತಿದ್ದಾನೆ. ಪ್ರೇಯಸಿಯು ನಾಚಿಕೆಯಿಂದ

ನುಲಿಯುತ್ತಿರುವಂತೆ ಕಲಾವಿದನು ಬಿಂಬಿಸಿದ್ದಾನೆ. ಪ್ರೇಮಿಯು ಕರಿಕೋಟು, ಕರಿಪ್ಯಾಂಟನ್ನು ಧರಿಸಿದ್ದು, ಉದ್ದವಾದ ಕೇಶವಿನ್ಯಾಸವು ಭುಜದ ಹಿಂದೆ ಹರಡಿದೆ. ಚೂಪುಮೀಸೆ, ಅಗಲವಾದ ಕಂಗಳು, ತುಟಿಯಲ್ಲಿ ಮಂದಹಾಸವು ಎದ್ದು ತೋರುತ್ತದೆ. ಪ್ರೇಯಸಿಯು ಕೆಂಪು ರವಿಕೆ, ಬಿಳಿ ಲಂಗ, ದೊಡ್ಡ ಪಟ್ಟಿಕೆಗಳಿಂದ ಕೂಡಿದ ದಾವಣಿಯನ್ನು ಧರಿಸಿದ್ದು, ವರ್ಣಛಾಯೆಯು ನೈಜತೆಯಿಂದ ಕೂಡಿದ ಮುಖವು ಅಂದವಾಗಿ ರೂಪಗೊಂಡಿದೆ. ಇದು ಕಲಾವಿದನ ಕೈಚಳಕ ಹಾಗೂ ಸೌಂದರ್ಯಪ್ರಜ್ಞೆಯನ್ನಬಹುದು. ಎತ್ತಿಕಟ್ಟಿದ ತುರುಬು, ವಿಶಾಲವಾದ ಕಣ್ಣಾಲೆಗಳು, ಬಾಗಿದ ಹುಬ್ಬು, ಮಂದಹಾಸ ಬೀರುತ್ತಿರುವ ತುಟಿಗಳು, ಚಿತ್ರದ ಸೌಂದರ್ಯಪ್ರಜ್ಞೆಯನ್ನು ಮೆಲುಕು ಹಾಕುತ್ತವೆ. ಹೆಣ್ತನದ ಲಕ್ಷಣಗಳು ಈ ಆಕೃತಿಯಲ್ಲಿ ಸುಂದರವಾಗಿ ಬಿಂಬಿತವಾಗಿವೆ. ಸ್ತ್ರೀ ಚಿತ್ರದ ಹಿಂದೆ ರೆಕ್ಕೆಗಳು ಚಿತ್ರಿತಗೊಂಡಿದ್ದು, ನೋಡಿದರೆ ಹೆಣ್ಣನ್ನು ಸುಂದರವಾಗಿ ಹಕ್ಕಿಗೆ ಹೋಲಿಕೆ ಮಾಡಿದಂತೆ ತೋರುತ್ತದೆ. ಹೆಣ್ಣು ಎಂದರೆ ಸ್ವಚ್ಛಂದವಾಗಿ ಹಾರಾಡುವ ಹಕ್ಕಿ ಎಂದು ಕಲಾವಿದನು ಕಲ್ಪಿಸಿರಬಹುದು. ಚಿತ್ರದ ಹಿನ್ನೆಲೆಯಲ್ಲಿ ವರ್ಣಮಯ ಪರದೆ, ಅಲಂಕಾರಿಕ ಕುರ್ಚಿ, ಚಿತ್ರವಿನ್ಯಾಸದಿಂದ ಕೂಡಿಧ ನೆಲಹಾಸನ್ನು ಸಂಯೋಜಿಸಲಾಗಿದೆ. ಚಿತ್ರವು ರೇಖೆ ಹಾಗೂ ವರ್ಣದ ದೃಷ್ಟಿಯಿಂದ ಉತ್ತಮವಾಗಿ ಮೂಡಿಬಂದಿರಬಹುದಾದರೂ ಆಕೃತಿಗಳ ಯಥಾದೃಷ್ಟಿಯಲ್ಲಿ ಹಾಗೂ ಜೋಡಣೆಯಲ್ಲಿ ಕೆಲವು ಚಿತ್ರದೋಷಗಳು ವ್ಯಕ್ತಗೊಂಡಿವೆ.

**ಚಿತ್ರಸಂಖ್ಯೆ ೩೧ ಆಕಾಶದಲ್ಲಿ ಹಾರಾಡುತ್ತಿರುವ ಗಂಧರ್ವ ಸ್ತ್ರೀಯರು**

ಈ ಚಿತ್ರದಲ್ಲಿ ಇಬ್ಬರೂ ಸ್ತ್ರೀಯರು ಭಾರತೀಯ ಸಾಂಪ್ರದಾಯಿಕ ಸೀರೆ ಹಾಗೂ ಕುಪ್ಪಸಗಳನ್ನು ಧರಿಸಿದ್ದು, ಒಬ್ಬಳು ಕೆಂಪು ಸೀರೆಯನ್ನು ಧರಿಸಿದ್ದರೆ ಇನ್ನೊಬ್ಬಳು ಹಸಿರು ಸೀರೆಯನ್ನು ಧರಿಸಿರುವಳು. ಇಬ್ಬರೂ ಸ್ತ್ರೀಯರು ಅಲಂಕಾರಿಕ ಟೊಪ್ಪಿಗೆಗಳನ್ನು ಆಭರಣಗಳನ್ನೂ ಹಾಗೂ ಉದ್ದವಾದ, ದಟ್ಟವಾದ ಕೇಶರಾಶಿಯನ್ನು ಹೊಂದಿರುವರು. ಒಬ್ಬ ಸ್ತ್ರೀಯು ದೇವತೆಯಂತೆ ಕಲ್ಪಿತಗೊಂಡಿದ್ದು ಇನ್ನೊಬ್ಬ ಸ್ತ್ರೀಯಳನ್ನು ಬಲವಾಗಿ ತಬ್ಬಿಕೊಂಡು ಆಕಾಶಕ್ಕೆ ಹಾರುತ್ತಿರುವಂತೆ ಬಿಂಬಿತವಾಗಿದ್ದಾಳೆ. ಮುಖ್ಯಸ್ತ್ರೀಯ ಹಿಂದೆ ಸಾಂಕೇತಿಕವಾಗಿ ರೆಕ್ಕೆಗಳು ಸಂಯೋಜನೆಗೊಂಡಿವೆ. ಇಬ್ಬರ ದೈಹಿಕ ರೂಪಲಕ್ಷಣಗಳು ಆಕರ್ಷಕವಾಗಿ ಮೂಡಿಬಂದಿದ್ದು, ವರ್ಣಗಳ ಛಾಯೆಯಿಂದ ದುಂಡುತನವು ಎದ್ದು ತೋರುತ್ತಿದೆ. ಈ ಚಿತ್ರ ಸಂಯೋಜನೆಯಲ್ಲಿ ರೇಖೆಗಳ ಚಲನೆ, ದಟ್ಟತೆ, ಬಾಗುವಿಕೆ ಮತ್ತು ಲಾವಣ್ಯತೆಯು ಕಲಾವಿದನ ಕೈ ಚಳಕದಿಂದ ಉತ್ತಮವಾಗಿ ಅಭಿವ್ಯಕ್ತಗೊಂಡಿದೆ. ಇಲ್ಲಿ ಕಲಾವಿದನು ಮುಖದ ಸೌಂದರ್ಯತೆಯನ್ನು ತರುವಲ್ಲಿ ಸಫಲನಾಗಿದ್ದಾನೆ.

*********

ಗಾಜಿನ ಮೇಲಿನ ಚಿತ್ರಗಳಲ್ಲಿ ರೆಕ್ಕೆ ಪುಕ್ಕಗಳನ್ನು ಹೊಂದಿರುವ, ಗಂಧರ್ವ ಸ್ತ್ರೀಯರಂತೆ ಕಂಡುಬರುವ ಅನೇಕ ದೃಶ್ಯಗಳು ರಚನೆಗೊಂಡಿದ್ದನ್ನು ನೋಡುತ್ತೇವೆ. ಈ ಸ್ತ್ರೀಯರು ಸಂಗೀತ ಪರಿಕರಗಳಾದ ವೀಣೆ, ಗೀಟಾರ್, ವಯೋಲಿನ್‌ಗಳನ್ನು ನುಡಿಸುತ್ತಿರುವಂತೆ ಚಿತ್ರಿತಗೊಂಡಿರುವರು. ಕೆಲವರು ರೆಕ್ಕೆಗಳನ್ನು ಹೊಂದಿದ್ದರೆ, ಇನ್ನೂ ಕೆಲವರು ಅರೆನಗ್ನರಾಗಿದ್ದಾರೆ. ಇವರಿಗೆ ರೆಕ್ಕೆಗಳು ಕಂಡುಬರುವುದಿಲ್ಲ. ಇಲ್ಲಿ ಕಂಡುಬರುವ ಇಂಥ ಚಿತ್ರಗಳಲ್ಲಿ ಉಡುಗೆ ತೊಡುಗೆಗಳ, ಆಕೃತಿಗಳ

ರೂಪಲಕ್ಷಣಗಳ ಹಾಗೂ ರಚನಾ ಪದ್ಧತಿಯಲ್ಲಿ ಪ್ರಾದೇಶಿಕ ವೈವಿಧ್ಯತೆಯು ಕಂಡು ಬರುತ್ತದೆ. ಆ ಕುರಿತು ವಿವೇಚನೆ ಮಾಡಲಾಗಿದೆ.

**********

**ಚಿತ್ರಸಂಖ್ಯೆ ೩.೨ ವೀಣೆ ನುಡಿಸುತ್ತಿರುವ ಗಂಧರ್ವ ಸ್ತ್ರೀ**

ಈ ಚಿತ್ರದಲ್ಲಿ ಓರ್ವ ಗಂಧರ್ವ ಸ್ತ್ರೀಯು ಸಾಂಪ್ರದಾಯಿಕ ಸಂಗೀತ ಪರಿಕರವಾದ ವೀಣೆಯನ್ನು ನುಡಿಸುತ್ತಾ ಕುಣಿಯುತ್ತಿರುವಂತೆ ಚಿತ್ರಿತಗೊಂಡಿದ್ದಾಳೆ. ಇವಳು ಚಿತ್ರವಿನ್ಯಾಸಗಳಿಂದ ಕೂಡಿದ ತುಂಡು ಲಂಗ ಮತ್ತು ರತ್ನ ಹಾಗೂ ಹರಳುಗಳಿಂದ ರಚಿತವಾದ ಅಲಂಕಾರಿಕ ರವಿಕೆಯನ್ನು ಹೊಂದಿದ್ದಾಳೆ. ಕೆಂಪು ಬಣ್ಣದ ಪ್ಯಾಂಟನ್ನು ಕಪ್ಪು ಬೂಟುಗಳನ್ನು ಧರಿಸಿದ್ದು, ವಿಶಿಷ್ಟವಾಗಿ ಆಭರಣಗಳನ್ನು ಈ ಆಕೃತಿಯಲ್ಲಿ ಕಲ್ಪಿಸಲಾಗಿದೆ. ಹೇರಳವನ್ನು ಸರಿಯಾಗಿ ಬಾಚಿಕೊಂಡು ಜುಟ್ಟನ್ನು ಕಟ್ಟಲಾಗಿದೆ. ಆ ಜುಟ್ಟಿಗೆ ಚಿನ್ನದ ಹಾಗೂ ಮುತ್ತಿನ ಸರಗಳನ್ನು ಅಲಂಕರಿಸಲಾಗಿದೆ ಇದು ಉತ್ತರ ಭಾರತದ ವೇಷಭೂಷಣಗಳನ್ನು ಅನುಕರಿಸುತ್ತದೆ. ಆಕೃತಿಯ ಅಂಗಾಂಗ ರಚನೆಯಲ್ಲಿ ಚಲನೆಯು ಎದ್ದು ತೋರುತ್ತಿದ್ದು, ಆಕರ್ಷಕ ನಿಲುವನ್ನು ವ್ಯಕ್ತಪಡಿಸಲಾಗಿದೆ. ರೇಖೆಗಳಲ್ಲಿ ದಟ್ಟತೆ, ಏರಿಳಿತಗಳು ಮೂಡಿಬಂದಿದ್ದು, ವಿನ್ಯಾಸದಲ್ಲಿ ಜೀವಂತಿಕೆ ರೂಪುಗೊಂಡಿದೆ. ಚಿತ್ರದ ಹಿನ್ನೆಲೆಯಲ್ಲಿ ಚಿತ್ರವಿನ್ಯಾಸಗಳಿಂದ ಕೂಡಿದ ಪರದೆಗಳನ್ನು ಅಲಂಕಾರಿಕವಾಗಿ ಜೋಡಣೆ ಮಾಡಲಾಗಿದೆ. ನೀಲಿ ಬಣ್ಣವನ್ನು ಏಕರೂಪವಾಗಿ ಲೇಪನಮಾಡಲಾಗಿದೆ. ಕೆಂಪು ಮಿಶ್ರಿತ ಹಳದಿ ಬಣ್ಣದಿಂದ ನೆಲಹಾಸನ್ನು ಸಂಯೋಜಿಸಿ ಕೆಂಪು ಪುಷ್ಪಗಳನ್ನು ಚಿತ್ರಿಸಲಾಗಿದೆ. ಇಲ್ಲಿ ಸ್ತ್ರೀಯು ರೆಕ್ಕೆಗಳನ್ನು ಧರಿಸಿ ದೇವರ ನಾಮ ಸ್ಮರಣೆಯನ್ನು ಮಾಡುತ್ತಿರುವಂತೆ ಬಿಂಬಿತವಾಗಿರುವಳು.

**ಚಿತ್ರಸಂಖ್ಯೆ ೩.೩. ವೀಣೆ ನುಡಿಸುತ್ತಿರುವ ಅರೆನಗ್ನ ಸ್ತ್ರೀ**

ಈ ಚಿತ್ರವು ಗುಳೇದಗುಡ್ಡದ ಶ್ರೀ ವೀರಗಂಟೆಪ್ಪ ಕರಡಿಯವರ ಮನೆಯಲ್ಲಿ ಲಭ್ಯವಿದೆ. ಚಿತ್ರದಲ್ಲಿ ಓರ್ವ ಅರೆನಗ್ನ ಸ್ತ್ರೀಯು ವೀಣೆ ಹಿಡಿದು ಸಂಗೀತ ನುಡಿಸುತ್ತಿರುವಂತೆ ಚಿತ್ರಿತಗೊಂಡಿದ್ದಾಳೆ. ಕಲಾವಿದನು ಈ ಸ್ತ್ರೀ ಆಕೃತಿಗೆ ಆ ಸಂಯೋಜಿತವಾಗಿ ಶ್ವೇತವರ್ಣದ ಸೀರೆಯನ್ನು ಚಿತ್ರಿಸಿದ್ದು ಸ್ಪಷ್ಟ ವಿವರಣೆಯು ಕಂಡು ಬರುವುದಿಲ್ಲ. ಸೀರೆಯು ದೇಹದ ಅರ್ಧಭಾಗವನ್ನು ಆವರಿಸಿದ್ದು ಇನ್ನುಳಿದಂತೆ ಅರೆನಗ್ನವಾಗಿ ಚಿತ್ರಿಸಿ ಸ್ತ್ರೀಯ ಅಂಗ ಸೌಷ್ಠವವನ್ನು ತೋರ್ಪಡಿಸಲು ಇಲ್ಲಿ ಕಲಾವಿದನು ಪ್ರಯತ್ನಿಸಿದ್ದಾನೆಂದು ತೋರುತ್ತದೆ. ವೇಷಭೂಷಣಗಳನ್ನು ತೋರಿಸುವಲ್ಲಿ ಚಿತ್ರದೋಷಗಳನ್ನು ಮಾಡಿದ್ದನಾದರೂ ಸ್ಪಷ್ಟ ರೇಖೆ ಹಾಗೂ ವರ್ಣಛಾಯೆಗಳಿಂದ ಬಿಂಬಿತವಾದ ಸ್ತ್ರೀಯ ಶರೀರವನ್ನು ಚಿತ್ರಿಸಿದ್ದಾನೆ. ಎತ್ತಿ ಕಟ್ಟಿದ ತುರುಬು ಪಾರ್ಶ್ವಭಾಗದಲ್ಲಿ ಬಿಂಬಿತವಾಗಿದ್ದು, ಅದಕ್ಕೆ ಕೆಂಪು ಹೂವಿನ ಮಾಲೆಯನ್ನು ಸಂಯೋಜಿಸಲಾಗಿದೆ. ಕಿವಿಯಲ್ಲಿ ಓಲೆಗಳು, ಕತ್ತಿನಲ್ಲಿ ಮುತ್ತಿನ ಸರ, ಮೂಗುತಿ, ಬೆರಳುಂಗುರ ಮತ್ತು ಚಿನ್ನದ ಬಳೆಗಳನ್ನು ಚಿತ್ರಿಸಲಾಗಿದೆ. ಈ ಚಿತ್ರದಲ್ಲಿ ಚರ್ಮವಾದ್ಯವಾದ ಡೋಲನ್ನು ಚಿತ್ರವಿನ್ಯಾಸಗಳಿಂದ ವರ್ಣಮಯವಾಗಿ ಚಿತ್ರಿಸಿದ್ದು, ಅದು ನೋಡಲು ದಿಂಬಿನಂತೆ ಕಂಡುಬರುತ್ತದೆ. ಇಲ್ಲಿ ಬಿಂಬಿತವಾಗಿರುವ ಸ್ತ್ರೀಯು ಕಾಲ್ಪನಿಕ ಗಂಧರ್ವ ಸ್ತ್ರೀಯಂತೆ ಕಂಡುಬರುತ್ತಾಳೆ. ಚಿತ್ರವು ರೇಖೆ ಹಾಗೂ ವರ್ಣಗಳ ಛಾಯೆಯಿಂದ ಆಕರ್ಷಕವಾಗಿ ಮೂಡಿಬಂದಿದೆ.

ಆದರೆ ಆಕೃತಿಗಳ ಸಂಯೋಜನೆಯಲ್ಲಿ ಕೆಲವು ದೋಷಗಳು ಅಲ್ಲಲ್ಲಿ ಕಂಡು ಬರುತ್ತವೆ.

**ಚಿತ್ರಸಂಖ್ಯೆ ೩೪, ೩೫ ವೀಣಾ ನಿರತ ಸ್ತ್ರೀಯರು**

ಈ ಎರಡೂ ಚಿತ್ರಗಳಲ್ಲಿ ಇರ್ವರೂ ಅರೆನಗ್ನ ಸ್ತ್ರೀಯರು ವೀಣೆಯನ್ನು ಹಿಡಿದು ಸಂಗೀತ ನುಡಿಸುತ್ತಿರುವರು. ಚಿತ್ರ ೩೪ ರಲ್ಲಿ ಸಂಗೀತಗಾರ್ತಿಯ ಅಂಗಾಂಗ ರಚನೆಯು ರೇಖೆ ಹಾಗೂ ವರ್ಣ ಸಂಯೋಜನೆಯಿಂದ ಆಕರ್ಷಕವಾಗಿ ಮೂಡಿಬಂದಿದೆ. ಇಲ್ಲಿ ಕಲಾವಿದನು ಮುಖ ಹಾಗೂ ದೇಹದ ರಚನೆಗೆ ಮಹತ್ವ ನೀಡಿದ್ದಷ್ಟು ದೇಹದ ಕೆಳಭಾಗ ಹಾಗೂ ಸೀರೆ ಸಂಯೋಜನೆ ಮಾಡುವಲ್ಲಿ ಅಷ್ಟೊಂದು ಆಸ್ಥೆಯನ್ನು ತೋರಿಸಿಲ್ಲ, ವರ್ಣಸಂಯೋಜನೆ ಹಾಗೂ ಚಿತ್ರದ ನಕ್ಷಾವಿನ್ಯಾಸವು ಉತ್ತಮವಾಗಿ ಮೂಡಿಬಂದಿದೆ. ಮುಖದ ಮುಂದೆ ಬಿಂಬಿತವಾದ ಜುಟ್ಟು, ಕಣ್ಣು, ಮೂಗು, ತುಟಿ, ಆಭರಣಗಳು ರೇಖಾ ವೈಖರಿಯಿಂದ ಸುಸ್ಪಷ್ಟವಾಗಿ ಚಿತ್ರಿತಗೊಂಡಿವೆ. ಸ್ತನಗಳ ದುಂಡುತನ, ಕೈಗಳ ದಷ್ಟಪುಷ್ಟತೆ ಹಾಗೂ ದೇಹದ ದುಂಡುತನವು ಸ್ತ್ರೀಯ ಯೌವನಾವಸ್ಥೆಯನ್ನು ಪ್ರಕಟಪಡಿಸುತ್ತದೆ. ರೇಖೆ ಹಾಗೂ ವರ್ಣಛಾಯೆಯಿಂದ ವೀಣೆಯ ನೈಜಕಲ್ಪನೆ ವ್ಯಕ್ತಗೊಂಡಿದೆ. ಈ ಚಿತ್ರವು ಚಿತ್ರ ೩೩ ರಂತೆ ಮೂಡಿಬಂದಿದೆ. ಇಲ್ಲಿ ಅಲಂಕರಣದ ಆಶಯ ಪ್ರಕಟಗೊಂಡಿದೆ.

ಚಿತ್ರ ೩೫ ರಲ್ಲಿ ಸ್ತ್ರೀಯ ದೇಹರಚನೆಯು ನೀಳವಾಗಿ ರಚನೆಗೊಂಡಿದ್ದು, ರೇಖೆಗಿಂತ ವರ್ಣಛಾಯೆಯ ಮೂಲಕ ದೇಹದ ದುಂಡುತನವು ಮೂಡಿಬಂದಿದೆ ಹಾಗೂ ಅಂಗಾಂಗಗಳ ಗಟ್ಟಿತನವನ್ನು, ಸೌಂದರ್ಯವನ್ನು ನಿರೂಪಿಸುತ್ತದೆ. ಆಭರಣಗಳ ಅಲಂಕಾರ ರೇಖಾ ಪ್ರಧಾನವಾಗಿ ಮೂಡಿಬಂದಿದೆ. ವಿವಿಧ ವರ್ಣಗಳ ಹರಳುಗಳಿಂದ ಮೂಡಿದ ಚಿನ್ನದ ಆಭರಣಗಳಂತೆ ರಚನೆಗೊಂಡಿವೆ. ಸೀರೆಯನ್ನು ಸಾಂಕೇತಿಕವಾಗಿ ಸಂಯೋಜಿಸಿದ್ದು ಅದರ ನಿರಿಗೆಗಳನ್ನು ಕ್ರಮಬದ್ಧವಾಗಿ ಜೋಡಿಸಿದಂತೆ ರಚನೆ ಮಾಡಲಾಗಿದೆ. ಸೀರೆ ಅಂಚು ಮತ್ತು ಸೆರಗಿನ ಭಾಗಕ್ಕೆ ಚಿನ್ನದ ಹಾಳೆಯನ್ನು ಅಂಟಿಸಿ ಸೂಕ್ಷ್ಮ ರೇಖೆಗಳಿಂದ ಚಿತ್ರವಿನ್ಯಾಸಗಳನ್ನು ಬರೆಯಲಾಗಿದೆ. ಮುಖಭಾವನೆಯು ಸಂಗೀತದಲ್ಲಿ ಮಗ್ನಳಾಗಿರುವಂತೆ ಬಿಂಬಿಸಲಾಗಿದೆ. ಈ ಚಿತ್ರದಲ್ಲಿ ವೀಣೆಯ ಚಿತ್ರವು ಸೂಕ್ಷ್ಮರೇಖೆಗಳಿಂದ ಅಲಂಕಾರಿಕತೆ ಹಾಗೂ ನೈಜತೆಯಿಂದ ರಚನೆಗೊಂಡಿದೆ. ಅದರ ನೈಜ ಸ್ವರೂಪವು ಉತ್ತಮವಾಗಿ ಅಭಿವ್ಯಕ್ತಗೊಂಡಿದೆ. ಚಿತ್ರದ ಹಿನ್ನೆಲೆಯಲ್ಲಿ ಕಪ್ಪು ಬಣ್ಣದಿಂದ ಏಕರೂಪವಾಗಿ ಲೇಪನಮಾಡಲಾಗಿದ್ದು, ವರ್ಣರಂಜಿತ ಪರದೆಗಳನ್ನು ಸಹ ಸಂಯೋಜಿಸಲಾಗಿದೆ. ಚಿತ್ರವು ಆಕರ್ಷಕ ವರ್ಣಗಳಿಂದ ಹಾಗೂ ರೇಖಾಸೂಕ್ಷ್ಮತೆಯಿಂದ ಕೂಡಿದ ಸುಂದರ ಚಿತ್ರವೆಂದು ಹೇಳಬಹುದು. ಈ ಚಿತ್ರವು ಗುಳೇದಗುಡ್ಡದ ಶ್ರೀ ಬಸವಪ್ರಭು ಗಂಗಾವತಿಯವರ ಮನೆಯಲ್ಲಿ ಲಭ್ಯವಿದೆ.

**ಚಿತ್ರಸಂಖ್ಯೆ ೩೬ ಶೃಂಗಾರಗೊಂಡ ಮಹಿಳೆಯ ವೀಣಾವಾದನ**

ಈ ಚಿತ್ರವು ೬೫ x ೭೫ ಸೆಂ.ಮೀ. ಅಳತೆಯನ್ನು ಹೊಂದಿದ್ದು, ಇದು ಗುಳೇದಗುಡ್ಡದ ಶ್ರೀ ಬಸವಪ್ರಭು ಗಂಗಾವತಿಯವರ ಮನೆಯಲ್ಲಿ ಲಭ್ಯವಿದೆ. ಈ ಚಿತ್ರವು ಅತ್ಯಂತ ಅಲಂಕಾರದ ಆಶಯವನ್ನು ಹೊಂದಿದ್ದು, ಸೂಕ್ಷ್ಮರೇಖೆ ಹಾಗೂ ವರ್ಣ ವೈವಿಧ್ಯತೆಯಿಂದ ರಚನೆಗೊಂಡಿದೆ. ಶಿಸ್ತುಬದ್ಧ ರಚನಾಕ್ರಮವನ್ನು ಹೊಂದಿದೆ. ಇದು ಶ್ರೀಮಂತಿಕೆಯ ಬದುಕನ್ನು

ನಿರೂಪಿಸುತ್ತದೆ. ಮಹಿಳೆಯ ಅಂಗಾಂಗಗಳ ವಿನ್ಯಾಸವು ಚಿತ್ರಪ್ರಾಮಾಣ್ಯಗಳಿಂದ ಕೂಡಿದ್ದು, ದೇಹದ ದುಂಡುತನ, ಭಾವನಾ ನಿರೂಪಣೆಯೂ ಉತ್ತಮವಾಗಿ ವ್ಯಕ್ತಗೊಂಡಿದೆ. ಸೀರೆಯು ಬೆಲೆವುಳ್ಳದ್ದೆಂದು ತೋರಿಸಲು ಚಿನ್ನದ ರೇಖ ಹಾಗೂ ಕೆಂಪು ಮೆರಗು ವರ್ಣಗಳಿಂದ ಪಿತಾಂಬರ ಸಿರೆಯ ನಕ್ಷೆಯಂತೆ ಸಂಯೋಜನೆಯನ್ನು ಮಾಡಲಾಗಿದೆ. ರವಿಕೆಯೂ ಸಹ ನೀಲಿ ಹಾಗೂ ಕಪ್ಪು ಬಣ್ಣಗಳ ಪಟ್ಟಿಕೆಗಳಿಂದ ವಿನ್ಯಾಸಗೊಂಡಿದ್ದು ಅದರ ಅಂಚು ಚಿತ್ರವಿನ್ಯಾಸಗಳಿಂದ ರಚನೆಗೊಂಡಿದೆ. ಆಭರಣಗಳ ಅಲಂಕಾರ, ಕೇಶಾಲಂಕಾರವು ಕಲಾತ್ಮಕವಾಗಿ ಬಿಂಬಿತವಾಗಿವೆ. ಚಿತ್ರದ ಹಿನ್ನೆಲೆಯಲ್ಲಿ ಸುಸಜ್ಜಿತ ಕಂಬ ಕಮಾನುಗಳಿಂದ ಕೂಡಿದ ಚಿನ್ನದ ಮಂಟಪವು ರೇಖೆ ಹಾಗೂ ವರ್ಣಗಳಿಂದ ಚಿತ್ರಿತಗೊಂಡಿದ್ದು, ಅಲ್ಲಲ್ಲಿ ಬೆಲೆಬಾಳುವ ಗಾಜಿನ ತೂಗುದೀಪಗಳ ಗೊಂಚಲುಗಳನ್ನು ನೇತುಹಾಕಲಾಗಿದೆ. ವೀಣಾವಾದನ ಮಾಡುತ್ತಿರುವ ಸ್ತ್ರೀಯ ಎಡ ಹಾಗೂ ಬಲಪಾರ್ಶ್ವಗಳಲ್ಲಿ ಚಿನ್ನದ ಲೇಪನದಿಂದ ರಚಿತವಾದ ಹೂವಿನ ಕುಂಡಲಗಳನ್ನು ಕಾಣಬಹುದು, ಹಿನ್ನೆಲೆಯಲ್ಲಿ ಕಪ್ಪು ವರ್ಣಬಳಕೆ ಮಾಡಿದುದರಿಂದ ಚಿತ್ರವು ಪ್ರಖರವಾಗಿ ಕಂಡು ಬರುತ್ತದೆ. ಇಲ್ಲಿ ಸ್ತ್ರೀಯ ಬಲಭುಜದ ಮೇಲೆ ಗಿಳಿಯ ಚಿತ್ರವು ರಚಿಸಿದ್ದು ಕಂಡುಬರುತ್ತದೆ. ಚಿತ್ರಕರ್ಮಗಳ ಪ್ರಕಾರ ಈ ಚಿತ್ರದೃಶ್ಯವು ಉತ್ತಮವೆಂದು ಹೇಳಬಹುದು.

**ಚಿತ್ರಸಂಖ್ಯೆ ೩೭, ೩೮, ೩೯, ೪೦, ೪೧, ೪೨, ೪೩, ೪೪ ವೀಣಾವಾದಕಿಯರು**

ಇಲ್ಲಿ ಕಂಡುಬರುವ ಎಂಟು ಚಿತ್ರಗಳಲ್ಲಿ ಸ್ತ್ರೀಯರು ವಿವಿಧ ಭಂಗಿಗಳಲ್ಲಿ ಕುಳಿತು ವೀಣಾವಾದನವನ್ನು ಮಾಡುತ್ತಿರುವರು. ಕೆಲವು ರೇಖಾ ಪ್ರಧಾನವಾಗಿ ಇನ್ನೂ ಕೆಲವು ರೇಖಾ ರಹಿತ ವಿನ್ಯಾಸಗಳಿಂದ ವರ್ಣ ಸಂಯೋಜನೆಯನ್ನು ಮಾಡಿದ ಚಿತ್ರಗಳು ರಚಿತಗೊಂಡಿವೆ. ಚಿನ್ನದ ಲೇಪನದ ಹಾಳೆ, ಬೆಳ್ಳಿ ಮೆರಗಿನ ಲೋಹದ ಹಾಳೆಗಳನ್ನು ಹಾಗೂ ಕೆಂಪು ಹಸಿರು, ಮೆರಗು ವರ್ಣಗಳನ್ನು ಪ್ರಧಾನವಾಗಿ ಬಳಸಿಕೊಂಡು ಅಲಂಕಾರಿಕ ಚಿತ್ರವಿನ್ಯಾಸಗಳಿಂದ ಈ ಚಿತ್ರಗಳನ್ನು ರಚನೆ ಮಾಡಲಾಗಿದೆ. ಕೆಲವು ಚಿತ್ರಗಳಲ್ಲಿ ಅಲಂಕಾರದ ಆಶಯವು ವೈಭವಿಕರಣಗೊಂಡಿದ್ದರೆ ಇನ್ನು ಕೆಲವು ಚಿತ್ರಗಳಲ್ಲಿ ಸಹಜ ಸೌಂದರ್ಯತೆಯನ್ನು ತರಲಾಗಿದೆ. ಭಾರತೀಯ ಸಾಂಪ್ರದಾಯಿಕ ವೇಷಭೂಷಣಗಳಿಂದ ಬಿಂಬಿತವಾಗಿರುವ ವೀಣಾವಾದಕಿಯರು ನಮ್ಮ ಸಂಗೀತ ಸಂಪ್ರದಾಯದ ಶ್ರೀಮಂತಿಕೆಯನ್ನು ಕಟ್ಟಿಕೊಡುತ್ತಾರೆ.

ಚಿತ್ರ ೩೭ ರಲ್ಲಿ ಸೀರೆ ಮತ್ತು ರವಿಕೆಯಲ್ಲಿ ಅಲಂಕಾರಿಕ ಚಿತ್ರವಿನ್ಯಾಸವು ಓರಣಗೊಂಡಿದ್ದು, ಆಭರಣಗಳ ಅಲಂಕಾರ ಕೇಶವಿನ್ಯಾಸವು ಆಕರ್ಷಕವಾಗಿ ಬಿಂಬಿತವಾಗಿದೆ. ಇಲ್ಲಿ ಕೇಶವಿನ್ಯಾಸಕ್ಕೆ ವಿಶೇಷವಾಗಿ ಆಭರಣಗಳನ್ನು ಅಲಂಕರಿಸಲಾಗಿದೆ. ಮರದಿಂದ ತಯಾರಿಸಿದ ವೀಣೆಯ ಚಿತ್ರವು ನೈಜರೇಖೆಗಳಿಂದ ಹಾಗೂ ವರ್ಣಗಳ ಬೆಳಕು ನೆರಳುಗಳಿಂದ ಮೂರು ಆಯಾಮದ ಕಲ್ಪನೆಯನ್ನು ಕೊಡುತ್ತದೆ. ದೈಹಿಕ ರೂಪಲಕ್ಷಣಗಳು ದಷ್ಟಪುಷ್ಟವಾಗಿ ರೂಪಗೊಂಡಿದ್ದು ಚಿತ್ರವಿನ್ಯಾಸದಿಂದ ರಚನೆಗೊಂಡ ಡೋಲನ್ನು ಬಡಿಯುತ್ತಿರುವ ಚಲನೆಯು ಈ ಸ್ತ್ರೀ ಚಿತ್ರದಲ್ಲಿ ಕಂಡುಬರುತ್ತದೆ. ಆಕೃತಿಯು ಪದ್ಮಾಸನದಲ್ಲಿ ರಚನೆಗೊಂಡಿದ್ದು, ಹಿನ್ನೆಲೆಯಲ್ಲಿ ಅಲಂಕಾರಿಕ ಪರದೆಗಳನ್ನು ಭಿತ್ತಿಯನ್ನು ಹಾಗೂ ನೆಲಹಾಸನ್ನು ಸಂಯೋಜಿಸಲಾಗಿದೆ.

ಚಿತ್ರ ೩೮ ರಲ್ಲಿ ವಿಶಿಷ್ಟ ಭಂಗಿಯಲ್ಲಿ ಕುಳಿತ ಸ್ತ್ರೀಯು ವೀಣೆಯನ್ನು ನುಡಿಸುವಲ್ಲಿ ತಲ್ಲೀನಳಾಗಿದ್ದಾಳೆ. ಹಾಲು ಬಳುಪಿನ ಮೈಬಣ್ಣವಿರುವಂತೆ ರೂಪಗೊಳಿಸಿದ್ದು, ಹೂವಿನ ಚಿತ್ರವಿನ್ಯಾಸಗಳಿಂದ ಕೂಡಿದ ಸೀರೆ ಹಾಗೂ ಕುಪ್ಪಸಗಳನ್ನು ಸಂಯೋಜಿಸಲಾಗಿದೆ. ಅಲಂಕಾರದಲ್ಲಿ ಸಹಜತೆ ಮೂಡಿಬಂದಿದ್ದು. ಸಂಪ್ರದಾಯಸ್ಥ ಮಹಿಳೆಯಂತೆ ಬಿಂಬಿತವಾಗಿದ್ದಾಳೆ. ಇಲ್ಲಿ ರೇಖೆ ಗೌಣವಾಗಿದ್ದು ವರ್ಣಗಳ ಕೂಡಿವಿಕೆಯಿಂದ ದುಂಡುತನವನ್ನು ತರಲಾಗಿದೆ. ಆಭರಣಗಳ ವಿನ್ಯಾಸದಲ್ಲಿ ವಿರಳತೆ ಕಾಣುತ್ತದೆ. ವೀಣೆಯ ಚಿತ್ರವು ಸೂಕ್ಷ್ಮರೇಖೆಗಳಿಂದ, ಚಿತ್ರವಿನ್ಯಾಸಗಳಿಂದ ಬಿಂಬಿತವಾಗಿದ್ದು, ಇಲ್ಲಿ ವೀಣೆಯನ್ನು ಕಲಾತ್ಮಕ ಬಾಹ್ಯಸ್ವರೂಪವನ್ನು ಕಲ್ಪಿಸಲಾಗಿದೆ.

ಚಿತ್ರ ೩೯ ರಲ್ಲಿ ವೀಣಾವಾದಕಿಯ ಶರೀರ ಚಲನೆಯು ದಿಟ್ಟತನದಿಂದ ಬಿಂಬಿತವಾಗಿದ್ದು, ಆಕರ್ಷಕ ಮೈಕಟ್ಟನ್ನು ಹೊಂದಿರುವಳು. ಪದ್ಮಾಸನದಲ್ಲಿ ಕುಳಿತು ವೀಣೆಯನ್ನು ನುಡಿಸುತ್ತಿರುವಳು. ಕೇಶವಿನ್ಯಾಸ ಹಾಗೂ ಆಭರಣಗಳ ವಿನ್ಯಾಸವು ಅತ್ಯಂತ ಕಲಾತ್ಮಕವಾಗಿ ಹಾಗೂ ಅಲಂಕಾರಿಕವಾಗಿ ಸಂಯೋಜನೆಗೊಂಡಿದ್ದು ನವ ವಧುವಿನಂತೆ ಕಂಗೊಳಿಸುತ್ತಿದ್ದಾಳೆ. ರವಿಕೆಯ ಅಂಚು ವಿಶಿಷ್ಟವಾಗಿ ಚಿತ್ರವಿನ್ಯಾಸಗಳಿಂದ ರಚನೆಗೊಂಡಿದೆ. ಸೀರೆಯು ಕೆಂಪು ಹಾಗೂ ಹಳದಿ ಪಟ್ಟಿಗಳಿಂದ ರೂಪಗೊಂಡಿದೆ. ವೀಣಾವಾದಕಿಯ ಭುಜದ ಮೇಲೆ ಗಿಳಿಯ ಚಿತ್ರವಿದ್ದು ಇದು ಸಾಂಕೇತಿಕವಾಗಿ ರೂಪಗೊಂಡಿದೆ. ಅದರ ನೈಜತೆಯ ಸ್ವರೂಪ ಮೂಡಿಲ್ಲ. ಸಂಗೀತ ಪ್ರೇಮಿಗಳಿಗೆ ಮುದ ನೀಡುವಂತೆ ಬಿಂಬಿತವಾಗಿದೆ. ವೀಣೆಯನ್ನು ರೇಖಾ ಸಂಯೋಜನೆಯಿಂದ ಕಲಾತ್ಮಕವಾಗಿ ಚಿತ್ರಿಸಲಾಗಿದೆ. ಹಿನ್ನೆಲೆಯಲ್ಲಿ ತೂಗುದೀಪಗಳನ್ನು ಹಾಗೂ ಕಂಬಗಳ ವಿನ್ಯಾಸಗಳನ್ನು ಸಂಯೋಜಿಸಲಾಗಿದೆ. ಇಲ್ಲಿ ಬಿಳಿ ಬಣ್ಣವು ಪ್ರಧಾನವಾಗಿ ಮೂಡಿ ಬಂದಿದ್ದು ಅದರ ಜೊತೆ ನೀಲಿ, ಹಳದಿ, ಕಂದು ಗೆಂಪು ಹಾಗೂ ಕಪ್ಪುಗಳನ್ನು ಮಿಶ್ರಮಾಡಿ ಚಿತ್ರರಚಿಸಿದ್ದು ಗೋಚರವಾಗುತ್ತದೆ. ಕಲಾವಿದನು ಈ ಚಿತ್ರವನ್ನು ಪುನಃ ಪುನಃ ನೋಡಬೇಕೆನ್ನುವಂತೆ ರಚನಾ ಕ್ರಮವನ್ನು ಅನುಸರಿಸಿದ್ದಾನೆ.

ಚಿತ್ರ ೪೦ ರಲ್ಲಿ ವೀಣಾವಾದಕಿಯು ರೇಖಾ ಪ್ರಧಾನವಾಗಿ ಮೂಡಿಬಂದಿದ್ದು, ಬಿಳಿ ಹಾಗೂ ಕಂದುಗೆಂಪು ಮಿಶ್ರಿತ ವರ್ಣಗಳ ಸಂಯೋಜನೆಯಿಂದ ಶಾರೀರಿಕ ವಿವರಣೆಯು ಸಪುಷ್ಟವಾಗಿ ಅಭಿವ್ಯಕ್ತಗೊಂಡಿದೆ. ಇಲ್ಲಿ ಬಿಂಬಿತವಾಗಿರುವ ವೀಣಾವಾದಕಿಯ ವೇಷಭೂಷಣಗಳು, ದೈಹಿಕ ಲಕ್ಷಣಗಳು ಶ್ರೀಮಂತ ಮಹಿಳೆಯನ್ನು ಪ್ರತಿನಿಧಿಸುತ್ತವೆ. ಕಪ್ಪು ವರ್ಣದ ರವಿಕೆ, ಹೂವಿನ ಚಿತ್ತಾರವುಳ್ಳ ಸೀರೆಯನ್ನು ಇಲ್ಲಿ ಸಂಯೋಜಿಸಲಾಗಿದ್ದು, ಸೀರೆ ಧರಿಸಿದ ರೀತಿಯು ಗೌರವಸ್ಥ ಸಂಸ್ಕೃತಿಯನ್ನು ಸೂಚಿಸುತ್ತದೆ. ಆಭರಣಗಳು ಅವಶ್ಯವಿದ್ದಷ್ಟು ಸಂಯೋಜಿಸಲಾಗಿದ್ದು, ಸಹಜ ಸೌಂದರ್ಯವೂ ಉದ್ದೀಪನಗೊಂಡಿದೆ. ಇಲ್ಲಿ ವೀಣೆಯನ್ನು ಅಡ್ಡಲಾಗಿ ಚಿತ್ರಿಸಿದ್ದು ರೇಖೆ ಹಾಗೂ ವರ್ಣಗಳಿಂದ ಕಲಾತ್ಮಕವಾಗಿ ಪ್ರಕಟಪಡಿಸಲಾಗಿದೆ. ಈ ಚಿತ್ರದಲ್ಲಿಯೂ ಸಹ ವೀಣಾವಾದಕಿಯ ಭುಜದ ಮೇಲೆ ಗಿಳಿಯ ಚಿತ್ರವನ್ನು ಸಂಯೋಜಿಸಲಾಗಿದೆ. ಅದು ಶ್ವೇತವರ್ಣವಿನ್ಯಾಸದಿಂದ ಕೂಡಿದೆ. ಈ ಚಿತ್ರವು ಆ ಕಾಲದ ಸಂಪ್ರದಾಯಸ್ಥ ಮಹಿಳೆಯ ಬದುಕನ್ನು ನಿರೂಪಿಸುತ್ತದೆ.

ಚಿತ್ರ ೪೧ ರಲ್ಲಿ ವೀಣಾವಾದಕಿಯ ದೈಹಿಕ ಲಕ್ಷಣಗಳು ರೇಖೆ ಹಾಗೂ ವರ್ಣಗಳಿಂದ ಸುಪುಷ್ಟವಾಗಿ ರೂಪಗೊಂಡಿದೆ. ಸೀರೆಯ ಒಡಲು ಕೆಂಪು ಮೆರಗು ಬಣ್ಣದಿಂದ ಏಕರೂಪವಾಗಿ

ಮೂಡಿಬಂದಿದ್ದು, ಅಂಚು ಚಿತ್ರವಿನ್ಯಾಸದಿಂದ ಕೂಡಿದೆ. ಆಭರಣಗಳ ಅಲಂಕಾರ, ಕೇಶಾಲಂಕಾರ ಉತ್ಕೃಷ್ಟವಾಗಿ ಬಿಂಬಿತವಾಗಿದೆ. ಆಕರ್ಷಕ ಭಾವನಿರೂಪಣೆಯನ್ನು ತರಲಾಗಿದೆ. ಹಿನ್ನೆಲೆಯಲ್ಲಿ ರತ್ನಖಚಿತವಾದ ದೊಡ್ಡ ದಿಂಬನ್ನು ಸಂಯೋಜಿಸಿದ್ದು, ಶ್ರೀಮಂತಿಕೆಯ ವೈಭವವನ್ನು ಮೆರೆದಿದೆ. ನಿರಾಳವಾಗಿ ಕಾಲು ಚಾಚಿ ವೀಣೆಯನ್ನು ಕಾಲಮೇಲಿರಿಸಿ ಸಂಗೀತ ಸುಧೆಯನ್ನು ಹಸಿರುತ್ತಿರುವಂತೆ ವೀಣಾವಾದಕಿಯೂ ನಿರೂಪಣೆಗೊಂಡಿದ್ದಾಳೆ. ಹಿನ್ನೆಲೆಯಲ್ಲಿ ಚಿತ್ರವಿನ್ಯಾಸಗಳಿಂದ ಕೂಡಿದ ಕಂಬಗಳು ಹಾಗೂ ಪರದೆಗಳನ್ನು ಜೋಡಣೆ ಮಾಡಲಾಗಿದೆ. ಚಿತ್ರವು ರೇಖೆ ಹಾಗೂ ಈ ವರ್ಣಗಳಿಂದ ಭಾವನಾತ್ಮಕವಾಗಿ ಮೂಡಿಬಂದಿದೆ.

ಚಿತ್ರ ೪೨ ರಲ್ಲಿ ವೀಣಾವಾದಕಿಯ ಮುಖದ ಭಾವನೆಯಲ್ಲಿ ಗಾಂಭೀರ್ಯತೆ ಬಿಂಬಿತವಾಗಿದ್ದು ಕಣ್ಣೋಟದಲ್ಲಿ ದಿಟ್ಟತನವು ಎದ್ದು ತೋರುತ್ತಿದೆ. ಸೀರೆ ಹಾಗೂ ಕುಪ್ಪಸಗಳು ನೈಸರ್ಗಿಕ ನಕ್ಷಾವಿನ್ಯಾಸಗಳಿಂದ ರಚಿತವಾಗಿದೆ. ಕೇಶವಿನ್ಯಾಸದಲ್ಲಿ ಮುತ್ತಿನಸರ ಹಾಗೂ ದೊಡ್ಡ ಗುಲಾಬಿಗಳ ಸಂಯೋಜನೆ ಪರಿಪೂರ್ಣವಾಗಿ ಮೂಡಿಬಂದಿದೆ. ವೀಣೆಯು ಸಹ ಚಿತ್ರವಿನ್ಯಾಸಗಳಿಂದ ರೂಪಗೊಂಡಿದ್ದು, ವರ್ಣಛಾಯೆಗಳಿಂದ ತ್ರಿಆಯಾಮದ ಕಲ್ಪನೆಯನ್ನು ತರುತ್ತದೆ. ಸ್ತ್ರೀಯ ಭುಜದ ಮೇಲೆ ಗಿಳಿಯ ಚಿತ್ರವು ಕಂಡುಬರುತ್ತಿದ್ದು ನೀಲಿ ಹಾಗೂ ಬಿಳಿಮಿಶ್ರಿತ ವರ್ಣಗಳಿಂದ ಸಂಯೋಜಿತಗೊಂಡಿದೆ. ಹಿನ್ನೆಲೆಯಲ್ಲಿ ಅಲಂಕಾರಿಕ ಮಂಟಪ ಹಾಗೂ ಪರದೆಗಳನ್ನು ಚಿತ್ರಿಸಲಾಗಿದೆ. ಚಿತ್ರವು ರೇಖೆ, ಹಾಗೂ ವರ್ಣಗಳ ಸಂಯೋಜನೆಯಿಂದ ಕಲಾತ್ಮಕ ಪ್ರಜ್ಞೆಯನ್ನು ವಿವರಿಸುತ್ತದೆ.

ಚಿತ್ರ ೪೩ ರಲ್ಲಿ ವೀಣಾವಾದಕಿಯು ಸಂಪ್ರದಾಯಸ್ಥ ಶ್ರೀಮಂತ ಮಹಿಳೆಯಂತೆ ಬಿಂಬಿತವಾಗಿದ್ದು, ವಿಶೇಷವಾಗಿ ಸೀರೆಯನ್ನು ಧರಿಸಿ ವೀಣೆಯನ್ನು ನುಡಿಸುತ್ತಿರುವಂತೆ ಕಲಾವಿದನು ಕಲ್ಪಿಸಿದ್ದಾನೆ. ರೇಖಾವಿನ್ಯಾಸದಿಂದ ಬಾಹ್ಯ ಸ್ವರೂಪವು ಆಕರ್ಷಕವಾಗಿ ಮೂಡಿಬಂದಿದ್ದು ಭಾವನಾತ್ಮಕ ಚಲನೆಯು ಎದ್ದು ತೋರುತ್ತದೆ. ಇದು ಅರ್ಧಭಾವರೂಪವನ್ನು ವ್ಯಕ್ತಪಡಿಸುತ್ತಿದ್ದು, ಉತ್ತಮ ರೇಖೆ ಹಾಗೂ ವರ್ಣ ವೈವಿಧ್ಯತೆಯಿಂದ ಕೂಡಿದ ಚಿತ್ರವೆನ್ನಬಹುದು.

ಚಿತ್ರ ೪೪ ರಲ್ಲಿ ವೀಣಾವಾದಕಿಯು ವಿಶಿಷ್ಟವಾಗಿ ಸೀರೆ ಕುಪ್ಪಸಗಳನ್ನು ಧರಿಸಿ ಕಲಾತ್ಮಕ ಕುರ್ಚಿಯ ಮೇಲೆ ಕುಳಿತು ವೀಣಾವಾದನವನ್ನು ಮಾಡುತ್ತಿರುವಂತೆ ರಚನೆಗೊಂಡಿರುವಳು. ಈ ಮಹಿಳೆಯ ರೂಪಲಕ್ಷಣಗಳು ಮರಾಠ ಸಂಸ್ಕೃತಿಯ ಸ್ತ್ರೀಯಂತೆ ಕಂಡುಬರುತ್ತಾಳೆ. ಸೀರೆಯು ಕೆಂಪು ಹಾಗೂ ಹಳದಿ ವರ್ಣಗಳಿಂದ ಕೂಡಿದ ಚಿತ್ರವಿನ್ಯಾಸವು ಮೂಡಿಬಂದಿದೆ.

ಇಲ್ಲಿ ಕೇಶವನ್ನು ಭೂಜದ ಹಿಂದೆ ಬಿದ್ದಿರುವಂತೆ ಚಿತ್ರಿಸಿದ್ದು, ಅದನ್ನು ವಿಶೇಷವಾಗಿ ಅಲಂಕರಿಸಿದ್ದು ಕಾಣಸಿಗುತ್ತದೆ. ಆಭರಣಗಳ ವಿನ್ಯಾಸವು ಆ ಮಹಿಳೆಯ ಶ್ರೀಮಂತಿಕೆಯನ್ನು ಬಿಂಬಿಸುತ್ತವೆ. ತಿಳಿಗುಲಾಬಿ ಹೂವಿನ ಮೈಬಣ್ಣದಿಂದ ಅವಳ ಶರೀರ ಸ್ವರೂಪವೂ ಆಕರ್ಷಕವಾಗಿ ಮೂಡಿಬಂದಿದೆ. ವೀಣೆಯು ಸಹ ಕಲಾತ್ಮಕವಾಗಿ ಚಿತ್ರಣಗೊಂಡಿದ್ದು, ರೇಖಾ ಲಾವಣ್ಯತೆ, ನಿಯೋಜನೆಗೊಂಡಿದೆ. ಹಿನ್ನೆಲೆಯಲ್ಲಿ ಕಂಬ ಹಾಗೂ ಪರದೆಗಳನ್ನು ಚಿತ್ರಿಸಿದ್ದು ಅವುಗಳಿಗೆ ಕಲಾತ್ಮಕ ಚಿತ್ರವಿನ್ಯಾಸಗಳನ್ನು ಸಂಯೋಜಿಸಲಾಗಿದೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ಭಾವನಾತ್ಮಕ ವಿವರಣೆಯನ್ನು ಕೊಡುತ್ತದೆ.

**ಚಿತ್ರಸಂಖ್ಯೆ ೪೫, ೪೬ ವಯೋಲಿನ್‌ವಾದಕಿಯರು**

ಇಲ್ಲಿ ಕಂಡು ಬರುವ ಎರಡೂ ಚಿತ್ರಗಳಲ್ಲಿ ಸ್ತ್ರೀಯರಿಬ್ಬರು ವಯೋಲಿನ ಸಂಗೀತವನ್ನು ನುಡಿಸುತ್ತಿರುವಂತೆ ದೃಶ್ಯಗೊಂಡಿದ್ದಾರೆ. ಎರಡೂ ಚಿತ್ರಗಳು ವಿಭಿನ್ನವಾಗಿ ರೂಪಗೊಂಡಿದ್ದು, ಸಂಗೀತದ ಆಶಯ ಒಂದೇ ಆಗಿದೆ. ಚಿತ್ರ ೪೫ ರಲ್ಲಿ ಭಾರತೀಯ ಸಾಂಪ್ರದಾಯಿಕ ಸೀರೆ ಹಾಗೂ ಕುಪ್ಪಸವನ್ನು ಧರಿಸಿ ವಯೋಲಿನ ವಾದದಲ್ಲಿ ನಿರತಳಾಗಿರುವಂತೆ ಚಿತ್ರಿತಗೊಂಡಿದ್ದಾಳೆ. ಸೀರೆಯು ಕೆಂಪು ಹಾಗೂ ಬಂಗಾರ ವರ್ಣಗಳ ಸಂಯೋಜನೆಯಿಂದ ಕೂಡಿದ್ದು ಸೂಕ್ಷ್ಮರೇಖಾವಿನ್ಯಾಸಗಳಿಂದ ರಚನೆಗೊಂಡಿವೆ. ಕರಿಕುಪ್ಪಸದ ಅಂಚುಗಳು ಚಿನ್ನದ ವರ್ಣದ ಚಿತ್ರವಿನ್ಯಾಸದಿಂದ ಎದ್ದು ತೋರುತ್ತಿದೆ. ಕೊರಳಲ್ಲಿ ವಿವಿಧ ಆಭರಣಗಳು, ನಡುವಿನಲ್ಲಿ ಚಿನ್ನದ ಡಾಬು, ಚಿನ್ನದ ಒಡ್ಯಾಣ, ಕರ್ಣಾಭರಣಗಳು, ಬೈತಲಮಣಿಗಳು, ತುರುಬಿಗೆ ಕೆಂಗುಲಾಬಿ ಹೂಗುಚ್ಚವು ಭೂಷಿತಗೊಂಡಿವೆ. ಆಕರ್ಷಕ ದೇಹಸಿರಿಯನ್ನು ಹೊಂದಿರುವ ಈ ಮಹಿಳೆಯು ಶ್ರೀಮಂತಿಕೆಯ ಸೊಬಗನ್ನು ಅನುಭವಿಸುತ್ತಿರುವಂತೆ ಬಿಂಬಿತವಾಗಿದ್ದಾಳೆ. ವಯೋಲಿನ್ ಸಂಗೀತವಾದ್ಯವು ಆಧುನಿಕತೆಯ ವಿನ್ಯಾಸವನ್ನು ಅನುಸರಿಸಿದೆ. ಅದರ ತಂತಿಯನ್ನು ಮೀಟುವ ಸಾಧನವು ಉದ್ದವಾಗಿದ್ದು ನಾಜೂಕನ್ನು ನಿರ್ದೇಶಿಸುತ್ತದೆ. ಈ ವಾದಕಿಯು ಚಿತ್ರವಿನ್ಯಾಸಗಳಿಂದ ರಚಿತವಾದ ಕುರ್ಚಿಯ ಮೇಲೆ ಆಶೀನಳಾಗಿದ್ದು, ಹಿಂಭಾಗದಲ್ಲಿ ಸೇಬಿನ ಚಿತ್ರವನ್ನು ಸಂಯೋಜಿಸಲಾಗಿದೆ. ಆಕರ್ಷಕ ಕಂಬಗಳ ವಿನ್ಯಾಸ, ಪರದೆಗಳ ವಿನ್ಯಾಸ ಹಾಗೂ ಟೈಲ್ಸ್ ಕಲ್ಪನೆಯ ನೆಲಹಾಸನ್ನು ಹಿನ್ನೆಲೆಯಾಗಿ ರಚನೆ ಮಾಡಲಾಗಿದೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ಅಲಂಕಾರ ಹಾಗೂ ಸೌಂದರ್ಯಪ್ರಜ್ಞೆಯನ್ನು ಪ್ರತಿಬಿಂಬಿಸುತ್ತದೆ.

ಚಿತ್ರ ೪೬ ರಲ್ಲಿ ಶ್ವೇತವರ್ಣದ ಸೀರೆಯನ್ನು ಧರಿಸಿ ಚಿನ್ನದ ಕುರ್ಚಿಯ ಮೇಲೆ ಆಶೀನಳಾಗಿ ವಯೋಲಿನ್ ಸಂಗೀತ ಸಾಧನವನ್ನು ಹಿಡಿದು ಯಾವುದೋ ನಿರೀಕ್ಷೆಯಲ್ಲಿರುವಂತೆ ಈ ಸಂಗೀತವಾದಕಿಯು ರಚನೆಗೊಂಡಿದ್ದಾಳೆ. ಬಹುಶಃ ವಿರಹ ಕಲ್ಪನೆಯನ್ನು ಗೋಚರಿಸುತ್ತದೆ. ಮೈ ತುಂಬುವಂತೆ ಸೀರೆಯನ್ನು ಧರಿಸಿದ್ದರೂ, ಕುಪ್ಪಸವನ್ನು ಧರಿಸಿಲ್ಲ ಸೀರೆಯ ಸೆರಗಿನಿಂದ ಎದೆ ಭಾಗವು ಮರೆಮಾಚಿದೆ. ಎತ್ತಿಕಟ್ಟಿದ ಕೇಶವಿನ್ಯಾಸವು ನೆತ್ತಿಯ ಮೇಲೆ ಜುಟ್ಟಿನಂತೆ ಹೇರಳವನ್ನು ಕಟ್ಟಿದ್ದು ಅದಕ್ಕೆ ಹೂವನ್ನು ಅಲಂಕರಿಸಲಾಗಿದೆ. ವಿಶೇಷವಾದ ಚಿನ್ನಾಭರಣಗಳು ಕೊರಳನ್ನು ಅಲಂಕರಿಸಿವೆ. ಹಾಲು ಬಿಳುಪಿನ ಮೈಸಿರಿಯನ್ನು ಹೊಂದಿರುವ ಈ ವಾದಕಿಯ ಕಣ್ನೋಟದಲ್ಲಿ ಸಂಗಾತಿಯ ಅಗಲಿಕೆಯ ಛಾಯೆಯು ಎದ್ದು ತೋರುತ್ತದೆ. ಸೀರೆಯ ನಿರಿಗೆಗಳು ಏಕರೂಪವಾಗಿ ಮೂಡಿಬಂದಿದ್ದು, ನೈಜತೆಯು ಗೌಣವಾಗಿದೆ. ಸೀರೆಯ ಅಂಚು ಸೂಕ್ಷ್ಮರೇಖೆಗಳಿಂದ ಹಾಗೂ ಚಿನ್ನದ ಹಾಳೆಯ ಸಂಯೋಜನೆಯಿಂದ ಚಿತ್ರವಿನ್ಯಾಸವು ಮೂಡಿಬಂದಿದೆ. ಹಿನ್ನೆಲೆಯಲ್ಲಿ ಕಂಬಗಳ ವಿನ್ಯಾಸ ಹಾಗೂ ನೀಲಿ ಪರದೆಯ ವಿನ್ಯಾಸವು ರೂಪಗೊಂಡಿದೆ. ಕಪ್ಪು ಬಣ್ಣವನ್ನು ಏಕರೂಪವಾಗಿ ಲೇಪನ ಮಾಡಿದುದರಿಂದ ರಾತ್ರಿಯ ಕಲ್ಪನೆಯನ್ನು ತಂದಿರಬಹುದೆಂದು ಸಾಂದರ್ಭಿಕವಾಗಿ ಅರಿಯಬಹುದಾಗಿದೆ. ಇಲ್ಲಿ ಕಲಾವಿದನು ನೆರಳು ಬೆಳಕನ್ನು ವರ್ಣಗಳ ಪ್ರಖರತೆಗಳನ್ನು ಕಾಪಾಡಿಕೊಳ್ಳುವಲ್ಲಿ ಸಫಲನಾಗಿದ್ದಾನೆ.

**ಬ. ಸ್ತ್ರೀ – ಪುರುಷರ ಶೃಂಗಾರೇತರ ಚಿತ್ರಗಳು**

ಗಾಜಿನ ಚಿತ್ರಕಲಾವಿದರು ತಮ್ಮ ಸಮಕಾಲೀನ ಸಂದರ್ಭಗಳಲ್ಲಿ ಲೌಕಿಕ ಬದುಕಿನ ಪ್ರಭಾವಿ ವ್ಯಕ್ತಿಗಳ ಅಧಿಕಾರಿ ವರ್ಗದವರ ತಮ್ಮ ಪೋಷಕರ ಹಾಗೂ ಶ್ರೀಮಂತ ಬದುಕಿನ ನೈಜಚಿತ್ರಣವನ್ನು ಆ ಪರಂಪರೆಯ ಸ್ತ್ರೀ–ಪುರುಷರ ಭಾವನೆಗಳನ್ನು ಗಾಜಿನ ಮೇಲೆ ಚಿತ್ರಿಸಿದ್ದಾರೆ. ಅವರ ವಿವಿಧ ಮುಖಗಳನ್ನು ಅರ್ಧಭಾವದ ಮೂಲಕ ಹಾಗೂ ಪೂರ್ಣಭಾವದ ಮೂಲಕ ಸೆರೆಹಿಡಿದಿದ್ದಾರೆ. ಈ ಭಾವನೆಗಳನ್ನು ಹೊರ ಹಾಕುವುದರ ಜೊತೆಗೆ ಸೌಂದರ್ಯ ಪ್ರಜ್ಞೆಯನ್ನು ಮೆರದಿದ್ದಾರೆ. ಇಂಥ ಅನೇಕ ಸ್ತ್ರೀ–ಪುರುಷ ಭಾವಚಿತ್ರಗಳು ಕರ್ನಾಟಕದಲ್ಲಿ ಸಾಕಷ್ಟು ಸಂಖ್ಯೆಗಳಲ್ಲಿ ಪ್ರತಿರೂಪಗೊಂಡಿವೆ. ಇಲ್ಲಿ ಆ ಚಿತ್ರಗಳನ್ನು ಅರ್ಧಭಾವ ಚಿತ್ರಗಳನ್ನಾಗಿ ಹಾಗೂ ಪೂರ್ಣಭಾವ ಚಿತ್ರಗಳನ್ನಾಗಿ ವಿಭಾಗಿಸಿಕೊಂಡು ವಿವೇಚನೆ ಮಾಡಲಾಗಿದೆ.

**ಚಿತ್ರಸಂಖ್ಯೆ ೦೧, ೦೨, ೦೩, ೦೪ ಮುಗ್ಧತೆಯ ಮುಖಭಾವ ಚಿತ್ರಗಳು**

ಇಲ್ಲಿ ನಾಲ್ಕು ಬಗೆಯ ಸ್ತ್ರೀಯರ ಭಾವಚಿತ್ರಗಳು ಚಿತ್ರಣಗೊಂಡಿದ್ದು, ನಾಲ್ಕೂ ಚಿತ್ರಗಳಲ್ಲಿ ಮುಗ್ಧತೆಯ ಭಾವನೆಗಳು ಹೊರಹೊಮ್ಮುತ್ತವೆ. ಕೆಂಪು, ಹಸಿರು, ಮೆರಗು ಬಣ್ಣಗಳು, ಚಿನ್ನ ಲೇಪಿತ ಹಾಳೆ ಹಾಗೂ ಟೆಂಪರಾ ವರ್ಣಗಳನ್ನು ಬಳಸಿಕೊಂಡು ಈ ಚಿತ್ರಗಳು ಬಿಂಬಿತವಾಗಿವೆ.

ಚಿತ್ರ ೦೧ ರಲ್ಲಿ ಚಿತ್ರಿತಗೊಂಡ ಹೆಣ್ಣುಮಗಳ ಭಾವನೆಗಳನ್ನು ಚಪ್ಪಟೆಯಾದ ವರ್ಣದಿಂದ ಸಂಯೋಜಿಸಲಾಗಿದ್ದು, ಕಪ್ಪು ಬಣ್ಣದ ರೇಖಾ ವಿನ್ಯಾಸವು ಚಲನಾತ್ಮಕವಾಗಿ, ಲಾವಣ್ಯಯುತವಾಗಿ ಹಾಗೂ ಶಕ್ತಿಯುತವಾಗಿ ಮೂಡಿಬಂದಿದೆ. ತಿದ್ದಿ ತೀಡಿದ ಹುಬ್ಬು, ವಿಶಾಲ ಕಣ್ಣಾಲೆಗಳು, ದುಂಡುಮೂಗು, ತುಂಬಿದ ಗಲ್ಲ ಹಾಗೂ ಕೆಂದುಟಿಗಳಿಂದ ಯುವ ಹೆಣ್ಣುಮಗಳಂತೆ ರೂಪಲಕ್ಷಣಗಳು ಮೂಡಿಬಂದಿವೆ. ಚಪ್ಪಟೆಯಾಗಿ ವರ್ಣವಿನ್ಯಾಸ ಮೂಡಿಬಂದಿದ್ದರೂ ದುಂಡುತನದ ಕಲ್ಪನೆ ಬಿಂಬಿತವಾಗಿದೆ. ಚುಕ್ಕೆಗಳನ್ನೊಳಗೊಂಡ ದುಪ್ಪಟವು ತಲೆಯ ಮೇಲೆ ಹೊಂದಿದ್ದು, ಇದು ಸಾಂಕೇತಿಕವಾಗಿ ಮೂಡಿಬಂದಿದೆ. ಅದೇ ರೀತಿ ಆಭರಣಗಳು ಬೈತಲಮಣಿಗಳು, ಕಿವಿಯಲ್ಲಿ ವಿವಿಧ ಆಭರಣಗಳನ್ನು ಸಂಯೋಜಿಸಲಾಗಿದ್ದು ನೈಜತೆಗೆ ದೂರವಾಗಿವೆ. ಭಾವಚಿತ್ರದ ಹಿನ್ನೆಲೆಯಲ್ಲಿ ಹಸಿರು ಪರದೆಗಳನ್ನು ಸಂಯೋಜಿಸಲಾಗಿದ್ದು, ಅದರ ಹಿಂದೆ ಕೆಂಪು ಮೆರಗು ಬಣ್ಣವನ್ನು ಏಕರೂಪವಾಗಿ ಲೇಪಿಸಲಾಗಿದೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ಉತ್ತಮ ಭಾವನಾ ನಿರೂಪಣೆಯನ್ನು ಹೊಂದಿದೆ. ಇದು ೨೧ x ೨೬ ಸೆಂ. ಮೀ ಅಳತೆಯನ್ನು ಹೊಂದಿದ್ದು, ಧರ್ಮಸ್ಥಳದ ಮಂಜುಷಾ ದಲ್ಲಿ ಲಭ್ಯವಿದೆ.

ಚಿತ್ರ ೦೨ ರಲ್ಲಿ ಸ್ತ್ರೀಯ ಭಾವಚಿತ್ರವು ವರ್ಣಛಾಯೆಗಳ ನೆರಳು ಬೆಳಕಿನಿಂದ ಕೂಡಿದ್ದು, ತ್ರಿಆಯಾಮ ಬಿಂಬವು ಮೂಡಿಬಂದಿದೆ. ಇಲ್ಲಿ ವೇಷಭೂಷಣಗಳನ್ನು ಸಂಯೋಜಿಸಿದ್ದನ್ನು ಗಮನಿಸಿದರೆ ಶ್ರೀಮಂತ ಯುವತಿಯಂತೆ ಕಂಡುಬರುತ್ತಾಳೆ. ಗುಜರಾತಿ ಯುವತಿಯ ಭಾವಲಕ್ಷಣಗಳು ಈ ಚಿತ್ರದಲ್ಲಿ ಅಭಿವ್ಯಕ್ತಗೊಂಡಿವೆ. ಕತ್ತಿನಲ್ಲಿ ವಿವಿಧ ಆಭರಣಗಳು, ಕೇಶವಿನ್ಯಾಸದಲ್ಲಿ ಆಭರಣಗಳ ಅಲಂಕಾರವು ಓರಣವಾಗಿ ಮೂಡಿಬಂದಿದೆ. ಚಿನ್ನದ ಮೂಗುನತ್ತು ಅದಕ್ಕೆ ಹರಳುಗಳ ಕಲ್ಪನೆಯು ವ್ಯಕ್ತಗೊಂಡಿದೆ. ಕಿವಿಯಲ್ಲಿ ವಿವಿಧ ಓಲೆಗಳು ರಚನೆಗೊಂಡಿದ್ದು ಮುತ್ತುಗಳನ್ನು ಸಂಯೋಜಿಸಲಾಗಿದೆ.

ಕುಪ್ಪಸದ ವಿನ್ಯಾಸದಲ್ಲಿ ಹೂವಿನ ನಕ್ಷೆಗಳು, ಅಂಚಿನಲ್ಲಿ ಚಿತ್ರವಿನ್ಯಾಸ ಹಾಗೂ ರಟ್ಟೆಗೆ ಚಿನ್ನದ ತೋಡೆಗಳು ಬಿಂಬಿತವಾಗಿವೆ. ಸೀರೆಯೂ ಸಹ ಚಿತ್ರವಿನ್ಯಾಸಗಳಿಂದ ಕೂಡಿದೆ. ನಡುವಿಗೆ ಚಿನ್ನದ ಡಾಬನ್ನು ಚಿತ್ರಿಸಿದ್ದು ಅವಳ ಅಂಗಾಂಗವು ಸುಸ್ಪಷ್ಟವಾಗಿ ಮೂಡಿಬಂದಿದೆ. ಚಿತ್ರದ ಅಂಚು ಮೊಟ್ಟೆಯಾಕಾರ (Ovel Shape) ದಲ್ಲಿ ರೂಪಗೊಂಡಿದ್ದು, ಅದರ ನಾಲ್ಕೂ ಭಾಗಗಗಳಲ್ಲಿ ಹೂವು, ಎಲೆಗಳಿಂದ ಕೂಡಿದ ನಕ್ಷಾವಿನ್ಯಾಸವು ಮೂಡಿಬಂದಿದೆ. ಅಲಂಕಾರಿಕವಾಗಿ ಪರದೆಗಳನ್ನು ಸಂಯೋಜಿಸಲಾಗಿದ್ದು, ಅದರ ಹಿಂದೆ ಕಪ್ಪು ಬಣ್ಣವನ್ನು ಏಕರೂಪವಾಗಿ ಲೇಪಿಸಿದ್ದರಿಂದ ಭಾವಚಿತ್ರವು ಉಜ್ವಲವಾಗಿ ಕಂಡು ಬರುತ್ತಿದೆ. ಈ ಚಿತ್ರವು ಹುಮನಾಬಾದದ ಬಾಲಾಜಿಮಂದಿರದಲ್ಲಿ ಲಭ್ಯವಿದೆ.

ಚಿತ್ರ ೦೩ ಮತ್ತು ೦೪ ರಲ್ಲಿ ಯುವ ಸ್ತ್ರೀಯರ ಭಾವಚಿತ್ರಗಳು ರೇಖಾಪ್ರಧಾನವಾಗಿ ಮೂಡಿಬಂದಿವೆ. ಈ ಎರಡೂ ಚಿತ್ರಗಳಲ್ಲಿ ಕೆಂಪು ಬಣ್ಣದ ರವಿಕೆಯನ್ನು (ಕುಪ್ಪಸ) ಚಿತ್ರಿಸಿದ್ದು, ಚಿಕ್ಕಪಟ್ಟಿಗಳು ಇಲ್ಲಿ ವಿನ್ಯಾಸಗೊಂಡಿವೆ. ಮೈಬಣ್ಣದಲ್ಲಿ ಬಿಳಿವರ್ಣವನ್ನು ಚಪ್ಪಟೆಯಾಗಿ ಬಳಸಲಾಗಿದೆ. ದೇಹದ ರಚನೆಯೂ ದಷ್ಟಪುಷ್ಟವಾಗಿ ಮೂಡಿಬಂದಿವೆ. ಕಿವಿಗಳಲ್ಲಿ ಓಲೆಗಳು, ಕತ್ತಿನಲ್ಲಿ ಆಭರಣಗಳು, ಬೈತಲಮಣಿಗಳು ಮೂಡಿಬಂದಿದ್ದು ಸಾಂಕೇತಿಕ ವಿವರಣೆ ಇಲ್ಲಿ ಬಿಂಬಿತವಾಗಿವೆ. ಚಿತ್ರ ೦೩ ರಲ್ಲಿ ಸೀರೆಯು ಭುಜದ ಹಿಂದೆ ಆವರಿಸಿದ್ದು, ಚಿತ್ರವಿನ್ಯಾಸಗಳಿಂದ ಮೂಡಿಬಂದಿದೆ. ಚಿತ್ರ ೦೪ ರಲ್ಲಿ ಸೀರೆಯ ಸೆರಗಿನ ವಿನ್ಯಾಸವನ್ನು ತಲೆಯ ಮೇಲೆ ಹೊದಿಸಲಾಗಿದೆ. ಸೆರಗಿನ ಅಂಚು, ಸೀರೆಯ ಒಡಲು ಚಿತ್ರವಿನ್ಯಾಸಗಳಿಂದ ರಚನೆಗೊಂಡಿದೆ. ಈ ಭಾವಚಿತ್ರದಲ್ಲಿ ಆಭರಣಗಳ ಅಲಂಕಾರ ಉತ್ತಮವಾಗಿ ವ್ಯಕ್ತಗೊಂಡಿದೆ. ಎರಡೂ ಭಾವಚಿತ್ರಗಳ ಹಿನ್ನೆಲೆಯಲ್ಲಿ ವರ್ಣಮಯ ಪರದೆಗಳನ್ನು ಅಲಂಕಾರಿಕವಾಗಿ ಸಂಯೋಜಿಸಲಾಗಿದೆ. ಚಿತ್ರದ ಸುತ್ತಲೂ ಹೂವು ಎಲೆಗಳಿಂದ ಕೂಡಿದ ನಕ್ಷಾವಿನ್ಯಾಸವು ರೂಪಗೊಂಡಿದೆ. ಈ ಎರಡೂ ಭಾವಚಿತ್ರಗಳಲ್ಲಿ ರೇಖೆ ಹಾಗೂ ವರ್ಣಗಳಲ್ಲಿ ನಯಗಾರಿಕೆ ಗೌಣವಾಗಿದ್ದರೂ ಆಕರ್ಷಕ ಭವನಿರೂಪಣೆಯನ್ನು ವ್ಯಕ್ತಪಡಿಸುತ್ತವೆ. ಇವುಗಳನ್ನು ಮೈಸೂರು ವಿಶ್ವವಿದ್ಯಾಲಯದ ಜಾನಪದ ವಸ್ತುಸಂಗ್ರಹಾಲದ ಗೊಂಬೆಮಂಟಪದಲ್ಲಿ ಅಳವಡಿಸಲಾಗಿದೆ.

**ಚಿತ್ರಸಂಖ್ಯೆ ೦೫ ಗುಲಾಬಿಯೊಂದಿಗೆ ಮಹಿಳೆ (ಮಹಾರಾಣಿ)**

ಈ ಭಾವಚಿತ್ರವು ರೇಖೆ ಹಾಗೂ ವರ್ಣಗಳಿಂದ ಸಂಯೋಜನೆಗೊಂಡಿದ್ದು ಬೆಳಕು ನೆರಳುಗಳ ಕಲ್ಪನೆಯು ಪ್ರಕಟಗೊಂಡಿದೆ. ಆಕರ್ಷಕ ದೈಹಿಕ ಲಕ್ಷಣಗಳಿಂದ ಭಾವನಾನಿರೂಪಣೆಯು ವ್ಯಕ್ತಗೊಂಡಿದೆ. ಬಾಗಿದ ಹುಬ್ಬುಗಳು, ವಿಶಾಲ ಕಣ್ಣುಗಳು, ನೀಳವಾದ ಮೂಗು, ತುಟಿಯಲ್ಲಿ ಮಂದಹಾಸ ತುಂಬಿದ ಗಲ್ಲದಿಂದ ಸ್ತ್ರೀಯ ಸೌಂದರ್ಯವನ್ನು ಎತ್ತಿಹಿಡಿದಿವೆ. ಕಿವಿ, ಕತ್ತು, ಮೂಗು, ಕೈಗಳಲ್ಲಿ ಹಾಗೂ ಕೇಶವಿನ್ಯಾಸದಲ್ಲಿ ಸಂಯೋಜಿಸಲಾದ ಆಭರಣಗಳು ಕಲಾತ್ಮಕವಾಗಿ ರೂಪಗೊಂಡಿವೆ. ಕಪ್ಪು ಕುಪ್ಪಸದಲ್ಲಿ ಹೂವಿನ ನಕ್ಷೆಗಳು ಮೂಡಿಬಂದಿವೆ. ಅದರಂತೆ ಧರಿಸಿದ ಸೀರೆಯ ವಿನ್ಯಾಸದಲ್ಲಿ ಅಂಚು ಹಾಗೂ ಒಡಲಿನಲ್ಲಿ ಹೂವಿನ ನಕ್ಷೆಗಳಿಂದ, ನಯವಾದ ಗೆರೆಗಳಿಂದ ಚಿತ್ರವಿನ್ಯಾಸಗಳು ರಚನೆಗೊಂಡಿವೆ. ಸೊಂಟದಲ್ಲಿ ಚಿನ್ನದ ಡಾಬು ವ್ಯಕ್ತಗೊಂಡಿದ್ದು ಅಲಂಕಾರಪ್ರಜ್ಞೆಯು ಮೂಡಿಬಂದಿದೆ. ಹಿಂದಿನ ಕಾಲದ ಸ್ತ್ರೀಯರು ಸಾಮಾನ್ಯವಾಗಿ ವಿವಿಧ ಬಗೆಯ ಡಾಬುಗಳನ್ನು ಒಡ್ಯಾಣಗಳನ್ನು ಧರಿಸುತ್ತಿದ್ದರೆಂದು ತೋರುತ್ತದೆ. ಇವರು ಆಭರಣಗಳ

ಪ್ರೇಯರೂ ಕೂಡಾ ಆಗಿದ್ದರೆಂಬುದು ಈ ಚಿತ್ರಗಳನ್ನು ನೋಡಿ ತಿಳಿದುಕೊಳ್ಳಬಹುದು. ಸ್ತ್ರೀಯ ಹಿಂದೆ ಅಲಂಕಾರಿಕ ಕುರ್ಚಿಯನ್ನು ಸಂಯೋಜಿಸಿದ್ದು, ಇದರ ಮೇಲೆ ಕುಳಿತು ಎಡಗೈಯಲ್ಲಿ ಅರಳಿದ ಗುಲಾಬಿ ಹೂವನ್ನು, ಬಲಗೈಯಲ್ಲಿ ನೀಳವಾದ ಮೊಗ್ಗನ್ನು ಹಿಡಿದು ಪ್ರೇಯತಮನ ನಿರೀಕ್ಷೆಯಲ್ಲಿರುವಂತೆ ಸ್ತ್ರೀಯ ಭಾವಚಿತ್ರವು ನಿರೂಪಿಸುತ್ತದೆ. ಚಿತ್ರದ ಸುತ್ತಲೂ ನೈಸರ್ಗಿಕ ಚಿತ್ರವಿನ್ಯಾಸವು ರೂಪಗೊಂಡಿದೆ. ವರ್ಣ ವೈವಿಧ್ಯತೆಯಲ್ಲಿ ನೈಜತೆಯನ್ನು ಕಾಣದಿದ್ದರೂ, ಇಲ್ಲಿ ಬಳಸಲಾದ ಚಿನ್ನದ ಲೇಪನದ ಕಾಗದ ಹಾಗೂ ಕೆಂಪು ಮೆರಗು ಬಣ್ಣಗಳ ಸಂಯೋಜನೆಯಿಂದ ಅಲಂಕಾರ ಪ್ರಜ್ಞೆಯು ಅನಾವರಣಗೊಂಡಿದೆ.

**ಚಿತ್ರಸಂಖ್ಯೆ ೦೬ ಕೇರಳ ವನಿತೆಯು ತಲೆಕೂದಲನ್ನು ಬಾಚಿಕೊಳ್ಳುತ್ತಿರುವುದು.**

ಈ ಭಾವ ಚಿತ್ರವು ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಸಂಗ್ರಹಗೊಂಡಿದೆ. ಇಲ್ಲಿ ಕೇರಳದ ವನಿತೆಯು ಕೇಶಶೃಂಗಾರದಲ್ಲಿ ನಿರತಳಾಗಿರುವಂತೆ ಬಿಂಬಿತವಾಗಿದ್ದಾಳೆ. ಚಿತ್ರದಲ್ಲಿ ರೇಖಾ ಪ್ರಾಧಾನ್ಯತೆ ವೃದ್ಧಿಗೊಂಡಿದ್ದು, ಹಾಲು ಬಿಳುಪಿನ ಮೈಬಣ್ಣದ ಕಲ್ಪನೆಯನ್ನು ಜೊತೆಗೆ ದೇಹದ ದುಂಡುತನವನ್ನು ಈ ಭಾವ ಚಿತ್ರದಲ್ಲಿ ತರಲಾಗಿದೆ. ವಿಶಾಲ ನೇತ್ರ, ದಪ್ಪಮೂಗು, ದಪ್ಪ ತುಟಿಗಳು, ತುಂಬಿದ ಗಲ್ಲ ಹಾಗೂ ಉದ್ದವಾದ ಕೇಶವಿನ್ಯಾಸದಿಂದ ಮಹಿಳೆಯ ಸೌಂದರ್ಯವನ್ನು ಎತ್ತಿ ತೋರಿಸುತ್ತವೆ. ಕೊರಳಲ್ಲಿ ಮುತ್ತಿನ ಸರ ಹಾಗೂ ಚಿನ್ನದ ಪದಕ, ಕಿವಿಯಲ್ಲಿ ಚಿನ್ನದ ಓಲೆ, ಮೂಗಲ್ಲಿ ಚಿಕ್ಕ ಮೂಗುತಿ, ಬೆರಳುಗಳಲ್ಲಿ ಚಿನ್ನದುಂಗುರ, ಚಿನ್ನದ ಬಳೆಗಳು ಭೂಷಿತಗೊಂಡಿದ್ದು, ಕೇರಳ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ. ಮಹಿಳೆಯು ಕೇರಳ ಪದ್ಧತಿಯಂತೆ ಸೀರೆಯನ್ನು ಧರಿಸಿದ್ದು, ಅದು ಶ್ವೇತವರ್ಣದಿಂದ ಕೂಡಿದೆ ಜೊತೆಗೆ ಅದರ ಅಂಚು ಜರತಾರಿಯನ್ನು ಹೊಂದಿದೆ. ಹಿನ್ನೆಲೆಯಲ್ಲಿ ಭವ್ಯವಾದ ವಾಸ್ತುಕಲ್ಪನೆಯು ಮೂಡಿಬಂದಿದ್ದು, ಕಂಬಗಳು, ಕಮಾನು, ಪರದೆಗಳು ಹಾಗೂ ಡಯಾಸಗಳಂತಹ ವಸ್ತುಗಳನ್ನು ಸಂಯೋಜಿಸಲಾಗಿದೆ. ಇಲ್ಲಿ ಕಲಾವಿದನು ಕಪ್ಪು ಬಣ್ಣದಿಂದ ಕೂಡಿದ ರೇಖೆ, ಚಪ್ಪಟೆ ವರ್ಣಗಳ ಲೇಪನದ ರಚನಾ ಪದ್ಧತಿಯನ್ನು ಅನುಸರಿಸಿದ್ದಾನೆ. ಇಲ್ಲಿ ಬಿಂಬಿತವಾದ ಮಹಿಳೆಯು ಸ್ನಾನ ಮಾಡಿ ಕೂದಲನ್ನು ಹರಡಿ ಒಣಗಿಸುತ್ತಿರುವಂತೆ ಮೇಲ್ನೋಟಕ್ಕೆ ಕಂಡು ಬರುವುದನ್ನು ಸಹ ಕಲ್ಪಿಸಬಹುದು.

**ಚಿತ್ರಸಂಖ್ಯೆ ೦೭, ೦೮ ಗುಜ್ಜರ ಸ್ತ್ರೀಯರು**

ಈ ಭಾವಚಿತ್ರಗಳು ಬಾಗಲಕೋಟೆಯ ಮಹೇಂದ್ರ ಸರಾಫ್‌ರವರ ಮನೆಯಲ್ಲಿ ಲಭ್ಯವಿದೆ. ಇವುಗಳ ರಚನೆಯನ್ನು ಚೀನಾದ ಕಲಾವಿದರು ಮಾಡಿದ್ದಾರೆ. ತೈಲವರ್ಣಗಳ ಬಳಕೆ ಈ ಭಾವಚಿತ್ರಗಳಲ್ಲಿ ಮೂಡಿಬಂದಿದೆ. ಚಿತ್ರ ೦೭ ರಲ್ಲಿ ಕೆಂಪು ವರ್ಣದ ಸಲ್ವಾರ ಕಮೀಜ್‌ನ್ನು ಧರಿಸಿ ಬಿಳಿಬಣ್ಣದ ದುಪ್ಪಟವನ್ನು ಹೊದ್ದು ದಿಂಬಿಗೆ ಆಸರೆಯಾಗಿ ಕುಳಿತಿರುವಂತೆ ಯುವತಿಯ ಭಾವಚಿತ್ರವು ಮೂಡಿಬಂದಿದೆ. ಅಂಗಾಂಗ ರಚನೆಯಲ್ಲಿ ಯಥಾದೃಷ್ಟಿಯು ಗೌಣವಾಗಿದೆ. ಕಣ್ಣು, ಹುಬ್ಬು, ಮೂಗು, ತುಟಿಗಳಲ್ಲಿ ದುಂಡುತನದ ನೈಜತೆಯು ಮೂಡಿಬಂದಿದೆ. ಬಣ್ಣಗಳ ಮಿಶ್ರಣದಲ್ಲಿ ನಯಗಾರಿಕೆ, ಸೂಕ್ಷ್ಮತೆಯನ್ನು ಕಲಾವಿದನು ತನ್ನ ಕುಂಚದ ಕೈಚಳಕವನ್ನು ತೋರಿಸಿದ್ದಾನೆ. ಚರ್ಮದ ಮೃದುತ್ವವನ್ನು ಈ ವರ್ಣಗಾರಿಕೆಯಲ್ಲಿ ಕಲ್ಪಿಸಿದ್ದಾನೆ. ಕಣ್ನೋಟದಲ್ಲಿ ಶಾಂತತೆ ತೋರುತ್ತಿದೆ.

ಕಿವಿಯಲ್ಲಿ ಚಿಕ್ಕ ಓಲೆಗಳು ಮಾತ್ರ ಬಿಂಬಿತವಾಗಿವೆ. ಕಮೀಜ್‌ನ ಒಡಲು ಹಾಗೂ ಅಂಚುಗಳಲ್ಲಿ ಸೂಕ್ಷ್ಮ ಚಿತ್ರವಿನ್ಯಾಸಗಳು ಮೂಡಿಬಂದಿವೆ. ದುಪ್ಪಟದಲ್ಲಿ ನಿರಿಗೆಗಳ ಏರಿಳತವು ಮೂಡಿಬಂದಿದ್ದು, ಚಿಕ್ಕ ಚಿಕ್ಕ ಹೂವಿನ ಬುಟ್ಟಿಗಳಿಂದ ವಾಸ್ತವತೆಗೆ ಹತ್ತಿರವಾಗಿದೆ. ಹಿನ್ನೆಲೆಯಲ್ಲಿ ನೀಲಿ ದಿಂಬು ಅದಕ್ಕೆ ಹೂವಿನ ಚಿತ್ರವಿನ್ಯಾಸಗಳನ್ನು ರಚಿಸಿ ಸಂಯೋಜನೆ ಮಾಡಿದ್ದಾರೆ.

ಚಿತ್ರ ೦೮ ರಲ್ಲಿ ಮಹಿಳೆಯು ಬೀಸಣಿಕೆಯನ್ನು ಹಿಡಿದು ಗಾಳಿ ಬೀಸುತ್ತಿರುವಂತೆ ಬಿಂಬಿತವಾಗಿದ್ದಾಳೆ. ಇಲ್ಲಿಯೂ ಸಹ ಚಿತ್ರಃ ೦೭ ರ ವರ್ಣವೈವಿಧ್ಯತೆಯನ್ನು ಅನುಸರಿಸಲಾಗಿದೆ. ಈ ಚಿತ್ರದಲ್ಲಿ ಮುತ್ತಿನ ಸರಗಳನ್ನು ಹೆಚ್ಚು ಅಲಂಕರಿಸಿದ್ದಾರೆ. ಮುಖದಲ್ಲಿ ಶೆಕೆಯ ಭಾವನೆಯು ವ್ಯಕ್ತಗೊಂಡಿದೆ. ನೀಳವಾದ ಕೇಶವು ಉತ್ತಮವಾಗಿ ರಚನೆಗೊಂಡಿದೆ. ಶರೀರ ರಚನೆ, ಉಡುಗೆ ತೊಡುಗೆಗಳ ರಚನೆಯಲ್ಲಿ ಯಥಾದೃಷ್ಟಿ ಹಾಗೂ ಸಂಯೋಜನೆಯಲ್ಲಿ ಪ್ರಮಾಣತೆಯು ಗೌಣವಾಗಿದೆ. ಬೀಸಣಿಕೆಯ ಚಿತ್ರವು ಹೂವಿನ ಚಿತ್ತಾರಗಳಿಂದ ಕೂಡಿದ್ದು, ಆಕರ್ಷಕ ಬಾಹ್ಯ ಸ್ವರೂಪವನ್ನು ಹೊಂದಿದೆ. ಅಲಂಕಾರ ಹಾಗೂ ಭಾವನಿರೂಪಣೆಯಲ್ಲಿ ಉತ್ತಮ ಭಾವ ಚಿತ್ರವೆನ್ನಬಹುದು.

**ಚಿತ್ರಸಂಖ್ಯೆ ೦೯, ೧೦ ಗುಲಾಬಿಯೊಂದಿಗೆ ಯುವತಿ**

ಇಲ್ಲಿ ಕಂಡು ಬರುವ ಎರಡೂ ಭಾವಚಿತ್ರಗಳು ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಸಂಗ್ರಹ ಇವೆ. ಈ ಭಾವಚಿತ್ರಗಳು ಒಬ್ಬಳೇ ರೂಪದರ್ಶಿಯದಾಗಿವೆ. ಈ ಚಿತ್ರಗಳನ್ನು ಸಹ ಪಾಶ್ಚಾತ್ಯಕಲಾಕಾರನು ರಚಿಸಿದ್ದಾನೆ. ಮೊದಲು ಒಂದು ಕೃತಿಯನ್ನು ರಚಿಸಿ ಅದೇ ಕರಡು ಚಿತ್ರವನ್ನು ಬಳಸಿಕೊಂಡು ಮತ್ತೊಂದು ಚಿತ್ರವನ್ನು ರಚಿಸಿದ್ದಾನೆ. ಒಂದು ಎಡ ಪಾರ್ಶ್ವಭಾವ ಚಿತ್ರವಾಗಿದ್ದು, ಇನ್ನೊಂದು ಬಲಪಾರ್ಶ್ವಭಾವಚಿತ್ರವಾಗಿದೆ. ಈ ಎರಡು ಚಿತ್ರಗಳ ಅಂಗಾಂಗ ರಚನೆಯಲ್ಲಿ ಸೂಕ್ಷ್ಮ ವರ್ಣಗಾರಿಕೆಯ ಜೊತೆಗೆ ನೈಜತೆಯನ್ನು ತರಲಾಗಿದೆ. ತುಟಿ, ಕಣ್ಣು, ಹುಬ್ಬು, ಮೂಗು ಇತ್ಯಾದಿಗಳಲ್ಲಿ ತ್ವಚೆಯ ಸೂಕ್ಷ್ಮತೆಯನ್ನು ಹಾಗೂ ಸೌಂದರ್ಯವನ್ನು ತರಲಾಗಿದೆ. ವರ್ಣಗಳ ಮಿಶ್ರಣ ಮಾಡುವುದರಲ್ಲಿ ಕಲಾವಿದನ ಕುಂಚದ ತಾಳ್ಮೆಯನ್ನು, ಕೈಚಳಕವನ್ನು ಅರಿಯಬಹುದು. ನೀಲಿ, ಕಪ್ಪು ಮಿಶ್ರಿತ ಕುಪ್ಪಸ, ಬಿಳಿ ಲಂಗ ಹಾಗೂ ಕೆಂಪು ದಾವಣಿಯನ್ನು ಸಂಯೋಜಿಸಲಾಗಿದೆ. ಉಡುಪುಗಳಲ್ಲಿ ನಿರಿಗೆಗಳ ಸಂಯೋಜನೆಯು ಉತ್ತಮವಾಗಿ ಮೂಡಿಬಂದಿದೆ. ದಾವಣಿಯಲ್ಲಿ ಹೂವಿನ ಚಿತ್ರವಿನ್ಯಾಸಗಳು ರಚನೆಗೊಂಡಿವೆ. ಕೈಯಲ್ಲಿ ಗುಲಾಬಿ ಹಿಡಿದು ಯಾವುದೋ ನಿರೀಕ್ಷೆಯಲ್ಲಿರುವಂತೆ ಬಿಂಬಿತವಾಗಿದ್ದಾರೆ. ಮುತ್ತಿನ ಅಲಂಕಾರ ಓರವಾಗಿದೆ. ಹಿನ್ನೆಲೆಯಲ್ಲಿ ತಿಳಿನೀಲಿ ಬಣ್ಣವನ್ನು ಚಪ್ಪಟೆಯಾಗಿ ಸಂಯೋಜಿಸಲಾಗಿದೆ.

**ಚಿತ್ರಸಂಖ್ಯೆ ೧೧ ವಿದೇಶಿ ಸುಂದರಿ**

ಪಾಶ್ಚಿಮಾತ್ಯ ಶೈಲಿಯಲ್ಲಿ ರೂಪಗೊಂಡಿರುವ, ಈ ವಿದೇಶಿ ಸ್ತ್ರೀಯ ಭಾವಚಿತ್ರವು, ನೈಜವರ್ಣಗಾರಿಕೆಯಿಂದ ಸುಂದರವಾಗಿ ಮೂಡಿಬಂದಿದೆ. ಕಾಲ್ಪನಿಕ ಸುಂದರಿಯಂತೆ ಭಾವನಿರೂಪಣೆಯನ್ನು ಹೊಂದಿದ್ದು, ವಿಶಿಷ್ಟ ಶೈಲಿಯ ನಿಲುವಂಗಿ ಹಾಗೂ ದುಪ್ಪಟವನ್ನು ಸಂಯೋಜಿಸಲಾಗಿದೆ. ಎದೆಭಾಗದಲ್ಲಿ ಕಪ್ಪು ಪಟ್ಟಿಯನ್ನು ಕಟ್ಟಿರುವುದರಿಂದ ಅವಳ ಸ್ತನದ ಅರ್ಧಭಾಗವು ಹೊರಚಾಚಿದೆ. ಇವಳ ದೇಹದ ಬಿಗುವು ಹಾಗೂ ಸೌಂದರ್ಯವು ಆಕರ್ಷಕವಾಗಿ ಮೂಡಿಬಂದಿದೆ.

ಉಡುಪುಗಳ ನಿರಿಗೆಗಳು ಹಾಗೂ ಅವುಗಳ ಏರಿಳಿತಗಳು ಬೆಳಕು ನೆರಳುಗಳಿಂದ ಕಲ್ಪಿತಗೊಂಡಿವೆ. ಕುಂಚದ ನಯಗಾರಿಕೆ ಉತ್ಕೃಷ್ಟವಾಗಿ ಮೂಡಿಬಂದಿದೆ. ಶುಭ್ರವಾದ ನೇತ್ರದಲ್ಲಿ ಆಳ ಹಾಗೂ ವಿಶಾಲತೆ ಎದ್ದು ತೋರುತ್ತದೆ. ತಿದ್ದಿ ತೀಡಿದ ಹುಬ್ಬು, ನೀಳನಾಶಿಕ, ಕೆಂದುಟಿಗಳು ಹಾಗೂ ಸೇಬಿನ ಕಪೋಲಗಳು ವರ್ಣಗಳ ನೈಜತೆಯಲ್ಲಿ ಉತ್ತಮವಾಗಿ ಭಿತ್ತರಗೊಂಡಿವೆ. ವಿಶಿಷ್ಟವಾಗಿ ಸಂಯೋಜಿಸಲಾದ ಕೇಶವಿನ್ಯಾಸವನ್ನು, ಸೂಕ್ಷ್ಮರೇಖೆಗಳಿಂದ ಕೂದಲು ರಾಶಿಯ ಏರಿಳಿತಗಳನ್ನು ದಟ್ಟತೆಯನ್ನು ಸೂಕ್ಷ್ಮತೆಯನ್ನು ಹಾಗೂ ನೈಜತೆಯನ್ನು ತರಲಾಗಿದೆ. ಕೆಂಪು ಹೂವುಗಳ ಮಾಲೆಯು ಮುಡಿಯನ್ನುಅಲಂಕರಿಸಿದೆ. ಹೂವಿನ ತಾಜಾತನವು ಉತ್ಕೃಷ್ಟವಾಗಿ ಬಿಂಬಿತವಾಗಿದೆ. ದುಪ್ಪಟದ ಪಾರದರ್ಶಕತೆಯನ್ನು ಕಲಾವಿದನು ಅತ್ಯಂತ ಮನೋಜ್ಞವಾಗಿ ಬಿಂಬಿಸಿದ್ದಾನೆ. ಬಿಳಿಬಣ್ಣಗಳಿಂದ ಕಿವಿಯಲ್ಲಿ ಓಲೆಗಳನ್ನು, ಕತ್ತಿನಲ್ಲಿ ಮುತ್ತಿನಮಣಿಗಳ ಸರವನ್ನು ಸಂಯೋಜಿಸಿದ್ದು, ಈ ಶ್ವೇತ ಸುಂದರಿಯ ಸೌಂದರ್ಯವೂ ಇನ್ನು ಹೆಚ್ಚಿದೆ.

**ಚಿತ್ರಸಂಖ್ಯೆ ೧೨ ಭುವನ ಸುಂದರಿ**

ಇಲ್ಲಿ ಚಿತ್ರಿಸಲಾದ ಭುವನ ಸುಂದರಿಯ ಭಾವಚಿತ್ರವು ಮೊಟ್ಟೆಯಾಕಾರದ ಸ್ಥಳಾವಕಾಶದಲ್ಲಿ ಮೂಡಿಬಂದಿದೆ. ಇಲ್ಲಿ ಕಂಡು ಬರುವ ಭುವನ ಸುಂದರಿಯು ವಿದೇಶಿ ಸ್ತ್ರೀಯಾಗಿದ್ದು, ಆಕರ್ಷಕ ಉಡುಪು, ಕೇಶವಿನ್ಯಾಸ, ಕಿರೀಟ ವಿನ್ಯಾಸ ಹಾಗೂ ಗುಲಾಬಿಹೂವಿನ ವಿನ್ಯಾಸದಿಂದ ರಾಜಕುಮಾರಿಯಂತೆ ಕಲ್ಪಿತಗೊಂಡಿರುವಳು. ಹಾಲು ಬಿಳುಪಿನ ಮೈಬಣ್ಣವನ್ನು ಹೊಂದಿರುವ ಇವಳು ವಿಶಾಲವಾದ ನೇತ್ರಗಳ ನೋಟ, ನೀಳನಾಶಿಕ, ಮೃದುತ್ವ ತೋರುವ ಕೆಂದುಟಿಗಳು, ವಿಶಾಲದ ಹಣೆ, ಗುಲಾಬಿ ಕಪೋಲಗಳು, ದಟ್ಟವಾಗಿ ಹರಡಿದ ಕೇಶರಾಶಿಯಿಂದ ಹಾಗೂ ಚರ್ಮದ ತಾಜಾತನದಿಂದ ಮೂಡಿಬಂದ ಈ ಭಾವ ಸಂಯೋಜನೆಯು ಅತ್ಯಂತ ಸೌಂದರ್ಯದಿಂದ ಪ್ರಕಟಗೊಂಡಿದೆ. ಅಲಂಕಾರಿಕ ನಿಲುವಂಗಿಯು ಕೆಂಪು ವರ್ಣದಿಂದ ರಚನೆಗೊಂಡಿದ್ದು, ಅದರಲ್ಲಿ ಹೂವಿನ ನಕ್ಷೆಗಳನ್ನು ರಚಿಸಿ ನಿರಿಗೆಗಳ ಏರಿಳಿತಗಳನ್ನು ತರಲಾಗಿದೆ. ಇವು ನೈಜ ರಚನಾಕ್ರಮವನ್ನು ಅನುಸರಿಸುತ್ತದೆ. ಈ ಉಡುಪಿನ ಅಂಚಿನಲ್ಲಿ ಕೆಂಪು, ಕಪ್ಪು, ಬಿಳಿ, ಹಳದಿ, ನೀಲ ಬಣ್ಣಗಳ ನೈಸರ್ಗಿಕ ಹಾಗೂ ಅಲಂಕಾರಿಕ ನಕ್ಷಾವಿನ್ಯಾಸಗಳನ್ನು ರಚಿಸಲಾಗಿದೆ. ಇವು ಅತ್ಯಂತ ಸೂಕ್ಷ್ಮತೆಯನ್ನು ತೋರುತ್ತವೆ. ತಲೆಯ ಮೇಲೆ ಚಿನ್ನದ ಕಿರೀಟವನ್ನು ಚಿತ್ರಿಸಿದ್ದು ಅದರಲ್ಲಿ ಸೂಕ್ಷ್ಮ ಕುಸುರಿ ಕೆಲಸವನ್ನು ಮಾಡಲಾಗಿದೆ. ಬೆಲೆಬಾಳುವ ವಜ್ರದ ಹರಳುಗಳನ್ನು ಆ ಕಿರೀಟಕ್ಕೆ ಅಳವಡಿಸಲಾಗಿದೆ. ಜೊತೆಗೆ ಬೆಲೆಬಾಳುವ ಮುತ್ತಿನ ಸರವನ್ನು, ಮೃದು ತುಪ್ಪಳದಿಂದ ಕೂಡಿದ ಪುಚ್ಛಗಳನ್ನು ಸಂಯೋಜಿಸಲಾಗಿದೆ. ಈ ತುಪ್ಪಳದ ಪುಚ್ಛಗಳ ರಚನೆಯಲ್ಲಿ ಕುಂಚದ ಸೂಕ್ಷ್ಮತೆ,ದಟ್ಟತೆ ಹಾಗೂ ಮೃದುತ್ವವು ಉತ್ಕೃಷ್ಟವಾಗಿ ಮೂಡಿಬಂದಿದೆ. ಕೈಯಲ್ಲಿ ಹಿಡಿದಿರುವ ಶ್ವೇತಗುಲಾಬಿಯು ಮೃದುವಾದ ದಳಗಳಿಂದ ಕೂಡಿದ್ದು, ಹೂವು ಅರಳಿದಂತೆ ಚಿತ್ರಣಗೊಂಡಿದೆ. ಹಿನ್ನೆಲೆಯಲ್ಲಿ ಕಂದು, ಬಿಳುಪಿನ ವರ್ಣ ವಿನ್ಯಾಸವು ಏರಿಳಿತದಿಂದ ಲೇಪನಗೊಂಡಿದೆ. ಒಟ್ಟಾರೆ ಈ ಚಿತ್ರವು ಅತ್ಯಂತ ನೈಜ ರೀತಿಯಲ್ಲಿ ರೂಪಗೊಂಡಿದೆ. ಚಿತ್ರ ೧೧ ಮತ್ತು ೧೨ ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಸಂಗ್ರಹಗೊಂಡಿವೆ.

**ಚಿತ್ರಸಂಖ್ಯೆ ೧೩. ಯುವರಾಜ**

ಈ ಭಾವಚಿತ್ರವು ೧೮ x ೨೩ ಸೆಂ.ಮೀ ಅಳತೆಯಲ್ಲಿ ರಚನೆಗೊಂಡಿದೆ. ಯುವರಾಜನು ಕೆಂಗುಲಾಬಿಯನ್ನು ಹಿಡಿದು ಪ್ರೇಮ ಭಾವವನ್ನು ವ್ಯಕ್ತಪಡಿಸುತ್ತಿರುವಂತೆ ಬಿಂಬಿತನಾಗಿದ್ದಾನೆ. ಮುಖದ ವರ್ಣಛಾಯೆಯಲ್ಲಿ ಬಿಳಿ ಹಾಗೂ ಕಂದು ಬಣ್ಣಗಳ ಮಿಶ್ರಣವು ನೈಜವಾಗಿ ಮೂಡಿಬಂದಿದ್ದು, ದಟ್ಟವಾದ ಹುಬ್ಬುಗಳು, ಬಟ್ಟಲು ಕಂಗಳು, ಚಿಗುರು ಮೀಸೆ, ಕೆಂದುಟಿ, ತುಂಬಿದ ಕಪೋಲಗಳಿಂದ ರೂಪಗೊಂಡಿವೆ. ಇಲ್ಲಿ ರೇಖೆಯ ಚಲನೆ ಹಾಗೂ ದಟ್ಟತೆಯು ಕಲಾವಿದನ ಕುಂಚದ ಹಿಡಿತವನ್ನು ಎತ್ತಿಹಿಡಿದಿವೆ. ಕೆಂಪು ಹಾಗೂ ಹಸಿರು ಮೆರಗು ಬಣ್ಣಗಳನ್ನು ಸಂಯೋಜಿಸಿ ಚಿನ್ನದ ಮೆರಗು ಕಾಗದವನ್ನು ಹಿನ್ನೆಲೆಯಾಗಿ ಬಳಸಿಕೊಂಡು ಉಡುಪುಗಳನ್ನು ಚಿತ್ರಿಸಲಾಗಿದೆ. ಸಣ್ಣ ಹಾಗೂ ದಪ್ಪವಾದ ಪಟ್ಟಿಕೆಗಳಿಂದ ಚಿತ್ರವಿನ್ಯಾಸವು ಉಡುಪುಗಳಲ್ಲಿ ಒಡಮೂಡಿವೆ. ಅಲಂಕಾರಿಕ ಟೊಪ್ಪಿಗೆಗೆ ಮುತ್ತಿನ ಗೊಂಚಲನ್ನು ಸಂಯೋಜಿಸಲಾಗಿದೆ. ಕೊರಳಲ್ಲಿ ಪದಕದಿಂದ ಕೂಡಿದ ಮುತ್ತಿನ ಸರ, ಕಿವಿಗಳಲ್ಲಿ ಚಿನ್ನದ ಆಭರಣಗಳನ್ನು ರಚಿಸಿದ್ದು, ಸಾಂಕೇತಿಕವಾಗಿ ಮೂಡಿಬಂದಿವೆ. ಹಿನ್ನೆಲೆಯಲ್ಲಿ ನೀಲಿ ಬಣ್ಣವನ್ನು ಚಪ್ಪಟೆಯಾಗಿ ಲೇಪಿಸಿದ್ದು, ಎಡ ಮತ್ತು ಬಲ ಪಾರ್ಶ್ವಗಳಲ್ಲಿ ಕೆಂಪು ಪರದೆಗಳನ್ನು ಸಂಯೋಜಿಸಲಾಗಿದೆ. ಕಲಾವಿದನು ಮುಖದ ರಚನೆಗೆ ತಾಳ್ಮೆ ತೋರಿದಷ್ಟು ಇನ್ನುಳಿದ ಭಾಗಕ್ಕೆ ಅಷ್ಟೊಂದು ತಾಳ್ಮೆಯನ್ನು ತೋರಿಸಿಲ್ಲ. ಆದರೂ ಭಾವಚಿತ್ರವು ಕಲಾತ್ಮಕವಾಗಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೧೪ ಗಾಂಭೀರ್ಯವದನ ರಾಜ**

ಇದು ೪೮ x ೬೫ ಸೆಂ.ಮೀ ಅಳತೆಯನ್ನು ಹೊಂದಿದೆ. ಮೊಟ್ಟೆಯಾಕಾರದ (Ovel Shape) ಸ್ಥಳಾವಕಾಶದಲ್ಲಿ ರಚನೆಗೊಂಡಿದ್ದು ಹತ್ತೊಂಭತ್ತನೆಯ ಶತಮಾನದ ಪ್ರಭಾವಿ ವ್ಯಕ್ತಿಯ ಭಾವಚಿತ್ರ ಇದಾಗಿದೆ. ಯುವರಾಜನ ವೇಷಭೂಷಣಗಳನ್ನು ಹಾಗೂ ದೈಹಿಕ ಲಕ್ಷಣಗಳನ್ನು ಈ ಚಿತ್ರದಲ್ಲಿ ಬಿಂಬಿಸಲಾಗಿದೆ. ಗಂಭೀರವಾದ ಕಣ್ನೋಟ, ದಿಟ್ಟತನವನ್ನು ತೋರುವ ಕುಡಿಮೀಸೆ, ಕೆಂದುಟಿಗಳಿಂದ ಪ್ರೇಮ ಭಾವವು ಉಕ್ಕಿಬಂದಿದೆ. ತಲೆಯ ಮೇಲೆ ಸ್ವರ್ಣಕಿರೀಟ ಅದಕ್ಕೆ ಮುತ್ತು, ರತ್ನ ಹಾಗೂ ವಜ್ರಖಚಿತ ಪದಕಗಳ ತೋರಣವನ್ನು ಅಲಂಕರಿಸಿದಂತೆ ಕಲಾವಿದನು ರಚನೆಗೊಳಿಸಿದ್ದಾನೆ. ಬೆಲೆಬಾಳುವ ಮುತ್ತಿನ ಗೊಂಚಲು ಕಿರೀಟಕ್ಕೆ ಭೂಷಿತವಾಗಿವೆ. ರತ್ನಖಚಿತ ರಾಜಉಡುಪನ್ನು ಚಿತ್ರಿಸಿದ್ದು ಅಲ್ಲಲ್ಲಿ ಪದಕಗಳನ್ನು ಸಂಯೋಜಿಸಲಾಗಿದೆ. ಕೊರಳಲ್ಲಿ ಮುತ್ತುಗಳ ಸರ ಅದಕ್ಕೆ ವಜ್ರದ ಹರಳುಗಳಿಂದ ಕೂಡಿದ ಚಿನ್ನದ ಪದಕವು ಕಲಾತ್ಮಕವಾಗಿ ಮೂಡಿಬಂದಿದೆ. ಕೆಂಪು, ಹಸಿರು ಮೆರಗು ಬಣ್ಣಗಳಿಂದ ಹಾಗೂ ಚಿನ್ನದ ರೇಖಿನಿಂದ ಚಿತ್ರವು ಅಲಂಕಾರ ವೈಭವವನ್ನು ತೋರಿಸುತ್ತದೆ. ತಿಳಿಗುಲಾಬಿಯ ಹೂವು ಅರಳಿದ್ದು, ತನ್ನ ತಾಜಾತನವನ್ನು ವ್ಯಕ್ತಪಡಿಸುತ್ತದೆ. ಚಿತ್ರದ ಸುತ್ತಲೂ ನೈಸರ್ಗಿಕ ನಕ್ಷಾವಿನ್ಯಾಸವು ಮೂಡಿಬಂದಿದೆ. ಭಾವಚಿತ್ರದ ಹಿಂದೆ ನೀಲಿಬಣ್ಣವನ್ನು ಚಪ್ಪಟೆಯಾಗಿ ಲೇಪಿಸಿದ್ದು ಭಾವಚಿತ್ರವು ಎದ್ದು ತೋರುವಂತೆ ಸಹಾಯಕವಾಗಿದೆ.

**ಚಿತ್ರಸಂಖ್ಯೆ ೧೫ ಪ್ರಭಾವಿ ವ್ಯಕ್ತಿ**

ಪಾಶ್ಚಿಮಾತ್ಯ ಕಲಾವಿದನು ರಚಿಸಿದ ಈ ಭಾವಚಿತ್ರವು ತೈಲವರ್ಣದಲ್ಲಿ ರಚನೆಗೊಂಡಿದೆ. ಇದು ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಸಂಗ್ರಹಗೊಂಡಿದೆ. ಮುಖಭಾವದಲ್ಲಿ ವರ್ಣವಿನ್ಯಾಸವು ಅತ್ಯಂತ ನೈಜವಾಗಿ ಮೂಡಿಬಂದಿದ್ದು, ಕಣ್ಣು, ಮೂಗು, ತುಟಿ, ಕಿವಿ ಹಾಗೂ ಕೂದಲು ವ್ಯಕ್ತಿಯ ಜೀವಂತಿಕೆಯ ಸ್ವರೂಪವು ಹಾಗೂ ದೈಹಿಕ ರೂಪರೇಷಗಳು ಉತ್ಕೃಷ್ಟವಾಗಿ ಮೂಡಿಬಂದಿವೆ. ಶ್ವೇತವರ್ಣದ ಪೇಟ ಶ್ವೇತವರ್ಣದ ನಿಲುವಂಗಿಯನ್ನು ಚಿತ್ರಿಸಿದ್ದು ನಿರಿಗೆಗಳು ನೆರಳು ಬೆಳಕಿನಿಂದ ಅಭಿವ್ಯಕ್ತಗೊಂಡಿವೆ. ನೀಲಿಬಣ್ಣದ ಉತ್ತರಿಯವು ಭುಜವನ್ನು ಆವರಿಸಿದೆ ಅದು ಚಿತ್ರವಿನ್ಯಾಸಗಳಿಂದ ಸಂಯೋಜನೆಗೊಂಡಿದೆ. ಪೇಟದಲ್ಲಿ ಅಲಂಕಾರಿಕ ಹೊಳೆಯುವ ಹರಳುಗಳನ್ನು ಚಿತ್ರಿಸಿದ್ದು ವಾಸ್ತವತೆಗೆ ಹತ್ತಿರವಾಗಿವೆ. ಹಿನ್ನೆಲೆಯಲ್ಲಿ ದಿಂಬು ಹಾಗೂ ಪರದೆಯನ್ನು ಸಂಯೋಜಿಸಿದ್ದು, ವ್ಯಕ್ತಿಯು ಶ್ರೀಮಂತಿಕೆಯನ್ನು ಪ್ರತಿಬಿಂಬಿಸುತ್ತವೆ. ಚಿತ್ರವು ವರ್ಣಗಳ ಸಂಯೋಜನೆಯಿಂದ ನೈಜ ಸ್ವರೂಪವನ್ನು ತರುವಲ್ಲಿ ಕಲಾವಿದನು ಸಫಲನಾಗಿದ್ದಾನೆ. ಮೊಟ್ಟೆಯಾಕಾರದ ಸ್ಥಳಾವಕಾಶದಲ್ಲಿ ಭಾವಚಿತ್ರವನ್ನು ಬಿಂಬಿಸಿ ಹಿನ್ನೆಲೆಯಲ್ಲಿ ಕಪ್ಪು ಬಣ್ಣವನ್ನು ಸಂಯೋಜಿಸಲಾಗಿದೆ. ವ್ಯಕ್ತಿಯ ಭಾವನಾ ನಿರೂಪಣೆಯು ಅತ್ಯುತ್ತಮವಾಗಿ ಮೂಡಿಬಂದಿದೆ.

**ಚಿತ್ರ ಸಂಖ್ಯೆ ೧೬, ೧೭, ೧೮, ೧೯ ಯುವರಾಜರು**

ಇಲ್ಲಿ ಕಂಡು ಬರುವ ನಾಲ್ಕೂ ಭಾವಚಿತ್ರಗಳು ಒಬ್ಬನೇ ವ್ಯಕ್ತಿಗೆ ಸಂಬಂಧಿಸಿವೆ. ಪಾಶ್ಚಿಮಾತ್ಯ ಕಲಾವಿದರು ರಚಿಸಿದ ಈ ಭಾವಚಿತ್ರಗಳನ್ನು ತೈಲವರ್ಣದಲ್ಲಿ ಸಂಯೋಜಿಸಲಾಗಿದೆ. ನಾಲ್ಕೂ ಚಿತ್ರಗಳು ಒಂದೇ ಆಶಯವನ್ನು ಹೊಂದಿದ್ದು ವರ್ಣವಿನ್ಯಾಸ ಹಾಗೂ ಆಭರಣಗಳ ವಿನ್ಯಾಸಗಳಲ್ಲಿ ಸ್ವಲ್ಪ ವೈವಿಧ್ಯತೆ ಕಂಡುಬರುತ್ತದೆ.

ಚಿತ್ರ ೧೬ ರಲ್ಲಿ ಕುಡಿಮೀಸೆ, ಕಪ್ಪು ತಲೆಗೂದಲು, ನೀಳಮೂಗು, ತೀಕ್ಷ್ಣವಾದ ಕಣ್ಣೋಟ, ಬಾಗಿದ ಹುಬ್ಬುಗಳು, ತುಂಬಿದ ಕಪೋಲಗಳು ಅತ್ಯಂತ ನೈಜವಾಗಿ ಮೂಡಿಬಂದಿವೆ. ವರ್ಣ ವಿನ್ಯಾಸದಲ್ಲಿ ಆ ವ್ಯಕ್ತಿಯ ಜೀವಂತಿಕೆಯು ಪ್ರಕಟಗೊಂಡಿದೆ. ತ್ವಚೆಯ ಸೂಕ್ಷ್ಮತೆಯನ್ನು ಕಲಾವಿದನು ಕುಂಚದ ಮೂಲಕ ತರಲು ಪ್ರಯತ್ನಿಸಿದ್ದಾನೆ. ಶಿರಭಾವದ ಸೂಕ್ಷ್ಮತೆಯನ್ನು ಕಲಾವಿದನು ಕುಂಚದ ಮೂಲಕ ತರಲು ಪ್ರಯತ್ನಿಸಿದ್ದಾನೆ. ತಲೆಯ ಮೇಲಿನ ನೀಲಿ ಪೇಟವು ನಿರಿಗೆಗಳಿಂದ ಸಂಯೋಜನೆಗೊಂಡಿದ್ದು, ಅದಕ್ಕೆ ವರ್ಣಮಯ ಹರಳುಗಳ ಸರವನ್ನು ಜೋಡಿಸಲಾಗಿದೆ. ಮುಂಭಾಗದಲ್ಲಿ ರತ್ನಖಚಿತ ಪದಕವು ಅಲಂಕರಣಗೊಂಡಿದೆ. ಪೇಟದ ಸುತ್ತಲೂ ಎಲೆಯಾಕಾರದ ಚಿತ್ರಗಳು ಸಂಯೋಜನೆಗೊಂಡಿವೆ. ಪೇಟದ ಮೇಲೆ ಗುಲಾಬಿ ಬಟ್ಟೆಯ ವಿನ್ಯಾಸ ಮೂಡಿಬಂದಿದೆ. ಕೊರಳಲ್ಲಿ ವಿಶಿಷ್ಟವಾದ ಆಭರಣಗಳು ರೂಪುಗೊಂಡಿದ್ದು ಅದರಲ್ಲೂ ಮುತ್ತುಗಳಿಂದ ಹಾಗೂ ಹೊಳಪಿನ ಹರಳುಗಳಿಂದ ಕೂಡಿದ ಸರಗಳು ವ್ಯಕ್ತಗೊಂಡಿವೆ. ಖಾಕಿ ಬಣ್ಣದಿಂದ ಸಂಯೋಜನೆಗೊಂಡ ತುಂಬುತೋಳಿನ ಅಂಗಿ, ಅದರ ಒಳಗೆ ಶ್ವೇತವರ್ಣದ ನಿಲುವಂಗಿ ರಚನೆಗೊಂಡಿದ್ದು, ಇವು ಉತ್ತಮ ನಿರಿಗೆಗಳಿಂದ ಅದರ ನೈಜತೆಯನ್ನು ಎತ್ತಿ ಹಿಡಿದಿವೆ. ಹಿನ್ನೆಲೆಯಲ್ಲಿ ಸೂಕ್ಷ್ಮ ಚಿತ್ತಾರವುಳ್ಳ ದಿಂಬು ಹಾಗೂ ನೀಲಿಮಿಶ್ರಿತ ಕಪ್ಪು ಬಣ್ಣವು ಅನಾವರಣಗೊಂಡಿದೆ.

ಚಿತ್ರಸಂಖ್ಯೆ ೧೭, ಈ ಭಾವಚಿತ್ರವು ಚಿತ್ರ ೧೬ರ ಕರಡು ಚಿತ್ರವಾಗಿದೆ. ಅದು ಎಡಪಾರ್ಶ್ವದಲ್ಲಿ ಮೂಡಿಬಂದರೆ ಇದು ಬಲ ಪಾರ್ಶ್ವದಲ್ಲಿ ಮೂಡಿಬಂದಿದೆ. ಇದು ಬಲ ಪಾರ್ಶ್ವದಲ್ಲಿ ಮೂಡಿಬಂದಿದೆ. ಈ ಚಿತ್ರದಲ್ಲಿ ಮೀಸೆ ಹಾಗೂ ಹುಬ್ಬುಗಳಲ್ಲಿ ನೀಳತೆ ವ್ಯಕ್ತಗೊಂಡಿದ್ದು, ಆಭರಣಗಳಲ್ಲಿ ಮಂದತೆ ಕಾಣುತ್ತದೆ. ಅವನ ಅಂಗಿಯ ವಿನ್ಯಾಸದಲ್ಲಿ ಅಸ್ಪಷ್ಟತೆಯ ವರ್ಣವಿನ್ಯಾಸವು ವ್ಯಕ್ತಗೊಂಡಿದೆ. ಮುಖದ ವರ್ಣಸಂಯೋಜನೆಯಲ್ಲಿ ಬಿಳಿಯ ಬಣ್ಣವು ತುಸು ಹೆಚ್ಚಿಗೆ ಬಳಸಲ್ಪಟ್ಟಿದೆ. ಇನ್ನುಳಿದಂತೆ ರಚನಾ ವಿಧಾನ ಚಿತ್ರ ೧೬ ರಂತೆ ಯಥಾವತ್ತಾಗಿ ಮೂಡಿಬಂದಿದೆ.

ಚಿತ್ರ ೧೮ ರ ಪೇಟದಲ್ಲಿ ನಿರಿಗೆಗಳ ಕಲ್ಪನೆಯು ಆಕರ್ಷಕವಾಗಿ ಮೂಡಿಬಂದಿದ್ದು, ಆಭರಣಗಳಲ್ಲಿ ಪ್ರಖರತೆಯು ಹಾಗೂ ಸ್ಪಷ್ಟತೆಯೂ ಉತ್ತಮವಾಗಿದೆ. ಮುಖದಲ್ಲಿ ಗಾಂಭೀರ್ಯತೆಯೂ ಒಡಮೂಡಿದೆ. ಅಂಗಿಯ ವಿನ್ಯಾಸದಲ್ಲಿ ಅಸ್ಪಷ್ಟ ನಿರಿಗೆಗಳ ವಿನ್ಯಾಸವು ಅಭಿವ್ಯಕ್ತಗೊಂಡಿದೆ. ಚಿತ್ರದ ಇನ್ನುಳಿದ ಭಾಗವು ಮೇಲಿನ ಚಿತ್ರದಂತೆ ಯಥಾವತ್ತಾಗಿ ರಚನೆಗೊಂಡಿದೆ. ಮೂರು ಚಿತ್ರಗಳು ಒಬ್ಬನೇ ಕಲಾವಿದನ ಕೈಯಲ್ಲಿ ಮೂಡಿಬಂದಿವೆ. ಚಿತ್ರ ೧೯ ರಲ್ಲಿ ಪೇಟದ ವಿನ್ಯಾಸದಲ್ಲಿ ದಟ್ಟ ನೀಲಿಬಣ್ಣವು ಮೂಡಿದೆ. ಬಿಳಿಬಣ್ಣದ ಹರಳುಗಳ ಸರವು ಈ ಚಿತ್ರದಲ್ಲಿ ಸಂಯೋಜನೆಗೊಂಡಿದೆ. ಮೀಸೆ ವಿನ್ಯಾಸದಲ್ಲಿ ದಟ್ಟತೆ ತುಸು ಹೆಚ್ಚಿಗೆ ಬಿಂಬಿತವಾಗಿದೆ. ಕೊರಳಿನ ಆಭರಣಗಳಲ್ಲಿ ನೀಲಿ ಹಾಗೂ ಬಿಳಿ ಬಣ್ಣಗಳ ವರ್ಣವಿನ್ಯಾಸ, ಹಳದಿ ಮಿಶ್ರಿತ ಕೆಂಪು ಬಣ್ಣವು ದಟ್ಟವಾಗಿ ವ್ಯಕ್ತವಾಗಿದೆ. ಚಿತ್ರವು ನೈಜತೆಯಿಂದ ರಚನೆಗೊಂಡಿದ್ದರೂ ಮೂರುಚಿತ್ರಗಳಿಗಿಂತ ಭಿನ್ನವಾಗಿದೆ.

**ಚಿತ್ರ ಸಂಖ್ಯೆ ೨೦ ಶ್ರೀಮಂತ ವ್ಯಕ್ತಿ (ನೋಬಲ್ ಮನ್)**

ಇಲ್ಲಿ ಮೂಡಿಬಂದಿರುವ ಶ್ರೀಮಂತವ್ಯಕ್ತಿಯ ಭಾವಚಿತ್ರದ ವರ್ಣಸಂಯೋಜನೆ ನೆರಳು ಬೆಳಕಿನಿಂದ ಭಾವನಾತ್ಮಕವಾಗಿ ಚಿತ್ರಿತಗೊಂಡಿದೆ. ಕಣ್ಣುಗಳಲ್ಲಿ ಆದರತೆ, ಮುಖದಲ್ಲಿ ಗಾಂಭೀರ್ಯತೆ ವ್ಯಕ್ತಗೊಂಡಿದ್ದು, ಭುಜದ ತನಕ ಬಿದ್ದಿರುವ ಕೇಶವಿನ್ಯಾಸವು ಅದರ ನೈಜಸ್ವರೂಪ ಉದ್ದೀಪನಗೊಂಡಿದೆ. ನೀಳನಾಸಿಕ, ಚೂಪು ಮೀಸೆಯಲ್ಲಿ ಅವನ ಸೌಂದರ್ಯವು ವ್ಯಕ್ತಗೊಂಡಿದೆ. ತಲೆಗೆ ವಿಶಿಷ್ಟ ಕಿರೀಟವನ್ನು ಸಂಯೋಜಿಸಲಾಗಿದ್ದು, ಚಿನ್ನ ಹಾಗೂ ವರ್ಣಮಯ ಹರಳುಗಳಿಂದ ಅಲಂಕೃತಗೊಂಡಿದೆ. ಕೆಂಪು ಹಾಗೂ ಕಪ್ಪು ಬಣ್ಣದ ನಿಲುವಂಗಿಯು ರೂಪಗೊಂಡಿದ್ದು ಅದರ ಅಂಚು ಚಿನ್ನದ ಎಳೆಗಳಿಂದ ಕಸೂತಿಹಾಕಿದ ಚಿತ್ರವಿನ್ಯಾಸವು ಅನಾವರಣಗೊಂಡಿದೆ. ಅಲ್ಲಲ್ಲಿ ಬೆಲೆಬಾಳುವ ಹರಳುಗಳನ್ನು ಬಂಧಿಸಲಾಗಿದೆ. ಬಿಳಿಬಣ್ಣದ ದುಪ್ಪಟವು ರಚನೆಗೊಂಡಿದ್ದು, ಹೂವಿನ ಬುಟ್ಟಾಗಳನ್ನು ಸಂಯೋಜಿಸಲಾಗಿದೆ. ಚಿತ್ರವು ಮೊಟ್ಟೆಯಾಕಾರದ ಸ್ಥಳಾವಕಾಶದಲ್ಲಿ ರಚನೆಗೊಂಡು ಹಿನ್ನೆಲೆಯಲ್ಲಿ ಕಂದು-ಬಿಳುಪು ಏಕವರ್ಣವು ಸಂಯೋಜನೆಗೊಂಡಿದೆ. ಈ ಭಾವಚಿತ್ರದಲ್ಲಿ ಕುಂಚ ಹಾಗೂ ವರ್ಣಗಳ ಬಳಕೆಯನ್ನು ಕಲಾವಿದನು ಸೃಜನಶೀಲತೆಯಿಂದ ಬಳಸಿದ್ದಾನೆ. ಇದು ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಸಂಗ್ರಹಗೊಂಡಿದೆ.

**ಚಿತ್ರಸಂಖ್ಯೆ ೨೧ ಮಹಾರಾಜನ ಭಾವಚಿತ್ರ**

ಈ ಚಿತ್ರವನ್ನು ಚೀನಾದ ಕಲಾವಿದನ ಕುಂಚದಲ್ಲಿ ಮೂಡಿಬಂದಿದೆ. ವ್ಯಕ್ತಿಯ ಕಣ್ಣುಗಳು, ಮೂಗು, ಬಾಯಿ, ಕಿವಿ, ಹುಬ್ಬುಗಳು, ಮೀಸೆ, ಗಡ್ಡ, ಹಣೆಯ ಭಾಗ ಕೇಶವಿನ್ಯಾಸವು

ಅತ್ಯಂತ ಪ್ರಮಾಣಬದ್ಧವಾಗಿ ಮೂಡಿಬಂದಿದ್ದು ತ್ವಚೆಯಲ್ಲಿ ನೈಜತನವನ್ನು ಸುಂದರವಾಗಿ ಕುಂಚ ಹಾಗೂ ವರ್ಣಗಳಿಂದ ತರಲಾಗಿದೆ. ಮುಖದಲ್ಲಿ ಜೀವಂತಿಕೆಯೂ ವ್ಯಕ್ತಗೊಂಡಿದ್ದು, ಕೆಂಪು ಬಣ್ಣದ ರಾಜ ಉಡುಗೆಯನ್ನು ಸಂಯೋಜಿಸಿದ್ದು ನೈಸರ್ಗಿಕ ನಕ್ಷೆಗಳು ಸುಂದರವಾಗಿ ಅಲಂಕರಿಸಿವೆ. ಕೊರಳಲ್ಲಿ ಮುತ್ತಿನ ಸರಗಳನ್ನು, ವಜ್ರದ ಹಾರಗಳನ್ನು ಸಂಯೋಜಿಸಿದ್ದು, ಅವನ ಶ್ರೀಮಂತಿಕೆ ಹಾಗೂ ವಿಲಾಸಿ ಮನೋಭಾವನೆಯನ್ನು ಸೂಚಿಸುತ್ತದೆ. ತಲೆಗೆ ಚಿನ್ನದ ಕಿರೀಟ ಪಟ್ಟಿಯನ್ನು ಅಲಂಕರಿಸಿ ಮುತ್ತು ರತ್ನಗಳಿಂದ ಸಂಯೋಜಿಸಿದೆ. ಈ ಭಾವಚಿತ್ರದಲ್ಲಿ ನೈಜತೆಯ ಜೊತೆಗೆ ಅಲಂಕಾರದ ಆಶಯವು ಉದ್ದೀಪನಗೊಂಡಿದೆ. ಈ ಚಿತ್ರವೂ ಸಹ ಮೊಟ್ಟೆಯ ಆಕಾರದ ಸ್ಥಳಾವಕಾಶದಲ್ಲಿ ಮೂಡಿಬಂದಿದೆ. ಹಿನ್ನೆಲೆಯಲ್ಲಿ ತಿಳಿನೀಲಿ ಹಾಗೂ ಕಪ್ಪು ಮಿಶ್ರಿತ ನೀಲಿಬಣ್ಣವು ಸಂಯೋಜನೆಗೊಂಡಿದೆ. ಈ ಚಿತ್ರವು ಬಾಗಲಕೋಟೆಯ ಮಹೇಂದ್ರ ಸರಾಫ್ ರವರ ಮನೆಯಲ್ಲಿ ಲಭ್ಯವಿದೆ.

**ಚಿತ್ರಸಂಖ್ಯೆ ೨೨ ಶೃಂಗಾರಗೊಂಡ ಯುವತಿ**

ಈ ಚಿತ್ರದಲ್ಲಿ ಓರ್ವಯುವತಿಯು ವಸ್ತ್ರಾಭರಣಗಳಿಂದ ಭೂಷಿತಗೊಂಡು ವೈಯಾರದಿಂದ ಡಯಾಸ ಮೇಲೆ ಕೈ ಆಣಿಸಿಕೊಂಡು ನಿಂತಿರುವಂತೆ ಚಿತ್ರಿತಗೊಂಡಿರುವಳು. ಹಾಲು ಬಿಳುಪಿನ ಮೈಬಣ್ಣವನ್ನು ಹೊಂದಿರುವ ಈ ಕುವರಿಯು ರಾಜ ಕನ್ಯೆಯಂತೆ ಶೋಭಿತಗೊಂಡಿರುವಳು. ವರ್ಣವಿಧಾನವು ನೈಜತೆಯಿಂದ ಕೂಡಿದ್ದು, ದೇಹದ ದುಂಡುತನವನ್ನು ತರಲಾಗಿದೆ. ಬಟ್ಟಲು ಕಂಗಳು, ತಿದ್ದಿ ತೀಡಿದ ಹುಬ್ಬು, ಕೆಂದುಟಿಗಳು ಸ್ತ್ರೀಯ ಸೌಂದರ್ಯವನ್ನು ಹೆಚ್ಚಿಸಿವೆ. ಕೊರಳಲ್ಲಿ ಚಿನ್ನಾಭರಣಗಳು, ಕರ್ಣಾಭರಣಗಳು, ಬೈತಲಮಣಿಗಳು, ಚಿನ್ನದ ಬಳೆಗಳು ಕಾಲಲ್ಲಿ ಚಿನ್ನದ ತೋಡೆಗಳು ಚಿತ್ರಾಲಂಕೃತಗೊಂಡಿವೆ. ಸಿಂಹಕಟಿಯು ಎದ್ದು ತೋರುವಂತೆ ಚಿನ್ನದ ಡಾಬನ್ನು ಸಂಯೋಜಿಸಲಾಗಿದೆ. ಇಲ್ಲಿ ವಿವೇಚಿಸ ಬೇಕಾದುದೆನೆಂದರೆ, ಅಂದಿನ ಸ್ತ್ರೀಯರು ಆಭರಣಗಳ ಮೇಲೆ ಎಷ್ಟೊಂದು ವ್ಯಾಮೋಹವುಳ್ಳವರೆಂದು ತಿಳಿಯುತ್ತದೆ. ಜೊತೆಗೆ ಶೃಂಗಾರ ಪ್ರೀಯರೂ ಆಗಿದ್ದರೆಂದು ತಿಳಿಯುತ್ತದೆ. ಚಿತ್ರದಲ್ಲಿ ಆಕರ್ಷಕವಾಗಿ ವಿನ್ಯಾಸಗೊಳಿಸಿದ ಸೀರೆ, ಕೆಂಪು ರವಿಕೆಯು ರಚನೆಗೊಂಡಿದೆ. ಭಾರತೀಯ ಸ್ತ್ರೀಯರು ಅದರಲ್ಲೂ ದಕ್ಷಿಣಭಾರತದ ಸ್ತ್ರೀಯರು ಸೀರೆ ಮತ್ತು ಕುಪ್ಪಸಗಳನ್ನು ಬಹುವಾಗಿ ಮೆಚ್ಚಿಕೊಳ್ಳುತ್ತಿದ್ದರು. ಹೀಗಾಗಿ ಅಂದಿನ ಕಾಲದಲ್ಲಿ ಶ್ರೇಷ್ಠಮಟ್ಟದ ಕೈಮಗ್ಗ ಕೈಗಾರಿಕೆಯು ನಮ್ಮ ದೇಶದಲ್ಲಿ ಬೆಳವಣಿಗೆಯಲ್ಲಿತ್ತು. ಇವು ಭಾರತೀಯ ಸಂಪ್ರದಾಯಿಕ ಮಹಿಳೆಯರ ಉಡುಪುಗಳನ್ನು ತಯಾರಿಸಿ ವಿಶ್ವಮಟ್ಟದಲ್ಲಿ ಪ್ರಸಿದ್ಧಿ ಪಡೆದಿವೆ. ಇಲ್ಲಿನ ಮಹಿಳೆಯರು ಸೀರೆಯನ್ನು ಧರಿಸುವ ಶೈಲಿ, ಚಿತ್ತಾರಗಳ ಆಯ್ಕೆ, ವರ್ಣಗಳ ಆಯ್ಕೆಯು ವೈಶಿಷ್ಟ್ಯಪೂರ್ಣವಾಗಿತ್ತು. ಈ ಸ್ತ್ರೀ ಚಿತ್ರದಲ್ಲಿರುವ ಸೀರೆ, ಕುಪ್ಪಸದ ವಿನ್ಯಾಸ, ಕಸೂತಿಹಾಕಿದ ಚಿತ್ರವಿನ್ಯಾಸಗಳಿಂದ ಕೂಡಿದೆ. ಕೇಶವಿನ್ಯಾಸದಲ್ಲಿಯೂ ಸಹ ಅಲಂಕಾರಿಕ ಹೆಣಿಕೆಯು ಮೂಡಿಬಂದಿದೆ. ಚಿತ್ರದ ಹಿನ್ನೆಲೆಯಲ್ಲಿ ಕಂಬ ಹಾಗೂ ಮಂಟಪದ ವಿನ್ಯಾಸವು ರೂಪಗೊಂಡಿದ್ದು, ಅಲಂಕಾರಿಕ ನಕ್ಷಾವಿನ್ಯಾಸವು ಚಿತ್ರಿತಗೊಂಡಿದೆ. ವೃತ್ತಾಕಾರವಾಗಿ ಪರದೆಗಳನ್ನು ಸಂಯೋಜಿಸಿದ್ದು, ಮರದ ಡಯಾಸ ಹಾಗೂ ಆಭರಣಗಳನ್ನು ಇಡುವ ಡ್ರಾಗಳು (ಪೆಟ್ಟಿಗೆ) ವ್ಯಕ್ತಗೊಂಡಿವೆ. ವಿವಿಧ ಹೂವುಗಳಿಂದ

ಕೂಡಿದ ಹೂದಾನಿಯು ಸಂಯೋಜನೆಗೊಂಡಿದ್ದು, ಶ್ರೀಮಂತಿಕೆಯ ವೈಭವವನ್ನು ಎತ್ತಿ ತೋರಿಸುತ್ತದೆ. ಚಿತ್ರದಲ್ಲಿ ಅಲಂಕಾರದ ಆಶಯವು ಉದ್ದೀಪನಗೊಂಡಿದೆ.

**ಚಿತ್ರಸಂಖ್ಯೆ ೨೩ ಹಂಸದೊಂದಿಗೆ ಮಾತು.**

ಈ ಭಾವಚಿತ್ರದಲ್ಲಿ ಓರ್ವ ಮಹಿಳೆಯು ಹಂಸದೊಂದಿಗೆ ಮನದಾಳದ ಭಾವನೆಗಳನ್ನು ಹಂಚಿಕೊಳ್ಳುತ್ತಿರುವಂತೆ ಕಲಾವಿದನು ಚಿತ್ರಣ ಮಾಡಿರುವನು. ಇಲ್ಲಿ ಬಿಂಬಿತವಾಗಿರುವ ಸ್ತ್ರೀಯು ಶ್ರೀಮಂತ ಮಹಿಳೆಯಂತೆ ರೂಪಲಕ್ಷಣಗಳನ್ನು ಹೊಂದಿರುವಳು. ಸೀರೆಯ ವಿನ್ಯಾಸವು ಹದಿನಾರು ಮೊಳದ ಸೀರೆಯಂತೆ ರಚನೆಗೊಂಡಿದ್ದು, ಸಾಂಪ್ರದಾಯಿಕ ನೆಯ್ಗೆಯ ಕಲೆಯನ್ನು ಇಲ್ಲಿ ಬಿಂಬಿಸಲಾಗಿದೆ. ಸೀರೆಯ ಅಂಚು ಚೌಕ ಪಟ್ಟಿಕೆಗಳಿಂದ ಕೂಡಿದೆ. ಕೇಶವನ್ನು ಬಾಚಿ ಬಿಗಿಯಾಗಿ ತುರುಬು ಕಟ್ಟಿದ್ದು, ಅದಕ್ಕೆ ಆಭರಣಗಳನ್ನು ಸಂಯೋಜಿಸಲಾಗಿದೆ. ಚಿತ್ರದಲ್ಲಿ ಚಿನ್ನದ ಡಾಬು ಹಾಗೂ ಒಡ್ಯಾಣವನ್ನು ಕಾಣುತ್ತೇವೆ. ಇವು ಮುತ್ತು ರತ್ನಗಳಿಂದ ಅಲಂಕೃತಗೊಂಡಿವೆ. ಈ ಚಿತ್ರದಲ್ಲಿ ಸ್ತ್ರೀಯ ದೈಹಿಕ ಲಕ್ಷಣಗಳು, ವೇಷಭೂಷಣಗಳು ಹಾಗೂ ಧರಿಸುವ ರೀತಿ ನೀತಿಗಳು ಒಬ್ಬ ಮರಾಠ ಸಂಪ್ರದಾಯಸ್ಥ ಮಹಿಳೆಯಂತೆ ಬಿಂಬಿತವಾಗಿದ್ದಾಳೆ. ಚಿತ್ರದ ವಾಸ್ತುವಿನ್ಯಾಸವು ಅರಮನೆಯ ದೃಶ್ಯಗಳನ್ನು ಕಲ್ಪಿಸುವಂತೆ, ಕಂಬಗಳ ವಿನ್ಯಾಸ, ಕಂಪೌಂಡಿನ ವಿನ್ಯಾಸ, ಮೆಟ್ಟಲುಗಳು, ಪರದೆಗಳು ಮತ್ತು ಹಂಸ ಕುಳಿತ ಕಂಬದ ವಿನ್ಯಾಸವು ಚೌಕ, ವೃತ್ತಗಳ ಅಲಂಕಾರಿಕ ಚಿತ್ರಪಟ್ಟಿಕೆಗಳು ವರ್ಣಮಯವಾಗಿ ಪ್ರಕಟಗೊಂಡಿವೆ. ಹಿನ್ನೆಲೆಯ ಪರದೆಗಳ ಸಂಯೋಜನೆಯಲ್ಲಿ ದೊಡ್ಡದೊಡ್ಡ ಹೂವುಗಳ ನಕ್ಷೆಯು ರೇಖಾ ಪ್ರಧಾನವಾಗಿ ಮೂಡಿಬಂದಿದೆ. ಈ ದೃಶ್ಯವನ್ನು ರವಿವರ್ಮನು ತೈಲವರ್ಣದಲ್ಲಿ ಚಿತ್ರಿಸಿದ್ದಾನೆ. ಅದು ಪೌರಾಣಿಕ ಮಹಿಳೆ, ದಮಯಂತಿಯೆಂದು ಹೇಳಲಾಗಿದೆ. ಚಿತ್ರದಲ್ಲಿ ಕೆಂಪು ಹಾಗೂ ಹಸಿರು ಮೆರಗು ಬಣ್ಣಗಳು ಪ್ರಧಾನವಾಗಿ ಮೂಡಿಬಂದಿದ್ದು, ಚಿನ್ನದ ರೇಖಿನ ಹಾಳೆಯು ಹಿನ್ನೆಲೆಯಾಗಿ ಆವರಿಸಿದೆ. ಉಳಿದಂತೆ ಕಪ್ಪು, ಬಿಳಿ ಬಣ್ಣಗಳು ಸಂಯೋಜನೆಗೊಂಡಿವೆ. ಚಿತ್ರವು ರೇಖಾ ಪ್ರಾಧಾನ್ಯತೆಯಿಂದ ಕೂಡಿದ್ದು, ಅಲಂಕಾರದ ಆಶಯ ಓರಣವಾಗಿ ಅನಾವರಣಗೊಂಡಿದೆ.

**ಚಿತ್ರಸಂಖ್ಯೆ ೨೪ ಶೃಂಗಾರಗೊಂಡ ಕನ್ಯೆ**

ಈ ಚಿತ್ರದಲ್ಲಿ ಓರ್ವ ಕನ್ಯೆಯು ವಸ್ತ್ರಾಭರಣಗಳಿಂದ ಶೃಂಗಾರಗೊಂಡಿರುವಳು. ಹಾಲು ಬಿಳುಪಿನ ಮೈಬಣ್ಣವನ್ನು ಹೊಂದಿದ ಈ ಯುವತಿಯ ಅಂಗಾಂಗಗಳು ದಷ್ಟಪುಷ್ಟವಾಗಿ ಮೂಡಿಬಂದಿವೆ. ಚಿತ್ರದಲ್ಲಿ ಮುಖ ಹಾಗೂ ಕೇಶದಲ್ಲಿ ಆಭರಗಳ ಅಲಂಕಾರ ವೈಭವದಿಂದ ಕೂಡಿದೆ. ಈ ಕನ್ಯೆಯ ಶರೀರಕ್ಕೆ ವಸ್ತ್ರಾಭರಣಗಳ ಭಾರವನ್ನು ಕಲಾವಿದನು ಎತ್ತಿತೋರಿಸಿದ್ದಾನೆ. ಸೀರೆ ಹಾಗೂ ಕುಪ್ಪಸಗಳಲ್ಲಿ ಅತೀಯಾದ ಚಿತ್ರವಿನ್ಯಾಸವು ರೂಪಗೊಂಡಿದ್ದು, ಈ ಸೀರೆ ಕುಪ್ಪಸಗಳು ಆ ಕಾಲದ ಬೆಲೆಬಾಳುವ ವಸ್ತುಗಳೆಂದು ಅರಿಯಬಹುದು. ಮೊಳಕಾಲತನ ಮೂಡಿಬಂದ ಉದ್ದವಾದ ಜಡೆಯು, ಅದಕ್ಕೆ ಹೂವಿನ ಅಲಂಕಾರವೂ ಸಹ ಆಕರ್ಷಕವಾಗಿ ಅಲಂಕೃತಗೊಂಡಿದೆ. ಹಿನ್ನೆಲೆಯಲ್ಲಿ ಕಂಬಗಳ ಹಾಗೂ ಮಂಟಪಗಳಲ್ಲಿ ಸೂಕ್ಷ್ಮ ರೀತಿಯ ಚಿತ್ರವಿನ್ಯಾಸಗಳು ರಚನೆಗೊಂಡಿವೆ. ಹೂವಿನ ಕುಂಡಾಲಿಗಳು, ಮೇಜು, ಭಿತ್ತಿ ಹಾಗೂ ನೆಲಹಾಸು ಚಿತ್ರ ಪಟ್ಟಿಕೆಗಳಿಂದ ರಚನೆಗೊಂಡಿವೆ. ಈ

ಚಿತ್ರದಲ್ಲಿ ರೇಖೆ ಹಾಗೂ ವರ್ಣಗಳ ಚಿತ್ರವಿನ್ಯಾಸಗಳು ಅತ್ಯಂತ ಸೂಕ್ಷ್ಮವಾಗಿ ಹಾಗೂ ವೈಭವಯುತವಾಗಿ ಮೂಡಿಬಂದಿವೆ.

**ಚಿತ್ರಸಂಖ್ಯೆ ೨೫ ಪತ್ರಲೇಖನ**

ಈ ಚಿತ್ರದಲ್ಲಿ ಓರ್ವ ಸ್ತ್ರೀಯು ಪತ್ರಲೇಖನ ಮಾಡುತ್ತಿರುವಂತೆ ಬಿಂಬಿತಗೊಂಡಿದ್ದಾಳೆ. ಸ್ತ್ರೀಯು ವಸ್ತ್ರಾಭರಣಗಳಿಂದ ಭೂಷಿತಗೊಂಡಿದ್ದು, ತನ್ನ ಇನಿಯನಿಗೆ ಪತ್ರಮುಖೇನ ಸಂದೇಶ ತಿಳಿಸುವ ಉತ್ಸಾಹ ಮುಖಲಕ್ಷಣದಲ್ಲಿ ಎದ್ದು ತೋರುತ್ತದೆ. ಇಲ್ಲಿ ಕಲಾವಿದನು ಅಂಗರಚನಾ ಶಾಸ್ತ್ರಕ್ಕೆ ಮಹತ್ವ ನೀಡದಿದ್ದರೂ ಸಹ ರೇಖೆ ಹಾಗೂ ವರ್ಣಗಳಿಂದ ಸ್ತ್ರೀಯ ಸೌಂದರ್ಯವು ಆಕರ್ಷಿಸುವಂತೆ ಚಿತ್ರಿಸಿದ್ದಾನೆ. ಈ ಮಹಿಳೆಯು ಆಧುನಿಕ ಕಾಲದ ಸ್ತ್ರೀಯಂತೆ ಚಿತ್ರಿತಗೊಂಡಿದ್ದು, ಇವಳು ಬರೆಯುವ ಲೇಖನಿಯು ಹಕ್ಕಿಯ ಪುಚ್ಚದಿಂದ ಕೂಡಿದೆ. ಇಲ್ಲಿ ಕಲಾವಿದನು ಕಾಲಮಾನವನ್ನು ಸಹ ಗಮನಿಸದೆ ಹೋಗಿರಬಹುದು. ಚಿತ್ರವು ಅಲಂಕಾರ ಪ್ರಜ್ಞೆಯಿಂದ ಕೂಡಿದ್ದು, ಇಲ್ಲಿ ಸಂಯೋಜಿಸಲಾದ ಮೇಜು, ಕುರ್ಚಿ, ಜಮಖಾನೆ, ಲೇಖನಿಗಳು ಪ್ರಮಾಣ ಬದ್ಧವಾಗಿ ಮೂಡಿಬಂದಿಲ್ಲ. ಇಲ್ಲಿ ಚಿತ್ರ ಪ್ರಜ್ಞೆಗಿಂತ ಅಲಂಕಾರ ಪ್ರಜ್ಞೆಯನ್ನು ಕಲಾವಿದನು ತೋರಿದ್ದಾನೆ.

**ಚಿತ್ರಸಂಖ್ಯೆ ೨೬ ಅಲಂಕೃತ ಯುವತಿ**

ಇಲ್ಲಿ ಯುವತಿಯು ವಸ್ತ್ರಾಭರಣಗಳಿಂದ ನವವಧುವಿನಂತೆ ಚಿತ್ರಿತಗೊಂಡಿರುವಳು. ಸೀರೆ, ಕುಪ್ಪಸಗಳು ಬೆಲೆಬಾಳುವ ವಸ್ತ್ರಗಳಂತೆ ಕಲಾವಿದನು ತೋರಿಸಲು ಪ್ರಯತ್ನಿಸಿದ್ದಾನೆ. ಸ್ತ್ರೀಯು ಧರಿಸಿದ ಬೈತಲಮಣಿ, ಕರ್ಣಾಭರಣಗಳು, ಕಂಠಾಭರಣಗಳು, ಚಿನ್ನದ ಡಾಬು ಹಾಗೂ ಬಳೆಗಳು ಧರಿಸಿದ್ದನ್ನು ಗಮನಿಸಿದರೆ ಓರ್ವ ಶ್ರೀಮಂತ ಮನೆತನದ ಯುವತಿಯಂತೆ ತೋರುತ್ತಾಳೆ. ಇಲ್ಲಿ ಕಲಾವಿದನು ದೊಡ್ಡದಾದ ಹೂವಿನ ಮಾಲೆಯನ್ನು ವಿವಿಧ ವರ್ಣಗಳ ಹೂವುಗಳಿಂದ ಅಲಂಕರಿಸಿದ್ದಾನೆ. ಹಿನ್ನೆಲೆಯು ಡಯಾಸ, ಹೂವಿನ ಕುಂಡಾಲಿ, ಪರದೆಗಳು, ನೆಲಹಾಸು ಅಲಂಕಾರಯುತವಾಗಿ ಮೂಡಿಬಂದಿವೆ. ಚಿತ್ರವು ರೇಖೆ ಹಾಗೂ ಪ್ರಖರ ವರ್ಣಗಳಿಂದ ಅಲಂಕೃತ ಆಶಯವನ್ನು ಹೊಂದಿದೆ.

**ಚಿತ್ರಸಂಖ್ಯೆ ೨೭ ನಿರೀಕ್ಷೆಯಲ್ಲಿರುವ ಯುವತಿ**

ಈ ಚಿತ್ರದಲ್ಲಿ ವಿಶಿಷ್ಟವಾಗಿ ಲಂಗ, ದಾವಣಿ ಹಾಗೂ ರವಿಕೆಯನ್ನು, ವಿಶಿಷ್ಟವಾದ ಆಭರಣಗಳನ್ನು ಧರಿಸಿ ತನ್ನ ಸೌಂದರ್ಯವನ್ನು ಪ್ರದರ್ಶಿಸುತ್ತಾ ಯಾವುದೋ ನಿರೀಕ್ಷೆಯಲ್ಲಿರುವಂತೆ ಯುವತಿಯ ಚಿತ್ರವು ಮೂಡಿಬಂದಿದೆ. ವೇಷಭೂಷಣಗಳನ್ನು ಗಮನಿಸಿದರೆ ಹೈದರಾಬಾದ ಕರ್ನಾಟಕ ಭಾಗದ ಸ್ತ್ರೀಯರ ಬದುಕನ್ನು ತಿಳಿಸುತ್ತದೆ. ಈ ಚಿತ್ರದಲ್ಲಿ ಯುವತಿಯ ಅಂಗಾಂಗಗಳು ದುಂಡುತನದಿಂದ ಚಿತ್ರಣಗೊಂಡಿದ್ದು, ಇವಳು ತುಂಬು ಯವ್ವನೆ ಎಂದು ಹೇಳಬಹುದು. ಈ ಚಿತ್ರದಲ್ಲಿ ಮಿತವಾದ ಆಭರಣಗಳು ಸಂಯೋಜನೆಗೊಂಡಿವೆ. ತುರುಬಿಗೆ ಮುತ್ತಿನ ಸರ, ಕೆಂಪು ಗುಲಾಬಿಯು ಆಕರ್ಷಕವಾಗಿ ರೂಪುಗೊಂಡಿದೆ. ಇವಳು ಶ್ರೀಮಂತರ ಮನೆಯಲ್ಲಿರುವ ಸಾಮಾನ್ಯ ಯುವತಿಯಂತೆ ನಿರೂಪಣೆಗೊಂಡಿದ್ದಾಳೆ. ಧರಿಸಿದ ದುಪ್ಪಟವು ಪಟ್ಟಿ ಪಟ್ಟಿಗಳಿಂದ ಕೂಡಿದ ಚಿತ್ರವಿನ್ಯಾಸವು ಕೆಂಪು ಹಾಗೂ ಕಪ್ಪು ವರ್ಣಗಳಿಂದ ಸಂಯೋಜನೆಗೊಂಡಿವೆ. ಅಲಂಕಾರಯುತ

ಕುರ್ಚಿ, ಮರದ ಡಯಾಸ ಹಾಗೂ ವರ್ಣಮಯ ಪರದೆಗಳು ಚಿತ್ರಿತಗೊಂಡಿದ್ದು, ಅಲಂಕಾರವು ಉತ್ತಮವಾಗಿ ಅಭಿವ್ಯಕ್ತಗೊಂಡಿದೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ಭಾವನಾತ್ಮಕವಾಗಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೨೮ ನಿರೀಕ್ಷೆಯಲ್ಲಿ ಕನ್ಯೆ**

ಈ ಚಿತ್ರವು ಚಿತ್ರಸಂಖ್ಯೆ ೨೮ ರಂತೆ ಯಥಾವತ್ತಾಗಿ ಮೂಡಿಬಂದಿದೆ. ಇಲ್ಲಿ ಹಸಿರು ರವಿಕೆ, ಬಿಳಿ ಲಂಗ ಹಾಗೂ ಕೆಂಪು ದಾವಣಿಯು ವ್ಯಕ್ತವಾಗಿದೆ. ಮುಖದ ಚಲುವಿನಲ್ಲಿ ಕಾಂತಿಯು ಉದ್ದೀಪನಗೊಂಡಿದೆ. ವಸ್ತ್ರಗಳಲ್ಲಿ ನಿರಿಗೆಗಳು ಯೋಜನಾಬದ್ಧವಾಗಿ ಮೂಡಿಬಂದಿವೆ. ಅಂಗಾಂಗಗಳ ದುಂಡುತನವು ಚಿತ್ರ ೨೮ ಕ್ಕಿಂತ ನೈಜರೂಪದಲ್ಲಿ ಬಿಂಬಿತವಾಗಿದೆ. ಹಿನ್ನೆಲೆಯಲ್ಲಿ ತಿಳಿನೀಲಿ ಬಣ್ಣವು, ನೆಲಹಾಸಿಗೆ ಕೆಂಪು ಬಣ್ಣವು ಲೇಪನಗೊಂಡಿವೆ. ಡಯಾಸದ ಚಿತ್ರವು ರೇಖಾ ಪ್ರಧಾನವಾಗಿ ರೂಪಗೊಂಡಿದ್ದು ಚಪ್ಪಟೆಯಾಗಿ ವರ್ಣವಿಧಾನವನ್ನು ಅನುಸರಿಸಲಾಗಿದೆ. ಉಳಿದಂತೆ ಚಿತ್ರವು ಯಥಾವತ್ತಾಗಿ ಚಿತ್ರ ೨೮ ರಂತೆ ರೂಪುಗೊಂಡಿದೆ. ಈ ಎರಡೂ ಚಿತ್ರಗಳು ಪ್ರತಿಕೃತಿ ಚಿತ್ರಗಳಾಗಿವೆ.

**ಚಿತ್ರಸಂಖ್ಯೆ ೨೯ ವೈಯಾರದ ಸುಂದರಿ**

ಇದು ೧೮ x ೨೩ ಸೆಂ.ಮೀ ಅಳತೆಯನ್ನು ಹೊಂದಿದ್ದು, ವಿಶಿಷ್ಟ ರೀತಿಯಲ್ಲಿ ಸೀರೆಯನ್ನು ಧರಿಸಿ ತನ್ನ ಚಲುವನ್ನು ವ್ಯಕ್ತಪಡಿಸುತ್ತಿರುವಂತೆ ಸ್ತ್ರೀಯು ಈ ಚಿತ್ರದಲ್ಲಿ ಬಿಂಬಿತವಾಗಿದ್ದಾಳೆ. ರೇಖಾ ವೈಖರಿಯು ಇಲ್ಲಿ ಉತ್ತಮವಾಗಿ ಮೂಡಿಬಂದಿದೆ. ದುಂಡುಮುಖ, ಶೃಂಗರಿಸಿದ ಕೇಶವಿನ್ಯಾಸ, ಅದಕ್ಕೆ ತಕ್ಕಂತೆ ಆಭರಣಗಳ ವಿನ್ಯಾಸ ವ್ಯಕ್ತಗೊಂಡಿದ್ದು, ಸಾಂಕೇತಿಕ ಪರಿಕಲ್ಪನೆ ವ್ಯಕ್ತವಾಗಿದೆ. ಹಿನ್ನೆಲೆಯಲ್ಲಿ ಡಯಾಸ ಹಾಗೂ ವರ್ಣಮಯ ಪರದೆಗಳು ಸಂಯೋಜನೆಗೊಂಡಿದ್ದು, ದೊಡ್ಡ ದೊಡ್ಡ ಪಟ್ಟಿಕೆಗಳು ಪ್ರಧಾನವಾಗಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೩೦ ಗಿಳಿಯೊಂದಿಗೆ ಮಾತುಕತೆ**

ಈ ಚಿತ್ರದಲ್ಲಿ ಮೂಡಿಬಂದಿರುವ ಓರ್ವ ಶ್ರೀಮಂತ ಮಹಿಳೆಯು, ಆಕರ್ಷಕವಾಗಿ ಹಾಗೂ ಸಾಂಪ್ರದಾಯಿಕ ರೀತಿಯಲ್ಲಿ ಸೀರೆ ಹಾಗೂ ಕುಪ್ಪಸವನ್ನು ಧರಿಸಿ, ಆಕರ್ಷಕ ಕುತನಿ (Velvet) ಬಟ್ಟೆಯನ್ನು ಹೊದಿಸಿದ ಅಲಂಕಾರಿಕ ಕುರ್ಚಿಯ ಮೇಲೆ ಕಾಲುಮೇಲೆ ಕಾಲುಹಾಕಿ ಕುಳಿತು ವೈಯಾರದಿಂದ ಬೀಗುತ್ತಿರುವಳು. ಈ ಮಹಿಳೆಯ ದೈಹಿಕ ರೂಪರೇಷಗಳು ಆರೋಗ್ಯಪೂರ್ಣವಾಗಿ ಹಾಗೂ ಆಕರ್ಷಕವಾಗಿ ವರ್ಣಗಳಿಂದ ಬಿಂಬಿತವಾಗಿವೆ. ಸೀರೆಯಲ್ಲಿ ಕೆಂಪು ಬುಟ್ಟಾಗಳು, ಅಂಚಿನಲ್ಲಿ ಸೂಕ್ಷ್ಮರೇಖೆಗಳ ಚಿತ್ರವಿನ್ಯಾಸಗಳು ಚಿತ್ರಿತಗೊಂಡಿವೆ. ಕೊರಳಲ್ಲಿ ಮುತ್ತಿನ ಸರ, ಗುಂಡಿನ ಟಿಕ್ಕಿಸರ, ಕೈಯಲ್ಲಿ ಹಸಿರು ಗಾಜಿನ ಬಳೆಗಳು, ಕಿವಿಯಲ್ಲಿ ಓಲೆಗಳು ಚಿತ್ರಿತಗೊಂಡಿವೆ. ಕಣ್ಣೋಟದಲ್ಲಿ ಚಲುವು ಉದ್ದೀಪನಗೊಂಡಿದೆ. ಎಡಗೈಯಲ್ಲಿ ಹಣ್ಣು ಬಲಗೈಯ ಮೇಲೆ ಗಿಳಿಯು ಸಂಯೋಜನೆಗೊಂಡಿದ್ದು ಆ ಮಹಿಳೆಯ ದಯೆ, ಕರುಣೆ ಹಾಗೂ ಪ್ರೀತಿಯನ್ನು ಕಲ್ಪಿಸುತ್ತದೆ. ಇದು ಪ್ರೇಮದ ಸಂಕೇತವೂ ಕೂಡಾ ಆಗಿದೆ. ಹಿನ್ನೆಲೆಯಲ್ಲಿ ಪರದೆಗಳನ್ನು ಸಂಯೋಜಿಸಲಾಗಿದೆ. ಚಿತ್ರದಲ್ಲಿ ಮಹಿಳೆಯ ದೇಹದ ರಚನೆಗೆ ಮಹತ್ವ ನೀಡಿದಷ್ಟು ಇನ್ನುಳಿದ

ಭಾಗಕ್ಕೆ ನೀಡಿಲ್ಲ. ಈ ಚಿತ್ರದಲ್ಲಿ ಚಿನ್ನದ ರೇಖೆ ಪ್ರಧಾನವಾಗಿ ಬಳಕೆಗೊಂಡಿದೆ. ಚಿತ್ರವು ರೇಖೆ ಹಾಗೂ ವರ್ಣದ ದೃಷ್ಟಿಯಿಂದ ಅಲಂಕಾರಿಕ ಆಶಯವು ಪ್ರಕಟಗೊಂಡಿದೆ. ಈ ಚಿತ್ರವೂ ೧೮ x ೨೩ ಸೆಂ.ಮೀ ಅಳತೆಯನ್ನು ಹೊಂದಿದೆ.

**ಚಿತ್ರಸಂಖ್ಯೆ ೩೧ ಪಾರಿವಾಳ ಮತ್ತು ಮಹಿಳೆ**

ಈ ಚಿತ್ರದಲ್ಲಿ ಓರ್ವ ಶ್ರೀಮಂತ ಮಹಿಳೆಯು ಪಾರಿವಾಳವನ್ನು ಕರೆಯುತ್ತಿರುವಂತೆ ಚಿತ್ರಿತಗೊಂಡಿದ್ದಾಳೆ. ಅದರೊಂದಿಗೆ ಭಾವನೆಗಳನ್ನು ಹಂಚಿಕೊಳ್ಳುತ್ತಿರುವ ಕಲ್ಪನೆಯು ಬಿಂಬಿತವಾಗಿದೆ. ದೈಹಿಕ ಲಕ್ಷಣಗಳು ಆಕರ್ಷಕವಾಗಿ ಹಾಗೂ ಎತ್ತರದ ನಿಲುವು ವ್ಯಕ್ತಗೊಂಡಿದ್ದು, ಹದಿನೆಂಟು ಮೊಳದ ಸೀರೆಯನ್ನು ಧರಿಸಿ, ವಿಶಿಷ್ಟವಾಗಿ ಕಚ್ಚೆಹಾಕಿ, ಕಪ್ಪು ಕುಪ್ಪಸವನ್ನು ಹೊಂದಿರುವಳು. ಇವು ಆ ಕಾಲದ ವಿಶಿಷ್ಟ ಸೀರೆ ಕುಪ್ಪಸಗಳೆಂದು ಹೇಳಬಹುದು. ನಡುವಿಗೆ ಚಿನ್ನದ ಡಾಬು, ಚಿನ್ನದ ಒಡ್ಯಾಣ, ಕತ್ತಿನಲ್ಲಿ ವಿವಿಧ ಚಿನ್ನಾಭರಣಗಳು ಅಲಂಕರಿಸಿದ್ದು, ಮುಖದ ವಿನ್ಯಾಸದಲ್ಲಿ ತುರುಬಿಗೆ ಮುತ್ತಿನ ಸರ, ಕೆಂಪು ಗುಲಾಬಿ ಹಾಗೂ ಬೈತಲಮಣಿಗಳು ಆಕರ್ಷಕವಾಗಿ ಮೂಡಿಬಂದಿವೆ. ಮುಖದ ಕಾಂತಿಯು ಆ ಮಹಿಳೆಯ ಸೌಂದರ್ಯವನ್ನು ಉದ್ದೀಪನಗೊಳಿಸಿದೆ. ಹಿನ್ನೆಲೆಯಲ್ಲಿ, ಆಕಾಶದಲ್ಲಿ ಹಾರಿ ಹಾರಿ ಸುಸ್ತಾಗಿ ಒಡತಿಯತ್ತ ಬರುತ್ತಿರುವ ಪಾರಿವಾಳವು, ಶ್ವೇತವರ್ಣದಲ್ಲಿ ರಚನೆಗೊಂಡಿದೆ. ಪಕ್ಷಿಯು ಪ್ರಮಾಣಬದ್ಧವಾಗಿ ಮೂಡಿಬಂದಿದ್ದು, ಆಕರ್ಷಕ ಚಲನೆಯ ವ್ಯಕ್ತಗೊಂಡಿದೆ ವಿಶಿಷ್ಟ ಕುರ್ಚಿಯನ್ನು ಚಿತ್ರಿಸಿದ್ದು ಅದಕ್ಕೆ ಕೆಂಪು ಹಾಗೂ ತಿಳಿಹಸಿರು ಬಣ್ಣಗಳನ್ನು ಸಂಯೋಜಿಸಲಾಗಿದೆ. ಎಲ್ಲ ಚಿತ್ರಗಳಲ್ಲಿ ರಚನೆಗೊಂಡಿರುವಂತೆ ಈ ಚಿತ್ರದಲ್ಲಿಯೂ ಸಹ ಪರದೆಗಳನ್ನು ಸಂಯೋಜಿಸಲಾಗಿದೆ. ಚಿತ್ರದಲ್ಲಿ ಮಹಿಳೆಯ ಕೊರಳಲ್ಲಿ ವಿಶಿಷ್ಟ ಹೂಮಾಲೆಯು ಅಲಂಕರಿಸಿದೆ. ಇಲ್ಲಿ ಬಿಂಬಿತವಾದ ಮಹಿಳೆಯು ಒಂದು ಜನಾಂಗದ ಶ್ರೀಮಂತ ಮಹಿಳೆಯಂತೆ ಕಂಡುಬರುತ್ತಾಳೆ.

**ಚಿತ್ರಸಂಖ್ಯೆ ೩೨, ೩೩ ಮಹಿಳೆ ಮತ್ತು ನವಿಲು**

ಚಿತ್ರ ೩೩ ಇದು ಭಾವಯೋಜನಾ ದೃಷ್ಟಿಯಿಂದ ಉತ್ತಮ ಚಿತ್ರವೆಂದು ಹೇಳಬಹುದು. ಮುಖದಲ್ಲಿ ಹಾಗೂ ಶರೀರ ವಿನ್ಯಾಸದಲ್ಲಿ ಆ ಮಹಿಳೆಯ ಆಕರ್ಷಕ ನಿಲುವನ್ನು ಕಲಾವಿದನು ಕುಂಚ ಹಾಗೂ ವರ್ಣಗಳ ಮೂಲಕ ತಂದಿದ್ದಾನೆ. ಮಹಿಳೆಯ ಸೌಂದರ್ಯವು ಪುನಃ ಪುನಃ ನೋಡುವಂತೆ ಈ ಚಿತ್ರದಲ್ಲಿ ಬಿಂಬಿತವಾಗಿದೆ. ಸೀರೆಯ ವಿನ್ಯಾಸದಲ್ಲಿ ಸರಳ ಹಾಗೂ ವಕ್ರ ರೇಖೆಗಳ ಮೂಲಕ ಚಿತ್ರವಿನ್ಯಾಸವನ್ನುಅಳವಡಿಸಲಾಗಿದೆ. ಇದು ಅತ್ಯಂತ ಬೆಲೆಬಾಳುವ ಸೀರೆಯೆಂದು ಕಲ್ಪಿಸಬಹುದು. ಆಭರಣಗಳ ವಿನ್ಯಾಸವು ಹಿಂದಿನ ಚಿತ್ರದಲ್ಲಿರುವಂತೆ ಬಿಂಬಿತವಾಗಿದೆ. ಈ ಮಹಿಳೆಯ ಕೇಶವಿನ್ಯಾಸವು ಬಿಗಿಯಾಗಿ ಕಟ್ಟಿ ತುರುಬಿನಿಂದ ಕೇಶರಾಶಿಯು ಬೆನ್ನ ಮೇಲೆ ಹರಡಿದೆ. ಅದಕ್ಕೆ ಗುಲಾಬಿ ಹೂವನ್ನು ಅಲಂಕರಿಸಲಾಗಿದೆ. ನವಿಲಿನ ಚಿತ್ರವು ಶ್ವೇತವರ್ಣದಿಂದ ರೂಪಗೊಂಡಿದ್ದು, ರೇಖಾ ಸಂಯೋಜನೆಯು ಪ್ರಮಾಣ್ಯತೆಯಿಂದ ಕೂಡಿದೆ. ಇಲ್ಲಿ ಅದರ ನೈಜ ಸ್ವರೂಪವನ್ನು ತಂದಿಲ್ಲವಾದರೂ ಸಾಂಕೇತಿಕವಾಗಿ ಮೂಡಿಬಂದಿದೆ. ಕುರ್ಚಿಯ ವಿನ್ಯಾಸ ಚಿತ್ರ ೩೧ ರಂತೆ ರಚನೆಗೊಂಡಿದೆ. ಇದು ಆಕರ್ಷಕವಾದ ಭಾವನಿರೂಪಣಾ ಚಿತ್ರವೆಂದು ಹೇಳಬಹುದು.

ಈ ಚಿತ್ರವು ಚಿತ್ರ ೩೨೧ರ ಪ್ರತಿರೂಪದ ಚಿತ್ರವಾಗಿದೆ. ಎರಡು ಚಿತ್ರಗಳೂ ಒಂದೇ ಆಶಯವನ್ನು ಹೊಂದಿದ್ದು, ಕುಳಿತಿರುವ ಭಂಗಿಯಲ್ಲಿ ವೈವಿಧ್ಯತೆಇದೆ. ಇಲ್ಲಿ ಮಹಿಳೆಯು ಠೀವಿಯಿಂದ ಕಾಲುಮೇಲೆ ಕಾಲಿಹಾಕಿ ನವಿಲಿನ ಜೊತೆ ಸಂಭಾಷಿಸುತ್ತಿರುವಂತೆ ವ್ಯಕ್ತಗೊಂಡಿದ್ದಾಳೆ. ಸೀರೆಯ ಅಲಂಕರಣದಲ್ಲಿ ರೇಖೆಗಳ ದಟ್ಟತೆ ಹಾಗೂ ಚಲನೆಯು ವ್ಯಕ್ತಗೊಂಡಿದೆ. ಆಕೃತಿಯ ಯಥಾದೃಷ್ಟಿಯು ಕಲಾಪೂರ್ಣವಾಗಿ ಮೂಡಿಬಂದಿದೆ. ಹಿನ್ನೆಲೆಯ ಕುರ್ಚಿಯ ಚಿತ್ರವು ಆಕರ್ಷಕವಾಗಿ ಮೂಡಿಬಂದಿದ್ದು, ಅದರ ಅಂಚು ಚಿತ್ರಪಟ್ಟಿಕೆಗಳಿಂದ ಕೂಡಿದೆ. ವರ್ಣಮಯ ಪರದೆಗಳು ಚಿತ್ರದ ಹಿಂದೆ ರೂಪಗೊಂಡಿದ್ದು, ಚಲನೆಯುಕ್ತ ರೇಖಾವಿನ್ಯಾಸವು ಸಂಯೋಜನೆಗೊಂಡಿದೆ. ಚಿತ್ರದಲ್ಲಿ ವರ್ಣವು ಅಲ್ಲಲ್ಲಿ ಕಿತ್ತು ಹೋದರೂ ಸಹ ಆಕರ್ಷಕವಾಗಿ ಕಂಡು ಬರುತ್ತದೆ. ಗಾಜಿನ ಅನೇಕ ಚಿತ್ರಗಳಲ್ಲಿ ಪ್ರಾಣಿಗಳು, ಪಕ್ಷಿಗಳು ಬಿಂಬಿತವಾಗಿವೆ. ಇವನ್ನು ಗಮನಿಸಿದರೆ ಆ ಕಾಲದ ಮಹಿಳೆಯರು ಎಷ್ಟೊಂದು ಪ್ರಾಣಿಪ್ರೀಯರಾಗಿದ್ದರೆಂದು ತಿಳಿಯುತ್ತದೆ.

**ಚಿತ್ರಸಂಖ್ಯೆ ೩೪ ಉಯ್ಯಾಲೆಯ ರಾಣಿ**

ಈ ಚಿತ್ರದಲ್ಲಿ ಓರ್ವ ಸುಂದರ ಮಹಿಳೆಯು ಉಯ್ಯಾಲೆಯಾಡುತ್ತಿರುವಂತೆ ಚಿತ್ರಿತಗೊಂಡಿರುವಳು. ರೇಖೆ ಹಾಗೂ ವರ್ಣಗಳಿಂದ ಮಹಿಳೆಯ ದೈಹಿಕ ಲಕ್ಷಣಗಳು ಸುಂದರವಾಗಿ ಮೂಡಿಬಂದಿವೆ. ಕಣ್ಣುಗಳಲ್ಲಿ ಆಕರ್ಷಕ ಹೊಳಪು, ತಿದ್ದಿ ತೀಡಿದ ಹುಬ್ಬುಗಳು, ನೀಳ ನಾಸಿಕ, ಮಂದಹಾಸ ಬೀರುವ ಕೆಂದುಟಿಗಳು ಈ ಚಲುವೆಯ ಅಂದವನ್ನು ಹೆಚ್ಚಿಸಿವೆ. ಚಿತ್ರದಲ್ಲಿ ವಸ್ತ್ರಾಭರಣಗಳ ಸೊಬಗು ಉತ್ತಮವಾಗಿ ಚಿತ್ರಣಗೊಂಡಿವೆ. ಹದಿನೆಂಟು ಮೊಳದ ಸೀರೆಯನ್ನು ಧರಿಸಿ ಕಚ್ಚೆಹಾಕಿದ್ದು, ಸೆರಗು ಭುಜದ ಹಿಂದೆ ಹಾರಾಡುತ್ತಿದೆ. ಸೀರೆಯ ಅಂದ ಇನ್ನೂ ಹೆಚ್ಚಿಸುವಂತೆ ನಡುವಿಗೆ ಚಿನ್ನದ ಡಾಬು ಹಾಗೂ ಒಡ್ಯಾಣವನ್ನು ಅಲಂಕರಿಸಲಾಗಿದೆ. ರವಿಕೆಗೆ ಕಪ್ಪು ಬಣ್ಣವನ್ನು ಸಂಯೋಜಿಸಿದ್ದರಿಂದ ಆಕೆಯ ಚಲುವು ಎದ್ದು ತೋರುತ್ತಿದೆ. ತಲೆಯ ಮೇಲೆ ಕಿರೀಟವನ್ನು ಧರಿಸಿದ್ದು ಆಕೆಯ ಕೇಶರಾಶಿಯು ಬೆನ್ನ ಹಿಂದೆ ಹರಡಿ ಕೊಂಡಿವೆ. ಹಿನ್ನೆಲೆಯಲ್ಲಿ ಬಣ್ಣದ ಪರದೆಗಳು ಹಾಗೂ ಬಿಳಿಪಾರಿವಾಳವನ್ನು ಚಿತ್ರಿಸಲಾಗಿದ್ದು, ಪಾರಿವಾಳವು ಆಕಾಶದಲ್ಲಿ ಹಾರುತ್ತಿರುವಂತೆ ಬಿಂಬಿತವಾಗಿದೆ. ಈ ಚಿತ್ರದಲ್ಲಿ ಕಲಾವಿದನು ಅಲಂಕಾರ ಪ್ರಜ್ಞೆಯನ್ನು ಮೆರೆದಿದ್ದಾನೆ.

**ಚಿತ್ರಸಂಖ್ಯೆ ೩೫ ಗ್ರಂಥ ಪಠಣ ಮಾಡುತ್ತಿರುವದು**

ಇಲ್ಲಿ ಚಿತ್ರಣಗೊಂಡಿರುವ ದೃಶ್ಯದಲ್ಲಿ ಮರಾಠ ಸಂಪ್ರದಾಯಸ್ಥ ಓರ್ವ ಶ್ರೀಮಂತ ಮಹಿಳೆಯು ಗ್ರಂಥ ಪಠಣ ಮಾಡುತ್ತಿರುವಳು. ಆಕೆ ಕುಳಿತಿರುವ ಭಂಗಿ, ಧರಿಸಿರುವ ವಸ್ತ್ರಾಭರಣಗಳು ಹಾಗೂ ಅವಳು ಕುಳಿತಿರುವ ಮರದ ಕುರ್ಚಿಯು ಶ್ರೀಮಂತಿಕೆಯ ಬದುಕನ್ನು ನಿರೂಪಿಸುತ್ತವೆ. ಆ ಕಾಲದ ಸ್ತ್ರೀಯರು ಅದರಲ್ಲೂ ಶ್ರೀಮಂತ ಸ್ತ್ರೀಯರು ಬೆಲೆಬಾಳುವ ಉನ್ನತ ಮಟ್ಟದ ನೆಯ್ಗೆಯಸೀರೆಯನ್ನು ಧರಿಸುತ್ತಿದ್ದರು. ಈ ಸೀರೆಗಳು ಏಕವರ್ಣಗಳ ರೇಶ್ಮೆಯಿಂದ ತಯಾರಿಸಿ ಅವುಗಳ ಒಡಲು ಹಾಗೂ ಅಂಚುಗಳಲ್ಲಿ ತಮಗೆ ಇಷ್ಟವಾದ ಚಿತ್ರವಿನ್ಯಾಸಗಳ ಕಸೂತಿಯನ್ನು ಹಾಕಿ ಉಡುತ್ತಿದ್ದರು. ಆ ಕಾಲಮಾನದ ಸ್ತ್ರೀಯರು ಸೀರೆಯನ್ನೇ ಹೆಚ್ಚು ಇಷ್ಟ ಪಡುತ್ತಿದ್ದರೆಂದು ಈ ಗಾಜಿನ ಚಿತ್ರಗಳಲ್ಲಿ ಮೂಡಿಬಂದ ಮಹಿಳೆಯರ ಸೀರೆ ಹಾಗೂ ಕುಪ್ಪಸದಿಂದ ಅರಿಯಬಹುದು.

ಕೊರಳಲ್ಲಿ ವಿವಿಧ ಬಗೆಯ ಚಿನ್ನಾಭರಣಗಳು, ಕಿವಿಗಳಲ್ಲಿ ಓಲೆಗಳು, ಕಾಲಲ್ಲಿ ಚಿನ್ನದ ತೋಡೆಗಳು ಕೈ ಹಾಗೂ ಕಾಲು ಬೆರಳುಗಳ ಕಾಲುಂಗುರಗಳು ಕಲಾವಿದನು ಸಂಯೋಜಿಸಿದ್ದಾನೆ. ಇವು ನೈಜತೆಯಿಂದ ದೂರವಿದ್ದರೂ ವಾಸ್ತವದ ವೈಭವವನ್ನು ಕಲ್ಪಿಸುತ್ತವೆ. ಚಿತ್ರದಲ್ಲಿ ಪರದೆಗಳಿಂದ ವಾಸ್ತುವಿನ್ಯಾಸವನ್ನು ಸಂಯೋಜಿಸಿ ಆ ಕಾಲದ ಶ್ರೀಮಂತರ ವೈಭವದ ಬದುಕನ್ನು ಪ್ರಕಟಪಡಿಸಿದ್ದಾನೆ.

**ಚಿತ್ರಸಂಖ್ಯೆ ೩೬ ನವಿಲಿನೊಂದಿಗೆ ಮಾತುಕತೆ**

ಈ ಚಿತ್ರದಲ್ಲಿ ಓರ್ವ ಶ್ರೀಮಂತ ಮಹಿಳೆಯು ವಿಶಿಷ್ಟವಾಗಿ ವಸ್ತ್ರಾಭರಣಗಳನ್ನು ಧರಿಸಿ, ಕೈಯಲ್ಲಿ ಗುಲಾಬಿಯನ್ನು ಹಿಡಿದು ಚಿತ್ರವಿನ್ಯಾಸದಿಂದ ತಯಾರಾದ ಮರದ ಕುರ್ಚಿಯ ಮೇಲೆ ಕುಳಿತು ತನ್ನ ಚಲುವನ್ನು ತನ್ನ ತೊಡೆಯ ಮೇಲೆ ಕುಳಿತ ನವಿಲಿಗೆ ವ್ಯಕ್ತಪಡಿಸುತ್ತಿರುವಂತೆ ಕಲ್ಪಿತಗೊಂಡಿದ್ದಾಳೆ. ಹಾಲು ಬಿಳುಪಿನ ಮೈಸಿರಿಯು ಹಾಗೂ ದಪ್ಪುಪುಷ್ಟ ಅಂಗಾಂಗಗಳು ಅವಳ ಚಲುವನ್ನು ಹೆಚ್ಚಿಸಿವೆ. ಈ ಚಿತ್ರದಲ್ಲಿ ಸೀರೆಯ ವಿನ್ಯಾಸವೂ ವಿಶಿಷ್ಟವಾಗಿ ಮೂಡಿಬಂದಿದೆ. ಸೊಂಟದಿಂದ ಪಾದದವರೆಗೆ ಎಡಪಾರ್ಶ್ವದಲ್ಲಿ ನಿರಿಗೆಗಳು ವ್ಯಕ್ತಗೊಂಡಿದ್ದು, ಅಗಲವಾದ ಅಂಚು ಹಾಗೂ ದೊಡ್ಡ ಹೂವುಗಳ ಚಿತ್ರವಿನ್ಯಾಸವು ಚಿತ್ರಿತಗೊಂಡಿವೆ. ಬಹುಶಃ ಇದು ಕಸೂತಿ ಹಾಕಿದ ಚಿತ್ರವಿನ್ಯಾಸವಿರಬಹುದು. ಈ ಕಲೆಯು ಆ ಸೀರೆಯ ಸೊಬಗನ್ನು ಹೆಚ್ಚಿಸಿದೆ. ಕಲಾಕಾರನು ಅದನ್ನು ತೋರಿಸಲು ಪ್ರಯತ್ನಿಸಿದ್ದಾನೆ. ಸೀರೆಯ ಸೆರಗು ಸೂಕ್ಷ್ಮ ಚಿತ್ರ ಪಟ್ಟಿಕೆಗಳಿಂದ ರಚನೆಗೊಂಡಿದೆ. ಆಕೆಯ ಸಿಂಹ ಕಟಿಯು ಎದ್ದು ತೋರುವಂತೆ ಚಿಕ್ಕ ಚಿಕ್ಕ ಗೆಜ್ಜೆಗಳಿಂದ ಕೂಡಿದ ಚಿನ್ನದ ಡಾಬು, ಹೊಳಪಿನ ಹರಳುಗಳಿಂದ ಕೂಡಿದ ಒಡ್ಯಾಣವು ಆ ಮಹಿಳೆಯ ದೇಹ ಸಂಪತನ್ನು ಎತ್ತಿ ತೋರಿಸಿವೆ. ನವಿಲು ಚಿತ್ರದಲ್ಲಿ ಆ ಪಕ್ಷಿಯ ವಾಸ್ತವದ ಪ್ರಾಮಾನ್ಯತೆಯನ್ನು ತರಲಾಗಿದ್ದು, ರೇಖೆ ಹಾಗೂ ವರ್ಣಗಳಿಂದ ಚಲನಾತ್ಮಕವಾಗಿ ಮೂಡಿಬಂದಿದೆ. ಹಿನ್ನೆಲೆಯಲ್ಲಿ ಕಂಬ ಹಾಗೂ ಪರದೆಗಳ ವಿನ್ಯಾಸಗಳು ಯಥಾವತ್ತಾಗಿ ಸಂಯೋಜನೆಗೊಂಡಿವೆ.

**ಚಿತ್ರಸಂಖ್ಯೆ ೩೭ ಗಿಳಿಯೊಂದಿಗೆ ಮಾತು**

ಈ ಚಿತ್ರದಲ್ಲಿ ಓರ್ವ ಸ್ತ್ರೀಯು ಮುದ್ದುಗಿಳಿಯೊಂದಿಗೆ ಏನೋ ಹೇಳಿಕೊಳ್ಳುತ್ತಿರುವಂತೆ ಕಲ್ಪಿತಗೊಂಡಿದ್ದಾಳೆ. ಹಾಲು ಬಿಳುಪಿನ ಮೈಬಣ್ಣ ಹಾಗೂ ಆರೋಗ್ಯ ಪೂರ್ಣ ದೇಹ ಸಂಪತ್ತನ್ನು ಕಲಾಕಾರನು ತನ್ನ ಕುಂಚ ಹಾಗೂ ವರ್ಣಗಳ ಮೂಲಕ ಅಭಿವ್ಯಕ್ತಪಡಿಸಿದ್ದಾನೆ. ಎಲ್ಲ ಚಿತ್ರಗಳಲ್ಲಿ ಮೂಡಿಬಂದಿರುವಂತೆ ಈ ಚಿತ್ರದಲ್ಲಿಯೂ ಸಹ ಸೀರೆಯ ಸೊಬಗು ಉತ್ತಮವಾಗಿ ಮೂಡಿಬಂದಿದೆ. ಸೀರೆಯು ಕೆಂಪು ಬಣ್ಣದಿಂದ ಕೂಡಿದ್ದು, ಸೆರಗು ಹಾಗೂ ಅಂಚು ಚಿತ್ರವಿನ್ಯಾಸಗಳಿಂದ ಚಿತ್ರಿತಗೊಂಡಿವೆ. ಕೇಶವಿನ್ಯಾಸವನ್ನು 'ಪೊಮುಡಿ' ಯತೆ ಚಿತ್ರಿಸಿ ಮುತ್ತಿನ ಎಳೆಗಳನ್ನು ಮುಡಿಗೆ ಸುತ್ತಲಾಗಿದೆ. ಕತ್ತು, ಕಾಲು, ಕೈ, ಕಿವಿ, ಮೂಗುಗಳಿಗೆ ಚಿನ್ನದ ಆಭರಣಗಳನ್ನು ಸಂಯೋಜಿಸಿ ಅಲಂಕರಿಸಲಾಗಿದೆ. ಗಿಳಿಯ ಚಿತ್ರವು ರೇಖೆ ಹಾಗೂ ವರ್ಣಗಳಿಂದ ವಾಸ್ತವತೆಯನ್ನು ಕಲ್ಪಿಸುತ್ತದೆ. ಮಹಿಳೆಯ ಬಲಪಾರ್ಶ್ವದಲ್ಲಿ ಬಿಳಿಬಣ್ಣದ ನಾಯಿಯು ಚಿತ್ರಣಗೊಂಡಿದ್ದು, ನಾಯಿಯ ನೈಜಸ್ವರೂಪವು ಉತ್ತಮವಾಗಿ ಸಂಯೋಜನೆಗೊಂಡಿದೆ. ಈ ನಾಯಿಯು ತನ್ನ ಒಡತಿಯತ್ತ ದೈನ್ಯತೆಯ ನೋಟವನ್ನು ಬೀರುತ್ತಿರುತ್ತದೆ. ಕೊರಳಪಟ್ಟಿಯನ್ನು ನಾಯಿಕತ್ತಿಗೆ ಅಲಂಕೃತಗೊಳಿಸಲಾಗಿದೆ. ಮರದ ಡಯಾಸ,

ಚಿತ್ರವಿನ್ಯಾಸದಿಂದ ಕೂಡಿದ ವರ್ಣಮಯ ಪರದೆಗಳು, ಕಂಬಗಳು ಹಾಗೂ ನೆಲಹಾಸು ಚಿತ್ರದ ಯಥಾದೃಷ್ಟಿಯನ್ನು ಪ್ರಕಟಪಡಿಸುತ್ತವೆ.

**ಚಿತ್ರಸಂಖ್ಯೆ ೩೮, ೩೯, ೪೦ ಯುವತಿಯರು**

ಇಲ್ಲಿ ಕಂಡು ಬರುವ ಮೂರು ಚಿತ್ರಗಳು ಬಾಗಲಕೋಟೆಯ ಶ್ರೀ ಮಹೇಂದ್ರ ಸರಾಫ್ ರವರ ಮನೆಯಲ್ಲಿ ಲಭ್ಯ ಇವೆ. ಚೀನಾದ ಕಲಾವಿದರು ರಚಿಸಿದ ಈ ಚಿತ್ರಗಳನ್ನು ಭಾರತೀಯ ವಿಷಯವನ್ನು ನಿರೂಪಿಸುತ್ತವೆ. ಟೆಂಪರಾ ವರ್ಣ ಮಾಧ್ಯಮವನ್ನು ಅನುಸರಿಸಲಾದ ವರ್ಣವಿಧಾನದಲ್ಲಿ ನೀಲಿ, ಕೆಂಪು, ಬಿಳಿ, ಹಳದಿ ಹಾಗೂ ಕಪ್ಪು ವರ್ಣಗಳನ್ನು ಸಂಯೋಜಿಸಲಾಗಿದೆ.

ಚಿತ್ರ ೩೮ ರಲ್ಲಿ ಓರ್ವ ಯುವತಿಯು ಕೈಯಲ್ಲಿ ಹೂವನ್ನು ಹಿಡಿದುಕೊಂಡು ತನ್ನ ಚಲುವನ್ನು ಪ್ರದರ್ಶಿಸುತ್ತಿದ್ದಾಳೆ. ಇವಳ ಉಡುಪು ಸಲ್ವಾರ್ ಕಮೀಜ್, ಪ್ಯಾಂಟ ಹಾಗೂ ನೀಲಿಯ ದುಪ್ಪಟವನ್ನು ಹೊಂದಿವೆ. ಈ ಕಮೀಜ್ ಸೊಂಟದಿಂದ ಕೆಳಭಾಗದಲ್ಲಿ ಎರಡು ಭಾಗಗಳಾಗಿ ವಿಂಗಡನೆಗೊಂಡಿವೆ. ತಳ ಅಂಚಿನಲ್ಲಿ ದೊಡ್ಡ ಪಟ್ಟಿಗಳನ್ನು ರಚಿಸಿ, ಚಿತ್ರವಿನ್ಯಾಸವನ್ನು ಮಾಡಲಾಗಿದೆ. ಸೊಂಟದಲ್ಲಿ ಮುತ್ತಿನ ದೊಡ್ಡ ಸರಗಳನ್ನು ಆಕರ್ಷಕವಾಗಿ ಸಂಯೋಜಿಸಲಾಗಿದೆ. ಕತ್ತು, ಕಿವಿ, ಕೇಶ, ಕೈಗಳಲ್ಲಿ ಮಿತವಾದ ಆಭರಣಗಳನ್ನು ಸಂಯೋಜಿಸಿದೆ. ಈ ಯುವತಿಯ ಶರೀರ ವಿನ್ಯಾಸವನ್ನು ಅತ್ಯಂತ ತೆಳುವಾಗಿ ರಚಿಸಿದ್ದು, ಬೆಳಕು ನೆರಳುಗಳ ವರ್ಣಛಾಯೆಯನ್ನು ನೀಡಿ, ದೇಹದ ದುಂಡುತನವನ್ನು ತರಲಾಗಿದೆ. ಬಲಗೈಯಲ್ಲಿ ಕೆಂಪು ಗುಲಾಬಿಯು ಅವಳ ಪ್ರೇಮದ ಸಾಂಕೇತಿಕ ನೋಟವನ್ನು ಕಲ್ಪಿಸುತ್ತದೆ. ಚಿತ್ರದ ಹಿನ್ನೆಲೆಯಲ್ಲಿ ಬಿಳಿ ಮತ್ತು ಕಪ್ಪು ಬಣ್ಣದ ಕಂಪೌಂಡು ಹೂವಿನ ಪೊದೆಗಳು ಹಾಗೂ ಚಿತ್ರವಿನ್ಯಾಸದ ನೆಲಹಾಸು ರಚನೆಗೊಂಡಿದೆ.

ಚಿತ್ರ ೩೯ ರಲ್ಲಿ ಓರ್ವ ಕನ್ಯೆಯು ಅಲಂಕಾರಿಕ ಚಿತ್ರವಿನ್ಯಾಸಗಳಿಂದ ಕೂಡಿದ ಸಲ್ವಾರ್ ಕಮೀಜ್, ಕೆಂಪು ಉತ್ತರೀಯ, ಕಪ್ಪು ಬೂಟುಗಳನ್ನು ಧರಿಸಿ, ಚಲುವಿನಿಂದ ಬೀಗುತ್ತಿರುವಳು. ದೇಹದ ರಚನೆಯಲ್ಲಿ ವರ್ಣಗಾರಿಕೆಯು ನೈಜತೆಯಿಂದ ಕೂಡಿದ್ದು, ಹಾಲು ಬಿಳುಪಿನ ತ್ವಚೆಯು ಅವಳು ಚಲುವಿಕೆಯನ್ನು ಪ್ರಕಟಪಡಿಸುತ್ತವೆ. ನೀಲಿಮಿಶ್ರಿತ ಕಪ್ಪು ಕಮೀಜ್‌ದಲ್ಲಿ ಸೂಕ್ಷ್ಮಚಿತ್ರವಿನ್ಯಾಸಗಳು ಅಂದವಾದ ಪಟ್ಟಿಕೆಗಳಲ್ಲಿ ಮೂಡಿವೆ. ಕೆಂಪು ಉತ್ತರೀಯದಲ್ಲಿ ಹೂವಿನ ನಕ್ಷೆಗಳು, ಅಲಂಕೃತಗೊಂಡಿವೆ. ಕಾಲಲ್ಲಿ ಗೆಜ್ಜೆಗಳಿಂದ ಕೂಡಿದ ಚೈನು, ಕತ್ತು, ಕಿವಿ, ಕೈಗಳಲ್ಲಿ ಮುತ್ತಿನ ಆಭರಣಗಳು ಸಂಯೋಜನೆಗೊಂಡಿದ್ದು ಇವು ಸ್ತ್ರೀಯ ಅಂದವನ್ನು ಹೆಚ್ಚಿಸಿವೆ. ಹಿನ್ನೆಲೆಯಲ್ಲಿ ಪ್ರಕೃತಿ ದೃಶ್ಯ ಅಲಂಕಾರಿಕ ನಕ್ಷಾವಿನ್ಯಾಸಗಳಿಂದ ಕೂಡಿದ ಪಟ್ಟಿ ಹಾಗೂ ಕೆಂಪು ನೆಲಹಾಸನ್ನು ಬಿಂಬಿಸಲಾಗಿದೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ಆಕರ್ಷಕವಾಗಿ ಸಂಯೋಜನೆಗೊಂಡಿದೆ.

ಚಿತ್ರ ೪೦ ರಲ್ಲಿ ಓರ್ವ ಸ್ತ್ರೀಯು ಮನೆಯ ಕಂಪೌಂಡಿನಲ್ಲಿರುವ ಹೂವುಗಳನ್ನು ಕಿತ್ತುಕೊಳ್ಳುತ್ತಿರುವಂತೆ ಬಿಂಬಿತವಾಗಿದ್ದಾಳೆ. ಮುಖದಲ್ಲಿ ಯಾವುದೋ ಯೋಚನಾ ಲಹರಿಯು ಮೂಡಿಬಂದಿದೆ. ಇವಳು ಧರಿಸಿದ ಸಲ್ವಾರ ಕಮೀಜ್ ಕೆಂಪು ವರ್ಣದಿಂದ ಕೂಡಿದ್ದು ಹೂವಿನ ಚಿತ್ರವಿನ್ಯಾಸಗಳನ್ನು ಸಂಯೋಜಿಸಲಾಗಿದೆ. ಇಲ್ಲಿ ನಿರಿಗೆಗಳ ಸಂಯೋಜನೆ ಆಕರ್ಷಕವಾಗಿ ಮೂಡಿಬಂದಿವೆ. ದುಪ್ಪಟವೂ ಕೂಡಾ ಕೆಂಪುವರ್ಣದಿಂದ ಕೂಡಿದ್ದು, ತಲೆಯ ಮೇಲೆ ವಿಶಿಷ್ಟವಾಗಿ

ಹೊದಿಸಲಾಗಿದೆ. ಮಿತವಾದ ಆಭರಣಗಳು ಸಂಯೋಜನೆಗೊಂಡಿದ್ದು, ಎಡಗೈಯಲ್ಲಿರುವ ಹೂವಿನ ಬುಟ್ಟಿಯು ಹಾಗೂ ಅದರಲ್ಲಿರುವ ಹೂವುಗಳು ವರ್ಣಮಯವಾಗಿ ವ್ಯಕ್ತಗೊಂಡಿವೆ. ಹಿನ್ನೆಲೆಯಲ್ಲಿ ಹೂವಿನ ಗಿಡದ ದೃಶ್ಯ, ಪ್ರಕೃತಿಯ ದೃಶ್ಯ ಹಾಗೂ ವಾಸ್ತು ಕಟ್ಟಡ ದೃಶ್ಯವು ರಚನೆಗೊಂಡಿದ್ದು ಉತ್ತಮ ಭಾವನಾ ನಿರೂಪಣೆಯನ್ನು ವ್ಯಕ್ತಪಡಿಸುತ್ತದೆ.

**ಚಿತ್ರಸಂಖ್ಯೆ ೪೧, ೪೨ ಯುವತಿ**

ಈ ಚಿತ್ರಗಳು ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಸಂಗ್ರಹಗೊಂಡಿವೆ. ಎರಡೂ ಚಿತ್ರಗಳೂ ಒಂದೇ ಮಹಿಳೆಯದಾಗಿದ್ದು, ಎಡ ಹಾಗೂ ಬಲಪಾರ್ಶ್ವ ಮುಖವಾಗಿ ಸಂಯೋಜನೆಗೊಂಡಿವೆ. ಈ ಭಾವಚಿತ್ರಗಳು ಪಾಶ್ಚಿಮಾತ್ಯ ಕುಂಚದಲ್ಲಿ ಮೂಡಿಬಂದಿವೆ. ಇಲ್ಲಿ ಓರ್ವಯುವತಿಯು ಕುಪ್ಪಸ, ಕೆಂಪು ಲಂಗವನ್ನು ಹಾಗೂ ಕಪ್ಪು ಮಿಶ್ರಿತ ನೀಲಿ ಉತ್ತರೀಯವನ್ನು ಧರಿಸಿ ಚಿತ್ರವಿನ್ಯಾಸದ ಜಮಖಾನೆಯ ಮೇಲೆ ಆಶೀನಳಾಗಿದ್ದಾಳೆ. ಅವಳ ಹಿಂದೆ ದೊಡ್ಡ ದಿಂಬನ್ನು ಸಂಯೋಜಿಸಲಾಗಿದೆ. ದಿಂಬು ಹಾಗೂ ಲಂಗದ ಮೇಲೆ ವಿಶಿಷ್ಟವಾದ ಹೂವಿನ ಬುಟ್ಟಾಗಳನ್ನು ರಚಿಸಲಾಗಿದೆ. ದಿಂಬಿನ ಕಸಿಯು ಹಾಗೂ ಅದರ ಮುತ್ತಿನ ಗೊಂಚಲು ಅಲಂಕಾರಿಕೆಯನ್ನು ಹೊಂದಿವೆ. ಹಾಲು ಬಿಳುಪಿನ ಮೈಬಣ್ಣ ರಚನೆಗೊಂಡಿದ್ದು, ಕೈಗಳಲ್ಲಿ ಚಿನ್ನದ ಬಳೆಗಳು ವಿಶಿಷ್ಟವಾಗಿ ಮೂಡಿಬಂದಿವೆ. ಯುವತಿಯ ಶರೀರವೂ ನೀಳಕಾಯದಿಂದ ಕೂಡಿದ್ದು ಆಕರ್ಷಕ ನಿರೂಪಣೆ ಅಭಿವ್ಯಕ್ತಗೊಂಡಿದೆ. ಯುವತಿಯು ಹೊದ್ದ ಉತ್ತರೀಯವು ಎರಡು ಮೈಪಾತಳಿಯನ್ನು ಹೊಂದಿದ್ದು ಮೇಲೆ ಒಂದು ವರ್ಣ, ಒಳಭಾಗ ಒಂದು ವರ್ಣವನ್ನು ಹೊಂದಿದೆ. ಅವಳ ಲಂಗವು ಆಕರ್ಷಕ ವಿನ್ಯಾಸದಿಂದ ಕೂಡಿದೆ. ಇಲ್ಲಿ ಸೂಕ್ಷ್ಮ ರೇಖೆಗಳ ಪಟ್ಟಿಗಳು ಸಂಯೋಜನೆಗೊಂಡಿವೆ. ಇದು ಖಡು ನೀಲಿಬಣ್ಣವನ್ನು ಹೊಂದಿದೆ. ಈ ಯುವತಿಯು ಕುಳಿತಿರುವ ಜಮಖಾನೆಯು ವಿಶಿಷ್ಟ ಅಂಚು ಹಾಗೂ ಒಡಲನ್ನು ಹೊಂದಿದ್ದು, ಅಲಂಕಾರಿಕ ನಕ್ಷೆಯ ಬಳ್ಳಿಯನ್ನು ಹೊಂದಿವೆ. ಹಿನ್ನೆಲೆಯಲ್ಲಿ ಕಂಪೌಂಡ್, ನೀಲಿ ಆಕಾಶ ಹಾಗೂ ಪ್ರಕೃತಿಯ ಕಲ್ಪನೆಯನ್ನು ಬಿಂಬಿಸಲಾಗಿದೆ.

ಚಿತ್ರ ೪೨ ಈ ಚಿತ್ರವು, ಚಿತ್ರ ೪೧ರ ಪ್ರತಿಕೃತಿ ಚಿತ್ರವಾಗಿರುವುದರಿಂದ ರಚನಾವಿಧಾನವು ಒಂದೇ ರೀತಿಯಾಗಿ ಮೂಡಿಬಂದಿದೆ. ಈ ಎರಡು ಚಿತ್ರಗಳನ್ನು ಒಬ್ಬನೇ ಕಲಾವಿದನು ರಚಿಸಿರಬಹುದು

********

ಗಾಜಿನ ಚಿತ್ರಗಳಲ್ಲಿ ಚಿತ್ರಣಗೊಂಡ ಮಹಿಳೆಯರ ವೇಷಭೂಷಣಗಳಾದ ಸೀರೆಯ ಸೊಬಗು, ರವಿಕೆಯ ವೈವಿಧ್ಯತೆ, ಆಭರಣಗಳ ಅಲಂಕಾರ, ಕೇಶವಿನ್ಯಾಸಗಳು ವಿಶಿಷ್ಟವಾಗಿ ಮೂಡಿಬಂದಿವೆ. ಇವು ಆಯಾಕಾಲದ ಸಮಕಾಲೀನ ಬದುಕಿನ ಚಿತ್ರಣವನ್ನು ಕಟ್ಟಿಕೊಡುತ್ತವೆ. ಅವರ ಆಯ್ಕೆಯನ್ನು, ಉಡುವ, ತೊಡುವ ರೀತಿ-ನೀತಿಯನ್ನು ಗಾಜಿನ ಚಿತ್ರಕಲಾವಿದರು ಸೆರೆಹಿಡಿದಿದ್ದಾರೆ. ಕೇಶಾಲಂಕಾರವನ್ನು ಹಿಂದಿನ ಹಾಗೂ ಇಂದಿನ ಹೆಣ್ಣುಮಕ್ಕಳು ವೈವಿಧ್ಯಮಯವಾಗಿ ಅಲಂಕರಿಸಿಕೊಳ್ಳುವುದನ್ನು ಕಾಣುತ್ತೇವೆ. ಕೇಶಾಲಂಕಾರವನ್ನು ಮೂರು ರೀತಿಯಲ್ಲಿ ವಿಂಗಡಿಸಬಹುದೆಂದು ಶಾಂತಾದೇವಿ ಮಾಳವಾಡರವರು ಹೇಳುತ್ತಾರೆ. ೫೯-೬ನೆಯ ಶತಮಾನಗಳಲ್ಲಿನ

ಶಿಲಾ 'ಬಾಲಿಕೆಯರ ಕೇಶಾಲಂಕಾರ, ೧೧ ರಿಂದ ೧೯ ನೆಯ ಶತಮಾನಗಳಲ್ಲಿ ರೂಢಿಯಲ್ಲಿದ್ದ ಮಧ್ಯಂತರ ಕಾಲದ ಕೇಶಾಲಂಕಾರ ಹಾಗೂ ೨೦ನೆಯ ಶತಮಾನದ ಹೊಸ ಬಗೆಯ ಕೇಶಾಲಂಕಾರವೆಂದು[೧೨] ಇಲ್ಲಿ ಕಂಡು ಬರುವ ಕೇಶಾಲಂಕಾರ ೧೮-೨೦ನೆಯ ಶತಮಾನಗಳಲ್ಲಿನ ಕೇಶಾಲಂಕಾರವೆಂದು ಹೇಳಬಹುದು. ಇವರ ಅಧ್ಯಯನದ ಪ್ರಕಾರ ಬಿಡುಮುಡಿ, ಸೋಗೆ ದುರುಂಬು, ಬಳಲ್ಮುಡಿ, ಮುತ್ತಿನಮುಡಿ, ಗೋಡಂಬಿಮುಡಿ, ತೆಕ್ಕದುರುಂಬು, ಕಿರೀಟಮುಡಿ, ಸೋರ್ಮುಡಿ, ಜಡೆಮುಡಿ, ತಳಿರ್ಮುಡಿ, ಪೂಮುಡಿ, ಸಿರಿಮುಡಿ, ಬಂಬುಲ್ಮುಡಿ. ಜೋಲ್ಮುಡಿ, ಗ್ರೀಕ್ ಪದ್ಧತಿಯ ಮುಡಿ, ಅಜಂತಾಮುಡಿ ಎಂದು ಹೇಳುತ್ತಾ ಅದಕ್ಕೆ ತಕ್ಕಂತೆ ಆಭರಣಗಳನ್ನು ಅಲಂಕರಿಸುತ್ತಿದ್ದರೆಂದು ಹೇಳುತ್ತಾರೆ. ಗಾಜಿನ ಚಿತ್ರಗಳಲ್ಲಿ ಮೂಡಿಬಂದ ಸ್ತ್ರೀ ಚಿತ್ರದಲ್ಲಿ ಸೋರ್ಮುಡಿ, ಜಡೆಮುಡಿ, ತಳಿರ್ಮುಡಿ, ಪೂಮುಡಿ, ಸಿರಿಮುಡಿ, ಬಂಬಲ್ಮುಡಿ ಕೇಶಾಲಂಕಾರ ಕಂಡುಬರುತ್ತವೆ. ಇದಕ್ಕೆ ತಕ್ಕಂತೆ ಮುತ್ತಿನ ಸರ, ಆಭರಣಗಳು, ಪುಷ್ಪಗಳನ್ನು ಅಲಂಕರಿಸಿದ್ದು ತಿಳಿಯುತ್ತದೆ.

ಮಹಿಳೆಯರಿಗೆ ಕೇಶವಿನ್ಯಾಸದಂತೆ ಆಭರಣಗಳನ್ನು ಅಲಂಕರಿಸುವುದು ಒಂದು ಸೊಬಗಾಗಿತ್ತು. ಈ ಸೊಬಗನ್ನು ಗಾಜಿನಚಿತ್ರಗಳಲ್ಲಿ ಕಾಣುತ್ತೇವೆ. ಮುಡಿಯ ಆಭರಣಗಳು ಕತ್ತಿನ (ಕಂಠ) ಆಭರಣಗಳು, ಕರ್ಣಾಭರಣಗಳು, ರಟ್ಟೆ, ಕಂಕಣಗಳ ಆಭರಣಗಳು, ಕಾಲುಗಳ ಆಭರಣಗಳು, ಕಾಲು ಹಾಗೂ ಕೈಬೆರಳುಗಳುಂಗರಗಳು, ಕಟಿಯ ಆಭರಣಗಳು ಈ ಚಿತ್ರಗಳಲ್ಲಿ ಕಲಾವಿದರು ವಿಶಿಷ್ಟವಾಗಿ ಸಂಯೋಜನೆ ಮಾಡಿದ್ದಾರೆ.

ಕೊರಳಲ್ಲಿ ಗುಂಡಿನ ಸರ, ಕಟ್ವಾಣಿ ಸರ, ಮೋಹನಮಾಳ, ನೆಲ್ಲಿಸರ, ಕರಿಮಣಿ, ಪುಥ್ಥಳಿ ಸರ, ಹತ್ತೆಳೆಯ ಕಟ್ವಾಣಿಸರ, ಬವಳಸರ, ತಾಳಿಯ ಸರ ಹಾಗೂ ಗೆಜ್ಜೆಟೀಕೆಯ ಸರ ಇತ್ಯಾದಿಗಳು ಈ ಚಿತ್ರಗಳಲ್ಲಿ ಮೂಡಿಬಂದಿವೆ. ಕಂಕಣಗಳಲ್ಲಿ ಚಿನ್ನದ ಕೈಕಡಗ, ಬಂಗಾರಬಳೆ, ದುಂಡುಕಂಕಣ, ಕಡಗ ಕಂಕಣ, ಹರಡಿ ಕೈಕಟ್ಟು, ಮುತ್ತಿನ ಬಳೆಗಳು, ರಂಗುನೀಲದ ಬಳೆಗಳು, ಬೆಳ್ಳಿಯ ಬಳೆ, ಗಾಜಿನ ಬಳೆಗಳು ಇತ್ಯಾದಿ ಕಂಕಣದ ಆಭರಣಗಳು ಪ್ರಮುಖವಾಗಿ ಗಾಜಿನ ಚಿತ್ರಗಳಲ್ಲಿನ ಸ್ತ್ರೀಯರಲ್ಲಿ ಕಂಡು ಬರುತ್ತವೆ. ಬೆರಳುಗಳಿಗೆ ವಜ್ರದುಂಗುರ, ನೀಲದುಂಗುರ, ಪಳಂಚಿನುಂಗುರ, ಗಾಜಿನುಂಗುರ, ಕೊಪ್ಪುಂಗುರ, ನವರತ್ನದುಂಗುರ, ಮುತ್ತಿನುಂಗುರಗಳು ಈ ಚಿತ್ರಗಳಲ್ಲಿ ಮೂಡಿಬಂದಿವೆ. ಕಾಲುಂಗುರಗಳಲ್ಲಿ ವೀರಮುದ್ರಿಕೆ, ಉಲಿವ ಕಾಲುಂಗುರ ಪಿಲ್ಲೆ, ಮಂಟಿಗೆ, ಮೀನಹಿರಿಪಿಲ್ಲೆ, ಕಿರಿಪಿಲ್ಲೆ, ಸುರುಳಿ ಕಾಲುಂಗುರಗಳು, ಗೆಜ್ಜೆಹಚ್ಚಿದ ಪಿಲ್ಲೆಗಳು, ಬೆರಳುಂಗುರು ಪಿಲ್ಲೆಗಳನ್ನು ಧರಿಸಿದ್ದನ್ನು ಈ ಚಿತ್ರಗಳಲ್ಲಿ ಕಾಣುತ್ತೇವೆ. ಕಿವಿಗೆ ಧರಿಸುವ ವಿವಿಧ ಓಲೆಗಳು ಗಾಜಿನ ಚಿತ್ರಗಳಲ್ಲಿ ನವರತ್ನ ರಚನೆಗೊಂಡಿರುವುದನ್ನು ಕಾಣುತ್ತೇವೆ. ಹೊಳೆಯುವ ಮುತ್ತಿನ ವಾಲಿ, ಕೆತ್ತಿಸದೋಲೆ, ಶಂಖದೋಲೆ, ಹರಳೋಲೆ, ಕೊಪ್ಪು ಮಿಂಚಿನೋಲೆ, ತೆಂಗಿನ ತಿರುಳೋಲೆ, ಕರ್ಣಪೂರಂ, ಬಿಚ್ಚೋಲೆ, ತೊಳಗುವ ದಂತದೋಲೆ, ಕೇದಿಗೆಯೋಲೆ, ತಾಳೋಲೆ, ಕುಂಕುಮಿಕ್ಕಿದ ತೆಂಗಿನೋಲೆ ಇತ್ಯಾದಿ ಆಭರಣಗಳು ಹಿಂದಿನ ಕಾಲದ ಹಾಗೂ ಇಂದಿನ ಕಾಲದಲ್ಲಿ ಬಳಸಲ್ಪಡುವ ಓಲೆಗಳು ಚಿತ್ರಕಾರರು ಇಲ್ಲಿ ಸಂಯೋಜನೆ ಮಾಡಿದ್ದಾರೆ.

---

೧೨ ಶಾಂತಾದೇವಿ. ಮಾಳವಾಡ ; ಮಹಿಳೆಯರ ಅಲಂಕಾರ, ಪುಟ ೧೩.

ಗಾಜಿನ ಮೇಲೆ ಚಿತ್ರಿತಗೊಂಡ ಮಹಿಳೆಯರ ಚಿತ್ರಗಳಲ್ಲಿ ಒಡ್ಯಾಣಗಳ ಬಳಕೆ ಹೆಚ್ಚು ಪ್ರಸ್ತಾಪವಾಗಿದೆ. ಹಿಂದಿನ ಕಾಲದ ಮಹಿಳೆಯರು ಕಟಿಸೂತ್ರ, ಕಾಂಚಿ, ಮೇಖಲಾ ಮೊದಲಾದ ಆಭರಣಗಳನ್ನು ಧರಿಸುತ್ತಿದ್ದರು. ಬಂಗಾರದ ಪಟ್ಟಿಗೆ ಮಧ್ಯದಲ್ಲಿ ವಜ್ರವೈಢೂರ್ಯಗಳನ್ನು ಕೂಡಿಸಿ ಸುತ್ತಲೂ ಮುತ್ತಿನ ಎಳೆಗಳನ್ನು ಬಿಟ್ಟು ಮೇಖಲೆಯನ್ನು ತಯಾರಿಸುತ್ತಿದ್ದರು. ಒಡ್ಯಾಣಕ್ಕೆ ಬಂಗಾರದ ಚಿಕ್ಕ ಚಿಕ್ಕ ಗಂಟೆಗಳನ್ನು ಇಲ್ಲವೆ ಬಂಗಾರದ ಗೆಜ್ಜೆಗಳನ್ನು ಹಚ್ಚುತ್ತಿದ್ದರು. ಇಂಥ ಒಡ್ಯಾಣಗಳನ್ನು ಧರಿಸಿದ ಮಹಿಳೆಯರು ಓಡಾಡುವಾಗ ಮೃದು ಮಧುರನಾದ ಹೊರಹೊಮ್ಮುತ್ತಿತ್ತಂತೆ.[೧೩] ಇಂಥ ವಿಶಿಷ್ಟ ಬಗೆಯ ಒಡ್ಯಾಣಗಳು ಈ ಚಿತ್ರಗಳಲ್ಲಿ ಚಿತ್ರಕಾರರು ಬಹು ಅಲಂಕಾರಮಯವಾಗಿ ಚಿತ್ರಿಸಿದ್ದಾರೆ.

ರಟ್ಟೆಗೆ ವಂಕಿ, ಬಾಜುಬಂದ, ನಾಗಮುರಿಗೆ, ಉಲಿವ ಬಾಹುಲಿ, ತೋಳ ಬಾಪುರಿ, ರಟ್ಟೆಬಳೆ, ಹರಳುಹಚ್ಚಿದ ನಾಗಮುರಿಗೆಗಳನ್ನು, ಮುಂಗೈಯಲ್ಲಿ ಬಂಗಾರದ ಬಳೆ, ಗೋಟು, ಪಾಟ್ಲಿ, ತೋಡೆ, ಗೀರಬಳಿ, ಮುರಗಿ ಬಳಿ, ಮುಳ್ಳುಗಂಕಣ, ಮುತ್ತಿನಬಳೆ, ವಜ್ರದ ಬಳೆ, ಮಾಣಿಕ್ಯದ ಬಳೆ, ಹವಳದ ಪಾಟ್ಲಿ, ಹರಡಿ ಕಂಕಣ, ಕಡಗ, ಕಮಲದೋಲೆ, ನೀರಗಿಬಳೆ, ಸಿಂಹದ ಮುಖದ ಕಂಕಣ, ಜೋಡುದುಂಡು, ಇತ್ಯಾದಿ ಆಭರಣಗಳನ್ನು ಧರಿಸುತ್ತಿದ್ದರು. ಈ ವೈವಿಧ್ಯಮಯ, ರಟ್ಟೆ ಹಾಗೂ ಕಂಕಣದ ಆಭರಣಗಳು ಈ ಚಿತ್ರಗಳಲ್ಲಿ ರಚನೆಗೊಂಡಿವೆ. ಅದರಂತೆ ಕಾಲಲ್ಲಿ ತೋಡೆ, ಪೈಝಣ, ಕಡಗ, ವಿವಿಧ ಬಗೆಯ ಚೈನುಗಳನ್ನು ಧರಿಸಿದ್ದನ್ನೂ ಇಲ್ಲಿ ಗಮನಿಸಬಹುದಾಗಿದೆ.

ಭಾರತೀಯ ಮಹಿಳೆಯ ಮುಖ್ಯ ಉಡುಪುಗಳಲ್ಲಿ ಸೀರೆಯು ಒಂದು. ಸೀರೆಯ ಮಹತ್ವವನ್ನು ಪ್ರಾಚೀನ ಕಾಲದಿಂದಲೂ ತಿಳಿಯಬಹುದಾಗಿದೆ. ಇದು ಕೇವಲ ಮಾನಮುಚ್ಚುವುದಕ್ಕೆ ಅಷ್ಟೇಅಲ್ಲ. ಅದು ಸ್ತ್ರೀಯ ಅಂದವನ್ನು ಹೆಚ್ಚಿಸಲು ಇನ್ನೂ ಸಹಕಾರಿಯಾಗಿದೆ. ಹಲವಾರು ಬಗೆಯ ಸೀರೆಯನ್ನು ಭಾರತದಲ್ಲಿ ಕಾಣುತ್ತೇವೆ. ಢಪ್ಪಳಾ ಸೀರೆ, ಸಣ್ಣ ಢಪ್ಪಳಾ ಸೀರೆ, ಕೊಂಡಿ ಕುಂಕುವಗೆರೆ ಸೀರೆ, ಗುಲಾಲಚಿಕ್ಕಿ ಸೀರೆ, ದೂದಿ ಸೀರೆ, ಆರಿ ಹೂವಿನ ಸೀರೆ, ಗದ್ದಿಮಡಿ ಸೀರೆ, ಚಾರಕಣ್ಣಿನ ಸೀರೆ, ಬ್ರಹ್ಮಾಂಡ ಪಪ್ಪಳಿ ಮತ್ತು ಶ್ರೀಮಂತ ಪಪ್ಪಳಿ ಸೀರೆ, ನವಿಲು ಬಣ್ಣದ ಸೀರೆ, ಮಾವಿನ ಚಿಕ್ಕ ಸೀರೆ, ಕಸ್ತೂರಿ ಕಡ್ಡಿ ಸೀರೆ, ಸಕ್ಕರಿ ಕಣ್ಣಿನಕಡ್ಡಿ, ಅತ್ತಿಹೂವಿನ ಸೀರೆ, ಕಂಚಿಸೀರೆ, ಮಧುರಾ ಸೀರೆ, ಚಟ್ಟಿಹೂವಿನ ಚೌಕ ಕಣ್ಣಿನ ಸೀರೆ, ದಾಸವಾಳದ ಹೂವಿನ ಸೂಸಿ ಸೀರೆ, ಹವಳ ಪೈಠಣ ಸೀರೆ, ಬದನಿ ಕಣ್ಣಿನ ಸೀರೆ, ಹೊನ್ನಧಾರಿ ಸೀರೆ ಎಂದು ಹಲವಾರು ಬಗೆಯ ಸೀರೆಗಳನ್ನು ಹಾಗೂ ಗಾಡೆದಡಿ, ತಸ್ಮಿದಡಿ, ಬುಗುಡಿ ದಡಿ ಹಾಗೂ ರುದ್ರಾಕ್ಷಿ ದಡಿ, ಸೆರಗಿನಲ್ಲಿ ಪತ್ತಲ ಸೆರಗು, ಮುತ್ತಿನ ಸೆರಗು, ಗೊಂಡೆ ಮುತ್ತಿನ ಸೆರಗು, ತೋಪುತೆನಿ ಸೆರಗು ಇತ್ಯಾದಿ ಬಗೆಯನ್ನು ಕಾಣುತ್ತೇವೆ. ಇವು ಗಾಜಿನ ಚಿತ್ರಗಳಲ್ಲಿ ಬಳಕೆಗೊಂಡಿವೆ. ಕುಪ್ಪಸದ ಬಣ್ಣದಲ್ಲಿ ಹಸರದೋಡೆ, ವರಾಹಹೂವು, ಅರಳಮಲ್ಲಿಗೆ, ಸೂಜಿ ಮಲ್ಲಿಗೆ, ಬದನಿಬೀಜ ಎಂಬ ಹಲವಾರು ಬಗೆಯ ಕುಪ್ಪಸಗಳು ಬಳಕೆಯಲ್ಲಿದ್ದು ಇವು ಸಹ ಈ ಚಿತ್ರಗಳಲ್ಲಿ ಬಿಂಬಿತವಾಗಿವೆ. ಹೀಗೆ ಹಲವಾರು ಬಗೆಯ ವಸ್ತ್ರಾಭರಣಗಳನ್ನು ಹಿಂದಿನ ಕಾಲದ ಶ್ರೀಮಂತ ಮಹಿಳೆಯರು ಧರಿಸುತ್ತಿದ್ದರೆಂದು ಅರಿಯಬಹುದಾಗಿದೆ.

೧೩. ಶಾಂತಾದೇವಿ ಮಾಳವಾಡ : ಮಹಿಳೆಯರ ಅಲಂಕಾರ, ಪುಟ ೬೮-೬೯

**ಚಿತ್ರಸಂಖ್ಯೆ ೪೩ ಯುವರಾಜ**

ಈ ಚಿತ್ರದಲ್ಲಿ ಓರ್ವ ಯುವರಾಜನು ಕಪ್ಪು ಬಣ್ಣದ ಕೋಟು ಕಪ್ಪುಬಣ್ಣದ ಪ್ಯಾಂಟನ್ನು ಧರಿಸಿ ಕಾಲು ಮೇಲೆ ಕಾಲುಹಾಕಿ ಮರದ ಕುರ್ಚಿಯ ಮೇಲೆ ಠೀವಿಯಿಂದ ಕುಳಿತಿದ್ದಾನೆ. ಆಕರ್ಷಕ ದೈಹಿಕ ಲಕ್ಷಣಗಳನ್ನು ಕಲಾಕಾರನು ಈ ಚಿತ್ರದಲ್ಲಿ ನಿರೂಪಿಸಿದ್ದಾನೆ. ವ್ಯಕ್ತಿಯ ಸ್ಥಾನಮಾನವನ್ನು ಪ್ರತಿಬಿಂಬಿಸುವಂತೆ ಅವನಿಗೆ ವಸ್ತ್ರಾಭರಣಗಳನ್ನು ವೈವಿಧ್ಯಮಯವಾಗಿ ಸಂಯೋಜಿಸಿದ್ದಾನೆ. ತಲೆಗೆ ರತ್ನಖಚಿತವಾಗ ಪೇಟ ಅದಕ್ಕೆ ಹೊಂದಿಕೆಯಾಗುವ ಹರಳಿನ ಪದಕಗಳು, ಬಿಳಿಪುಚ್ಚ ಅಲಂಕರಿಸಲಾಗಿದೆ. ಮುಖದಲ್ಲಿ ದಟ್ಟ ಹುಬ್ಬು, ಕುಡಿಮೀಸೆ, ಅಗಲವಾದ ಕಣ್ಣುಗಳು ತುಂಬಿದ ಗಲ್ಲವು ಆ ವ್ಯಕ್ತಿಯ ವ್ಯಕ್ತಿತ್ವವನ್ನು ಹೇಳುತ್ತವೆ. ಕೊರಳಲ್ಲಿ ಚಿನ್ನದ ಸರಗಳು, ರಟ್ಟೆಗೆ ಮುತ್ತಿನಪದಕಗಳು ಅಲಂಕರಿಸಿವೆ. ಕೋಟಿನ ಅಂಚುಗಳು ಚಿತ್ರವಿನ್ಯಾಸಗಳಿಂದ ಕೂಡಿವೆ. ಮೊಳಕಾಲು ತನಕ ಬಿಗಿಯಾದ ಕಾಲುಚೀಲಗಳನ್ನು ರಚಿಸಿದ್ದು, ಅವು ಚಿತ್ರಮಯವಾಗಿವೆ. ಹಿನ್ನೆಲೆಯಲ್ಲಿ ಸಂಯೋಜಿಸಲಾದ ಕುರ್ಚಿಯು ಕಲಾತ್ಮಕ ವಿನ್ಯಾಸಗಳಿಂದ ರೂಪಗೊಂಡಿದ್ದು, ಕೆಂಪು ಹಳದಿ ಬಣ್ಣಗಳ ಸಂಯೋಜನೆಯು ಮೂಡಿಬಂದಿದೆ. ಆಕರ್ಷಕ ಕಂಬಗಳ ವಿನ್ಯಾಸ, ಪರದೆಗಳ ವಿನ್ಯಾಸ, ನೆಲಹಾಸು, ಸಾಂಕೇತಿಕವಾಗಿ ನಿರೂಪಣೆಗೊಂಡಿದೆ. ಚಿತ್ರವು ರೇಖೆ, ವರ್ಣ ಹಾಗೂ ಚಿನ್ನದ ರೇಖಿನ ಕಾಗದದ ಬಳಕೆಯಿಂದ ಕೂಡಿದ್ದು, ಅಲಂಕಾರಿಕ ಚಿತ್ರವೆಂದೂ ಹೇಳಬಹುದು.

**ಚಿತ್ರಸಂಖ್ಯೆ ೪೪, ೪೫ ಗಂಭೀರ ವದನ ರಾಜ**

ಇಲ್ಲಿ ಚಿತ್ರಣಗೊಂಡಿರುವ ಎರಡೂ ವ್ಯಕ್ತಿ ಚಿತ್ರಗಳು. ಒಬ್ಬನೇ ರೂಪದರ್ಶಿಯದಾಗಿದ್ದು, ಕುಳಿತಿರುವ ಭಂಗಿಯಲ್ಲಿ ವೈವಿಧ್ಯತೆಯನ್ನು ಕಾಣುತ್ತೇವೆ. ಚಿತ್ರಗಳ ರಚನಾವಿಧಾನದಲ್ಲಿ ಒಂದೇ ವಿಧಾನವನ್ನು ಅನುಸರಿಸಿದ್ದು, ಕಲಾವಿದರೂ ಸಹ ಒಬ್ಬನೇ ಆಗಿರಬಹುದು.

ಚಿತ್ರ ಸಂಖ್ಯೆ ೪೪ ವ್ಯಕ್ತಿಯು ಕಾಲು ಮೇಲೆ ಕಾಲುಹಾಕಿ ಕುಳಿತು ಗ್ರಂಥಪಠಣ ಮಾಡುತ್ತಿದ್ದಾನೆ. ಕೋಟಿನ ಹಾಗೂ ಪ್ಯಾಂಟಿನ ಚಿತ್ರವಿನ್ಯಾಸವು ಚಿತ್ರ ೪೩ ರಂತೆ ಮೂಡಿಬಂದಿದೆ. ಇಲ್ಲಿ ತಲೆಗೆ ಗುಂಡು ಟೋಪಿಯನ್ನು ಸಂಯೋಜಿಸಿ ಚಿತ್ರ ವಿನ್ಯಾಸಗಳಿಂದ ಅಲಂಕರಿಸಲಾಗಿದೆ. ಮುಖದಲ್ಲಿ ಕಣ್ಣು, ಕಿವಿ, ಮೂಗು, ತುಟಿ, ಮೀಸೆಗಳು ಆ ವ್ಯಕ್ತಿಯ ವರ್ಚಸ್ಸನ್ನು ಎತ್ತಿ ತೋರಿಸುತ್ತವೆ. ಇಲ್ಲಿ ವರ್ಣಗಳ ಮಿಶ್ರಣ ಮಾಡುವಿಕೆಯಲ್ಲಿ ಅತ್ಯಂತ ನೈಜತೆಯನ್ನು ತರಲಾಗಿದೆ. ಕುರ್ಚಿಯ ವಿನ್ಯಾಸವು ಕಲಾತ್ಮಕವಾಗಿ ರೂಪಗೊಂಡಿದೆ. ಕುರ್ಚಿಯ ಕೆಳಭಾಗದಲ್ಲಿ ಹಣ್ಣು ಹಾಗೂ ಹೂವನ್ನು ಚಿತ್ರಿಸಿದ್ದು, ಇದು ಅವನ ವೈಭೋಗದ ಬದುಕನ್ನು ಅಭಿವ್ಯಕ್ತಿಸುತ್ತದೆ. ಎಲ್ಲ ಚಿತ್ರಗಳಲ್ಲಿ ಸಂಯೋಜನೆಗೊಂಡಿರುವಂತೆ ಈ ಎರಡೂ ಚಿತ್ರಗಳಲ್ಲಿ ಕಂಬ ಹಾಗೂ ಪರದೆಗಳ ವಿನ್ಯಾಸಗಳು ರಚನೆಗೊಂಡಿವೆ.

ಚಿತ್ರ ೪೫ ರಲ್ಲಿ ಯುವರಾಜನು ಕುರ್ಚಿಯ ಒಂದು ತೋಳಿಗೆ ಕೈ ಆಣಿಸಿ ಏನೋ ಯೋಚನೆಯಲ್ಲಿ ತೊಡಗಿರುವಂತೆ ಬಿಂಬಿತವಾಗಿದ್ದಾನೆ. ಇಲ್ಲಿ ತಲೆಯ ಮೇಲಿನ ಟೊಪ್ಪಿಗೆಗೆ ಮೃದು ತುಪ್ಪಳದ ಪುಚ್ಚವನ್ನು ಹಾಕಲಾಗಿದೆ. ಬೂಟುಗಳು ಕೆಂಪು ಬಣ್ಣಗಳಿಂದ ರಚನೆಗೊಂಡಿದ್ದು, ಅಲಂಕಾರ ಕಂಡು ಬರುವುದಿಲ್ಲ. ಹಿಂದಿನ ಕುರ್ಚಿಯ ಕಾಲುಗಳ ವಿನ್ಯಾಸವು ಸರಳವಾಗಿ

ಮೂಡಿಬಂದಿವೆ. ಈ ಚಿತ್ರದಲ್ಲಿ ಅರಳಿದ ಗುಲಾಬಿ ಹೂವು, ಸೇಬು ಹಣ್ಣುಗಳನ್ನು ಸಂಯೋಜಿಸಲಾಗಿದ್ದು, ಇವು ವರ್ಣಮಯವಾಗಿ ಪ್ರಕಟಗೊಂಡಿವೆ. ಇನ್ನುಳಿದಂತೆ ಪರದೆಗಳು, ನೆಲಹಾಸು, ಬಿತ್ತಿ ಹಾಗೂ ಕಂಬಗಳ ಸಂಯೋಜನೆಗಳು ಅಲಂಕಾರಿಕವಾಗಿ ಬಿಂಬಿತವಾಗಿವೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ಚಲನಾತ್ಮಕವಾಗಿ ಮೂಡಿಬಂದಿದೆ.

## ೦೨. ಗಾಜಿನ ಮೇಲಿನ ಐತಿಹಾಸಿಕ ಚಿತ್ರಗಳು

ಒಂದು ಕಲೆ ಬೆಳೆಯಬೇಕಾದರೆ ಅದನ್ನು ಬೆಳೆಸುವ, ಉಳಿಸುವ ಮನೋಭಾವದವರು ಬೇಕು. ಕರ್ನಾಟಕವನ್ನು ಅನೇಕ ರಾಜಮನೆತನಗಳು ಆಳಿವೆ ಜೊತೆಗೆ ಪಾಶ್ಚಿಮಾತ್ಯರು ಕೂಡಾ ಈ ನೆಲವನ್ನು ಆಳಿದ್ದಾರೆ. ವಿಜಯನಗರೋತ್ತರದ ನಂತರದ ಕಾಲಾವಧಿಯಲ್ಲಿ ಮೊಗಲರು, ಬಹಮನಿ ಸುಲ್ತಾನರು, ಮರಾಠರು, ಒಡೆಯರು ಹಾಗೂ ಚಿಕ್ಕಪುಟ್ಟ ಸಂಸ್ಥಾನಿಕರು ಕನ್ನಡ ನೆಲವನ್ನು ಆಳಿದ್ದಾರೆ. ೧೮, ೧೯ ನೆಯ ಶತಮಾನದಲ್ಲಿ ಸುಲ್ತಾನರು, ಮೈಸೂರು ಒಡೆಯರು, ಮರಾಠರು, ನಾಯಕರು ತಮ್ಮ ರಾಜಕೀಯ ಬದುಕಿನ ಜೊತೆಗೆ ಕಲೆಯನ್ನು ಬೆಳೆಸಿ, ಪೋಷಿಸಿದ್ದಾರೆ. ತಮ್ಮ ವಿಜಯಕ್ಕೆ ಸಂಬಂಧಿಸಿದ ಹಾಗೂ ತಮ್ಮ ವೈಯಕ್ತಿಕ ಬದುಕಿಗೆ ಸಂಬಂಧಿಸಿದ ಘಟನೆಗಳನ್ನು ಚಿತ್ರ ಕಲಾವಿದರಿಂದ ಬರೆಯಿಸಿದ್ದಾರೆ. ರಾಜಕೀಯ ಘಟನೆಗಳಿಗೆ ಸಂಬಂಧಿಸಿದ ಹಾಗೂ ರಾಜಕೀಯ ನೇತಾರ ಭಾವಚಿತ್ರಗಳನ್ನು ಗಾಜಿನ ಚಿತ್ರಕಲಾವಿದರು ಅನೇಕ ಚಿತ್ರಗಳನ್ನು ರಚನೆ ಮಾಡಿದ್ದಾರೆ. ಅವುಗಳನ್ನು ಇಲ್ಲಿ ವಿವೇಚಿಸಲಾಗಿದೆ.

### ಅ. ಐತಿಹಾಸಿಕ ಸ್ತ್ರೀ-ಪುರುಷರ ಚಿತ್ರಗಳು

ಗಾಜಿನ ಮೇಲೆ ಆಯಾಕಾಲಮಾನದ ಪ್ರಭಾವಿ ವ್ಯಕ್ತಿಗಳ ಭಾವಚಿತ್ರಗಳು ರೂಪಗೊಂಡಿರುವುದನ್ನು ನೋಡುತ್ತೇವೆ. ಇವು ರಾಜಮಹಾರಾಜರ, ಅಧಿಕಾರಿ ವರ್ಗದವರ ಭಾವಚಿತ್ರಗಳಿಗೆ ಸಂಬಂಧಿಸಿವೆ. ಈ ಚಿತ್ರಗಳನ್ನು ಭಾರತೀಯ ಕಲಾವಿದರು ಹಾಗೂ ವಿದೇಶಿ ಕಲಾವಿದರು ರಚನೆ ಮಾಡಿದವುಗಳಾಗಿವೆ. ಈ ಚಿತ್ರಗಳು ಸ್ತ್ರೀ-ಪುರುಷ ವ್ಯಕ್ತಿಗಳಿಗೆ ಸಂಬಂಧಿಸಿವೆ ಆ ಚಿತ್ರಗಳನ್ನು ಕುರಿತು ಇಲ್ಲಿ ವಿವೇಚಿಸಲಾಗಿದೆ.

**ಚಿತ್ರಸಂಖ್ಯೆ ೦೧ ತಂಜಾವೂರು ಶರಭೋಜಿ ಮಹಾರಾಜ (೧೭೭೮-೧೮೩೨)**

ಮೈಸೂರು ದೊರೆ ಮುಮ್ಮಡಿ ಕೃಷ್ಣರಾಜರ ಸಮಕಾಲೀನವರಾಗಿದ್ದ ಮರಾಠ ದೊರೆ "ಮಹಾರಾಜ ಶರಬೋಜಿ"ಯು ಪ್ರಭಾವಿ ದೊರೆಯಾಗಿದ್ದನು. ಇವನು ಸ್ವತಃ ಕಲಾವಿದನು ಸಹ ಆಗಿದ್ದನು. ತಮಿಳು ನಾಡಿನ ತಂಜಾವೂರು ಇವನ ರಾಜಧಾನಿಯಾಗಿತ್ತು. ಕಂಪನಿ ಚಿತ್ರಕಲೆ ಉತ್ತುಂಗದಲ್ಲಿದ್ದ ಸಂದರ್ಭದಲ್ಲಿ ಇದರ ಪ್ರಭಾವ ತಂಜಾವೂರಿನಲ್ಲಿಯೂ ಕಾಲೀರಿಸಿತು. ಡೇನಿಷ್ ಕಲಾಕಾರನನ್ನು ತನ್ನ ಆಸ್ಥಾನದಲ್ಲಿರಿಸಿಕೊಂಡು ಅವನ ಬಳಿ ಚಿತ್ರಕಲೆಯನ್ನು ಅಭ್ಯಾಸಮಾಡಿ ಅದರ ಪ್ರಭಾವದಿಂದ ಚಿತ್ರ ರಚನೆಯನ್ನು ಮಾಡುವುದರ ಜೊತೆಗೆ ಚಿತ್ರಕಲೆಯನ್ನು ಬೆಳೆಸಿದನು.

ಇಂಥ ಮಹಾರಾಜನ ಭಾವಚಿತ್ರವನ್ನು ಗಾಜಿನ ಚಿತ್ರಕಲಾವಿದರು ಚಿತ್ರಣಮಾಡಿದ್ದಾರೆ. ಈ ಚಿತ್ರವು ಹುಮನಾಬಾದದ ಶ್ರೀ ಅಣ್ಣೆಪ್ಪ ಬಪ್ಪಣ್ಣ ಅವರ ಮನೆಯಲ್ಲಿ ಲಭ್ಯವಿದೆ.

ಇಲ್ಲಿ ಕಲಾವಿದನು ಶರಭೋಜಿ ಮಹಾರಾಜನ ವ್ಯಕ್ತಿತ್ವವನ್ನು ರೇಖೆ ಹಾಗೂ ವರ್ಣಗಳ ಮೂಲಕ ಅಭಿವ್ಯಕ್ತ ಮಾಡಿದ್ದಾನೆ. ಆರ್ಕಷಕ ದೈಹಿಕ ರೂಪ ಲಕ್ಷಣಗಳನ್ನು ಈ ಚಿತ್ರದಲ್ಲಿ ಬಿಂಬಿಸಲಾಗಿದೆ. ವೈಶಿಷ್ಟ್ಯ ಪೂರ್ಣವಾದ ಪೇಟ, ಅದರಂಚು ಚಿತ್ರವಿನ್ಯಾಸಗಳಿಂದ ರಚನೆಗೊಂಡಿದ್ದು, ಅದಕ್ಕೆ ಮುತ್ತು ಚಿನ್ನದ ಗೆಜ್ಜೆ, ಬಣ್ಣದ ಹರಳುಗಳಿಂದ ಕೂಡಿದ ಪಟ್ಟಿಯನ್ನು ಅಲಂಕರಿಸಿದೆ. ಜೊತೆಗೆ ಮುತ್ತಿನ ಗೊಂಚಲ ಹಾಗೂ ಹಕ್ಕಿಯ ಮೃದುವಾದ ಪುಚ್ಚವನ್ನು ಸಂಯೋಜಿಸಲಾಗಿದೆ. ನೀಲಿಬಣ್ಣದ ಕುರ್ತಾವನ್ನು ಚಿತ್ರಸಿದ್ದು, ಭುಜ, ರಟ್ಟೆ, ಕೊರಳುಪಟ್ಟಿ, ಎದೆಯ ಮೇಲೆ ಅಡ್ಡಪಟ್ಟಿ ಹಾಗೂ ಸೊಂಟ ಪಟ್ಟಿಗಳನ್ನು ಚಿತ್ರ ವಿನ್ಯಾಸಗಳಿಂದ ಅಲಂಕರಿಸಲಾಗಿದೆ. ಇದು ರತ್ನಖಚಿತ ಹಾಗೂ ವಜ್ರಖಚಿತ ಕುರ್ತಾದಂತೆ ಬಿಂಬಿಸಲಾಗಿದೆ. ದಪ್ಪ ಹುಬ್ಬು, ಕೋರೆಮೀಸೆ, ದೊಡ್ಡ ಕಣ್ಣುಗಳು, ನೀಳವಾದ ಮೂಗು, ತುಂಬಿದ ಗಲ್ಲಗಳಿಂದ ಮಹಾರಾಜನ ಭಾವರೂಪವು ಆಕರ್ಷಕವಾಗಿ ಬಿಂಬಿತವಾಗಿದೆ. ಚಿತ್ರದ ಸುತ್ತಲೂ ನೈಸರ್ಗಿಕ ಚಿತ್ರವಿನ್ಯಾಸಗಳನ್ನು ಸಂಯೋಜಿಸಲಾಗಿದೆ. ಚಿತ್ರವು ರೇಖಾ ಪ್ರಧಾನವಾಗಿದ್ದು ಉತ್ತಮ ಭಾವನಿರೂಪಣೆಯನ್ನು ಹೊಂದಿದೆ.

**ಚಿತ್ರಸಂಖ್ಯೆ ೦೨ ತಂಜಾವೂರು ಶಿವೋಜಿ ಮಹಾರಾಜ**

ಈ ಭಾವ ಚಿತ್ರವು ಮರಾಠ ದೊರೆ ಶಿವೋಜಿ ಮಹಾರಾಜರದಾಗಿದೆ. ಈ ಚಿತ್ರವು ಅತ್ಯಂತ ಶಿಷ್ಟ ಪದ್ಧತಿಯಲ್ಲಿ ರಚನೆಗೊಂಡಿದೆ. ಅಲಂಕೃತಗೊಂಡ ವಸ್ತ್ರಾಭರಣಗಳು, ದೈಹಿಕ ರೂಪಲಕ್ಷಣಗಳು ಹಾಗೂ ಹಿನ್ನೆಲೆಯ ವಸ್ತು ಸಂಯೋಜನೆಯು ವೈಶಿಷ್ಟ್ಯಪೂರ್ಣವಾಗಿ ಮೂಡಿಬಂದಿದೆ. ಚಿತ್ರದಲ್ಲಿ ದೊರೆಯ ಪೇಟವು ವಿಶಿಷ್ಟವಾಗಿ ರೂಪಗೊಂಡಿದ್ದು, ವಿವಿಧ ಮುತ್ತುಗಳ ಗೊಂಚಲುಗಳನ್ನು ಚಿನ್ನ ಹಾಗೂ ಹರಳುಗಳ ಪಟ್ಟಿಗಳನ್ನು, ಚಿನ್ನದ ತುರಾಯಿ ಹಾಗೂ ಪುಚ್ಚವನ್ನು ಸಂಯೋಜಿಸಲಾಗಿದೆ. ಇಲ್ಲಿ ಅಲಂಕಾರ ಕಲ್ಪನೆಯು ಅಧಿಕಗೊಂಡಿದೆ. ದೊರೆಯ ಕೋಟು ಕೆಂಪು ಬಣ್ಣದಿಂದ ಕೂಡಿದ್ದು ಹೂವು, ಎಲೆಗಳ ಕಸೂತಿಯ ಕಲೆಯ ಸೊಬಗು ಇಲ್ಲಿ ವ್ಯಕ್ತಗೊಂಡಿದೆ. ಕೋಟಿನ ಕೊರಳು ಪಟ್ಟಿಗಳು, ಅಡ್ಡ ಪಟ್ಟಿಗಳು, ಭುಜಕೀರ್ತಿಯು ಚಿತ್ರವಿನ್ಯಾಗಳಿಂದ ಭೂಷಿತಗೊಂಡಿದೆ. ವಿವಿಧ ಮುತ್ತು ರತ್ನಗಳ ಆಭರಣಗಳು ಕೊರಳನ್ನು ಅಲಂಕರಿಸಿವೆ. ಮುಖದ ವಿನ್ಯಾಸದಲ್ಲಿ ಆಕರ್ಷಕ ತಲೆಕೂದಲು, ಕುಡಿಯಿಂದ ಕೂಡಿದ ದಪ್ಪಮೀಸೆ, ತೀಕ್ಷ್ಣ ಕಣ್ನೋಟ, ಬಾಗಿದ ಹುಬ್ಬುಗಳು, ನೀಳವಾದ ನಾಸಿಕ, ಮಂದಹಾಸ ಬೀರುವ ತುಟಿಗಳು, ಸೂಕ್ಷ್ಮತ್ವಚೆಯಿಂದ ಕೂಡಿದ ಕಾಂತಿಯುತ ಮುಖವು ಮಹಾರಾಜನ ವ್ಯಕ್ತಿತ್ವವನ್ನು ಎತ್ತಿಹಿಡಿದಿವೆ. ಮುಖದ ವರ್ಣವಿಧಾನದಲ್ಲಿ ನೈಜತೆಯು ಉತ್ತಮವಾಗಿ ಮೂಡಿಬಂದಿದೆ. ಹಿನ್ನೆಲೆಯಲ್ಲಿ ಗಾಜಿನ ದೀಪದ ಬುಡ್ಡಿಗಳು ರೂಪಗೊಂಡಿದ್ದು, ಅಲಂಕಾರಮಯವಾಗಿವೆ. ಚಿತ್ರವು ಮೊಟ್ಟೆಯಾಕಾರದ ಸ್ಥಳಾವಕಾಶದಲ್ಲಿ ಬಿಂಬಿತವಾಗಿದ್ದು, ನೀಲಿಬಣ್ಣವು ಏಕರೂಪವಾಗಿ ಲೇಪನಗೊಂಡಿದೆ. ಚಿತ್ರದ ಸುತ್ತಲೂ ನಾಲ್ಕು ಭಾಗಗಳಲ್ಲಿ ಸರಳಗೈ ನಕ್ಷಾವಿನ್ಯಾಸವು ರಚನೆಗೊಂಡಿದೆ. ಚಿತ್ರದಲ್ಲಿ ಕೆಂಪು, ನೀಲಿ, ಬಿಳಿ, ಮೆರಗುಬಣ್ಣಗಳನ್ನು ಹಾಗೂ ಚಿನ್ನ ಲೇಪನದ ಮೆರಗು ಕಾಗದವನ್ನು ಬಳಸಿಕೊಂಡು ಅಲಂಕಾರದ ಆಶಯವನ್ನು ತರಲಾಗಿದೆ.

**ಚಿತ್ರಸಂಖ್ಯೆ ೦೩, ೦೪ ರಾಜಾ ಸೋಮಶೇಖರ ನಾಯಕ (ಮೊದಲ)**

ಇಲ್ಲಿ ರಚನೆಗೊಂಡಿರುವ ಎರಡೂ ಭಾವಚಿತ್ರಗಳು ಹರಪನಹಳ್ಳಿ ಪಾಳೆಯಗಾರ ದೊರೆಗಳಲ್ಲಿ ಒಬ್ಬರಾದ ಮೊದಲ ಸೋಮಶೇಖರ ನಾಯಕ ನ ಭಾವಚಿತ್ರಗಳಾಗಿವೆ. ಈ ಮನೆತನದ ಪಾಳೆಯಗಾರರ ರಾಜರಲ್ಲಿ ಸುಸಂಸ್ಕೃತನು, ಧರ್ಮಿಷ್ಟನು ಹಾಗೂ ವೀರದೊರೆ ಎಂದು ಸೋಮಶೇಖರನಾಯಕನು ಪ್ರಸಿದ್ಧನಾಗಿದ್ದನು.

ಚಿತ್ರಸಂಖ್ಯೆ ೦೩ ರಲ್ಲಿ ಆಕರ್ಷಕ ರೇಖಾ ವಿನ್ಯಾಸದಿಂದ ಆಕೃತಿಯ ಬಾಹ್ಯ ರೂಪವು ಮೂಡಿಬಂದಿದ್ದು, ಚಪ್ಪಟೆಯ ವರ್ಣ ವೈವಿಧ್ಯತೆಯನ್ನು ಅನುಸರಿಸಲಾಗಿದೆ. ಆಕರ್ಷಕ ದೈಹಿಕ ರೂಪಲಕ್ಷಣಗಳನ್ನು ವ್ಯಕ್ತಪಡಿಸುವ ಈ ಭಾವಚಿತ್ರದಲ್ಲಿ ವಿಶಿಷ್ಟವಾಗಿಸುತ್ತದೆ. ರುಮಾಲು (ಪೇಟ) ಅದಕ್ಕೆ ವರ್ಣಮಯ ಚಿತ್ತಾರ, ಆಭರಣಗಳನ್ನು ಸಂಯೊಜಿಸಲಾಗಿದೆ. ಮುಖದ ವಿನ್ಯಾಸದಲ್ಲಿ ಕತ್ತಿಯಂತಹ ಹುಬ್ಬಗಳು, ದೊಡ್ಡ ಕಣ್ಣುಗಳು, ದಪ್ಪ ಮೂಗು, ಉಬ್ಬಿದ ಗಲ್ಲ, ಸುರುಳಿ ಮಾಡಿದ ದಪ್ಪನೆಯ ಮೀಸೆಗಳು ಆ ವ್ಯಕ್ತಿಯ ಪೌರುಷವನ್ನು ಪ್ರತಿಬಿಂಬಿಸುತ್ತವೆ. ಕೊರಳಲ್ಲಿ ಮುತ್ತಿನಸರ, ಅದಕ್ಕೆ ಚಿನ್ನದ ಪದಕ, ಕಿವಿಗಳಲ್ಲಿ ಚಿನ್ನದ ಕಡಗಗಳು ಸಂಯೋಜನೆಗೊಂಡಿವೆ. ಈ ಭಾವಚಿತ್ರಕ್ಕೆ ಸಂಯೋಜಿಸಿದ ಅಂಗಿಯು ಚಿತ್ರವಿನ್ಯಾಸಗಳಿಂದ ಅಲಂಕೃತಗೊಂಡಿದೆ. ಹಿನ್ನೆಲೆಯಲ್ಲಿ ಪರದೆಗಳನ್ನು ಸಂಯೋಜಿಸಿದ್ದು, ವರ್ಣಮಯವಾಗಿ ರೂಪಗೊಂಡಿವೆ.

ಚಿತ್ರಸಂಖ್ಯೆ ೦೪ ಕೈಯಲ್ಲಿ ಗುಲಾಬಿ ಹೂವನ್ನು ಹಿಡಿದುಕೊಂಡು ನಗುಮುಖದ ಭಾವನೆಗಳನ್ನು ವ್ಯಕ್ತಪಡಿಸುತ್ತಿರುವಂತೆ ರೂಪಿತಗೊಂಡಿದೆ. ಇಲ್ಲಿ ಪೇಟದ ವಿನ್ಯಾಸವು ಹಸಿರು ವರ್ಣದಿಂದ ಕೂಡಿದ್ದು, ವರ್ಣಮಯ ಪಟ್ಟಿಕೆಗಳು, ಹರಳುಗಳ ಆಭರಣ, ಚಿಕ್ಕ ಚಿಕ್ಕ ಚುಕ್ಕೆಗಳ ಚಿತ್ರವಿನ್ಯಾಸಗಳು ರಚನೆಗೊಂಡಿದೆ. ಜೊತೆಗೆ ಮುತ್ತಿನ ಗೊಂಚಲು ಸಂಯೋಜಿತಗೊಂಡಿದೆ. ಕಣ್ಣು, ಕಿವಿ, ಮೂಗು, ಹಣೆ, ಮೀಸೆ, ಗಲ್ಲಗಳು ಇವನ ಬಲಿಷ್ಠತೆಯನ್ನು ತೋರ್ಪಡಿಸುತ್ತವೆ. ಹಣೆಯ ಮೇಲೆ ವಿಭೂತಿ, ಕೆಂಪು ಕುಂಕುಮದ ಬೊಟ್ಟು ಚಿತ್ರಿತಗೊಂಡಿದ್ದು, ಶೈವ ಸಂಪ್ರದಾಯಸ್ಥನೆಂದು ಅರಿಯಬಹುದು. ಹಾಗೂ ಇವನ ಧರ್ಮನಿಷ್ಠೆಯನ್ನು ಸಹ ಕಾಣಬಹುದು. ಕೊರಳಲ್ಲಿ ಚಿನ್ನದ ಸರಗಳು ರಚನೆಗೊಂಡಿದ್ದು ಆನೆಯ ಕೋರೆಯ ದಂತದ ಪದಕವು, ಹೊಳಪುಗಳಿಂದ ಕೂಡಿದ ಅಂಗಿಯು ಚಿತ್ರವಿನ್ಯಾಸಗಳಿಂದ ರೂಪಗೊಂಡಿದೆ. ಚಿತ್ರವು ರೇಖೆ ಹಾಗೂ ವರ್ಣಗಳಿಂದ ಉತ್ತಮ ಭಾವನಿರೂಪಣೆಯನ್ನು ಹೊಂದಿದೆ. ಹಿನ್ನೆಲೆಯಲ್ಲಿ ಮಂಟಪದ ವಿನ್ಯಾಸ ಮೂಡಿಬಂದಿದ್ದು ಸೂಕ್ಷ್ಮ ಸರಳಗ್ಯೆ ನಕ್ಷೆಗಳು ಬಿಂಬಿತವಾಗಿವೆ. ಇಲ್ಲಿ ನೀಲಿ, ಹಸಿರು, ಬಿಳಿ ಹಾಗೂ ಕೆಂಪು ವರ್ಣಗಳು ಪ್ರಧಾನವಾಗಿ ಸಂಯೋಜನೆಗೊಂಡಿದ್ದು, ಆಕರ್ಷಕ ರೇಖಾ ಲಕ್ಷಣಗಳಿಂದ ಅಲಂಕಾರಿಕ ಮನೋಭಾವನೆಯನ್ನು ಕಲ್ಪಿಸುತ್ತದೆ. ಈ ಚಿತ್ರವು ಮೈಸೂರು ವಿಶ್ವವಿದ್ಯಾಲಯದ ಜನಪದ ವಸ್ತು ಸಂಗ್ರಹಾಲಯದಲ್ಲಿ ಸಂಗ್ರಹಗೊಂಡಿದೆ.

**ಚಿತ್ರಸಂಖ್ಯೆ ೦೫, ೦೬ ಮುಮ್ಮಡಿ ಕೃಷ್ಣರಾಜ ಒಡೆಯರು**

ಮುಮ್ಮಡಿ ಕೃಷ್ಣರಾಜ ಒಡೆಯರ ಭಾವನಿರೂಪಣೆಯನ್ನು ವ್ಯಕ್ತಪಡಿಸುವ ಈ ಎರಡು ಚಿತ್ರಗಳು, ಒಂದು ಅರ್ಧಭಾವ ಚಿತ್ರ ಇನ್ನೊಂದು ಪೂರ್ಣಭಾವ ಚಿತ್ರವಾಗಿದೆ.

ಚಿತ್ರ ೦೫ ರಲ್ಲಿ ರೂಪಗೊಂಡಿರುವ ಭಾವಚಿತ್ರವು ಯೌವ್ವನಾವಸ್ಥೆಯನ್ನು ಅಭಿವ್ಯಕ್ತಿಸುತ್ತದೆ. ವಿಶಿಷ್ಟವಾದ ಸ್ವರ್ಣಮಯ ಅಂಚಿನಿಂದ ಕೂಡಿದ ಕೆಂಪು ಪೇಟ, ಅದಕ್ಕೆ ಚಿನ್ನದಿಂದ ತಯಾರಿಸಿದ ಪಟ್ಟಿಗೆ ವೈವಿಧ್ಯಮಯ ಹರಳುಗಳು, ಗೆಜ್ಜೆಗಳು, ಪದಕವನ್ನು ಅಲಂಕರಿಸಿ ಪೇಟಕ್ಕೆ ಅಲಂಕರಿಸಲಾಗಿದೆ. ಜೊತೆಗೆ ಮುತ್ತುಗಳ ಗೊಂಚಲು ಪೇಟದ ಬಲ ಪಾರ್ಶ್ವದಲ್ಲಿ ಶೋಭಿಸುತ್ತದೆ. ಕತ್ತಿಯಂತೆ ಚೂಪಾದ ಹುಬ್ಬುಗಳು, ವಿಶಾಲವಾದ ಕಣ್ಣುಗಳು, ನೀಳವಾದ ಮೂಗು, ಮಂದಹಾಸ ಬೀರುವ ತುಟಿಗಳು, ಸುರುಳಿ ಸುತ್ತಿದ ಗಡುಸಾದ ಮೀಸೆಗಳು ಒಡೆಯರ ವ್ಯಕ್ತಿತ್ವವನ್ನು ನಿರೂಪಿಸುತ್ತವೆ. ವಿಶೇಷ ಪಟ್ಟಿಕೆಗಳಿಂದ ಕೂಡಿದ ಅಂಗಿಯು ಹಸಿರು ವರ್ಣದ ಛಾಯೆಯು ಎದೆದು ತೋರುತ್ತಿವೆ. ಕೊರಳಲ್ಲಿ ವಿಶಿಷ್ಟವಾದ ಹೊಳಪಿನ ಮಣಿಗಳ ಸರಗಳು, ಬಿಳಿ ಮುತ್ತಿನ ಸರ, ಅದಕ್ಕೆ ಚಿನ್ನದ ಪದಕವನ್ನು ಅಲಂಕರಿಸಿ ಸಂಯೋಜಿಸಲಾಗಿದೆ. ಚಿತ್ರವು ಮೊಟ್ಟೆಯಾಕಾರದ ಸ್ಥಳಾವಕಾಶದಲ್ಲಿ ರೂಪಗೊಂಡಿದ್ದು, ಚಿತ್ರದ ನಾಲ್ಕು ಮೂಲೆಯಲ್ಲಿ ಹೂವಿನ ನಕ್ಷೆಗಳು ರಚನೆಗೊಂಡಿವೆ. ಚಿತ್ರದಲ್ಲಿ ಕೆಂಪು, ಕಪ್ಪು, ಕಂದುಗೆಂಪು, ಬಿಳಿ ಬಣ್ಣಗಳು ಕೆಂಪು, ಹಸಿರು, ಮೆರಗು ಬಣ್ಣಗಳು ಹಾಗೂ ಚಿನ್ನದ ರೇಖಿನ ಹಾಳೆಯು ಹಿನ್ನೆಲೆಯಾಗಿ ಸಂಯೋಜಿಸಿದ್ದರಿಂದ ಚಿತ್ರವು ಅಲಂಕಾರ ಮಯವಾಗಿ ಕಂಡು ಬರುತ್ತಿದೆ.

ಚಿತ್ರ ೦೬ ಇದು ಪೂರ್ಣಭಾವ ಚಿತ್ರವಾಗಿದ್ದು ಒಡೆಯರ ಸಿಂಹಾಸನದಲ್ಲಿ ಆಶೀನರಾಗಿದ್ದು, ಅರಮನೆಯ ಪರಿಚಾರಕ, ಒಡೆಯರ ಎಡಪಾರ್ಶ್ವದಲ್ಲಿ ನಿಮತಿರುವನು. ಅಲಂಕರತವಾದ ಮುಕುಟ ಪೇಟವು ಬೆಲೆಬಾಳುವ ಮುತ್ತು, ಚಿನ್ನ, ವಜ್ರ ವೈಡೂರ್ಯಗಳಿಂದ ನಿರ್ಮಿತವಾದುದೆಂದು ನೋಡುಗನ್ನು ಕಲ್ಪಿಸುವಂತೆ ಚಿತ್ರಿತಗೊಂಡಿದೆ. ಆಕರ್ಷಕ ಅಂಗಾಂಗಗಳಿಂದ ಎತ್ತರದ ನಿಲುವು ಈ ಚಿತ್ರದಲ್ಲಿ ಮೂಡಿಬಂದಿದೆ. ಚಿನ್ನ ಹಾಗೂ ರತ್ನಖಚಿತ ಕುರ್ತಾ, ಬಿಳಿ ನಿಲುವಂಗಿ, ಸೊಂಟದಲ್ಲಿ ವಿಶಿಷ್ಟವಾದ ಉತ್ತರೀಯವು ಚಿತ್ರಿತಗೊಂಡಿದೆ. ಚಿನ್ನದ ಸಿಂಹಾಸನವು ಈ ಚಿತ್ರದಲ್ಲಿ ವಿಶಿಷ್ಟವಾಗಿ ರೂಪಗೊಂಡಿದ್ದು ವಾಸ್ತವದ ನೈಜ ಕಲ್ಪನೆಯು ಇಲ್ಲಿ ಬಿಂಬಿತವಾಗಿದೆ. ಒಡೆಯರ ಬಲಪಾರ್ಶ್ವದಲ್ಲಿ ಕತ್ತಿ ಹಾಗೂ ಗುರಾಣಿಯ ಚಿತ್ರಗಳು ಸಂಯೋಜಿತಗೊಂಡಿದ್ದು, ಆಕರ್ಷಕವಾಗಿ ಮೂಡಿಬಂದಿವೆ. ಒಡೆಯರ ಎಡಪಾರ್ಶ್ವದಲ್ಲಿ ಅರಮನೆಯ ಸೇವಕರು, ವಿಶಿಷ್ಟ ರುಮಾಲು, ಕುರ್ಚಾ ಪ್ಯಾಂಟು, ಕರಿಬೂಟು, ನಡುವಿಗೆ ಉತ್ತರೀಯ ಹಾಗೂ ಮಿತವಾದ ಆಭರಣಗಳಿಂದ ರೂಪಗೊಂಡಿದ್ದು ಆಕರ್ಷಕ ದೈಹಿಕ ನಿಲುವನ್ನು ಹೊಂದಿರುವನು. ಒಡೆಯರ ಜೊತೆ ಸಮಾಲೋಚನೆಯಲ್ಲಿರುವಂತೆ ನಿರೂಪನೆಗೊಂಡಿದ್ದಾನೆ. ಚಿತ್ರದ ಹಿನ್ನೆಲೆಯಲ್ಲಿ ಅರಮನೆಯ ವಾಸ್ತುಕಲ್ಪನೆಯು ಬರುವಂತೆ ಅರ್ಧಚಂದ್ರಾಕೃತಿಯ ಕಮಾನು, ಕಂಬಗಲು ಹಾಗೂ ವಿಶಿಷ್ಟವಾಗಿ ಸಂಯೋಜಿಸಲಾದ ಬಿಳಿಪರದೆಗಳು ಚಿತ್ರಣಗೊಂಡಿವೆ. ಕಮಾನಿನ ಮಧ್ಯದಲ್ಲಿ ಗಾಜಿನ ತೂಗುದೀಪವು ಅಲಂಕೃತಗೊಳಿಸಿದ್ದು, ಕಮಾನಿನಲ್ಲಿ ಸರಳಗ್ಗೆ ನಕ್ಷಾವಿನ್ಯಾಸಗಳು ರಚನೆಗೊಂಡಿವೆ. ಈ ಚಿತ್ರದಲ್ಲಿ ನೀಲಿ, ಬಿಳಿ, ಹಸಿರು, ಕಪ್ಪು, ಕೆಂಪು ಬಣ್ಣಗಳು ವರ್ಣಲೇಪನವನ್ನು ಸಂಯೋಜಿಸಲಾಗಿದೆ. ಇಲ್ಲಿ ವಿಶೇಷವಾಗಿ ಚಿನ್ನದ ರೇಖನ್ನು ಪ್ರಧಾನವಾಗಿ ಬಳಕೆ ಮಾಡಿದ್ದು ಅಲಂಕಾರದ ಆಶಯ ವೈಭವಿಕರಣಗೊಂಡಿದೆ.

**ಚಿತ್ರಸಂಖ್ಯೆ ೦೭ ಗೋಲೆ ಮಾಜಿ ಸಿಂಧೆ (ಗ್ವಾಲಿಯರ್)**

ಮುಮ್ಮಡಿ ಕೃಷ್ಣರಾಜ ಒಡೆಯರ ಸಮಕಾಲೀನ ಕೆಲವು ವ್ಯಕ್ತಿಗಳಲ್ಲಿ ಒಬ್ಬರಾಗಿದ್ದ ಗ್ವಾಲಿಯರದ ಗೋಲೆ ಮಾಜಿ ಸಿಂಧೆ ಒಬ್ಬರು. ಇವರು ಮುಮ್ಮಡಿಯವರ ಆಡಳಿತ ಹಾಗೂ ಸಾಂಸ್ಕೃತಿಕವಾಗಿ ಉತ್ತಮ ಸ್ನೇಹಿತರಾಗಿದ್ದರೆಂದು ಹೇಳಬಹುದು. ಮುಮ್ಮಡಿಯವರ ಒಡನಾಡಿಯಾಗಿದ್ದ ಇವರ ಭಾವ ಚಿತ್ರವು ಗಾಜಿನ ಮೇಲೆ ಮೂಡಿಬಂದಿದೆ. ಭಾವಚಿತ್ರದಲ್ಲಿ ವಿಶಿಷ್ಟವಾಗಿ ಸುತ್ತಿದ ಬಿಳಿ ರುಮಾಲು, ನಿರಿಗೆಗಳಿಂದ ಕೂಡಿದ ಕಸಿನಿಲು ಅಂಗಿಯು ಉತ್ತಮವಾಗಿ ಮೂಡಿಬಂದಿದೆ. ಕಂದು ಹಾಗೂ ಕಪ್ಪು ಮಿಶ್ರಿತ ಮುಖದ ವರ್ಣವಿನ್ಯಾಸವು ಲೇಪನಗೊಂಡಿದ್ದು, ಕಪ್ಪು ವ್ಯಕ್ತಿಯೆಂದು ಬಿಂಬಿತವಾಗುತ್ತದೆ. ಹೊಳಪುಳ್ಳ ಕಣ್ಣುಗಳು, ದಪ್ಪನೆಯ ಮೀಸೆ, ಕೆಂಪು ಮಿಶ್ರಿತ ನೇರಳೆ ವರ್ಣದ ತುಟಿಗಳು ರಚನೆಗೊಂಡಿವೆ. ಕಿವಿಗಳಲ್ಲಿ ಚಿನ್ನದ ಕುಂಡಲ (ಕಟಗು) ಕೊರಳಲ್ಲಿ ನೀಲಿ, ಹಳದಿ ವರ್ಣಗಳಿಂದ ರಚನೆಗೊಂಡ ಹರಳಿನ ಸರಗಳು ರಚನೆಗೊಂಡಿದ್ದು, ಅವುಗಳಿಗೆ ದೊಡ್ಡದಾದ ಹೊಳಪಿನ ಪದಕಗಳು ಅಲಂಕೃತಗೊಂಡಿವೆ. ಚಿತ್ರದ ಹಿನ್ನೆಲೆಯಲ್ಲಿ ದೊಡ್ಡ ದಿಂಬು, ವಿಶಿಷ್ಟವಾಗಿ ಅಲಂಕರಿಸಿದ ಪರದೆಗಳು ಸಂಯೋಜನೆಗೊಂಡಿವೆ. ಚಿತ್ರವು ವರ್ಣಗಳ ಛಾಯೆಗಳಿಂದ ಬೆಳಕು ನೆರಳಿನ ಕಲ್ಪನೆಯು ಉತ್ತಮವಾಗಿ ಪ್ರಕಟಗೊಂಡಿದ್ದು, ಇದು ಪಾಶ್ಚಿಮಾತ್ಯ ಕಲಾವಿದರಿಂದ ರಚನೆಗೊಂಡಿದೆ. ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಈ ಚಿತ್ರ ಲಭ್ಯವಿದೆ.

**ಚಿತ್ರಸಂಖ್ಯೆ ೦೮, ೦೯ ನೇಪಾಳ ರಾಜನ ಮಗ**

ಈ ವ್ಯಕ್ತಿ ಚಿತ್ರವು ನೇಪಾಳ ರಾಜನ ಮಗನದು. ಇವನೂ ಸಹ ಮುಮ್ಮಡಿಯವರ ಸಮಕಾಲೀನವನಾಗಿದ್ದಾನೆ. ಈ ಕೃತಿಯು ಪಾಶ್ಚಿಮಾತ್ಯ ಕಲಾವಿದನಿಂದ ರಚನೆಗೊಂಡಿರುವದು. ಇಲ್ಲಿ ಕೆಂಪು ವರ್ಣದ ಪೇಟ (ರುಮಾಲು) ವನ್ನು ಚಿತ್ರಿಸಿ ಮುತ್ತಿನ ಸರಗಳು, ಚೌಕಾಕಾರದ, ಗಾಜಿನ ಮಣಿಗಳು, ಅದಕ್ಕೆ ಚಿನ್ನದ ಬಂಧಕಗಳನ್ನು ರೂಪಿಸಿ ಪೇಟಕ್ಕೆ ಅಲಂಕರಿಸಲಾಗಿದೆ. ಶ್ವೇತವರ್ಣದ ನಿಲುವಂಗಿಯು ರೂಪಗೊಂಡಿದ್ದು ನಡುವಿಗೆ ದಾರದ ಕಸಿಯನ್ನು ಕಟ್ಟಲಾಗಿದೆ. ಇದರಲ್ಲಿ ಬಟ್ಟೆಯ ನಿರಿಗೆಗಳು ಬೆಳಕು ನೆರಳುಗಳಿಂದ ಕೂಡಿದ್ದು, ಬಟ್ಟೆಯ ನೈಜತೆ ಯನ್ನು ತರಲಾಗಿದೆ. ಭುಜದ ಮೇಲೆ ಕೆಂಪು ಉತ್ತರಿಯವು ಚಿತ್ರಣಗೊಂಡಿದ್ದು ನಿರಿಗೆಗಳ ಕಲ್ಪನೆ ಉತ್ತಮವಾಗಿ ವ್ಯಕ್ತಗೊಂಡಿದೆ. ಕೊರಳಲ್ಲಿ ಮುತ್ತುಗಳಸರಗಳು ಕಿವಿಯಲ್ಲಿ ತಂತಿಯಂತಿರುವ ಕುಂಡಲಗಳು ಆಕರ್ಷಕವಾಗಿ ಚಿತ್ರಿತಗೊಂಡಿವೆ. ಮುಖ ವಿನ್ಯಾಸದಲ್ಲಿ ನೇಪಾಳ ಜನಾಂಗದ ದೈಹಿಕ ಲಕ್ಷಣಗಳು ಮೂಡಿಬಂದಿವೆ. ಹುಬ್ಬು, ಚಿಕ್ಕ ಕಣ್ಣುಗಳು, ಮೂಗು, ಚಿಕ್ಕ ತುಟಿಗಳು, ಕೋಲುಮುಖವು ಹಾಲು ಬಿಳುಪಿನ ತ್ವಚೆಯಿಂದ, ಉತ್ತಮ ಭಾವನಿರೂಪಣೆಯು ವ್ಯಕ್ತಗೊಂಡಿದೆ. ತೈಲವರ್ಣ ಬಳಸಿಕೊಂಡು ವರ್ಣ ಸಂಯೋಜನೆಯನ್ನು ಅತ್ಯಂತ ನೈಜವಾಗಿ ಭಾವನೆ ತರಲಾಗಿದೆ. ಚಿತ್ರದ ಹಿನ್ನೆಲೆಯಲ್ಲಿ ನೀಲಿದಿಂಬು ಚಿತ್ರವಿನ್ಯಾಸದಿಂದ ಕೂಡಿದ ಪರದೆಯು ಸಂಯೋಜನೆಗೊಂಡಿದ್ದು ಪರದೆಯ ಅಂಚು, ಸೂಕ್ಷ್ಮರೇಖೆಗಳಿಂದ ನಕ್ಷೆಯನ್ನು ಚಿತ್ರಿಸಲಾಗಿದೆ, ಜೊತೆಗೆ ನಿರಿಗೆಗಳ ಕಲ್ಪನೆಯು ವಾಸ್ತವತೆಯನ್ನು ಬಿಂಬಿಸುತ್ತದೆ. ಚಿತ್ರವು ಕೆಂಪು, ಬಿಳಿ, ಹಳದಿ, ನೀಲಿ ವರ್ಣಗಳ ಸಂಯೋಜನೆಯು ಉತ್ತಮವಾಗಿ ಅಭಿವ್ಯಕ್ತಗೊಂಡಿದ್ದು, ಇದೇ ಪ್ರತಿಕೃತಿ ಚಿತ್ರವು ಚಿತ್ರ ೦೯ ಯಥಾವತ್ತಾಗಿ ರಚನೆಗೊಂಡಿದೆ.

**ಚಿತ್ರಸಂಖ್ಯೆ ೧೦ ನವಾಬ (ಔರಾದ)**

ಇದು ಔರಾದ್ ನವಾಬರ ಪೂರ್ಣಭಾವಚಿತ್ರವಾಗಿದ್ದು, ರತ್ನಖಚಿತ ಜಮಖಾನೆಯ ಮೇಲೆ ಕುಳಿತಿರುವಂತೆ ಅಭಿವ್ಯಕ್ತಗೊಳಿಸಲಾಗಿದೆ. ಈ ಚಿತ್ರದಲ್ಲಿ ನವಾಬರ ವೇಷಭೂಷಣಗಳು ವಿಶಿಷ್ಟವಾಗಿ ರೂಪಗೊಂಡಿದ್ದು, ತಲೆಯ ಮೇಲೆ ಸುತ್ತಲಾದ ರುಮಾಲು (ಪೇಟ) ಹಲವಾರು ಮಡಿಕೆ (Folding)ಗಳಿಂದ ವಿನ್ಯಾಸಗೊಂಡಿದೆ. ಇದಕ್ಕೆ ಮುತ್ತಿನ ಸರ ಹಾಗೂ ಹಕ್ಕಿಯ ಪುಚ್ಚಗಳನ್ನು ಅಲಂಕರಿಸಲಾಗಿದೆ. ಕೋಲು ಮುಖಭಾವ, ನೀಳ ದೇಹ ರಚನೆಯನ್ನು ಹೊಂದಿದ್ದು ಕತ್ತಿಯಂತೆ ಹುಬ್ಬುಗಳು, ತೀಕ್ಷ್ಣವಾದ ಕಣ್ಣೋಟ, ನೀಳವಾದ ಮೂಗು, ಮಂದಹಾಸ ಬೀರುವ ತುಟಿಗಳು, ಹುರಿಮಾಡಿದ ಉದ್ದವಾದ ಕೋರೆಮೀಸೆಗಳು ಆಕರ್ಷಕವಾಗಿ ರಚನೆಗೊಂಡಿವೆ. ನೀಲಿಬಣ್ಣದ ಕುರ್ತಾ, ನೀಲಿ ಪೈಜಾಮನ್ನು ಸಂಯೋಜಿಸಿದ್ದು, ನಡುವಿಗೆ (ಸೊಂಟ) ಚೌಕಾಕಾರ ಪಟ್ಟಿಕೆಗಳಿಂದ ಕೂಡಿದ ಸ್ಕಾರ್ಫನ್ನು ಕಟ್ಟಿಕೊಳ್ಳಲಾಗಿದೆ. ನವಾಬರ ಹಿಂದೆ ದೊಡ್ಡ ದಿಂಬನ್ನು ಚಿತ್ರಿಸಿದ್ದು ಅದಕ್ಕೆ ಬಣ್ಣದ ಬಟ್ಟೆಯನ್ನು ಹೊದಿಸಲಾಗಿದೆ. ಹಿನ್ನೆಲೆಯಲ್ಲಿ ಚಿಕ್ಕ ಕಂಬಗಳ ವಿನ್ಯಾಸದಿಂದ ಕೂಡಿದ ಕಟಾಂಜನ, ಪ್ರಕೃತಿದೃಶ್ಯವು ಉತ್ತಮವಾಗಿ ಪ್ರಕಟಗೊಂಡಿದೆ. ಈ ಚಿತ್ರವು ತೈಲವರ್ಣ ಮಾಧ್ಯಮದಲ್ಲಿ ರೂಪಗೊಂಡಿದ್ದು ಬೆಳಕು ನೆರಳುಗಳ ಕಲ್ಪನೆ, ವರ್ಣಗಳ ನೈಜತೆಯು ಅಭಿವ್ಯಕ್ತಗೊಂಡಿದೆ. ದಿಂಬಿನ ಮೇಲೆ ಪಾರಿವಾಳದ ಚಿತ್ರವಿದ್ದು, ಚಲನಾತ್ಮಕ ರೂಪವಿನ್ಯಾಸವನ್ನು ಹೊಂದಿದೆ. ಈ ಚಿತ್ರವು ಮಣಿಪಾಲದ ಶ್ರೀ ವಿಜಯನಾಥ ಶೆಣೈಯವರ ಹಸ್ತಶಿಲ್ಪ ಗ್ರಾಮದಲ್ಲಿ ಸಂಗ್ರಹಗೊಂಡಿದೆ.

**ಚಿತ್ರಸಂಖ್ಯೆ ೧೧ ಕುದುರೆ ಸವಾರಿ ಮಾಡುತ್ತಿರುವ ಯುವರಾಜ**

ಈ ಚಿತ್ರದಲ್ಲಿ ಯುವರಾಜನೊಬ್ಬನು ಕುದುರೆ ಸವಾರಿ ಮಾಡುತ್ತಿರುವನು. ಕುದುರೆಯು ಚಲನಾತ್ಮಕವಾಗಿ ರೂಪಗೊಂಡಿದ್ದು, ಅದರ ಅಂಗಾಂಗಳಲ್ಲಿ ದುಂಡುತನ ಬೆಳಕು ನೆರಳುಗಳ ಕಲ್ಪನೆಯು ಅಭಿವ್ಯಕ್ತಗೊಂಡಿದೆ. ನೀಲಿ ನಿಲುವಂಗಿ, ಸೊಂಟಪಟ್ಟಿ, ತಲೆಗೆ ಚಿತ್ರಮಯ ಪೇಟ, (ಟೊಪ್ಪಿಗೆ) ಅದಕ್ಕೆ ಪಕ್ಷಿಗಳ ತುರಾಯಿ ಹಾಗೂ ಸೊಂಟ ಪಟ್ಟಿಗೆ ಚಿಕ್ಕ ಹಾಗೂ ದೊಡ್ಡ ಕತ್ತಿಗಳು ಯುವ ರಾಜನನ್ನು ಅಲಂಕರಿಸಿವೆ. ಆಕರ್ಷಕ ದೃಢಕಾಯವನ್ನು ಹೊಂದಿರುವನು. ಮುಖ ವಿನ್ಯಾಸದಲ್ಲಿ ವಿಶಿಷ್ಟವಾದ ಗಡ್ಡ, ಚೂಪುಮೀಸೆ, ತೀಕ್ಷ್ಣವಾದ ಕಣ್ಣೋಟ ನೀಳನಾಶಿಕವನ್ನು ಬಿಂಬಿಸಲಾಗಿದೆ. ಕುದುರೆಗೆ ಚಿತ್ರವಿನ್ಯಾಸಗಳಿಂದ ಅಲಂಕೃತ ಪಟ್ಟಿಗಳನ್ನು ಸಂಯೋಜಿಸಲಾಗಿದೆ. ಹಿನ್ನೆಲೆಯಲ್ಲಿ ವಿಶಾಲವಾದ ಭೂದೃಶ್ಯ ಹಾಗೂ ಮರಗಳ ಪೊದೆಗಳನ್ನು ಸಂಯೋಜಿಸಲಾಗಿದೆ. ಆಕಾಶವು ಕೆಂಪು ಮತ್ತು ನೀಲಿ ಮಿಶ್ರಿತ ವರ್ಣಗಳಿಂದ ಲೇಪನಗೊಂಡಿದ್ದರಿಂದ ಬೆಳಗಿನ ದೃಶ್ಯವನ್ನು ಕಲ್ಪಿಸುತ್ತದೆ. ಚಿತ್ರವು ನೀಲಿ, ಕೆಂಪು, ಬಿಳಿ, ಕಂದುಗೆಂಪು ಬಣ್ಣಗಳಿಂದ ಅತ್ಯಂತ ನೈಜರೂಪದಲ್ಲಿ ಚಿತ್ರಣಗೊಂಡಿದೆ. ಈ ಚಿತ್ರವು ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಸಂಗ್ರಹಗೊಂಡಿದೆ.

**ಚಿತ್ರಸಂಖ್ಯೆ ೧೨ ಮೇಯರ ಶಂಕರದಾಸ್**

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರು ರಾಜ್ಯದ ಮೇಯರ ಆಗಿದ್ದ ಶಂಕರದಾಸರ ಭಾವಚಿತ್ರವಿದು. ಇವರು ಒಡೆಯರ ಸಮಕಾಲೀನವರಾಗಿದ್ದರು. ಇಲ್ಲಿ

ಚಿತ್ರವಿನ್ಯಾಸಗಳಿಂದ ಕೂಡಿದ ಕರಿಕೋಟು, ನೀಲಿ ಪ್ಯಾಂಟು ಮುತ್ತು ರತ್ನಗಳಿಂದ ಕೂಡಿದ ಟೊಪ್ಪಿಗೆಯನ್ನು ಚಿತ್ರಿಸಿದ್ದು ಕಂಡು ಬರುತ್ತದೆ. ಕೋಟಿನ ವಿನ್ಯಾಸದಲ್ಲಿ ತೋಳು, ಭುಜ, ಸೊಂಟ ಹಾಗೂ ಎದೆ ಮೇಲಿರುವ ಪಟ್ಟಿಗಳು ವಿಶಿಷ್ಟವಾದ ಚಿತ್ರವಿನ್ಯಾಸಗಳಿಂದ ಅಲಂಕೃತಗೊಂಡಿವೆ. ಅಲಂಕಾರಿಕ ಸರಳಗೈ ನಕ್ಷೆಗಳಿಂದ ಕೂಡಿದ್ದು ಹೊಳಪುಳ್ಳ ಮಣಿಗಳನ್ನು ಸಂಯೋಜಿಸಲಾಗಿದೆ. ಮುಖದ ವಿನ್ಯಾಸದಲ್ಲಿ ಬಾಗಿದ ಹುಬ್ಬುಗಳು ನೀಳ ಮೂಗು, ಹುರಿಮಾಡಿದ ಮೀಸೆಯು ಅವರ ವ್ಯಕ್ತಿತ್ವವನ್ನು ನಿರೂಪಿಸುತ್ತವೆ. ಬಲಗೈಯಲ್ಲಿ ಕತ್ತಿಯನ್ನು ಹಿಡಿದು ನವಿಲು ಪಕ್ಷಿಯ ಮೇಲೆ ಕುಳಿತಿರುವನು. ನವಿಲು ಚಿನ್ನದ ಕುರ್ಚಿಯಂತೆ ಬಿಂಬಿತವಾಗಿದೆ. ಆ ಪಕ್ಷಿಯ ನೈಜಕಲ್ಪನೆಯನ್ನು ತರಲಾಗಿದೆ. ಅದರ ಕೊಕ್ಕಿನಲ್ಲಿ ಹೂವಿನ ಕತ್ತಿ ಹಾಗೂ ಚಿತ್ರಿತಗೊಂಡಿದ್ದು, ರಾಜನ ಬೆನ್ನಿಗೆ ಆಸರೆಯಾಗಿದೆ. ಎಡ ಪಾರ್ಶ್ವದಲ್ಲಿ ಕತ್ತಿ ಹಾಗೂ ಗುರಾಣಿಯು ಸಂಯೋಜನೆಗೊಂಡಿದ್ದು ಅಂಚು ಚಿತ್ರಮಯವಾಗಿ ಮೂಡಿಬಂದಿದೆ. ಹಿನ್ನೆಲೆಯಲ್ಲಿ ಹೂವುದಾನಿ, ಪರದೆಗಳು ರಚನೆಗೊಂಡಿದ್ದು ಚಿತ್ರವು ತೈಲವರ್ಣದಲ್ಲಿ ಬೆಳಕು ನೆರಳಿನ ಕಲ್ಪನೆಯಿಂದ ಅಭಿವ್ಯಕ್ತಗೊಂಡಿದೆ. ಈಭಾವ ಚಿತ್ರವು ವರ್ಣಗಳಲ್ಲಿ ನೈಜತೆ ಹಾಗೂ ಅಲಂಕಾರದ ಆಶಯವನ್ನು ಹೊಂದಿದೆ.

**ಚಿತ್ರಸಂಖ್ಯೆ ೧೩ ಯುರೋಪಿಯನ್ ಅಧಿಕಾರಿ**

ಇದು ಯುರೋಪಿಯನ್ ಅಧಿಕಾರಿಯ ಭಾವಚಿತ್ರವಾಗಿದ್ದು, ಮೊಟ್ಟೆಯ ಆಕಾರದ ಸ್ಥಳಾವಕಾಶದಲ್ಲಿ ರಚನೆಗೊಂಡಿದೆ. ವಿಶಿಷ್ಟವಾದ ವೇಷಭೂಷಣಗಳಿಂದ ಕೂಡಿದ ಈ ಭಾವಚಿತ್ರವು ಆಕರ್ಷಕ ಬೆಳಕು ನೆರಳುಗಳ ಕಲ್ಪನೆಯು ಉತ್ತಮವಾಗಿ ಪ್ರಕಟಗೊಂಡಿದೆ. ಆಕರ್ಷಕ ಕೇಶವಿನ್ಯಾಸ, ಕಣ್ಣು, ಮೂಗು, ಬಾಯಿ, ಕಿವಿಗಳು ಪ್ರಮಾಣ ಬದ್ಧವಾಗಿ ರಚನೆಗೊಂಡಿದ್ದು ವರ್ಣಗಳ ಮಿಶ್ರಣವು ಅತ್ಯಂತ ನೈಜತೆಯಿಂದ ಕೂಡಿದೆ. ವೈವಿಧ್ಯಮಯ ವರ್ಣಪಟ್ಟಿಕೆಗಳಿಂದ ಅಂಗಿಯು ಸೂಕ್ಷ್ಮ ನಿರಿಗೆಗಳ ಕಲ್ಪನೆಯನ್ನು ವ್ಯಕ್ತಪಡಿಸುತ್ತದೆ. ಕತ್ತು ಹಾಗೂ ಎರಡು ಭುಜಗಳಲ್ಲಿ ಬಿಳಿವರ್ಣದ ಬಟ್ಟೆಯ ಅಲಂಕಾರವು ಆಕರ್ಷಕವಾಗಿ ಮೂಡಿಬಂದಿದೆ. ಕತ್ತಿನಲ್ಲಿ ವಿಶಿಷ್ಟವಾದ ಬಿಲ್ಲೆಗಳಿಂದ ಕೂಡಿದ ಆಭರಣಗಳು ವೈವಿಧ್ಯಮಯವಾಗಿ ಮೂಡಿಬಂದಿವೆ. ಚಿತ್ರದ ಹಿನ್ನೆಲೆಯಲ್ಲಿ ಕಂದು ಹಾಗೂ ಬಿಳಿ ವರ್ಣಗಳ ಸಂಯೋಜನೆಯು ಲೇಪನಗೊಂಡಿದ್ದು ನೈಜತೆಯಿಂದ ಕೂಡಿದೆ. ಚಿತ್ರವು ತೈಲವರ್ಣಮಾಧ್ಯಮದಲ್ಲಿ ರಚನೆಗೊಂಡಿದ್ದು, ಭಾವನಾತ್ಮಕ ನಿರೂಪಣೆಯನ್ನು ಪ್ರಕಟಪಡಿಸುತ್ತವೆ.

**ಚಿತ್ರಸಂಖ್ಯೆ ೧೪ ಯುರೋಪಿಯನ್ ಅಧಿಕಾರಿ**

ಓರ್ವ ಯುರೋಪಿಯನ್ ಅಧಿಕಾರಿಯ ಭಾವಚಿತ್ರವಿದು, ತೈಲಮಾಧ್ಯಮದಲ್ಲಿ ರೂಪಗೊಂಡಿದ್ದು, ಉತ್ತಮ ವರ್ಣವೈವಿಧ್ಯತೆಯ ನೈಜಕಲ್ಪನೆಯು ವ್ಯಕ್ತಗೊಂಡಿದೆ. ಮುಖ ಹಾಗೂ ದೇಹದ ರಚನೆಯಲ್ಲಿ ಪ್ರಾಮಾಣ್ಯತೆಯು ರಚನೆಗೊಂಡಿದೆ. ತಲೆಯ ಕೂದಲಿನ ವಿನ್ಯಾಸ, ಹುಬ್ಬು, ಕಣ್ಣು, ಮೂಗು ಹಾಗೂ ತುಟಿಗಳು, ಚಲನಾತ್ಮಕ ಪಟ್ಟಿಯು, ಭಾವನಿರೂಪಣೆಯನ್ನು ಹೊಂದಿವೆ. ಕೋಟಿನ ವಿನ್ಯಾಸ, ಕತ್ತಿನಲ್ಲಿರುವ ಬಿಳಿಯ ಪಟ್ಟಿಯು ನೈಜವರ್ಣ ವಿಧಾನದಿಂದ ಕೂಡಿದ್ದು ನಿರಿಗೆಗಳ ಕಲ್ಪನೆಯು ವ್ಯಕ್ತಗೊಂಡಿದೆ. ಕಡುನೀಲಿವರ್ಣದ ಕೋಟಿನಲ್ಲಿ ಹೂವಿನ ನಕ್ಷೆಗಳು ಸಂಯೋಜನೆಗೊಂಡಿವೆ. ಹಿನ್ನೆಲೆಯಲ್ಲಿ ಆಕಾಶವರ್ಣದ ಲೇಪನವು ಮೂಡಿಬಂದಿದ್ದು ಭಾವಚಿತ್ರವು

ಎದ್ದು ತೋರುವಂತೆ ಬಿಂಬಿತವಾಗಿದೆ. ಚಿತ್ರವು ಯಥಾದೃಷ್ಟಿ ಹಾಗೂ ಈ ಭಾವದೃಷ್ಟಿಯಿಂದ ಉತ್ತಮ ಚಿತ್ರವೆಂದು ಹೇಳಬಹುದು.

**ಚಿತ್ರಸಂಖ್ಯೆ ೧೫ ಶಿವಾಜಿ ಮಹಾರಾಜ**

ಮರಾಠ, ಪೇಶ್ವದೊರೆಯಾದ ಶಿವಾಜಿಯ ಈ ಚಿತ್ರವು ಕುದುರೆ ಏರಿ ಕೈಯಲ್ಲಿ ಖಡ್ಗವನ್ನು ಹಿಡಿದು ಸೈನಿಕರೊಂದಿಗೆ ಯುದ್ಧಕ್ಕೆ ಹೊರಟಿರುವಂತೆ ದೃಶ್ಯವನ್ನು ನಿರೂಪಿಸಲಾಗಿದೆ. ಶಿವಾಜಿ ಮಹಾರಾಜನನ್ನು ಬಿಳಿಬಣ್ಣದ ರುಮಾಲು, ಬಿಳಿಬಣ್ಣದ ಕುರ್ತಾ ಹಾಗೂ ಪೈಜಾಮಗಳನ್ನು ಚಿತ್ರಿಸಿದ್ದು ಸೊಂಟಕ್ಕೆ ಅಲಂಕೃತವಾದ ಉತ್ತರೀಯವನ್ನು ಸಂಯೋಜಿಸಲಾಗಿದೆ. ಕುರ್ತಾದ ಭುಜಗಳಲ್ಲಿ ಮುಂಗೈಗಳಲ್ಲಿ ಎದೆಯ ಮೇಲಿರುವ ಪಟ್ಟಿಗಳನ್ನು ಸೂಕ್ಷ್ಮ ರೇಖಾವಿನ್ಯಾಸದ ನಕ್ಷಾಚಿತ್ರಗಳನ್ನು ಚಿತ್ರಿಸಲಾಗಿದೆ. ಶಿವಾಜಿ ಮಹಾರಾಜನ ದೈಹಿಕ ರೂಪವು ಅತ್ಯಂತ ಚಲನೆಯಿಂದ ಕೂಡಿದ್ದು ಭಾವಾವೇಷವು ವ್ಯಕ್ತಗೊಂಡಿದೆ. ವಿಶಿಷ್ಟ ಗಡ್ಡ, ಮೀಸೆ, ಚೂಪು ಮೂಗು, ತೀಕ್ಷ್ಣಕಣ್ನೋಟಗಳಿಂದ ಮಹಾರಾಜನ ಪೌರುಷವು ಉದ್ದೀಪನಗೊಂಡಿದೆ. ಕಂದುಗೆಂಪು ಬಣ್ಣದಿಂದ ಕೂಡಿದ ಕುದುರೆಯು ಬಲಿಷ್ಠ ದೇಹಸಿರಿಯನ್ನು ಹೊಂದಿದೆ. ಅದನ್ನು ವರ್ಣಮಯ ಪಟ್ಟಿಗಳಿಂದ ಅಲಂಕರಿಸಲಾಗಿದೆ. ಕುದುರೆಯು ನೆಗೆಯುತ್ತಿರುವಂತೆ ಕಲ್ಪಿತಗೊಂಡಿದೆ. ಹಿನ್ನೆಲೆಯಲ್ಲಿ ಇತರ ಸೈನಿಕರು ಕುದುರೆಗಳನ್ನು ಏರಿ ವೇಗದಿಂದ ಯುದ್ಧಕ್ಕೆ ನಡೆಯುತ್ತಿರುವಂತೆ ಬಿಂಬಿತವಾಗಿದ್ದಾರೆ. ಇವರೆಲ್ಲರೂ ಶ್ವೇತವರ್ಣದ ವೇಷಭೂಷಣಗಳನ್ನು ಹೊಂದಿರುವರು. ಇಲ್ಲಿ ನಾಯಿಯೊಂದನ್ನು ಸಂಯೋಜಿಸಲಾಗಿದ್ದು ಚಲನಾತ್ಮಕ ಭಾವನಿರೂಪಣೆಯಿಂದ ಕೂಡಿದೆ. ಭೂದೃಶ್ಯವು ಖಡು ಕಂದುಗೆಂಪು ಬಣ್ಣದಿಂದ ಲೇಪನಗೊಂಡಿದ್ದು, ದೂರದಲ್ಲಿ ಹಸಿರು ಗಿಡ ಮರಗಳ ಪೊದೆಯನ್ನು ಚಿತ್ರಿಸಲಾಗಿದೆ. ಚಿತ್ರವು ಪಾಶ್ಚಿಮಾತ್ಯ ಚಿತ್ರಪದ್ಧತಿಯನ್ನು ಅನುಕರಿಸುತ್ತವೆ. ಚಿತ್ರವು ತೈಲವರ್ಣದ ಮಾಧ್ಯಮದಲ್ಲಿ ರಚನೆಗೊಂಡಿದೆ.

**ಚಿತ್ರಸಂಖ್ಯೆ ೧೬ ಮಸ್ತಾನಿಬೇಗಂ**

ಇಲ್ಲಿ ಕಂಡು ಬರುವ ಸ್ತ್ರೀ ಭಾವಚಿತ್ರವು ಮಹಾರಾಣಿ ಮಸ್ತಾನಿಬೇಗಂ ರದು. ಇಲ್ಲಿ ಯುವ ಮಹಾರಾಣಿಯು ಹುಕ್ಕಾವನ್ನು ಸೇದುತ್ತಾ ಚಿನ್ನದ ಕುರ್ಚಿಯ ಮೇಲೆ ಕುಳಿತಿರುವಳು. ಧೂಮ್ರಪಾನದ ನಿಸೆಯಲ್ಲಿ ಮೈಮರೆತಿರುವಂತೆ ಭಾವನಿರೂಪಣೆಯು ಕಲ್ಪಿತಗೊಂಡಿದೆ. ಚಿತ್ರಮಯವಾದ ಸಲ್ವಾರ್ ಕಮೀಜ್‌ನ್ನು ಧರಿಸಿದ್ದು, ಕೆಂಪು ಮಿಶ್ರಿತ ಹಳದಿ ವರ್ಣದ ಪೈಜಾಮವು ಪಾರದರ್ಶಕವಾದ ನಿಲುವೆಂಗಿಯ ಒಳಗೆ ಮೋಹಕವಾಗಿ ರೂಪಗೊಂಡಿದೆ. ಇಲ್ಲಿ ಕಲಾವಿದನು ಬಟ್ಟೆಯ ನೈಜತೆಯನ್ನು ಅದರ ಪಾರದರ್ಶಕತೆಯನ್ನು ತಾಳ್ಮೆಯಿಂದ ವಿನ್ಯಾಸಗೊಳಿಸಿದ್ದಾನೆ. ಇಲ್ಲಿ ಬಿಂಬಿತವಾದ ಉಡುಪುಗಳ ಒಡಲು ಹಾಗೂ ಅಂಚುಗಳನ್ನು ಸೂಕ್ಷ್ಮಚಿತ್ರವಿನ್ಯಾಸಗಳಿಂದ ಅಲಂಕರಿಸಲಾಗಿದೆ. ತಲೆಯ ಮೇಲೆ ಹೊದ್ದಿರುವ ದುಪ್ಪಟದ ವಿನ್ಯಾಸವು ಆಕರ್ಷಕವಾಗಿ ಸಂಯೋಜಿತಗೊಂಡಿದೆ. ಚಿನ್ನದ ಕುರ್ಚಿಯು ಕಲಾತ್ಮಕವಾಗಿ ರೂಪಗೊಂಡಿದ್ದು ಅದಕ್ಕೆ ವಿವಿಧ ಗಾಜಿನ ಮಣಿಗಳನ್ನು ಅಲಂಕರಿಸಲಾಗಿದೆ. ಹುಕ್ಕಾದ ರಚನೆಯು ಅಲಂಕಾರಮಯವಾಗಿ ರಚನೆಗೊಂಡಿದ್ದು, ಗಿಲ್ಡ ಮಾಡಿದ ಚಿತ್ರವಿನ್ಯಾಸವು ಈ ಚಿತ್ರದಲ್ಲಿ ಕಂಡು ಬರುತ್ತದೆ. ಅದರ ಪೈಪು ಸಹ ವಿಶಿಷ್ಟವಾಗಿ ವಿನ್ಯಾಸಗೊಂಡಿದೆ. ಮಹಾರಾಣಿಯ

ಮುಂಭಾಗದಲ್ಲಿ ಸುಗಂಧ ಪರಿಮಳದ ಖ್ಯಾದ್ಯ ತೈಲಗಳು ತುಂಬಿದ ಚಿನ್ನದ ವಸ್ತುಗಳು ಸಂಯೋಜನೆಗೊಂಡಿದ್ದು ಇವು ರಾಣಿಯ ಅರಮನೆಯಲ್ಲಿನ ವಿಲಾಸಿ ಬದುಕನ್ನು ನಿರೂಪಿಸುತ್ತವೆ. ಚಿತ್ರದ ಹಿನ್ನೆಲೆಯಲ್ಲಿ ಅರಮನೆಯ ಅಂತಪುರದ ವಾಸ್ತುವಿನ್ಯಾಸವು ಮೂಡಿಬಂದಿದ್ದು, ಕಾರಂಜಿ, ನೀರಿನ ತೊಟ್ಟಿ, ಚಿಕ್ಕ ಕಂಬಗಳಿಂದ ಕೂಡಿದ ಕಟಾಂಜನ, ಚಿತ್ರವಿನ್ಯಾಸಗಳಿಂದ ಕೂಡಿದ ವೈವಿಧ್ಯಮಯ ಹೂವಿನ ಗಿಡಗಳು, ದೂರದಲ್ಲಿ ಅಶೋಕ ವೃಕ್ಷಗಳು, ಕೆಂಬಣ್ಣ ಹೊಂದಿದ ಆಕಾಶವು ಈ ಚಿತ್ರವನ್ನು ಅತ್ಯಂತ ಸುಂದರವಾಗಿರಿಸಿವೆ. ಚಿತ್ರದಲ್ಲಿ ಸೂಕ್ಷ್ಮರೇಖೆ, ನೈಜರೀತಿಯ ವರ್ಣವೈವಿಧ್ಯತೆ ಹಾಗೂ ಭಾವನಾ ಸಂಯೋಜನೆಯು ಉತ್ತಮವಾಗಿ ಅನಾವರಣಗೊಂಡಿವೆ.

**ಚಿತ್ರಸಂಖ್ಯೆ ೧೭, ೧೮ ರಾಣಿ ಮಸ್ತಾನಿ ಬೇಗಂ**

ಈ ಎರಡು ಚಿತ್ರಗಳು ಸಹ ರಾಣಿ ಮಸ್ತಾನಿ ಬೇಗಂಳ ಭಾವನಿರೂಪಣೆಯನ್ನು ಪ್ರಕಟಿಸುತ್ತವೆ. ಎರಡೂ ಚಿತ್ರಗಳ ಆಶಯಗಳು ಒಂದೇಯಾಗಿದ್ದು ರಚನಾ ವಿಧಾನದಲ್ಲಿ ವೈವಿಧ್ಯತೆ ಕಂಡು ಬರುತ್ತದೆ. ಚಿತ್ರ ೧೭ ರಲ್ಲಿ ನಿಲುವಂಗಿ, ಪ್ಯಾಂಟನ್ನು ಧರಿಸಿದ್ದು ಸೊಂಟದಲ್ಲಿ ಸುರಳಿಸುತ್ತಿದ ವಸ್ತ್ರವಿನ್ಯಾಸವು ಚಿತ್ರವಿನ್ಯಾಸಗಳಿಂದ ಕೂಡಿದೆ. ಈ ಚಿತ್ರದಲ್ಲಿ ರಾಣಿಯು ಹೂವಿನ ಚಿತ್ತಾರವುಳ್ಳ ಕೆಂಪು ಟೊಪ್ಪಿಗೆಯನ್ನು ಧರಿಸಿದ್ದು ಎಡಗೈಯನ್ನು ಟೊಂಕದ ಮೇಲಿರಿಸಿ ಬಲಗೈಯನ್ನು ಟೊಪ್ಪಿಗೆಯನ್ನು ತೋರಿಸುತ್ತಾ ನೃತ್ಯಮಾಡುತ್ತಿರುವ ಭಂಗಿಯಲ್ಲಿ ನಿಂತಿರುವಳು. ಕಾಲಲ್ಲಿ ಗೆಜ್ಜೆ, ಕೈಗಳಲ್ಲಿ ಗೆಜ್ಜೆಗಳನ್ನು ಧರಿಸಿದ್ದು ಚಿತ್ರವಿನ್ಯಾಸಗಳಿಂದ ಕೂಡಿವೆ. ನೀಲಿಯ ಉತ್ತರೀಯವು ಬಲಭುಜದ ಮೇಲಿಂದ ಸೊಂಟದತನಕ ಬಂದು ಅದನ್ನು ಬಿಗಿಯಾಗಿ ಕಟ್ಟಲಾಗಿದೆ. ಅದರ ಎರಡು ತುದಿಗಳು ಗಾಳಿಯಲ್ಲಿ ತೂರಿವೆ. ಕಿವಿ ಹಾಗೂ ಕತ್ತುಗಳಲ್ಲಿ ಮುತ್ತು ಹಾಗೂ ಚಿನ್ನದ ಆಭರಣಗಳನ್ನು ಅಲಂಕರಿಸಲಾಗಿದೆ. ಹಿನ್ನೆಲೆಯಲ್ಲಿ ಬಿಳಿವರ್ಣದ ಭಿತ್ತಿ ಹಾಗೂ ಅದಕ್ಕೆ ಚಿತ್ರವಿನ್ಯಾಸದ ಅಡ್ಡ ಪಟ್ಟಿಯನ್ನು ರಚಿಸಲಾಗಿದೆ. ಕೆಂಪು ನೆಲಹಾಸು ರೂಪಗೊಂಡಿದ್ದು, ತೈಲವರ್ಣಮಾಧ್ಯಮದಲ್ಲಿ ನೈಜ ವಿವರಣೆಯು ಚಿತ್ರದಲ್ಲಿ ಮೂಡಿಬಂದಿದೆ.

ಚಿತ್ರಸಂಖ್ಯೆ ೧೮ ಈ ಚಿತ್ರವು ಚಿತ್ರ ೧೭ ರಂತೆ ಮೂಡಿಬಂದಿದ್ದರೂ ಎದುರು ಮುಖಭಾವವನ್ನು ಇಲ್ಲಿ ಬಿಂಬಿಸಲಾಗಿದೆ. ಇಲ್ಲಿ ಮುಂಗೈತನಕವಿರುವ ರವಿಕೆ, ಬಣ್ಣದ ಪಟ್ಟಿ ಪಟ್ಟಿಗಳಿಂದ ಕೂಡಿದ ಗಗ್ಗರದ ಚಿತ್ರವು ಗುಜರಾತದ ಸಂಸ್ಕೃತಿಯನ್ನು ಅನುಕರಿಸುತ್ತದೆ. ಹೂವಿನ ನಕ್ಷೆಗಳು, ಗಾಜಿನ ಮಣಿಗಳ ಅಲಂಕರಣ, ಮಣಿಕಟ್ಟು, ರಟ್ಟೆ, ಕಿವಿ, ಕಾಲುಗಳಲ್ಲಿರುವ ಆಭರಣಗಳ ವಿನ್ಯಾಸವು ವೈಶಿಷ್ಟ್ಯಪೂರ್ಣವಾಗಿ ಮೂಡಿಬಂದಿವೆ. ಇವಳು ಧರಿಸಿದ ಪೈಜಾಮವು ಕೆಂಪು ಬಣ್ಣದಿಂದ ಕೂಡಿದೆ. ಕೇಶವಿನ್ಯಾಸವೂ ಮುಡಿಯಿಂದ ಕೂಡಿದೆ. ಸ್ವತಂತ್ರವಾಗಿ ಬಿಟ್ಟಿದ್ದರಿಂದ ಭುಜದ ಹಿಂದೆ ಬಿದ್ದಿವೆ. ನೆಲಹಾಸು ನೈಸರ್ಗಿಕ ನಕ್ಷೆಗಳಿಂದ ಕೂಡಿದ್ದು ಕೆಂಪು ವರ್ಣದ ಲೇಪನ ಲೇಪನಗೊಂಡಿದೆ. ಹಿನ್ನೆಲೆಯಲ್ಲಿ ಖಡು ನೀಲಿಬಣ್ಣದ ಆಕಾಶವು ಬಿಂಬಿತವಾಗಿದ್ದು ದೂರದಲ್ಲಿ ಗಿಡ ಮರಗಳ ಪೊದೆಯು ರಚನೆಗೊಂಡಿದೆ. ಈ ಚಿತ್ರದಲ್ಲಿಯೂ ಸಹ ನೃತ್ಯಭಂಗಿಯ ಕಲ್ಪನೆ ಬಿಂಬಿತವಾಗಿದೆ. ಎರಡೂಚಿತ್ರಗಳನ್ನು ವಿದೇಶಿ ಕಲಾವಿದರು ರಚನೆ ಮಾಡಿರುವರು. ಚಿತ್ರಸಂಖ್ಯೆ ೧೭ ಮೈಸೂರು ಜಗನ್ಮೋಹನ ಅರಮನೆಯಲ್ಲಿ ಲಭ್ಯವಿದ್ದರೆ ಚಿತ್ರ ೧೮ ಬಾಗಲಕೋಟೆಯ ಶ್ರೀ ಮಹೇಂದ್ರ

ಸರಾಫ್‌ರ ಮನೆಯಲ್ಲಿ ಸಂಗ್ರಹವಿದೆ. ಇವು ೧೯ ನೆಯ ಶತಮಾನಕ್ಕೆ ಸಂಬಂಧಿಸಿದ ವರ್ಣಚಿತ್ರಗಳಾಗಿವೆ.

**ಬ. ಐತಿಹಾಸಿಕ ಘಟನೆಯ ಚಿತ್ರಗಳು**

ಗಾಜಿನ ಚಿತ್ರಕಾರರು ಇತಿಹಾಸದ ಕೆಲವು ಘಟನೆಗಳನ್ನು ಗಾಜಿನ ಮೇಲೆ ಚಿತ್ರರೂಪದಲ್ಲಿ ರಚನೆ ಮಾಡಿದ್ದಾರೆ. ಈ ದೃಶ್ಯ ಚಿತ್ರಗಳಲ್ಲಿ ಯುದ್ಧ ಸನ್ನಿವೇಶಗಳು, ಸಭೆ ಸಮಾರಂಭಗಳು ಹಾಗೂ ಇತರೆ ರಾಜಕೀಯ ಚಟುವಟಿಕೆಗಳನ್ನು ನಿರೂಪಿಸುವ ವಿಷಯಗಳು ವ್ಯಕ್ತಗೊಂಡಿವೆ. ಈ ಚಿತ್ರಗಳು ಸಂಯೋಜನಾ ರೂಪದಲ್ಲಿ ಚಿತ್ರಿತಗೊಂಡಿದ್ದು, ಪಾಶ್ಚಿಮಾತ್ಯ ಕಲಾವಿದರಿಂದ ರೂಪಿಸಲ್ಪಟ್ಟಿವೆ. ಇಲ್ಲಿ ದೊರೆತಿರುವ ಗಾಜಿನ ಚಿತ್ರಗಳು ಟಿಪ್ಪುಸುಲ್ತಾನ ರಾಜಕೀಯ ಜೀವನಕ್ಕೆ ಸಂಬಂಧಿಸಿವೆ. ಈ ರೀತಿಯ ಘಟನೆಗಳನ್ನು ತೋರಿಸಿಕೊಡುವ ಹಲವಾರು ಚಿತ್ರಗಳು ರೂಪಗೊಂಡಿರಬಹುದು. ಆದರೆ ನನಗೆ ಇಲ್ಲಿ ೩ ಚಿತ್ರಗಳು ಉಪಲಬ್ಧ ಇವೆ ಅವುಗಳನ್ನು ಇಲ್ಲ ವಿವೇಚಿಸಲಾಗಿದೆ.

**ಚಿತ್ರಸಂಖ್ಯೆ ೦೧ ಟಿಪ್ಪುವಿನ ಮಕ್ಕಳಾದ ಅಬ್ದುಲ್ ಖಲಾಕ್ ಮತ್ತು ಮಯಿಜ್-ಉದ್-ದೀನ್‌ರನ್ನು ಒತ್ತೇಯಾಳಾಗಿ ಕಳುಹಿಸುತ್ತಿರುವ ಮನೋದೃಶ್ಯ**

ಮೂರನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಸೋತ ಟಿಪ್ಪು ಯುದ್ಧನಷ್ಟ ಪರಿಹಾರವಾಗಿ ಮೂರುಕೋಟಿ ಮುವತ್ತು ಲಕ್ಷ ರೂಪಾಯಿಗಳನ್ನು ಬ್ರೀಟಿಷರಿಗೆ ಕೊಡುವವರೆಗೆ ತನ್ನ ಇಬ್ಬರು ಕಿರಿಯ ಪುತ್ರರಾದ 'ಅಬ್ದುಲ್ ಖಲಾಕ್ ಮತ್ತು ಮಯಿಜ್-ಉದ್-ದೀನ್‌ರನ್ನು'[೧೪] ಒತ್ತೆಯಳಾಗಿ ಕಳುಹಿಸುತ್ತಿರುವ ಮನೋದೃಶ್ಯವು ಈ ಚಿತ್ರದಲ್ಲಿ ಮೂಡಿಬಂದಿದೆ. ಇಲ್ಲಿ ರೂಪಗೊಂಡಿರುವ ಎಲ್ಲ ವ್ಯವಕ್ತಿಗಳು ತುಂಬುತೋಳಿನ ದೊಗಳೆಯ ನಿಲುವಂಗಿಗಳನ್ನು ಧರಿಸಿದ್ದಾರೆ. ಬಿಗಿಯಾದ ಪೈಜಾಮುಗಳನ್ನು ಧರಿಸಿದ್ದಾರೆ. ವಿಶಿಷ್ಟವಾದ ದೊಡ್ಡ ದೊಡ್ಡ ಪೇಟಗಳನ್ನು (ರುಮಾಲು) ಧರಿಸಿದ್ದು, ಅವುಗಳನ್ನು ಮೃದುತುಪ್ಪಳದ ತುರಾಯಿಗಳಿಂದ ಅಲಂಕರಿಸಿದ್ದಾರೆ. ಬಟ್ಟೆಯ ನಿರಿಗೆಗಳು, ಚಲನೆಯುಕ್ತ ದೇಹಗಳು, ಭಾವನಾಯುಕ್ತ ಮುಖಚರ್ಯೆಗಳು ಅತ್ಯಂತ ನೈಜರೂಪದಲ್ಲಿ ಮೂಡಿಬಂದಿವೆ.

ಟಿಪ್ಪುವಿನ ಒಬ್ಬ ಮಗನನ್ನು ಅಪ್ಪಿಕೊಂಡು ಮುದ್ದಿಸುವದು. ಇನ್ನೊಬ್ಬ ಪುತ್ರನನ್ನು ಬರಸೆಳೆಯುತ್ತಿರುವ ವ್ಯಕ್ತಿಗಳು ಚಿತ್ರಿತಗೊಂಡಿದ್ದು ಅವರಲ್ಲಿ ದುಃಖದ ಮಡುವು ತುಂಬಿರುವಂತೆ ಕಲಾವಿದನು ಚಿತ್ರಿಸಿದ್ದಾನೆ. ಮಕ್ಕಳ ಮುಖಭಾವನೆಯಲ್ಲಿ ಮುಗ್ಧತೆಯೂ ಒಡಮೂಡಿದೆ. ಉಡುಗೆ ತೊಡುಗೆ ಹಾಗೂ ಅಂಗಾಂಗ ರಚನೆಯಲ್ಲಿ ಬೆಳಕು ನೆರಳುಗಳ ವರ್ಣಕಲ್ಪನೆಯು ಅತ್ಯಂತ ನೈಜವಾಗಿ ರೂಪಗೊಂಡಿದೆ. ಅಲಂಕಾರ ಪ್ರಜ್ಞೆಗಿಂತ ಆ ಸನ್ನಿವೇಶದ ವಾಸ್ತವಪ್ರಜ್ಞೆಯು ಹೃದಯವಿದ್ರಾವಕವಾಗಿ ಮೂಡಿಬರುವಂತೆ ಕಲಾವಿದನು ಚಿತ್ರ ಸಂಯೋಜನೆ ಮಾಡಿದ್ದಾನೆ. ಚಿತ್ರವು ವರ್ಣ, ಭಾವ, ಯಥಾದರ್ಶನ, ಸೌಂದರ್ಯಪ್ರಜ್ಞೆಯಿಂದ ಪ್ರಕಟಗೊಂಡಿದೆ.

---

೧೪ ಪ್ರೊ. ಶಿವರಾಮಯ್ಯ : ಸಾಹಿತಿ-ಕಲಾವಿದರ ಕಣ್ಣಲ್ಲಿ ಟಿಪ್ಪು ಪುಟ ೩೭

**ಚಿತ್ರಸಂಖ್ಯೆ ೦೨ ನೆಪೋಲಿಯನ್ ಬರ್ಲಿನ್ ನಗರವನ್ನು ಪ್ರವೇಶಿಸುತ್ತಿರುವುದು.**

ಈ ಚಿತ್ರದೃಶ್ಯವು ಕೈರೋದ ದೊರೆ ನೆಪೊಲಿಯನ್‌ನು ಬರ್ಲಿನ ನಗರವನ್ನು ಪ್ರವೇಶ ಮಾಡುತ್ತಿರುವ ದೃಶ್ಯವಾಗಿದೆ. ಜರ್ಮನಿಯ ಬರ್ಲಿನ ನಗರವು ಅಂದಿನ ವಾಣಿಜ್ಯ ಕೇಂದ್ರವಾಗಿತ್ತು. ಈ ನಗರಕ್ಕೆ ತನ್ನ ಸಹಚರರೊಂದಿಗೆ ಪ್ರವೇಶ ಮಾಡುತ್ತಿರುವುದನ್ನು ಗಾಜಿನ ಕಲಾವಿದರು ಅತ್ಯಂತ ನೈಜರೂಪದಲ್ಲಿ ವಿನ್ಯಾಸಗೊಳಿಸಿದ್ದಾರೆ. ಈ ಚಿತ್ರದಲ್ಲಿ ಬರ್ಲಿನ ನಗರದ ಬೃಹತ ಕಟ್ಟಡಗಳ ದೃಶ್ಯವು ಅತ್ಯಂತ ಸುಂದರವಾಗಿ ಮೂಡಿಬಂದಿದೆ. ಕಂಬಗಳ ವಿನ್ಯಾಸ, ಗೋಡೆ, ಮೆಟ್ಟಲು, ಛಾವಣಿಗಳು, ಗುಮ್ಮಟಗಳು ಯಥಾದೃಶ್ಯರೂಪವಾಗಿ ಮೂಡಿಬಂದಿವೆ. ಇಲ್ಲಿ ವರ್ಣ.ವೈವಿಧ್ಯತೆಯ ರಚನಾವಿಧಾನದಿಂದ ಚಿತ್ರವು ತ್ರಿಕರಣ ರೂಪಕಲ್ಪನೆಯು ನೈಜವಾಗಿ ಪ್ರಕಟಗೊಂಡಿದೆ. ಬೃಹತ್ ಕಟ್ಟಡಗಳ ಮಧ್ಯವಿಶಾಲ ಬೀದಿಗಳು, ಬೀದಿಯಲ್ಲಿ ಕಾಲ್ದಳ ಸೈನಿಕರ ಕವಾಯತ್ ಹಾಗೂ ಅಶ್ವದಳದವರು ಅತ್ಯಂತ ಚಲನೆಯುಕ್ತವಾಗಿ ರಚನೆಗೊಂಡಿದ್ದಾರೆ. ಜೊತೆಗೆ ನಗರದ ನಾಗರಿಕರು ನಗರಕ್ಕೆ ಆಗಮಿಸುತ್ತಿರುವ ನೆಪೋಲಿಯನ್ ಪಡೆಯನ್ನು ಕುತೂಹಲದಿಂದ ವಿಕ್ಷಿಸುತ್ತಿರುವಂತೆ ಸಂಯೋಜಿತಗೊಂಡಿದ್ದಾರೆ.

ಪ್ರಕೃತಿಯ ಹಿನ್ನೆಲೆಯಲ್ಲಿ ಕೆಂಬಣ್ಣದಿಂದ ಕೂಡಿದ ಆಕಾಶವು ಮಂದಬೆಳಕು ನಗರದ ಕಟ್ಟಡ ಹಾಗೂ ನಾಗರಿಕರ ಮೇಲೆ ಹರಡಿದೆ. ಎಲ್ಲವೂ ಕೆಂಪು ವ'ಂಂ'ಂವಾಗಿ ಕಾಣುವಂತೆ ಕಲಾವಿದನು ಈ ಚಿತ್ರದಲ್ಲಿ ಕಲ್ಪಿಸಿದ್ದಾನೆ. ಚಿತ್ರದಲ್ಲಿ ಬೃಹತ್ ಕಟ್ಟಡಗಳ ವಾಸ್ತುವಿನ್ಯಾಸವು, ಅಸಂಖ್ಯಾತ ಸೈನಿಕರು, ನಗರದ ನಾಗರಿಕರು, ವಿಶಾಲ ಬೀದಿಗಳು ಅತ್ಯಂತ ಯೋಜನಾಬದ್ಧವಾಗಿ ಮೂಡಿಬಂದಿವೆ. ವರ್ಣ ಹಾಗೂ ಯಥಾದೃಷ್ಠಿರೂಪವು ಸುಂದರವಾಗಿ ನಿರೂಪಿತಗೊಂಡಿದೆ. ಕೆಂಪು, ಬಿಳಿ, ಕಪ್ಪು, ನೀಲಿ, ಕಂದುಗೆಂಪು ವರ್ಣಗಳ ಮಿಶ್ರಣವು ಪ್ರಧಾನವಾಗಿ ಬಳಕೆಗೊಂಡಿವೆ.

**ಚಿತ್ರಸಂಖ್ಯೆ ೦೩. ಫ್ರೆಂಚ್ ಸಂಸತ್ತು**

ಈ ದೃಶ್ಯವು ಫ್ರೆಂಚರ ರಾಜನೀತಿಯ ಪ್ರಮುಖ ಮುಖಂಡರು ಚರ್ಚಿಸುವ ಸಂಸತ್ತನ್ನು ನಿರೂಪಿಸುತ್ತದೆ. ಸಂಸತ್ ಸದನ ಕಟ್ಟಡದ ಒಳನೋಟವು ದೊಡ್ಡ ದೊಡ್ಡ ಕಂಬಗಳಿಂದ, ಸಂಸದರ ವೇದಿಕೆಗಳು, ನಾಗರಿಕರ ವೇದಿಕೆಗಳು, ಹಜಾರಗಳು, ಅರ್ಧಚಂದ್ರಾಕಾರವಾಗಿ ಬಾಗಿದ ಮೇಲ್ಛೆತ್ತು ಅತ್ಯಂತ ಸುಂದರವಾಗಿ ಮೂಡಿಬಂದಿವೆ. ಬೃಹತ್ ಕಟ್ಟಡದ ಕಲ್ಪನೆಯು ಈ ಚಿತ್ರದಲ್ಲಿ ವ್ಯಕ್ತಗೊಂಡಿದ್ದು, ಬೆಳಕು ನೆರಳುಗಳ ವರ್ಣಕಲ್ಪನೆಯು ತ್ರಿಆಯಾಮ ರೂಪದಲ್ಲಿ ಬಿಂಬಿತವಾಗಿದೆ. ಕುಂಚ ಹಾಗೂ ವರ್ಣದ ನೈಜತೆಯು ಅತ್ಯಂತ ತಾಳ್ಮೆಯಿಂದ ಕೂಡಿದೆ. ಇಲ್ಲಿ ನೂರಾರು ವ್ಯಕ್ತಿಗಳು ಸೇರಿ ಚರ್ಚೆಯಲ್ಲಿ ತೊಡಗಿರುವಂತೆ ಕಲಾವಿದನು ಯಥಾದೃಷ್ಟಿರೂಪದಲ್ಲಿ ಸಂಯೋಜಿಸಿದ್ದಾನೆ. ಹಿನ್ನೆಲೆ ಹಾಗೂ ಮುನ್ನೆಲೆಯನ್ನು ಸಾಂದರ್ಭಿಕವಾಗಿ ದೃಷ್ಟಿರೂಪವನ್ನು ಹರಿಸಿದ್ದಾನೆ. ಚಿತ್ರದಲ್ಲಿ ವರ್ಣ ಹಾಗೂ ವಿಷಯ ಸಂಯೋಜನೆಯು ಅತ್ಯಂತ ನೈಜವಾಗಿ ಬಿಂಬಿತವಾಗಿದೆ.

## ೦೩. ಗಾಜಿನ ಮೇಲಿನ ನಿಸರ್ಗ ದೃಶ್ಯದ ಚಿತ್ರಗಳು

ನಿಸರ್ಗವೆಂದರೆ ತಕ್ಷಣ ಗೋಚರವಾಗುವುದು ತನ್ನ ಸುತ್ತಮುತ್ತಲಿನಲ್ಲಿ ಕಂಡುಬರುವ ಸಸ್ಯ ಸಂಪತ್ತು, ಪ್ರಾಣಿ ಸಂಪತ್ತು, ಪಕ್ಷಿ ಸಂಪತ್ತು, ಹಳ್ಳಕೊಳ್ಳಗಳ ಸಂಪತ್ತು, ಬೆಟ್ಟಗುಡ್ಡಗಳ ಸಂಪತ್ತು ಎಂದು ಹೇಳಬಹುದು. ಈ ಎಲ್ಲ ಸಂಪತ್ತು ಸಂಪದ್ಭರಿತವಾಗಿದ್ದರೆ, ಅದುವೇ ಸೌಂದರ್ಯವಾಗುತ್ತದೆ. ಇವನ್ನು ಪ್ರತಿಯೊಬ್ಬ ಮನುಷ್ಯನು ನೋಡಿ ಆನಂದ ಪಡುತ್ತಾನೆ. ಅಷ್ಟೇ ಅಲ್ಲದೇ ಅದನ್ನು ಕೊಂಡಾಡುತ್ತಾನೆ. ಇವು ಪ್ರಕೃತಿಯಲ್ಲಿ ಕಂಡುಬರುತ್ತವೆ. ಶಬ್ದಮಾಧ್ಯಮ, ಶಿಲ್ಪಮಾಧ್ಯಮ ಹಾಗೂ ಚಿತ್ರಮಾಧ್ಯಮಗಳಲ್ಲಿ ಪ್ರತಿಯೊಬ್ಬ ಸಹೃದಯನು ತನ್ನ ಭಾವನೆಗಳನ್ನು ಹಂಚಿಕೊಳ್ಳಲು ಪ್ರಯತ್ನಿಸುತ್ತಾನೆ.

ಚಿತ್ರಕಲಾವಿದನಾದವನು ರೇಖೆ ಹಾಗೂ ವರ್ಣಗಳನ್ನು ಬಳಸಿಕೊಂಡು ಕಾಗದ, ಬಟ್ಟೆ, ಭಿತ್ತಿ, ಕಲ್ಲು, ಚರ್ಮ, ತಾಳೆಗರಿ, ಲೋಹ, ಗಾಜುಗಳಂತಹ ಫಲಕಗಳ ಮೇಲೆ ಪ್ರಕೃತಿಯ ರಮ್ಯ ನೋಟವನ್ನು ಚಿತ್ರಿಸುತ್ತಾನೆ. ಇದನ್ನು ಪ್ರಾಚೀನ ಮಾನವನಿಂದ ಹಿಡಿದು ಇಂದಿನ ತನಕವು ಚಿತ್ರಿಸಿರುವುದನ್ನು ಅನೇಕ ದಾಖಲೆಗಳ ಮೂಲಕ ತಿಳಿಯುತ್ತವೆ. ಪ್ರಕೃತಿಯನ್ನು ವಿವಿಧ ರೂಪವಾಗಿ ಅದರ ಸೌಂದರ್ಯವನ್ನು ಪ್ರತ್ಯೇಕವಾಗಿ ಸೆರೆಹಿಡಿಯುವ ವೃತ್ತಿಪರ ಕಲಾವಿದರು ನಮ್ಮಲ್ಲಿ ಅನೇಕರಿದ್ದಾರೆ. ಪ್ರಕೃತಿ ಎಂದರೆ ಯಾರಿಗೆ ತಾನೇ ಇಷ್ಟವಾಗುವುದಿಲ್ಲ. ನಾವು ಸುಂದರವಾಗಿ ಕಾಣಬೇಕಾದರೆ ನಮ್ಮ ಸುತ್ತಲಿನ ಪ್ರಕೃತಿಯನ್ನು ಸುಂದರವಾಗಿಡಬೇಕು.

ಇಲ್ಲಿ ಗಾಜಿನ ಮೇಲಿನ ಕಲಾವಿದರು ಪ್ರಕೃತಿಯಲ್ಲಿ ಕಂಡುಬರುವ ಸಸ್ಯಗಳು, ಮರಗಳು, ನದಿ, ಸರೋವರಗಳು, ಬೆಟ್ಟಗಳು, ವಾಸಿಸುವ ಮನೆಮಂದಿರಗಳ ಹಾಗೂ ಸಾರ್ವಜನಿಕ ಕಟ್ಟಡಗಳನ್ನು ಸೆರೆಹಿಡಿದಿದ್ದಾರೆ. ಇಂಥ ಚಿತ್ರಗಳು ಕರ್ನಾಟಕದ ವಿವಿಧ ಭಾಗಗಳಲ್ಲಿ ಕಂಡು ಬರುತ್ತವೆ. ಚಿತ್ರಿತಗೊಂಡಿರುವ ಪ್ರಕೃತಿಚಿತ್ರಗಳು ಕೆಲವು ತೂಗುಹಾಕುವ ಚಿತ್ರಗಳಾಗಿದ್ದರೆ ಕೆಲವು ಉಪಯೋಗಿಕ ವಸ್ತುಗಳಲ್ಲಿ ಅಳವಡಿಸಿದ ಗಾಜಿನ ಮೇಲಿನ ಚಿತ್ರಗಳಾಗಿವೆ. ಇವು ರೇಖಾ ಪ್ರಧಾನವಾಗಿದ್ದು, ವರ್ಣಗಳ ಮಿಶ್ರಣದಿಂದ ನೆರಳು, ಬೆಳಕುಗಳ ನೈಜಕಲ್ಪನೆಯನ್ನು ಹೊಂದಿವೆ. ಕಲಾವಿದರು ತಾವು ಕಂಡಂತೆ ಪ್ರಕೃತಿಯ ರಮ್ಯನೋಟವನ್ನು ಅತ್ಯಂತ ಸುಂದರವಾಗಿ ರಚಿಸಲು ಪ್ರಯತ್ನಿಸಿದ್ದಾರೆ. ನನಗೆ ಇಲ್ಲಿ ಲಭ್ಯವಾದ ಕೆಲವು ಚಿತ್ರಗಳನ್ನು ಕುರಿತು ವಿವೇಚನೆ ಮಾಡುತ್ತೇನೆ.

**ಚಿತ್ರಸಂಖ್ಯೆ ೦೧ ಸುಂದರ ಜಲಪಾತ**

ಈ ನಿಸರ್ಗ ದೃಶ್ಯಚಿತ್ರವು ೩೦ x ೬೦ ಸೆಂ.ಮೀ ಅಳತೆಯನ್ನು ಹೊಂದಿದೆ. ಇಲ್ಲಿ ಬೆಟ್ಟವನ್ನು ಕೊರೆದು ಮೇಲಿನಿಂದ ನೀರು ಬೋರ್ಗರೆಯುತ್ತಿರುವಂತೆ ಕಲಾವಿದನು ಚಿತ್ರಿಸಿದ್ದು, ನೀರಿನ ರಭಸತೆ, ಕಂದಕದಿಂದ ಹರಿಯುವ ನೀರಿನ ಶಾಂತತೆ ಹಾಗೂ ಕಂದಕದ ಎರಡು ಬದಿಯಲ್ಲಿ ವರ್ಣಮಯ ಗಿಡಮರಗಳು ಸುಂದರವಾಗಿ ರೂಪಗೊಂಡಿವೆ. ಆಧುನಿಕತೆಯ ರಚನಾ ಶೈಲಿಯನ್ನು ಅನುಸರಿಸಿ ಪ್ರಕೃತಿಯ ನೈಜ ವಿವರಣೆಯನ್ನು ತರಲು ಪ್ರಯತ್ನಿಸಿದ್ದಾನೆ. ಬೆಟ್ಟದ ಎರಡೂ ಬದಿಗಳ ತುದಿಯಲ್ಲಿ ಎತ್ತರವಾದ ನಾಲ್ಕು ಅಶೋಕ ವೃಕ್ಷಗಳು ಈ ಪ್ರಕೃತಿ ಚಿತ್ರವನ್ನು ಸುಂದರಮಯಗೊಳಿಸಿದೆ. ಭೂದೃಶ್ಯದ ಪರಿಳಿತವನ್ನು, ಗಿಡ ಮರಗಳ ನೆರಳನ್ನು ಮತ್ತು ಬೆಳಕನ್ನು

ವಿವರವಾಗಿ ಪ್ರಕಟಪಡಿಸಲಾಗಿದೆ. ಹಿನ್ನೆಲೆಯಲ್ಲಿ ಬೆಟ್ಟದ ಸಾಲು ಅದರ ಮಧ್ಯೆ ಸರೋವರದ ಉತ್ತಮ ಕಲ್ಪನೆಯು ವ್ಯಕ್ತಗೊಂಡಿದೆ. ಶುಭ್ರವಾದ ಆಕಾಶ, ಮುಂಜಾನೆಯ ಸುರ್ಯೋದಯದ ಪ್ರಕಾಶಮಾನದ ಬೆಳಕು ಪ್ರಕೃತಿಯನ್ನು ಇನ್ನಷ್ಟು ಸುಂದರವಾಗಿ ಕಾಣುವಂತೆ ಅಭಿವ್ಯಕ್ತಗೊಂಡಿದೆ. ಇಲ್ಲಿ ಪ್ರಾಥಮಿಕ ವರ್ಣಗಳಾದ ನೀಲಿ, ಹಳದಿ, ಕೆಂಪು, ಹಸಿರು, ಕಪ್ಪು, ಬಿಳಿ ವರ್ಣಗಳ ಸಂಯೋಜನೆಯ ಪ್ರಖರತೆಯಿಂದ ಚಿತ್ರವು ಆಕರ್ಷಕವಾಗಿ ರಚನೆಗೊಂಡಿದೆ. ತೈಲವರ್ಣಗಳನ್ನು ಬಳಸಿರುವುದರಿಂದ ವರ್ಣಗಳ ಮಿಶ್ರಣ ಮಾಡುವಿಕೆಯಲ್ಲಿ ನೈಜತೆಯನ್ನು ತರಲಾಗಿದೆ. ಚಿತ್ರವು ರೇಖೆರಹಿತವಾಗಿದ್ದು, ವರ್ಣ ಸಂಯೋಜನೆ, ಯಥಾದೃಷ್ಟಿ ರೂಪ ಹಾಗೂ ವಸ್ತುಗಳ ಹೊಂದಾಣಿಕೆಯು ಕಲಾತ್ಮಕವಾಗಿ ಮೂಡಿಬಂದಿದೆ ಎನ್ನಬಹುದು.

**ಚಿತ್ರಸಂಖ್ಯೆ ೦೨ ಸರೋವರ ಮತ್ತು ಬಂಗಲೆ**

ಈ ಚಿತ್ರದಲ್ಲಿ ಸುಂದರವಾದ ಸರೋವರ, ಮಣ್ಣಿನ ರಸ್ತೆ, ರಸ್ತೆಯ ಎರಡೂ ಬದಿಯಲ್ಲಿ ಹೂವಿನ ಗಿಡಗಳ ಪೊದೆಗಳು, ದೂರದಲ್ಲಿ ಭವ್ಯವಾದ ಬಂಗಲೆ, ರಸ್ತೆಯ ಎಡಬದಿಯಲ್ಲಿ ಎರಡು ತೆಂಗಿನ ಮರಗಳು, ಸರೋವರದಲ್ಲಿ ಚಿಕ್ಕಬೋಟು, ದೂರದಲ್ಲಿ ಒಂದು ಬೋಟು, ಬೆಟ್ಟ ಹಾಗೂ ಹಸಿರು ಮರಗಳ ಪೊದೆಗಳು ಸಂಯೋಜಿತಗೊಂಡಿವೆ. ಕಲಾವಿದನು ನೀಲಿ ವರ್ಣ ಸಂಯೋಜನೆಯ ಮಾಡುವುದರ ಮೂಲಕ ಸರೋವರದ ವಿಶಾಲತೆಯನ್ನು ಹಾಗೂ ಅದರ ಆಳವನ್ನು ಚಿಕ್ಕಬೋಟುಗಳನ್ನು ತೋರಿಸುವದರ ಮೂಲಕ ಪ್ರಯತ್ನಿಸಿದ್ದಾನೆ. ರಸ್ತೆ ಬದಿಯಲ್ಲಿ ಬಿಂಬಿತವಾದ ಹೂವಿನ ಗಿಡಮರಗಳ ಸಾಲು ಬೆಳಕು ನೆರಳುಗಳ ವೈವಿಧ್ಯತೆಯಿಂದ ಅವುಗಳ ಲವಲವಿಕೆಯನ್ನು ತೋರಿಸಲು ಯತ್ನಿಸಿದ್ದಾನೆ. ಪೊದೆಗಳ ನಿರ್ದಿಷ್ಟತೆಯನ್ನು ಅವುಗಳ ದೂರ ಅಂತರವನ್ನು ತೋರಿಸಲು ಕಲಾವಿದನು ಪ್ರಯತ್ನಿಸಿರುವನು. ರಸ್ತೆಯಲ್ಲಿರುವ ಏರಿಳಿತ ಹಾಗೂ ಮಣ್ಣಿನ ವಾಸ್ತವತೆಯನ್ನು ತೋರಿಸಲಾಗಿದೆ. ದೂರದಲ್ಲಿ ಬಂಗಲೆಯ ಕಲ್ಪನೆಯು ಬೃಹತ್ ವಾಸ್ತುಶಿಲ್ಪವನ್ನು ನೆನಪಿಸುತ್ತದೆ. ಹಾಗೂ ಅದರ ಸುಂದರತೆಯನ್ನು ರೇಖೆ ಹಾಗೂ ವರ್ಣಗಳಿಂದ ಉತ್ತಮವಾಗಿ ಬಿಂಬಿಸಲಾಗಿದೆ. ತೆಂಗಿನ ಮರಗಳ ಸಂಯೋಜನೆಯು ಹಸಿರು ವರ್ಣದ ಗರಿಗಳಿಂದ ಬಿಂಬಿತವಾಗಿದ್ದು, ಅವುಗಳ ನೆರಳುಬೆಳಕಿನ ವೈವಿಧ್ಯತೆ ಗರಿಗಳ ತಾಜಾತನ ಹಾಗೂ ಕಾಂಡಗಳ ವಾಸ್ತವ ಕಲ್ಪನೆಯು ಉತ್ತಮವಾಗಿ ರೂಪಗೊಂಡಿದೆ, ಜೊತೆಗೆ ಮುಂಜಾನೆಯ ಸೂರ್ಯ ರಶ್ಮಿಯಿಂದ ಕೂಡಿದ ಶುಭ್ರವಾದ ಬೆಳಕು ಪ್ರಕೃತಿಚಿತ್ರವನ್ನು ಆವರಿಸಿದೆ. ತಿಳಿನೀಲಿ, ಗುಲಾಬಿ, ಹಳದಿ ಮಿಶ್ರಿತ ಶುಭ್ರವಾದ ಆಕಾಶದ ನಡುವೆ ಸೂರ್ಯನ ಚಿತ್ರವು ಸಂಯೋಜನೆಗೊಂಡಿದೆ. ಚಿತ್ರವು ಹಸಿರು, ಕೆಂಪು, ಕಂದುಗೆಂಪು, ಬಿಳಿ, ಹಳದಿ ಹಾಗೂ ಕಪ್ಪು ವರ್ಣಗಳ ಮಿಶ್ರಣದ ಸಂಯೋಜನೆಯಿಂದ ಕೂಡಿದ್ದು, ಉತ್ತಮ ಯಥಾದೃಷ್ಟಿರೂಪವನ್ನು ಹೊಂದಿದೆ. ಈ ಚಿತ್ರವ ೩೦ x ೬೦ ಸೆಂ.ಮೀ ಅಳತೆಯನ್ನು ಹೊಂದಿದೆ.

**ಚಿತ್ರಸಂಖ್ಯೆ ೦೩ ನಡುಗಡ್ಡೆಯಲ್ಲಿ ಮನೆ**

ಇಲ್ಲಿ ವಿಶಾಲವಾದ ಸರೋವರ ರೂಪಗೊಂಡಿದ್ದು, ಅದರ ಮಧ್ಯ ಎತ್ತರವಾದ ಮಣ್ಣಿನ ಗುಡ್ಡೆಯ ಮೇಲೆ ಹಂಚಿನ ಮನೆಯೊಂದು ಚಿತ್ರಿತಗೊಂಡಿದೆ. ಚಿಕ್ಕಬೋಟು, ಒಂಟಿ

ತೆಂಗಿನಮರ, ಹಸಿರು ಕುರುಚಲು ಗಿಡಗಳ ಪೊದೆಗಳು ನೈಜಕಲ್ಪನೆಯಲ್ಲಿ ಬಿಂಬಿತವಾಗಿವೆ. ಸರೋವರದ ಆಳ ಹಾಗೂ ವಿಶಾಲತೆಯನ್ನು ಕಲಾವಿದನು. ತೋರಿಸಲು ಪ್ರಯತ್ನಿಸಿದ್ದು ತೆರೆಗಳ ಕಲ್ಪನೆಯು ನೀಲಿ ಮತ್ತು ಬಿಳಿವರ್ಣಗಳ ಮಿಶ್ರಣದಿಂದ ಸುಂದರವಾಗಿ ಪ್ರಕಟಗೊಂಡಿದೆ. ಈ ಚಿತ್ರದಲ್ಲಿ ದಟ್ಟ ಹಸಿರು ವರ್ಣವು ಹೆಚ್ಚು ಆವೃತಗೊಂಡಿದ್ದು, ಹಸಿರು ಮರಗಳ ಲವಲವಿಕೆ ಹಾಗೂ ತಾಜಾತನವನ್ನು ಕಾಣಬಹುದು. ಹಿಂದಿನ ಚಿತ್ರಗಳಂತೆ ಇಲ್ಲಿಯೂ ಸಹ ದಟ್ಟ ನೀಲಿಬಣ್ಣದ ಆಕಾಶ ಪೂರ್ಣಪ್ರಮಾಣದ ಸೂರ್ಯನನ್ನು ಚಿತ್ರಿಸಿದ್ದು, ಆಕಾಶದಲ್ಲಿನ ಮೋಡಗಳ ಏರಿಳಿತವನ್ನು ಉತ್ತಮ ರೀತಿಯಲ್ಲಿ ಸಂಯೋಜಿಸಲಾಗಿದೆ. ಈ ಚಿತ್ರದಲ್ಲಿ ವರ್ಣಸಂಯೋಜನೆ, ನೈಜ ವಿವರಣೆ ಹಾಗೂ ಯಥಾದೃಷ್ಟಿಯು ಉತ್ತಮವಾಗಿ ಕಲ್ಪಿತಗೊಂಡಿದೆ.

**ಚಿತ್ರಸಂಖ್ಯೆ ೦೪ ಸರೋವರದ ಮಧ್ಯೆ ಕೆಂಪುಮರ**

ಈ ನಿಸರ್ಗದೃಶ್ಯ ಚಿತ್ರದಲ್ಲಿ ಸರೋವರ, ಚಿತ್ರದ ಮುನ್ನೆಲೆಯಲ್ಲಿ ಹಸಿರು ಪೊದೆಯಿಂದ ಕೂಡಿದ ಮಣ್ಣುಗುಡ್ಡೆ, ಸರೋವರದ ಮಧ್ಯೆ ಸಣ್ಣ ಭೂಭಾಗ, ಅದರಲ್ಲಿ ಹುಲುಸಾದ ಪೊದೆಗಳಿಂದ ಕೂಡಿದ ಕೆಂಪು ವರ್ಣದ ಮರ, ಬಲಪಾರ್ಶ್ವದ ಮೇಲು ತುದಿಯಲ್ಲಿ ಹಸಿರು ಮರಗಳಿಂದ ಕೂಡಿದ ಹಸಿರು ನೆಲವು ಚಿತ್ರಿತಗೊಂಡಿದೆ. ಈ ಚಿತ್ರದಲ್ಲಿ ಮುಖ್ಯವಾಗಿ ಬಿಂಬಿತವಾಗಿರುವುದು ನೆರಳು ಬೆಳಕುಗಳ ವೈವಿಧ್ಯತೆ. ವರ್ಣಗಳ ಮಿಶ್ರಣದಲ್ಲಿ ನೈಜಕಲ್ಪನೆಯು ಅಭಿವ್ಯಕ್ತಗೊಂಡಿದೆ. ಮುಂಜಾವಿನ ಸೂರ್ಯರಶ್ಮಿಯು ಭೂದೃಶ್ಯದ ಮೇಲೆ, ಗಿಡ ಮರಗಳ ಮೇಲೆ ಬಿದ್ದು ಅವುಗಳ ಸುಂದರ ಬಾಹ್ಯರೂಪವು ಎದ್ದು ತೋರುತ್ತದೆ. ಇಲ್ಲಿ ಚಿತ್ರಣಗೊಂಡ ನಾಲ್ಕೂ ಚಿತ್ರಗಳು ಒಂದೇ ಭೂದೃಶ್ಯದ ಬೇರೆ ಬೇರೆ ಪಾರ್ಶ್ವಮುಖಗಳನ್ನು ಅಭಿವ್ಯಕ್ತಪಡಿಸುತ್ತವೆ. ಆಕೃತಿಗಳನ್ನು ಸಂಯೋಜಿಸುವಿಕೆ, ವರ್ಣ ಮಿಶ್ರಣದಲ್ಲಿ ಕೂಡಿಸುವಿಕೆ, ನಯಗಾರಿಕೆ, ಕುಂಚದ ರಭಸತೆ, ಏರಿಳಿತಗಳು ಕಲಾತ್ಮಕವಾಗಿ ಬಿಂಬಿತವಾಗಿಯೇ ಹೊರತು ಸೃಜನಾತ್ಮಕ ವಿವೇಚನೆಗಳು ಫಲಪ್ರದವಾಗಿಲ್ಲವೆನ್ನಬಹುದು. ಬಹುಶಃ ಈ ಚಿತ್ರಗಳು ವೃತ್ತಿಪರ ಕಲಾವಿದನ ಕೈಯಲ್ಲಿ ಮೂಡಿಬಂದಿಲ್ಲ. ಒಬ್ಬ ಹವ್ಯಾಸಿ ಕಲಾವಿದನಿಂದ ರೂಪಗೊಂಡಿರಬಹುದೆಂದು ತೋರುತ್ತದೆ.

**ಚಿತ್ರಸಂಖ್ಯೆ ೦೫, ೦೬, ೦೭ ನವಿಲು ಮತ್ತು ಪ್ರಕೃತಿ**

ಇಲ್ಲಿ ಮೂರು ಚಿತ್ರಗಳಲ್ಲಿ ಸುಂದರವಾದ ಪ್ರಕೃತಿಯಲ್ಲಿ ನವಿಲುಗಳು ಸ್ವಚ್ಛಂದವಾಗಿ ವಿಹಾರಿಸುತ್ತಿರುವಂತೆ ಪ್ರಕಟಗೊಂಡಿವೆ. ಚಿತ್ರಸಂಖ್ಯೆ ೦೫ ರಲ್ಲಿ ಸುಂದರವಾದ ಗರಿಗಳನ್ನು ಹೊಂದಿದ ನವಿಲು ಸುಂದರ ಹಾಗೂ ಸುಸಜ್ಜಿತ ಮೆಟ್ಟಿಲಿನ ಮೇಲೆ ಕುಳಿತಿದ್ದು, ಸರೋವರದಲ್ಲಿನ ಬೋಟುಗಳನ್ನು ವಿಕ್ಷಿಸುತ್ತಾ ಆಹ್ಲಾದಕರ ಹವೆಯನ್ನು ಸೇವಿಸುತ್ತಾ ಕುಳಿತಿರುವಂತೆ ಸಂಯೋಜಿತಗೊಂಡಿವೆ. ಸರೋವರದ ವಿನ್ಯಾಸ ಬೆಟ್ಟಗಳ ಸಾಲು ನೀರಿನ ಶುಭ್ರತೆಯನ್ನು, ನೈಜತೆಯ ಸೊಬಗನ್ನು ತರಲಾಗಿದೆ. ವಾಸ್ತು ಕಟ್ಟಡದ ಆಂತರೀಕ ವಿನ್ಯಾಸವು ವೈಭವದ ಕಲ್ಪನೆಯನ್ನು ಬಿಂಬಿಸುತ್ತದೆ. ವಿಶಿಷ್ಟವಾದ ಚಿತ್ರವಿನ್ಯಾಸಗಳಿಂದ ಕೂಡಿದ ಪರದೆಗಳು ಅಲಂಕಾರಿಕವಾಗಿ ಸಂಯೋಜಿತಗೊಂಡಿವೆ. ತೈಲವರ್ಣಗಳ ಮಿಶ್ರಣಗಾರಿಕೆಯಲ್ಲಿ ಬೆಳಕು ನೆರಳಿನವೈವಿಧ್ಯತೆಯನ್ನು ತರಲು ಕಲಾವಿದನು ಪ್ರಯತ್ನಿಸಿದ್ದಾನೆ. ವಾಸ್ತುವಿನ್ಯಾಸದಲ್ಲಿ ಚಪ್ಪಟೆ ವರ್ಣಗಳನ್ನು ಲೇಪನ

ಮಾಡಲಾಗಿದ್ದು, ಯಥಾರ್ಥದೃಷ್ಟಿರೂಪವನ್ನು ತೋರಿಸಲಾಗಿದೆ. ಚಿತ್ರದಲ್ಲಿ ಕಲಾವಿದನ ಸೃಜನಾತ್ಮಕ ವಿವರಣೆಗಳು ಪರಿಣಾಮಕಾರಿಯಾಗಿ ಮೂಡಿಬಂದಿಲ್ಲವಾದರೂ ಸುಂದರ ಕಲ್ಪನೆಯ ಭಾವನೆಯನ್ನು ಅಭಿವ್ಯಕ್ತಪಡಿಸುತ್ತದೆ.

ಚಿತ್ರ ೦೬ ಮತ್ತು ೦೭ ಎರಡು ಚಿತ್ರಗಳು ಒಬ್ಬನೇ ಕಲಾವಿದನ ಕುಂಚದಲ್ಲಿ ರೂಪಗೊಂಡಿವೆ. ನಿಸರ್ಗದ ಸುಂದರ ಕಲ್ಪನೆಯು ಮೂಡಿಬರುವಂತೆ ಜೋಡಿ ನವಿಲುಗಳು, ಸರೋವರ, ಹಸಿರು ಗಿಡಗಳು, ಹಸಿರು ಭೂದೃಶ್ಯ ದೂರದಲ್ಲಿ ಹಸಿರು ಪೊದೆಗಳನ್ನು ಸಂಯೋಜಿಸಲಾಗಿದೆ. ಸರೋವರದಲ್ಲಿ ರೇಖಾ ವಿನ್ಯಾಸದಿಂದ ಚಿಕ್ಕಬೋಟನ್ನು ಚಿತ್ರಿಸಿದ್ದು, ಚಲನಾತ್ಮಕವಾಗಿ ಬಿಂಬಿತವಾಗಿದೆ. ಆಕಾಶದ ಸಂಯೋಜನೆಯಲ್ಲಿ ಹಳದಿ ಹಾಗೂ ಬಿಳಿವರ್ಣಗಳ ಮಿಶ್ರಣದಲ್ಲಿ ನೈಜತೆಯು ವ್ಯಕ್ತಗೊಂಡಿದೆ. ಚಿತ್ರ ೦೭ ರಲ್ಲಿ ಜೋಡಿ ನವಿಲುಗಳು, ಕಾಲುವೆಯ ದೃಶ್ಯ, ಸೇತುವೆ, ಚಿಕ್ಕಬೋಟು, ಮರದ ದೃಶ್ಯವು ರೂಪಗೊಂಡಿದ್ದು ಚಿತ್ರ ೦೬ ರಂತೆ ರಚನಾಕ್ರಮವನ್ನು ಹೊಂದಿದೆ. ಪ್ರಕೃತಿಯ ಸುಂದರ ಕಲ್ಪನೆಯನ್ನು ಪಕ್ಷಿ, ಗಿಡ, ನೀರು, ಬೋಟುಗಳ ಮೂಲಕ ಹೊರಹಾಕಲು ಪ್ರಯತ್ನಿಸಿದ್ದಾನೆ. ಪರಿಣಾಮಕಾರಿಯಾದ ಚಿತ್ರಕ್ರಮದ ವಿವರಣೆಗಳು ವ್ಯಕ್ತಗೊಂಡಿಲ್ಲವಾದರೂ, ಪರಿಸರದ ಸೌಂದರ್ಯ ಪ್ರಜ್ಞೆಯನ್ನು ಮೂಡಿಸುತ್ತಿದೆ. ಈ ಮೂರು ಚಿತ್ರಗಳಲ್ಲಿ ಕಲಾವಿದರು ಕಲೆಯ ನೈಪುಣ್ಯತೆಯನ್ನು ತರಲು ಪ್ರಯತ್ನಿಸಿದ್ದರಾದರೂ ಅನುಭವದ ಕೊರತೆಯಿಂದ ಸೂಕ್ಷ್ಮತೆ, ನೈಜತೆ ಹಾಗೂ ಚಿತ್ರಕಮವನ್ನು ತರಲು ವಿಫಲರಾಗಿದ್ದಾರೆ.

**ಚಿತ್ರಸಂಖ್ಯೆ ೦೮, ೦೯ ಭೂದೃಶ್ಯ**

ಇಲ್ಲಿ ಚಿತ್ರಿತಗೊಂಡಿರುವ ಎರಡೂ ನಿಸರ್ಗ ಚಿತ್ರಗಳು ಸುಂದರವಾದ ತೇಗನಮರದ ಕಟ್ಟಿಗೆಯಲ್ಲಿ ನಿರ್ಮಿತವಾದ ಮಂಚದ ಫಲಕದ ಚೌಕಾಣಿಗಳಲ್ಲಿ ನಿರ್ಮಿತಗೊಂಡಿವೆ. ಎರಡು ಚಿತ್ರಗಳು ಒಂದೇ ಚಿತ್ರದ ಪ್ರತಿಕೃತಿಗಳಾಗಿದ್ದು, ರಚನಾವಿಧಾನವು ಒಂದೇ ರೀತಿಯಲ್ಲಿ ಮೂಡಿಬಂದಿದೆ. ನದಿಯ ಸಂಯೋಜನೆ, ಬೋಟು, ಎತ್ತರವಾದ ಮನೆಯ ವಿನ್ಯಾಸಗಳು, ರಸ್ತೆ, ಹಸಿರು ಗಿಡಮರಗಳು, ಬೆಟ್ಟಗಳ ಸಾಲು ಇಲ್ಲಿ ಬಿಂಬಿತವಾಗಿವೆ. ಮರಗಳ ಸಂಯೋಜನೆಯನ್ನು ಹೊರತು ಪಡಿಸಿದರೆ ಇನ್ನುಳಿದ ವಿವರಗಳು ಚಪ್ಪಟೆಯಾಗಿ ರೂಪಗೊಂಡಿವೆ. ದಟ್ಟ ರೇಖೆಗಳ ರೂಪರೇಶಗಳು ಪ್ರಯೋಗಾತ್ಮಕವಾಗಿ ಮೂಡಿಬಂದಿವೆ. ಆಧುನಿಕತೆಯ ಚಿತ್ರಶೈಲಿಯಲ್ಲಿ ರೂಪಗೊಂಡಿದ್ದು, ರೇಖೆ ಮತ್ತು ವರ್ಣಗಳಲ್ಲಿ ಸೂಕ್ಷ್ಮತೆಯು ಗೌಣವಾಗಿದೆ. ಯಥಾರ್ಥದೃಷ್ಟಿರೂಪವು, ವಸ್ತುಗಳ ಸಂಯೋಜನೆಯ ದಟ್ಟತೆ ಹಾಗೂ ವಿರಳತೆಯು ಸಾಂಕೇತಿಕವಾಗಿ ಅಭಿವ್ಯಕ್ತಗೊಂಡಿವೆ. ಈ ಎರಡೂ ಚಿತ್ರಗಳು ಅಲಂಕಾರದ ಆಶಯವನ್ನು ಹೊಂದಿದ್ದು, ಚಿತ್ರಕಮವು ಕಲಾವಿದನ ಅನನುಭವವನ್ನು ತೋರಿಸುತ್ತದೆ. ಅಂದರೆ ಒಬ್ಬ ಹವ್ಯಾಸಿ ಕಲಾವಿದನ ಸೌಂದರ್ಯಪ್ರಜ್ಞೆಯನ್ನು ವಿವರಿಸುತ್ತವೆ.

**೦೪. ಗಾಜಿನ ಮೇಲಿನ ಅಲಂಕಾರಿಕ ಚಿತ್ರಗಳು**

ಅಲಂಕಾರಿಕ ನಕ್ಷಾ ವಿನ್ಯಾಸಗಳು ಬಹುತೇಕ ಸ್ಟೇನ್ಡ್ ಗ್ಲಾಸ್ ಚಿತ್ರಗಳ ಮೇಲೆ, ವಾಸ್ತುಕಟ್ಟಡಗಳ ಗೋಡೆಯ ಮೇಲೆ, ಕಿಟಕಿಗಳ ಮೇಲೆ, ಉಪಯೋಗಿಕ ವಸ್ತುಗಳ ಮೇಲೆ,

ಅಲಂಕೃತ ವಿವಿಧ ವಸ್ತುಗಳ ಮೇಲೆ ಪೇಯಿಂಟ್ ಮಾಡಿದ, ಎನ್‌ಗ್ರೇವ್ ಮಾಡಿದ, ಎಚ್ ಮಾಡಿದ ಸಾಚೇ ಹಾಕಿದ ಹಾಲೂ ಗಿಲ್ಡ್ ಮಾಡಿದ ಚಿತ್ರವಿನ್ಯಾಸಗಳು ಕಂಡು ಬರುತ್ತವೆ. ಇ ಚಿತ್ರವಿನ್ಯಾಸಗಳು ನೈಸರ್ಗಿಕವಾಗಿ, ಜ್ಯಾಮಿತಿಕವಾಗಿ ಹಾಗೂ ಅಲಂಕಾರಿಕವಾಗಿ ರೂಪಿತಗೊಂಡಿವೆ. ಬೇರೆ ಬೇರೆ ಕಾಲಮಾನಗಳಲ್ಲಿ ತಯಾರಾದ ಹಾಗೂ ಬಳಕೆಯಲ್ಲಿದ್ದ ಗಾಜಿನ ವಸ್ತುಗಳ ಮೇಲೆ ಈ ಮೂರು ಬಗೆಯ ಚಿತ್ರವಿನ್ಯಾಸಗಳು ರಚನೆಗೊಂಡಿವೆ. ಆ ನಕ್ಷಾವಿನ್ಯಾಸಗಳನ್ನು ಕುರಿತು ಇಲ್ಲಿ ವಿವೇಚಿಸಲಾಗಿದೆ.

ಭಾರತದಲ್ಲಿ ಮುಸ್ಲಿಮ್ ಅವಧಿಯಲ್ಲಿ ಗಾಜಿನ ಉದ್ಯಮ ಬೆಳೆದಂತೆಲ್ಲ ವೈವಿಧ್ಯಮಯ ಗಾಜಿನ ವಸ್ತುಗಳು ತಯಾರಾದವು ತಯಾರಾದ ಗಾಜಿನ ವಸ್ತುಗಳು ಅಲಂಕಾರಿಕವಾಗಿ ಹಾಗೂ ಆಕರ್ಷಕವಾಗಿರುತ್ತಿದ್ದವು ಸಿರಿಯಾ, ಈಜಿಪ್ತ್ ಮತ್ತು ಇರಾನ್ ದೇಶಗಳಲ್ಲಿ ಬಹು ಪ್ರಚಾರದಲ್ಲಿದ್ದ ಈ ಉದ್ಯಮವು ಭಾರತಕ್ಕೂ ಹರಿದುಬಂದಿತು. ಮೊಗಲರ ಕಾಲಾವದಿಯ ೧೭, ೧೭ನೆಯ ಶತಮಾನಗಳಲ್ಲಿ ಅಧಿಕಸಂಖ್ಯೆಯಲ್ಲಿ ಉತ್ಪಾದನೆಗೊಂಡ ಗಾಜಿನ ವಸ್ತುಗಳನ್ನು ಮೊಗಲ್ ದೊರೆಗಳು ವೈವಿಧ್ಯಮಯವಾಗಿ ಬಳಸುತ್ತಿದ್ದರು. ಗಾಜಿನ ಹುಕ್ಕಾಗಳು, ಹೂದಾನಿಗಳು, ಪ್ಲೇಟಗಳು, ಕಪ್ಪುಗಳು, ಖ್ಯಾದ್ಯಗಳನ್ನು ತುಂಬಿಡುವ ಬಾಟಲ್‌ಗಳು ಪ್ರಧಾನವಾಗಿದ್ದವು. ಸುಲ್ತಾರನ ಕಾಲಾವಧಿ, ಬ್ರೀಟಿಷ, ಫ್ರೆಂಚ್, ಡಚ್, ಪೋರ್ಚ್‌ಗೀಸ್ ಇತ್ಯಾದಿ ಪಾಶ್ಚಾತ್ಯ ಹಾಗೂ ಪೌರವಾರ್ತ್ಯರ ಗಾಜಿನ ವಸ್ತುಗಳಲ್ಲಿ ವೈವಿಧ್ಯಮಯ ಚಿತ್ರವಿನ್ಯಾಸಗಳು ರಚನೆಗೊಂಡಿವೆ.

ನೈಸರ್ಗಿಕ ನಕ್ಷಾವಿನ್ಯಾಸಗಳಲ್ಲಿ ಎಲೆ, ಹೂವು, ಕಾಂಡ, ಮೊಗ್ಗು, ಕಾಯಿ ಇತ್ಯಾದಿಗಳನ್ನು ಯಥಾವತ್ತಾಗಿ ಬಳಸಿಕೊಂಡು, ನಕ್ಷಾ ವಿನ್ಯಾಸವನ್ನು ರಚಿಸುವುದು. ಜಾಮಿತಿಕ ನಕ್ಷಾವಿನ್ಯಾಸಗಳಲ್ಲಿ ಆಯತ, ಚೌಕ, ವೃತ್ತ, ವಿವಿಧ ಕೋನಗಳ ರೇಖಾ ವಿನ್ಯಾಸಗಳಿಂದ ರಚಿಸುವುದು. ಅಲಂಕಾರಿಕ ನಕ್ಷಾವಿನ್ಯಾಸಗಳಲ್ಲಿ ಈ ಎರಡೂ ರೀತಿಯ ನಕ್ಷಾವಿನ್ಯಾಸಗಳನ್ನು ಬಳಸಿಕೊಂಡು ಅಲಂಕಾರಮಯ ರೇಖಾ ಲಾವಣ್ಯತೆಯಿಂದ ಕೂಡಿದ ನಕ್ಷಾವಿನ್ಯಾಸಗಳನ್ನು ರಚಿಸುವುದಾಗಿದೆ. ಈ ಮೂರು ಬಗೆಯ ನಕ್ಷಾವಿನ್ಯಾಸಗಳನ್ನು ಬಳಸಿಕೊಂಡು ರಚಿಸಿದ ಗಾಜಿನ ಚಿತ್ರಗಳು ಸಾಕಷ್ಟು ಸಂಖ್ಯೆಗಳಲ್ಲಿ ಸಿಗುತ್ತವೆ.

ಮೊಗಲ್ ಕಾಲಾವಧಿಯಲ್ಲಿ ಅನೇಕ ಬಗೆಯ ವರ್ಣವೈವಿಧ್ಯತೆಯ ಗಾಜಿನ ಹುಕ್ಕಾಗಳು ಕಂಡು ಬರುತ್ತವೆ. ೧೭ನೆಯ ಶತಮಾನದ ಒಂದು ಗಾಜಿನ ಹುಕ್ಕಾದಲ್ಲಿ ಎನ್‌ಗ್ರೀವ್ ಮಾಡಿದ ನಕ್ಷೆಗಳು ರಚನೆಗೊಂಡಿವೆ. ಇದರ ಕಂಟಭಾಗ ಸಿಲೆಂಡರ್ ಆಕಾರದಲ್ಲಿದ್ದು, ಅದರ ತಳಭಾಗ ದುಂಡಾಕಾರದಲ್ಲಿ ಸಿದ್ಧಗೊಂಡಿದೆ. ಕಂಟದಲ್ಲಿ ಒಂದರ ಮೇಲೊಂದು ನೆಗೆಯುತ್ತಿರುವಂತೆ ರಚಿತಗೊಂಡಿರುವ ರೇಖಾವಿನ್ಯಾಸಗಳು ಹುಕ್ಕಾದ ಮೇಲ್ಭಾಗದಲ್ಲಿ ಅಲಂಕಾರಿಕ ನಕ್ಷೆಗಳು ಹುಕ್ಕಾದ ಹೊಟ್ಟೆಯ ಭಾಗದಲ್ಲಿ ಕ್ಯಾಲಿಗ್ರಾಫಿಕ್ ನಕ್ಷೆಗಳು ಹಾಗೂ ತಳದ ಭಾಗದಲ್ಲಿ ಸೂಕ್ಷ್ಮ ರೀತಿಯ ಜಿಗ್ ಜಾಗ್ ರೇಖೆಗಳ ನಕ್ಷೆಗಳು ರೂಪಗೊಂಡಿದ್ದು ಆಕರ್ಷಕವಾಗಿ ಮೂಡಿಬಂದಿವೆ. ೭ನೇ ಶತಮಾನದ ಇನ್ನೊಂದು ಹುಕ್ಕಾವು ನೀಲಿ ಬಣ್ಣವನ್ನು ಹೊಂದಿದ್ದು, ಗಿಲ್ಡ್ ಮಾಡಿದ ಮತ್ತು ಪೇಯಿಂಟ ಮಾಡಿದ ಚಿತ್ರವಿನ್ಯಾಸವು ವೈವಿಧ್ಯಮಯವಾಗಿ ಮೂಡಿಬಂದಿದೆ. ವೃತ್ತಾಕಾರದ ಆಕಾರಹೊಂದಿದ

ಈ ಹುಕ್ಕಾದ ಕಂಟಭಾಗವು ಸಿಲೆಂಡರ ಆಕಾರದಲ್ಲಿ ರಚನೆಗೊಂಡಿದೆ. ದುಂಡು ಹೂವು, ವಿಶಿಷ್ಟ ಎಲೆಗಳಿಂದ ಕೂಡಿದ ಹೂಗುಚ್ಚದ ನಕ್ಷೆಯು ಆವರಿಸಿದೆ. ಕಂಟದ ಮೇಲ್ಭಾಗದಲ್ಲಿ ಸೂಕ್ಷ್ಮ ಚಿತ್ರವಿನ್ಯಾಸಗಳನ್ನು ರಚಿಸಲಾಗಿದೆ. ಇದನ್ನು ಬಂಗಾರದ ವರ್ಣದಿಂದ ಗಿಲ್ಡ ಮಾಡಲಾಗಿದೆ. ಇದೇ ಅವಧಿಯಲ್ಲಿ ಕಂಡುಬರುವ ಇನ್ನೊಂದು ಹಸಿರು ವರ್ಣದ ಗಾಜಿನ ಹುಕ್ಕಾದ ಮೇಲೆ ಗಿಲ್ಡ ಮಾಡಿದ ಹೂವಿನ ನಕ್ಷಾವಿನ್ಯಾಸವನ್ನು ಸಂಯೋಜಿಸಲಾಗಿದೆ. ಸ್ಪಷ್ಟರೇಖೆ, ಆಕಾರ, ಅಲಂಕಾರಿಕತೆಯ ಆಕರ್ಷಕವಾಗಿ ಮೂಡಿಬಂದಿದೆ. ಹುಕ್ಕಾದ ಕತ್ತು ಹಾಗೂ ತಳಭಾಗದಲ್ಲಿ ನೈಸರ್ಗಿಕ ನಕ್ಷೆಗಳನ್ನು ರಚನೆ ಮಾಡಲಾಗಿದೆ.

೧೮ನೇ ಶತಮಾನದ ಒಂದು ಹುಕ್ಕಾವು ಬಿಂದಿಗೆಯ ಆಕಾರದಲ್ಲಿ ಕಂಡುಬರುತ್ತಿದ್ದು, ಇದನ್ನು ಸಹ ಗಿಲ್ಡ ಹಾಗೂ ಪೇಯಿಂಟ್ ಮಾಡಿದ್ದು ಹೂವಿನ ನಕ್ಷೆಗಳನ್ನು ರಚಿಸಲಾಗಿದೆ. ಆರುದಳಗಳ ಹೂವು, ಮೂರು ಎಲೆಗಳ ಗುಚ್ಚವನ್ನು ಅಲ್ಲಲ್ಲಿ ಸಂಯೋಜಿಸಲಾಗಿದೆ. ಕಂಟ ಹಾಗೂ ತಳಭಾಗದಲ್ಲಿ ಅಲಂಕಾರಮಯ ಚಿತ್ರವಿನ್ಯಾಸಗಳನ್ನು ಸಂಯೋಜಿಸಲಾಗಿದೆ. ಇದೇ ಶತಮಾನದಲ್ಲಿ ರಚನೆಗೊಂಡಿರುವ ಒಂದು ಹುಕ್ಕಾದಲ್ಲಿ ಮಾವಿನ ಎಲೆಗಳನ್ನು ಹಾಗೂ ಅದರ ಸೂಕ್ಷ್ಮ ವಿವರಣೆಯನ್ನು ನೀಡಲಾಗಿದೆ. ಕಂಟದ ಮೇಲ್ಭಾಗ ಹಾಗೂ ತಳಭಾಗದಲ್ಲಿ ಸಣ್ಣ ಹಾಗೂ ದೊಡ್ಡ ಎಲೆಗಳ ನೈಸರ್ಗಿಕ ವಿನ್ಯಾಸಗಳನ್ನು ಸಂಯೋಜಿಸಲಾಗಿದೆ. ಇದು ಸಾಲರಜಂಗ್ ಮ್ಯೂಜಿಯಂದಲ್ಲಿ ಸಂಗ್ರಹವಿದೆ. ವೃತ್ತಾಕಾರದ ಹುಕ್ಕಾಗಳಲ್ಲದೇ ಗಂಟೆಯಾಕಾರದ ಹಲವಾರು ಗಾಜಿನ ಹುಕ್ಕಾಗಳಲ್ಲಿ ವೈವಿಧ್ಯಮಯ ಚಿತ್ರವಿನ್ಯಾಸಗಳನ್ನು ಕಾಣಬಹುದು.

೧೮ ನೇ ಶತಮಾನದಲ್ಲಿ ರಚನೆಗೊಂಡ ಗಂಟೆಯಾಕಾರದ ಹುಕ್ಕಾದಲ್ಲಿ ವೈವಿಧ್ಯಮಯ ನಕ್ಷೆಗಳು ಕಂಡು ಬರುತ್ತವೆ. ಸಿಲಿಂಡರ ಆಕಾರದ ಕತ್ತಿನಲ್ಲಿ ಹೂವಿನ ನಕ್ಷೆ, ಕತ್ತಿನ ಕೆಳಭಾಗದ ಮೇಲ್ಮೈಯಲ್ಲಿ ವೃತ್ತಾಕಾರದಲ್ಲಿ ಹೊಂದಿಕೊಂಡರುವಂತೆ ರೇಖಾ ನಕ್ಷೆಗಳು ಕಂಡು ಬರುತ್ತವೆ. ತಳಭಾಗ ಹಾಗೂ ಒಡಲಿನಲ್ಲಿ ಹೂವು ಹಾಗೂ ಎಲೆಗಳಿಂದ ಕೂಡಿದ ನಕ್ಷೆಗಳು ರಚನೆಗೊಂಡಿವೆ. ಇದೇ ಶತಮಾನದ ಕಾಲಾವಧಿಯಲ್ಲಿ ನಿರ್ಮಾಣಗೊಂಡ ಇನ್ನೊಂದು ಹುಕ್ಕಾವು ವಿಶಿಷ್ಟ ರೀತಿಯ ಜ್ಯಾಮಿತಿಕ ನಕ್ಷೆಗಳಿಂದ ಸಂಯೋಜಿತಗೊಂಡಿದೆ. ಕತ್ತು, ಒಡಲು, ತಳಭಾಗದಲ್ಲಿ ರೇಖೆ ಹಾಗೂ ನಕ್ಷೆಯ ವಿವರಗಳು ಸೂಕ್ಷ್ಮತೆಯಿಂದ ರೂಪಗೊಂಡಿವೆ. ಇದು ಗಿಲ್ಪ ಮಾಡಿದ ರಚನಾ ವಿಧಾನವನ್ನು ಹೊಂದಿದ್ದು ಸಾಲಾರಜಂಗ್ ಮ್ಯೂಜಿಯಂನಲ್ಲಿ ಸಂಗ್ರಹವಿದೆ.

ಗಾಜಿನ ಹುಕ್ಕಾಗಳಲ್ಲದೇ ರೋಸ್-ಬಾಟಲ್ ಸ್ಪ್ರಿಂಕ್ಲರ್ಸ್ ಒಂದು ಭಾರತ ಕಲಾಭವನದಲ್ಲಿ ಸಂಗ್ರಹಗೊಂಡಿದ್ದು ವಿಶಿಷ್ಟ ರಚನಾ ವಿಧಾನವನ್ನು ಹೊಂದಿದೆ. ವೃತ್ತಾಕಾರವಾದ ಈ ಸ್ಪ್ರಿಂಕ್ಲರ್ ಉದ್ದವಾದ ಕಂಟಭಾಗವನ್ನು ಹೊಂದಿದ್ದು, ಅನೇಕ ದಳಗಳಿಂದ ಕೂಡಿದ ಹೂವಿನ ವಿನ್ಯಾಸವನ್ನು ರಚನೆ ಮಾಡಲಾಗಿದೆ. ಇದು ಪಾರದರ್ಶಕ ಬಿಳಿವರ್ಣದಿಂದ ಕೂಡಿದ್ದು ಪೇಯಿಂಟ ಮಾಡಿದ ನಕ್ಷೆಯನ್ನು ಹೊಂದಿದೆ. ಇಂಥ ಚಿತ್ರಗಳು ಅನೇಕ ಬಗೆಯಲ್ಲಿ ರಚಿಸಿದ್ದನ್ನು ಕಾಣುತ್ತೇವೆ. ಈ ಬಗೆಯ ಅಲಂಕಾರಿಕ ನಕ್ಷೆಗಳಿಂದ ಕೂಡಿದ ವಸ್ತುಗಳು ದೇಶದ ವಿವಿಧ ವಸ್ತು ಸಂಗ್ರಹಾಲಯಗಳಲ್ಲಿ ಕಂಡು ಬರುತ್ತವೆ. ಗಾಜಿನ ಮೇಲಿನ ಅಲಂಕಾರಿಕ ಚಿತ್ರಗಳು ವಸ್ತುಗಳಲ್ಲಷ್ಟೇ ಅಲ್ಲದೇ

ವಾಸ್ತುಕಟ್ಟಡಗಳಲ್ಲಿಯೂ ಗಣನೀಯವಾಗಿ ಕಂಡು ಬರುತ್ತವೆ. ವಾಸ್ತುಕಟ್ಟಡಗಳ ಕಿಟಕಿಗಳಲ್ಲಿ, ಮೇಲ್ಛಾವಣಿಗಳಲ್ಲಿ ಪ್ರಧಾನವಾಗಿ ಕಾಣಸಿಗುತ್ತವೆ. ಅವುಗಳನ್ನು ಇಲ್ಲಿ ವಿವೇಚನೆ ಮಾಡಲಾಗಿದೆ.

**ಚಿತ್ರಸಂಖ್ಯೆ ೦೧, ೦೨ ಅಲಂಕಾರಿಕ ಕಿಟಕಿಯ ಮೇಲಿನ ನಕ್ಷೆ**

ಇಲ್ಲಿ ಕಂಡು ಬರುವ ಎರಡೂ ಚಿತ್ರಗಳು ಚರ್ಚ್ ಒಂದರ ಕಿಟಕಿಗಳಲ್ಲಿ ಅಳವಡಿಸಲಾಗಿದೆ. ಸ್ಟೇನ್ಡ್ ಗ್ಲಾಸ್ ಚಿತ್ರಗಳಾದ ಇವು ಆಕರ್ಷಕ ರೇಖಾ ವಿನ್ಯಾಸಗಳಿಂದ ಎಲೆ, ಹೂವುಗಳನ್ನು ವಿಶಿಷ್ಟವಾಗಿ ರೂಪಗೊಳಿಸಿದ್ದು ಅಲಂಕಾರದ ಆಶಯ ಎದ್ದು ತೋರುತ್ತವೆ. ಜ್ಯಾಮಿತಿಕ, ನೈಸರ್ಗಿಕ ಹಾಗೂ ಅಲಂಕಾರಿಕ ವಿನ್ಯಾಸಗಳು ಸೃಜನಾತ್ಮಕವಾಗಿ ಬಿಂಬಿತವಾಗಿವೆ. ಚಿತ್ರದ ಸುತ್ತಲೂ ಹಸಿರು, ಬಿಳಿ, ವರ್ಣಗಳ ಎಲೆ ಹಾಗೂ ಹೂವುಗಳ ಸಂಯೋಜನೆಯು ವರ್ಣಮಯವಾಗಿ ಚಿತ್ರಿತಗೊಂಡಿದ್ದು ನೋಡುಗರನ್ನು ಆಕರ್ಷಿಸುತ್ತವೆ. ಚಿತ್ರದ ಮಧ್ಯದಲ್ಲಿ ಕ್ರೈಸ್ತ ಮಿಷನರಿಯ ಲಾಂಛನಗಳು ರಚನೆಗೊಂಡಿವೆ. ಇವುಗಳನ್ನು ಸಹ ಆಕರ್ಷಕ ಚಿತ್ರವಿನ್ಯಾಸಗಳಿಂದ ಸಂಯೋಜಿಸಲಾಗಿದೆ. ಈ ಎರಡು ನಕ್ಷೆಗಳು ರೇಖೆ ಹಾಗೂ ವರ್ಣಗಳಿಂದ ಲಾವಣ್ಯಯುತವಾಗಿ ಮೂಡಿಬಂದಿವೆ.

**ಚಿತ್ರಸಂಖ್ಯೆ ೦೩, ೦೪, ಕಿಟಕಿಯ ವಿನ್ಯಾಸ**

ಇಲ್ಲಿ ಚಿತ್ರಿತಗೊಂಡಿರುವ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಅಲಂಕಾರಿಕ ವಿನ್ಯಾಸಗಳಿಂದ ಕೂಡಿವೆ. ಚಿತ್ರ ೦೩ ರಲ್ಲಿ ಕಲಾವಿದನು ಕೌಶಲದ ತಂತ್ರವನ್ನು ಬಳಸಿಕೊಂಡು ವಿನ್ಯಾಸಗಳನ್ನು ಸಂಯೋಜಿಸಿದ್ದಾನೆ. ವೃತ್ತಾಕಾರದ ಪಟ್ಟಿಗಳಂತಹ ವಿಶಿಷ್ಟ ಪಟ್ಟಿಗಳಿಂದ ಕೂಡಿದ ಕುತೂಹಲಕಾರಿ ಹೂವಿನ ನಕ್ಷೆಯು ಕಾಣಸಿಗುತ್ತವೆ. ಇವುಗಳ ಮಧ್ಯ ದ್ರಾಕ್ಷಿ ಎಲೆಗಳ ಬಳ್ಳಿಯ ನೈಸರ್ಗಿಕ ನಕ್ಷೆಯು ಸಂಯೋಜಿತಗೊಂಡಿದೆ. ಇದು ಹಳದಿ ಹಾಗೂ ಬಿಳಿವರ್ಣಗಳಿಂದ ಲೇಪನಗೊಂಡಿದೆ. ಈ ಚಿತ್ರದಲ್ಲಿ ಕೆಂಪು, ಹಸಿರು, ನೀಲಿ, ಬಿಳಿ ಹಳದಿವರ್ಣಗಳಿಂದ ಸಂಯೋಜನೆ ಎದ್ದು ತೋರುತ್ತದೆ. ಚಿತ್ರ ೦೪ ರಲ್ಲಿಯೂ ಸಹ ವಿಶಿಷ್ಟ್ಯ ಪಟ್ಟಿಗಳ ಚಿತ್ರವಿನ್ಯಾಸವು ರಚನೆಗೊಂಡಿದೆ.ನಡುವೆ ವೃತ್ತಾಕಾರದ ಸ್ಥಳಾವಕಾಶದಲ್ಲಿ ಹೂವಿನ ಚಿತ್ರವಿನ್ಯಾಸಗಳು ಬಿಂಬಿತವಾಗಿವೆ. ಚಿತ್ರದ ಸುತ್ತಲೂ ವಿಶಿಷ್ಟ ರೀತಿಯ ಎಲೆ ಹಾಗೂ ಹೂವಿನ ನಕ್ಷಾವಿನ್ಯಾಸವು ಆಕರ್ಷಕವಾಗಿ ರೂಪಗೊಂಡಿದೆ. ಚಿತ್ರವು, ಹಸಿರು, ಹಳದಿ, ಬಿಳಿ, ನೀಲಿ, ಕೆಂಪು ವರ್ಣಗಳು ಲೇಪನಗೊಂಡಿದ್ದು, ರೇಖಾ ಲಾವಣ್ಯವು ಬಿಂಬಿತವಾಗಿದೆ. ಅಲಂಕಾರದ ಆಶಯ ಉತ್ತಮವಾಗಿ ಮೂಡಿಬಂದಿದೆ.

**ಚಿತ್ರಸಂಖ್ಯೆ ೦೫ ನವಿಲಿನ ವಿನ್ಯಾಸ**

ಇದು ಮೈಸೂರು ಅರಮನೆಯ ಕಲ್ಯಾಣಮಂಟಪದ ಮೇಲ್ಛಾವಣಿಯಲ್ಲಿ ಕಂಡು ಬರುತ್ತದೆ. ಅಷ್ಟಭುಜಾಕೃತಿಯ ಈ ಮೇಲ್ಛಾವಣಿ ಬಲವಾದ ಲೋಹದ ಸರಳುಗಳನ್ನು ಹೊಂದಿದ್ದು, ಇದು ಸಂಪೂರ್ಣ ಅಲಂಕಾರಿಕ ಸ್ಟೇನ್ಡ್ ಗ್ಲಾಸ್ ನಕ್ಷೆಗಳಿಂದ ರಚನೆಗೊಂಡಿದೆ. ಈ ನಕ್ಷಾವಿನ್ಯಾಸಗಳು ಏಳು ಭಾಗಗಳಲ್ಲಿ ವಿಂಗಡಣೆಗೊಂಡಿದ್ದು ಪ್ರಾರಂಭದಲ್ಲಿ ಜ್ಯಾಮಿತಿಕ ವಿನ್ಯಾಸಗಳಿಂದ ಕೂಡಿದ ನವಿಲಿನ ಚಿತ್ರವು ರೂಪಗೊಂಡಿದೆ. ಅರ್ಧವೃತ್ತಗಳು, ತ್ರಿಭುಜ, ಚೌಕ ಹಾಗೂ ಸಿಲಿಂಡರ ವಿನ್ಯಾಸವು ಇಲ್ಲಿ ರಚನೆಗೊಂಡಿವೆ. ಎರಡನೆ ಭಾಗದಲ್ಲಿ ಬಿಚ್ಚಿದ ನವಿಲು ಗರಿಯ ಚಿತ್ರವಿದೆ. ಜೊತೆಗೆ ಆಯತಾಕಾರದ

ನಕ್ಷೆಗಳು ಎದ್ದು ತೋರುತ್ತವೆ. ಮೂರನೆ ಭಾಗದಲ್ಲಿ ಆಯತ ಹಾಗೂ ಚೌಕದ ನಕ್ಷೆಗಳು ಕಂಡು ಬರುತ್ತವೆ. ನಾಲ್ಕನೆ ಭಾಗದಲ್ಲಿ ಜಾಮಿತಿಕ ಹೂವಿನ ನಕ್ಷೆಯು ಬಿಂಬಿತವಾಗಿದೆ. ಐದನೆಭಾಗದಲ್ಲಿ ಸಿಲೆಂಡರ ವಿನ್ಯಾಸದಲ್ಲಿ ನೈಸರ್ಗಿಕ ನಕ್ಷೆಯು ರೂಪಗೊಂಡಿದೆ. ಆರನೆ ಭಾಗದಲ್ಲಿ ಜ್ಯಾಮಿತಿಕ ನಕ್ಷೆಗಳು, ಏಳನೆ ವಿಭಾಗದಲ್ಲಿ ಅಂದರೆ ಕೇಂದ್ರ ಬಿಂದು ಹೂವಿನ ನಕ್ಷೆಯನ್ನು ಹೊಂದಿದೆ. ಈ ಏಳು ಭಾಗಗಳಲ್ಲಿರುವ ಅಲಂಕಾರಿಕ ನಕ್ಷೆಗಳು ರೇಖಾ ಪ್ರಧಾನವಾಗಿದ್ದು ಆಕರ್ಷಕ ಸೌಮ್ಯವರ್ಣಗಳ ಸಂಯೋಜನೆಯು ಪ್ರಕಟಗೊಂಡಿದೆ. ಹಳದಿ, ನೀಲಿ, ಕೆಂಪು, ಹಸಿರು, ಕಂದು ಬಣ್ಣಗಳ ಮಿಶ್ರಣವು ಹೊರಗಿನ ಬೆಳಕಿನಿಂದ ಮೋಹಕವಾಗಿ ಕಂಡು ಬರುತ್ತದೆ. ರೇಖಾ ಸೂಕ್ಷ್ಮತೆ ಹಾಗೂ ಲಾವಣ್ಯತೆಯು ಎದ್ದು ತೋರುತ್ತದೆ.

**ಚಿತ್ರಸಂಖ್ಯೆ ೦೬ ಹೂವಿನ ವಿನ್ಯಾಸ**

ಈ ಚಿತ್ರವು ಮೈಸೂರು ಅರಮನೆಯ ಅಂಬಾವಿಲಾಸದಲ್ಲಿ ಕಂಡು ಬರುತ್ತದೆ. ವೃತ್ತಾಕಾರದ ಮೇಲ್ಛೆತ್ತು ಸಂಪೂರ್ಣ ಸ್ಟೇನ್ಡ್ ಗ್ಲಾಸ್ ಚಿತ್ರಗಳಿಂದ ಸಂಯೋಜನೆಗೊಂಡಿದೆ. ಚಿತ್ರದಲ್ಲಿ ಅರ್ಧ ಚಂದ್ರಾಕೃತಿಯ ನಕ್ಷಾವಿನ್ಯಾಸಗಳ ಸಮೂಹದಲ್ಲಿ ನವಿಲಿನ ನಕ್ಷೆ, ಹೂವು ಹಾಗೂ ಎಲೆಗಳ ನಕ್ಷೆಗಳ ಸಂಯೋಜನೆಯು ಪ್ರಧಾನವಾಗಿ ಮೂಡಿಬಂದಿದೆ. ಗುಮ್ಮಟದ ಮಧ್ಯ ದೊಡ್ಡದಾದ ಹೂವಿನ ನಕ್ಷೆಯು ಸಂಯೋಜನೆಗೊಂಡಿದ್ದು, ಮಧ್ಯ ಸೂಕ್ಷ್ಮರೇಖಾ ಸಂಯೋಜನೆಯಿಂದ ಕೂಡಿದ ನೈಸರ್ಗಿಕ ನಕ್ಷೆಗಳು ರಚನೆಗೊಂಡಿದೆ. ಈ ಚಿತ್ರದಲ್ಲಿಯೂ ಸಹ ರೇಖಾ ಸೂಕ್ಷ್ಮತೆ, ಅಲಂಕಾರಿಕತೆ ಹಾಗೂ ಲಾವಣ್ಯತೆಯು ಎದ್ದು ತೋರುತ್ತದೆ. ಕೆಂಪು, ಹಳದಿ, ಹಸಿರು ವರ್ಣಗಳ ಮೋಹಕ ಛಾಯೆ ಅಭಿವ್ಯಕ್ತಗೊಂಡಿದೆ.

**ಚಿತ್ರಸಂಖ್ಯೆ ೦೭ ಹೂವಿನ ನಕ್ಷೆ**

ಈ ಸಂಯೋಜನೆಯ ಚಿತ್ರವು ಮೈಸೂರು ಅರಮನೆಯ ಅಂಬಾವಿಲಾಸದ ಹಾಲನ ಮೇಲ್ಛೆತ್ತಿನಲ್ಲಿ ಅಲಂಕೃತಗೊಂಡಿದೆ. ಸಿಲೆಂಡರ ವಿನ್ಯಾಸದ ಬೃಹತ್ ಗಾಜಿನ ಸಮೂಹವಾದ ಈ ಗಾಜಿನ ವಿನ್ಯಾಸವು ನಾಲ್ಕೂ ವಿಭಾಗಗಳಲ್ಲಿ ವಿಂಗಡಣೆಗೊಂಡಿದೆ. ಮೊದಲ ವಿಭಾಗದಲ್ಲಿ ಅರ್ಧ ಚಂದ್ರಾಕೃತಿಯ ನಕ್ಷೆಯ ಸಂಯೋಜನೆಯಲ್ಲಿ ಹೂವಿನ ಚಿತ್ತಾರಗಳನ್ನು ರಚಿಸಲಾಗಿದೆ. ಎರಡನೆಯ ಭಾಗದಲ್ಲಿ ಜೋಡಿ ನವಿಲುಗಳ ಚಿತ್ರವಿನ್ಯಾಸವು ರೂಪಗೊಂಡಿದೆ. ಮೂರನೆಯ ವಿಭಾಗದಲ್ಲಿ ಜ್ಯಾಮಿತಿಕ ಹೂವಿನ ನಕ್ಷೆಯನ್ನು ರಚನೆ ಮಾಡಲಾಗಿದೆ. ಮಧ್ಯದಲ್ಲಿ ಸೂಕ್ಷ್ಮ ರೇಖಾ ಸಂಯೋಜನೆಯಿಂದ ನೈಸರ್ಗಿಕ ಚಿತ್ರವಿನ್ಯಾಸವನ್ನು ರಚಿಸಲಾಗಿದೆ. ಈ ನಾಲ್ಕೂ ಭಾಗಗಳಲ್ಲಿ ಕಂಡು ಬರುವ ಚಿತ್ರ ಸಮೂಹವು ಸೂಕ್ಷ್ಮತರನಾದ ರೇಖೆಗಳು ಲಾವಣ್ಯತೆ ಹಾಗೂ ಅಲಂಕಾರಿಕತೆ ಎದ್ದು ತೋರುತ್ತದೆ. ತೆಳುವಾದ ವರ್ಣಗಳ ಸಂಯೋಜನೆಯಿಂದ ಕೂಡಿದ ಈ ಚಿತ್ರ ತೊಟ್ಟಿಯು ಆಕರ್ಷಕವಾಗಿ ಅನಾವರಣಗೊಂಡಿವೆ. ಹಸಿರು, ಕೆಂಪು, ಹಳದಿ, ವರ್ಣಗಳು ಬಿಂಬಿತವಾಗಿವೆ.

**ಚಿತ್ರಸಂಖ್ಯೆ ೦೮ ಜ್ಯಾಮಿತಕ ನಕ್ಷೆ**

ಈ ಚಿತ್ರವು ಮೈಸೂರು ಅರಮನೆಯ ಬೆಳ್ಳಿಬಾಗಿಲು ಕೋಣೆಯ ಮೇಲ್ಛೆತ್ತಿನಲ್ಲಿ ಕಂಡು ಬರುತ್ತದೆ. ಚೌಕಾಕಾರದ ಈ ಚಿತ್ರ ಸಮೂಚ್ಚವು ಜ್ಯಾಮಿತಿಕ ನಕ್ಷಾವಿನ್ಯಾಸಗಳ ಮಧ್ಯದಲ್ಲಿ

ಹೂವು ಎಲೆಗಳ ನೈಸರ್ಗಿಕ ನಕ್ಷೆಗಳು ರಚನೆಗೊಂಡಿವೆ. ಇಲ್ಲಿ ಬಿಡು ಗುಲಾಬಿ, ಹಳದಿ ಬಣ್ಣಗಳು ಸಂಯೋಜಿತ ಗೊಂಡಿವೆ. ಸೂಕ್ಷ್ಮ ರೇಖಾ ಲಾವಣ್ಯವು ಚಿತ್ರದಲ್ಲಿ ಒಡಮೂಡಿದೆ.

**ಚಿತ್ರಸಂಖ್ಯೆ ೧೯ ನೈಸರ್ಗಿಕ ನಕ್ಷೆ**

ಈ ಕನ್ನಡಿ ಚಿತ್ರದ ಆಯತಾಕಾರದ ಅಂಚಿನಲ್ಲಿ ನೈಸರ್ಗಿಕ ನಕ್ಷಾವಿನ್ಯಾಸವು ರಚನೆಗೊಂಡಿದೆ. ಹೂವು, ಎಲೆ, ಕಾಂಡ, ಮೊಗ್ಗುಗಳು ಅಲಂಕಾರಯುತವಾಗಿ ರೂಪಗೊಂಡಿದ್ದು, ನಡುವೆ ಹೂವಿನ ಕುಂಡಾಲಿಯ ಚಿತ್ರವಿನ್ಯಾಸವೂ ಸಹ ರಚನೆಗೊಂಡಿದೆ. ಹೂವಿನ ಕುಂಡಲಿಯ ಮೇಲೆ ಹಿಂದಿ ಭಾಷೆಯಲ್ಲಿ ದಾನಿಗಳ ಹೆಸರನ್ನು ನಮೂದಿಸಲಾಗಿದೆ. ಕನ್ನಡಿಯ ಮೆರಗು ಮಸುಕಾಗಿದ್ದು ಚಿತ್ರವಿನ್ಯಾಸವು ಸ್ಪಷ್ಟವಾಗಿ ಬಿಂಬಿತವಾಗಿದೆ. ಈ ರೀತಿಯ ಚಿತ್ರವಿನ್ಯಾಸಗಳು ಹಲವಾರು ಸಂಖ್ಯೆಗಳಲ್ಲಿ ಕಾಣಸಿಗುತ್ತವೆ. ಇವು ಆಧುನಿಕ ತಂತ್ರಶೈಲಿಯಲ್ಲಿ ರೂಪಗೊಂಡಿದ್ದು ಇಲ್ಲಿ ಮನಗಾಣಬಹುದು.

ಗಾಜಿನ ಮೇಲಿನ ಅಲಂಕಾರಿಕ ನಕ್ಷಾವಿನ್ಯಾಸಗಳು ಬಹುತೇಕ ವಿವಿಧ ಬಗೆಯ ಗಾಜಿನ ವಸ್ತುಗಳ ಮೇಲೆ, ವಾಸ್ತುಕಟ್ಟಡಗಳ ಕಿಟಕಿ, ಬಾಗಿಲುಗಳಲ್ಲಿ ಅಳವಡಿಸಿದ ಗಾಜುಗಳ ಮೇಲೆ ವೈವಿಧ್ಯಮಯ ನಕ್ಷಾ ವಿನ್ಯಾಸಗಳು ಚಿತ್ರಿತಗೊಂಡಿವೆ. ಈ ನಕ್ಷಾ ವಿನ್ಯಾಸಗಳು ಪ್ರಕೃತಿಯಲ್ಲಿ ದೊರೆಯುವ ಎಲೆ, ಹೂವು, ಕಾಯಿ, ಬಳ್ಳಿ ವಿವಿಧ ಪಕ್ಷಿವರ್ಗ, ಪ್ರಾಣಿವರ್ಗಗಳನ್ನು ಒಳಗೊಂಡಿದ್ದು, ರೇಖೆಗಳ ಲಾವಣ್ಯತೆ, ಬಾಗುವಿಕೆ, ಬಳುಕುವಿಕೆ, ಅಲಂಕರಣದ ಆಶಯವನ್ನು ಹೊಂದಿವೆ. ಇದಕ್ಕೆ ತಕ್ಕ ವರ್ಣಗಳ ಸಂಯೋಜನೆಗಳು ಅಭಿವ್ಯಕ್ತಗೊಂಡಿವೆ. ಗಾಜಿನ ಅಲಂಕಾರಿಕ ಚಿತ್ರವಿನ್ಯಾಸಗಳು ವೈಯಕ್ತಿಕ ಶೈಲಿಯನ್ನು ಹಾಗೂ ಅನುಕರಣ ಶೈಲಿಯನ್ನು ತಿಳಿಸುತ್ತವೆ. ಅಲಂಕಾರಿಕ ವಿನ್ಯಾಸವು ಪ್ರತಿಯೊಂದು ಸಮಯದಲ್ಲಿ ಬಳಸಲ್ಪಡುತ್ತದೆ. ಯಾವುದೇ ರೀತಿಯ ಚಿತ್ರಬರೆಯಬೇಕಾದರೆ ನಕ್ಷಾವಿನ್ಯಾಸವನ್ನು ಸಂದರ್ಭಕ್ಕನುಗುಣವಾಗಿ ಬಳಸಲಾಗುತ್ತದೆ. ಇಲ್ಲಿ ನನಗೆ ಲಭ್ಯವಾದ ಚಿತ್ರವಿನ್ಯಾಸವನ್ನು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ಕರ್ನಾಟಕದ ಗಾಜಿನ ಚಿತ್ರಕಲೆಯ ವಸ್ತುವಿಯಷಗಳನ್ನು ಅಧ್ಯಯನಕ್ಕೊಳಪಡಿಸಿದಾಗ ಹಲವಾರು ಕುತೂಹಲಕರ ಸಂಗತಿಗಳು ಕಂಡುಬಂರುತ್ತವೆ. ಕರ್ನಾಟಕದ ಗಾಜಿನ ಚಿತ್ರಕಲೆಯ ವಸ್ತುವಿಷಯಗಳನ್ನು ಧಾರ್ಮಿಕ, ಸಾಮಾಜಿಕ, ಐತಿಹಾಸಿಕ, ಪ್ರಾಕೃತಿಕ ಹೀಗೆ ವಿಂಗಡಿಸಿದಾಗ ಅದರಲ್ಲಿ ಧಾರ್ಮಿಕ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ರಚನೆಯಾಗಿದ್ದು ವಿಶೇಷವಾಗಿದೆ. ಅದರಲ್ಲಿ ವೈಷ್ಣವ ಧರ್ಮದ ಚಿತ್ರಗಳು ಮೊದಲಸ್ಥಾನದಲ್ಲಿವೆ. ಕೃಷ್ಣನ ಕಥೆಗಳು ಕಲಾವಿದರಿಗೆ ಹೆಚ್ಚಿನ ಆಸಕ್ತಿಯ ವಿಷಯವಾಗಿರುವುದು ಗಾಜಿನ ಚಿತ್ರಕಲೆಯಲ್ಲಿ ಮಾತ್ರವಲ್ಲದೆ ಚಿತ್ರಕಲೆಯ ಎಲ್ಲ ಪ್ರಕಾರಗಳಲ್ಲಿ ಕಂಡುಬರುತ್ತದೆ.

ಕರ್ನಾಟಕದ ಗಾಜಿನ ಚಿತ್ರಕಲೆಯ ವಿಷಯಗಳಲ್ಲಿ ಧಾರ್ಮಿಕ ಚಿತ್ರಗಳಲ್ಲಿ ವೈಷ್ಣವ ಚಿತ್ರಗಳ ನಂತರ ಶೈವ ಧರ್ಮದ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ರಚನೆಯಾಗಿವೆ. ಶಿವನ ವಿವಿಧ ರೂಪಗಳಲ್ಲದೆ, ವೀರಶೈವ ಧರ್ಮದ ಬಸವೇಶ್ವರರನ್ನು ಒಳಗೊಂಡು ಹಲವು ಶರಣ ಶರಣೆಯರ ಚಿತ್ರಗಳು ರಚಿಸಲ್ಪಟ್ಟಿವೆ. ಇತರ ದೇವತಾ ಚಿತ್ರಗಳಲ್ಲಿ ಲಕ್ಷ್ಮೀ, ಸರಸ್ವತಿ, ಗಣಪತಿ, ಷಣ್ಮುಖ,

ಹನುಮಂತ, ಗರುಡ, ನಂದಿ ಇವರ ಚಿತ್ರಗಳು ಅಧಿಕವಾಗಿವೆ. ಪ್ರಾಣಿ ಪಕ್ಷಿಗಳಲ್ಲಿ ಆಕಳು, ಎತ್ತು, ಜಿಂಕೆ, ಹುಲಿ, ಸಿಂಹ, ಕಾಮದೇನು, ಕುದುರೆ, ಆನೆ, ನವಿಲು, ಗಿಳಿ, ಗುಬ್ಬಿ, ಪಾರಿವಾಳ, ಗಂಡಭೇರುಂಡ ರಚನೆಯಾಗಿವೆ.

ಕ್ರೈಸ್ತ ಧರ್ಮದ ಚಿತ್ರಗಳಲ್ಲಿ ವಿಶೇಷವಾಗಿ ಕ್ರಿಸ್ತನ ಜೀವನ, ಬೋಧನೆ, ಬೈಬಲ್ಲಿನ ಸನ್ನಿವೇಶಗಳು ರಚಿಸಲ್ಪಟ್ಟಿವೆ. ಹಳೆ ಒಡಂಬಡಿಕೆ, ಹೊಸ ಒಡಂಬಡಿಕೆಗಳಿಂದ ಆಯ್ದ ಸನ್ನಿವೇಶಗಳು ವಿಶೇಷವಾಗಿವೆ. ಕನ್ಯೆಮೇರಿ, ಮೇರಿ ಮತ್ತು ಬಾಲಯೇಸು, ಯೇಸು ಶಿಲುಬೆಗೇರಿರುವ ಸನ್ನಿವೇಶಗಳು ಸಾಮಾನ್ಯವಾಗಿವೆ. ಇಸ್ಲಾಂ ಧರ್ಮದ ಗಾಜಿನ ಚಿತ್ರಗಳಲ್ಲಿ ಹೂಬಳ್ಳಿಯ ನಕ್ಷೆಗಳು, ಜಾಮಿತಿಕ ನಕ್ಷೆಗಳು, ಕುರಾನಿನ ಬರಹಗಳು ಹೆಚ್ಚಾಗಿವೆ. ಕರ್ನಾಟಕದ ಒಂದೊಂದು ಪ್ರದೇಶದ ಗಾಜಿನ ಚಿತ್ರಗಳ ವಸ್ತುವಿಷಯಗಳು ಒಂದೊಂದು ಪ್ರಭಾವ ಪ್ರೇರಣೆಯಿಂದ ಭಿನ್ನವಾಗಿ ರೂಪುಗೊಂಡಿರುವುದು ಕಂಡು ಬರುತ್ತದೆ. ಮೈಸೂರು ಪ್ರಾಂತದ ಚಿತ್ರಗಳಲ್ಲಿ ಅಲ್ಲಿನ ಭಿತ್ತಿಚಿತ್ರ ಹಾಗೂ ಕಿರುರೂಪ ಚಿತ್ರಗಳಂತೆ ದುಂಡಾದ ದೇಹಾಕೃತಿಗಳು, ಹೊಳಪಾದ ವರ್ಣಲೇಪನ, ಅತಿ ಎನಿಸುವ ಆಭರಣಗಳು ಕಂಡುಬರುತ್ತವೆ. ಇಲ್ಲಿ ಕೃಷ್ಣನ ಚಿತ್ರಗಳು ಹೆಚ್ಚಿನ ಸಂಖ್ಯೆಯಲ್ಲಿವೆ.

ಸುರಪುರ ಭಾಗದಲ್ಲಿ ಅಲ್ಲಿನ ಸ್ಥಳೀಯ ಅರಸರ ಪ್ರೋತ್ಸಾಹದಿಂದ ಬೆಳೆದ ಗಾಜಿನ ಚಿತ್ರಕಲಾ ಪ್ರಕಾರವು ಇತರ ಪ್ರದೇಶಗಳಿಗಿಂತ ಶೈಲಿಯಲ್ಲಿ ಭಿನ್ನವಾಗಿರುವಂತೆ ವಸ್ತುವಿಷಯಗಳಲ್ಲಿಯೂ ಬದಲಾವಣೆ ಗೋಚರಿಸುತ್ತದೆ. ಇಲ್ಲಿ ಕೃಷ್ಣನ ಚಿತ್ರಗಳ ಜೊತೆಗೆ ಮಹಾವಿಷ್ಣುವಿನ ಅವತಾರಗಳು ಹೆಚ್ಚಿನ ಪ್ರಮಾಣದಲ್ಲಿ ರಚಿಸಿವೆ. ಅಲ್ಲದೆ ರಾಜರು, ಮಂತ್ರಿಗಳು, ಅಧಿಕಾರಿ ವರ್ಗದವರು, ಶ್ರೀಮಂತರು ತಮ್ಮ ವ್ಯಕ್ತಿ ಚಿತ್ರಗಳನ್ನು ಬರೆಸಿರುವುದು ಕಂಡುಬರುತ್ತದೆ. ಕರ್ನಾಟಕದ ಉತ್ತರ ಭಾಗದ ಬಾಗಲಕೋಟೆ, ಬೆಳಗಾಂವಿ ಜಿಲ್ಲೆಗಳಲ್ಲಿ ಹೆಚ್ಚಿನ ಗಾಜಿನ ಚಿತ್ರಗಳಿವೆ. ಅದರಲ್ಲಿ ವಿಶೇಷವಾಗಿ ಗುಳೇದಗುಡ್ಡ, ಬಾಗಲಕೋಟೆ, ಜಮಖಂಡಿ, ಬನಹಟ್ಟಿ, ಅಥಣಿ, ಬೆಳಗಾಂವಿ, ವಿಜಾಪೂರ ಮುಂತಾದವು ಪ್ರಮುಖವಾಗಿವೆ. ಇಲ್ಲಿ ಸಂಗ್ರಹಗೊಂಡಿರುವ ಕಲಾಕೃತಿಗಳಲ್ಲಿ ಹೆಚ್ಚಿನವು ವೈಷ್ಣವ ಪರವಾದ ವಿಷಯಗಳನ್ನು ಹೊಂದಿದ್ದು ಮರಾಠಾ ಶೈಲಿಯಲ್ಲಿವೆ. ಈ ಭಾಗದ ಪ್ರತಿಷ್ಠಿತ ವ್ಯಕ್ತಿಗಳು ಕ್ರಿ.ಶ. ೧೮ನೇ ಶತಮಾನದ ಹೊತ್ತಿಗೆ ಮಹಾರಾಷ್ಟ್ರ ಭಾಗದ ವ್ಯಾಪಾರಿ ಕೇಂದ್ರಗಳೊಂದಿಗೆ ವಾಣಿಜ್ಯ ಸಂಪರ್ಕ ಹೊಂದಿದ ಕಾರಣಕ್ಕಾಗಿ ಅಲ್ಲಿಂದ ಬರುವಾಗ ಗಾಜಿನ ಚಿತ್ರಗಳನ್ನು ತಂದಿರುವುದು ಇದಕ್ಕೆ ಕಾರಣವಾಗಿದೆ.

ಕರಾವಳಿ ಕರ್ನಾಟಕದ ಪ್ರದೇಶದಲ್ಲಿ ಸಂಗ್ರಹಗೊಂಡಿರುವ ಗಾಜಿನ ಚಿತ್ರಗಳು ಗೋವಾ ಪ್ರದೇಶದ ಪೋರ್ಚುಗೀಸರ ಪ್ರಭಾವ ಹೊಂದಿರುವುದು ಗಮನಾರ್ಹವಾಗಿದೆ. ಇಲ್ಲಿನ ಚಿತ್ರಗಳಲ್ಲಿ ಕ್ರೈಸ್ತ ಚಿತ್ರಗಳ ಜೊತೆಗೆ ಹಿಂದೂ ಧರ್ಮದ ಚಿತ್ರಗಳು ಕಂಡುಬರುತ್ತವೆ. ಈ ಭಾಗದ ಗಾಜಿನ ಚಿತ್ರಗಳಲ್ಲಿನ ಆಕಾರಗಳು ತೆಳುವಾದ ಮೈಕಟ್ಟು ಹೊಂದಿದ್ದು, ಸರಳ ಆಭರಣಗಳಿಂದ ಭೂಷಿತವಾಗಿವೆ. ಇಲ್ಲಿ ವೈಷ್ಣವ ಪರವಾದ ಚಿತ್ರಗಳು ಹೆಚ್ಚಾಗಿವೆ. ಅದರಲ್ಲಿ ವಿಷ್ಣುವಿನ ದಶಾವತಾರಗಳ ವಿನ್ಯಾಸಕ್ಕೆ ಪ್ರಾಮುಖ್ಯತೆ ನೀಡಲಾಗಿದೆ. ಧಾರವಾಡ, ಹುಬ್ಬಳ್ಳಿ, ವಿಜಾಪೂರ, ರಾಮದುರ್ಗಗಳಂತಹ ಕೆಲವು ಸ್ಥಳಗಳಲ್ಲಿ ಶೈವ ಚಿತ್ರಗಳಿವೆ. ಅಲ್ಲಿ ಬಸವೇಶ್ವರನ ಚಿತ್ರಗಳು ಪ್ರಮುಖವಾಗಿವೆ. ಮಠಮಾನ್ಯಗಳಲ್ಲಿ

ಸಂಗ್ರಹಗೊಂಡ ಚಿತ್ರಗಳಲ್ಲಿ ವೈವಿಧ್ಯತೆ ಇದೆ.

ಹೀಗೆ ಕರ್ನಾಟಕದ ಗಾಜಿನ ಚಿತ್ರಕಲಾವಿದರು ತಮ್ಮ ಆಸಕ್ತಿ, ಅಭಿರುಚಿ, ಧಾರ್ಮಿಕತೆ, ಪೋಷಕರು ಆಶಯ, ಪರಿಸರ, ಸಾಮಾಜಿಕ ಪ್ರಭಾವ ಇವುಗಳಿಂದಾಗಿ ಬೇರೆ ಬೇರೆ ರೀತಿಯ ವಸ್ತು ವಿಷಯಗಳಿಗೆ ಸಂಬಂಧಿಸಿದ ಕಲಾಕೃತಿಗಳನ್ನು ರಚಿಸಿರುವುದು ತಿಳಿದುಬರುತ್ತದೆ.

■■■



# ಅಧ್ಯಾಯ – ಐದು

## ಗಾಜಿನ ಮೇಲಿನ ಚಿತ್ರಕಲೆಯ ಮೇಲಾದ ಪ್ರಭಾವ, ಪ್ರೇರಣೆ, ತಂತ್ರ ಮತ್ತು ಶೈಲಿ

**ಜಾ**ಗತಿಕವಾಗಿ ಕಲೆಯ ಬೆಳವಣಿಗೆಯನ್ನು ಗಮನಿಸಿದಾಗ ಯಾವುದೇ ಕಲೆ ತೆಗೆದುಕೊಂಡರು ಆ ಕಲೆಯಲ್ಲಿ ಪ್ರಾಂತೀಯ ಪ್ರಭಾವಗಳೇ ಪ್ರಮುಖವಾಗಿರುತ್ತವೆ. ಅಭಿವ್ಯಕ್ತಿಗೆ ಅನುಭವಗಳು ಆತ್ಮವಾದರೇ, ಪ್ರಭಾವಗಳು ದೇಹವಾಗಿರುತ್ತವೆ. ಈ ಮಾತನ್ನು ಉತ್ರೇಕ್ಷಿಸದೇ ಕಲಾಕೃತಿಯೊಂದಕ್ಕೆ ಅನುಭವ ಮತ್ತು ಪ್ರಭಾವಗಳ ಗುಣಗಳನ್ನು ಸಾದೃಶ್ಯಗೊಳಿಸಿ ಕಲಾಕರತಿಯೊಂದರ ನಿಜವಾದ ನೆಲೆ ಅನಾವರಣಗೊಳ್ಳುತ್ತದೆ. ಇದಕ್ಕೆ ಕರ್ನಾಟಕದಲ್ಲಿ ಕಂಡುಬರುವ ಗಾಜಿನ ಚಿತ್ರಗಳು ಅನ್ವಯವಾಗುತ್ತವೆ.[೧]

ಕರ್ನಾಟಕದಲ್ಲಿ ಕಂಡು ಬರುವ ಗಾಜಿನ ಚಿತ್ರಗಳು ಅನೇಕ ಧಾರ್ಮಿತಕೆ, ಸಾಮಾಜಿಕತೆಯಿಂದ ಕೂಡಿದ ವೈಭವೀಕರಣದ ನೆಲೆಯಲ್ಲಿ ಪ್ರಕಟಗೊಂಡಿವೆ. ಇಂಥ ಚಿತ್ರಗಳಲ್ಲಿ ಬಡತನವು ಗೌಣವಾಗಿದ್ದು ಶ್ರೀಮಂತಿಕೆಯ ಆಡಂಬರತೆ ಎದ್ದು ತೋರುತ್ತದೆ. ಇದಕ್ಕೆ ಕಾರಣಗಳನ್ನು ಅರಿಯಬಹುದಾಗಿದೆ. ರಾಜಾಶ್ರಯದಲ್ಲಿದ್ದ ಕಲಾವಿದರು ರಾಜಮನೆತನದ ಶ್ರೀಮಂತಿಕೆಯ ಬದುಕನ್ನು ಹಾಗು ಅವರ ಶೃಂಗಾರಮಯ ಚಟುವಟಿಕೆಗಳನ್ನು ತಮ್ಮ ಚಿತ್ರಗಳಲ್ಲಿ ಅಭಿವ್ಯಕ್ತ ಪಡಿಸಿರಬಹುದು. ಕಲಾವಿದರು ತಮ್ಮ ಹೊಟ್ಟೆ ತುಂಬಿಕೊಳ್ಳಲು ಅನಿವಾರ್ಯವಾಗಿ ಅರಸರ ಆಶಯದಂತೆ ಚಿತ್ರಗಳನ್ನು ಬರೆದು ಅವರಿಗೆ ಋಣಿಯಾಗಿರುತ್ತಿದ್ದರು. ಮೊಗಲ್ ಹಾಗೂ ವಿಜಯನಗರ ಅರಸರ ಪತನಾನಂತರ ಚಿಕ್ಕ ಚಿಕ್ಕ ಸಂಸ್ಥಾನಿಕರು, ಮಾಂಡಲೀಕರು ಅಧಿಕಾರಿ ವರ್ಗದವರು ಸ್ವತಂತ್ರವಾಗಿ ಅಧಿಕಾರವನ್ನು ನಡೆಸತೊಡಗಿದರು. ಅದರಲ್ಲೂ ವಿಶೇಷವಾಗಿ ೧೮ ಮತ್ತು ೧೯ನೆಯ ಶತಮಾನದ ಸಂದಭದಲ್ಲಿ

---

೧ ಶಕೀಲ ಅಹ್ಮದ ಹಿಂಜಾರ ; ಗುಳೇದಗುಡ್ಡದ ಗಾಜಿನ ಮೇಲಿನ ಚಿತ್ರಗಳು, (ಅ.ಪ್ರ.ಯೋ.ಪ) ಪುಟ ೪೨

ಬ್ರೀಟಿಷರ ಪ್ರಾಬಲ್ಯ ಇಡೀ ಭಾರತದ ತುಂಬಾ ವ್ಯಾಪಿಸಿತ್ತು. ಎಲ್ಲ ಕ್ಷೇತ್ರಗಳಲ್ಲಿ ಅವರದೇ ನೀತಿ ನಿಯಮಗಳನ್ನು ಪಾಲಿಸಲಾಗುತ್ತಿತ್ತು. ಹೀಗಾಗಿ ಕಲಾವಿದರು ತಮ್ಮ ಸ್ವಾತಂತ್ರತೆಯನ್ನು ಕಂಡುಕೊಳ್ಳಲು ಆಶ್ರಯ ನೀಡುವ ಆಳರಸರ ನೆರಳಿನಲ್ಲಿ ಬದುಕುವಂತಾಯಿತು. ಅವರ ಆಶಯಗಳಂತೆ ಕೆಲಸ ನಿರ್ವಹಿಸಿ ಉದರ ತುಂಬಿಸಿಕೊಳ್ಳುವಂತಾಯಿತು. ಹೀಗಾಗಿ ಗಾಜಿನ ಚಿತ್ರಗಳು ಶ್ರೀಮಂತಿಕೆಯ

ವೈಭವಿಕರಣದಿಂದ ಉದ್ದೀಪನಗೊಂಡಿವೆ. ಕೆಲವು ಸಂದರ್ಭಗಳಲ್ಲಿ ಶ್ರೀಮಂತರ ಹಾಗೂ ಅಧಿಕಾರಿಗಳ ಅನೈತಿಕ ಚಟುವಟಿಕೆಗಳನ್ನು ಗಾಜಿನ ಕಲಾವಿದರು ತಮ್ಮ ಕೃತಿಗಳ ಮೂಲಕ ಹೇಳಲು ಪ್ರಯತ್ನಿಸಿದ್ದು, ಕೆಲವೊಂದು ಚಿತ್ರಗಳಿಂದ ಅರಿಯಬಹುದಾಗಿದೆ. ಹೀಗಾಗಿ ಶ್ರೀಮಂತ ಬದುಕಿನ ಪ್ರಭಾವ ಈ ಚಿತ್ರಗಳಲ್ಲಿ ಕಂಡು ಬರುತ್ತದೆ. ಅರಮನೆ ಜೀವನ ಶೈಲಿಯನ್ನು ಈ ಕಲಾವಿದರು ಅನಾಯಾಸವಾಗಿ ಅನುಸರಿಸಿರುವುದು ವಿಶೇಷವಾಗಿದೆ.

ಗಾಜಿನ ಚಿತ್ರಗಳಲ್ಲಿ ರಚನಾ ಕ್ರಮವು ಬಹುತೇಕ ಏಕಪ್ರಕಾರವಾದ ಶೈಲಿಗಳಂತೆ ಕಂಡು ಬರುತ್ತಿದ್ದರೂ ಹಲವು ವೈವಿಧ್ಯತೆಯನ್ನು ಕಾಣಬಹುದಾಗಿದೆ. ಪ್ರಧಾನವಾಗಿ ತಂಜಾವೂರು ಚಿತ್ರಶೈಲಿಯನ್ನು ಅನುಕರಿಸುತ್ತವೆ. ತಂಜಾವೂರು ಕಲಾವಿದರು ಮೊದಮೊದಲು ರಾಜಾಶ್ರಿತ ಕಲಾವಿದರು, ಹೀಗಾಗಿ ವೈಭವಿಕರಣ ಚಿತ್ರಗಳನ್ನೇ ರಚಿಸುತ್ತಿದ್ದರು. ಆ ಕಲಾವಿದರಿಗೆ ಕಾಲಕ್ರಮೇಣ ರಾಜಾಶ್ರಯ ತಪ್ಪಿಹೋದ ಮೇಲೆ ತಮ್ಮ ಅಭಿವ್ಯಕ್ತಿಗೆ ವಾಣಿಜ್ಯದ ಸ್ವರೂಪವನ್ನು ನಿಡಿ ಮುಂಬೈಯನ್ನು ತಮ್ಮ ನೆಲೆಯಾಗಿ ಸ್ಥಿರಿಕರಿಸಿಕೊಂಡರು.[೨] ಮುಂಬೈಯಂತೆ ಪೂನಾ, ಅಕ್ಕಲಕೋಟ, ಹೈದರಬಾದ, ಸಾತಾರ, ಮೈಸೂರು, ಮದ್ರಾಸಗಳಂತಹ ನಗರಗಳಲ್ಲಿ ಈ ಕಲಾವಿದರು ನೆಲೆಯನ್ನು ಕಂಡುಕೊಂಡರು. ಇದು ೧೯ನೆಯ ಶತಮಾನದ ಸಂದರ್ಭದಲ್ಲಿ ಪ್ರಮುಖ ವಾಣಿಜ್ಯ ಕಲೆಯಾಗಿ ಬೆಳೆಯಲು ಕಾರಣಿಕರ್ತರಾದರು. ಈ ಕಲಾವಿದರು ಮೊದಮೊದಲು ಧಾರ್ಮಿಕತೆಯ ಚಿತ್ರಗಳನ್ನು ಬರೆದು ಮಾರಾಟ ಮಾಡುತ್ತಿದ್ದರು. ಮೊದಲು ಕಾಗದದ ಮೇಲೆ ಚಿತ್ರಿಸಿಕೊಂಡು ನಂತರ ನಯವಾದ ಗಾಜಿನ ಮೇಲ್ಮೈಮೇಲೆ ಚಿತ್ರಿಸಿ ಕೃತಿಗಳನ್ನು ರಚನೆ ಮಾಡುತ್ತಿದ್ದರು. ನಂತರದಲ್ಲಿ ನಿಸರ್ಗ ಚಿತ್ರಗಳನ್ನು ಹಾಗೂ ಅಲಂಕಾರಿಕ ಚಿತ್ರಗಳನ್ನು ರಚಿಸಿ ಮಾರಾಟ ಮಾಡುತ್ತಿದ್ದರು. ಕಡಿಮೆ ಸಮಯ ಹಾಗೂ ಬಹಳ ಸುಲಭವಾಗಿ ರಚಿಸಬಹುದಾದ ಗಾಜಿನ ಚಿತ್ರಗಳು ಧಾರ್ಮಿಕ ಕ್ಷೇತ್ರಗಳಲ್ಲಿ ಸುಲಭ ದರಗಳಲ್ಲಿ ಮಾರಾಟವಾಗುತ್ತಿದ್ದವು. ದೇವ-ದೇವತೆಗಳ ಚಿತ್ರಗಳನ್ನು ಸ್ಥಳದಲ್ಲಿಯೇ ರಚಿಸಿ ಕೊಡುತ್ತಿದ್ದರಿಂದ ಧಾರ್ಮಿಕ ಕ್ಷೇತ್ರಗಳಲ್ಲಿ ಸುಲಭ ದರಗಳಲ್ಲಿ ಕೊಳ್ಳುವ ಕಲಾವಸ್ತುವಾಗಿ ಬೆಳೆಯಿತು. ಅದಕ್ಕಾಗಿ ಗಾಜಿನ ಚಿತ್ರಕಲೆಯನ್ನು ಒಂದು 'ಜನಪ್ರೀಯ ಕಲೆ' ಯಾಗಿತ್ತೆಂದು ಆ ಸಮಯದಲ್ಲಿ ಗುರುತಿಸಿದ್ದಾರೆ.[೩] ಈ ಕಲೆಯು ಕ್ರಮೇಣ ವಾಣಿಜ್ಯದ ಸ್ವರೂಪವನ್ನು ಪಡೆದುಕೊಂಡಿತೆನ್ನಬಹುದು.

ಕರ್ನಾಟಕದಲ್ಲಿ ಕಂಡುಬರುವ ಗಾಜಿನ ಚಿತ್ರಗಳನ್ನು ಬಹುತೇಕ ಸಂಗ್ರಹ ನೆಲೆಯಲ್ಲಿ ಗಮನಿಸಬಹುದು. ಹೀಗಾಗಿ ದಕ್ಷಿಣ ಭಾರತ ಹಾಗು ಉತ್ತರ ಭಾರತದ ಪ್ರಾಂತೀಯ ಪ್ರಭಾವದ ಚಿತ್ರಗಳು ಇಲ್ಲಿ ಕಾಣಸಿಗುತ್ತವೆ, ಜೊತೆಗೆ ವಿದೇಶಿ ಕಲಾವಿದರ ಚಿತ್ರಗಳು ಸಹ ಸಾಕಷ್ಟು ಸಂಖ್ಯೆಗಳಲ್ಲಿ ಸಂಗ್ರಹಗೊಂಡಿವೆ.

---

೨ ಶಕೀಲ ಅಹ್ಮದ ಬಿಂಜಾರ : ಗುಳೇದಗುಡ್ಡದ ಗಾಜಿನ ಮೇಲಿನ ಚಿತ್ರಗಳು. (ಅಪ್ರಬಂಧ) ಪುಟ ೪೩
೩ ಎಸ್. ಕೆ. ಅರುಣಿ : ದಖನಿ ಚಿತ್ರಕಲೆ, ಪುಟ ೧೨೦

ಗಾಜಿನ ಚಿತ್ರಗಳಲ್ಲಿ ಮುಖ್ಯವಾಗಿ ಧಾರ್ಮಿಕ ಹಾಗೂ ಸಾಂಪ್ರದಾಯಿಕ ಚಿತ್ರಗಳ ಪ್ರಭಾವ ಪ್ರಧಾನವಾಗಿ ಕಂಡುಬರುತ್ತವೆ. ಶ್ರೀಮತಿ ಜಯಾ ಅಪ್ಪಸ್ವಾಮಿಯವರು ತಮ್ಮ 'ಇಂಡಿಯನ್ ಪೈಂಟಿಂಗ್ಸ್ ಆನ್ ಗ್ಲಾಸ್' ಎಂಬ ಪುಸ್ತಕದಲ್ಲಿ ಈ ಚಿತ್ರಗಳ ಕುರಿತು ಹೀಗೆ ಹೇಳುತ್ತಾರೆ. ಗಾಜಿನ ಚಿತ್ರಗಳು ಧಾರ್ಮಿಕತೆ, ಅಲಂಕಾರಿಕತೆ, ಕಾಲ್ಪನಿಕತೆಯ ಸೂತ್ರಗಳನ್ನು ಅನುಸರಿಸುತ್ತವೆ. ಯಾವುದೇ ಕಲೆಯು ಒಂದು ವ್ಯವಸ್ಥೆಯನ್ನು ಸೃಜಿಸುತ್ತದೆ, ಅದರಂತೆ ಅನೇಕ ಕಲೆಗಳು ಒಂದರೊಳಗೊಂಡು ವಿಲೀನಗೊಂಡು ಆಯಾ ಕಲೆಗಳ ಮೇಲೆ ಪ್ರಭಾವ ಬೀರುತ್ತದೆ. ಮುಂದುವರೆಸುತ್ತಾ ಕಲೆಯ ಸಾರ ವೈಯಕ್ತಿಕವಲ್ಲ, ಅದು ಜನಪರವಾದದ್ದು ಕಲಾಕಾರ ಪರಂಪರೆಯ ಪ್ರತಿನಿಧಿಯಾಗಿ ವರ್ತಿಸುತ್ತಾನೆ. ಹೀಗಾಗಿ ಈ ಕಲಾವಿದರು ಆಶಯ ಹಾಗೂ ಕಾಲಮಾನವನ್ನು ಗಮನಿಸಿ ತಮ್ಮ ಅಭಿರುಚಿಯನ್ನು ಅವ್ಯಕ್ತಗೊಳಿಸಿದ್ದಾರೆ.

ಗಾಜಿನ ಚಿತ್ರಗಳನ್ನು ಇಲ್ಲಿ ಮುಖ್ಯವಾಗಿ ಧಾರ್ಮಿಕವಾಗಿ ಹಾಗೂ ಧಾರ್ಮಿಕೇತರವಾಗಿ ವಿಭಾಗಿಸಿಕೊಂಡು ಆ ಚಿತ್ರಗಳ ಮೇಲಾದ ಪ್ರಭಾವ ಪ್ರೇರಣೆ, ತಂತ್ರ ಮತ್ತು ಶೈಲಿಯನ್ನು ಕುರಿತು ವಿವೇಚಿಸಲಾಗುತ್ತದೆ. ಧಾರ್ಮಿಕವಾಗಿ ಶೈವ ಸಂಪ್ರದಾಯಕ್ಕೆ ಸಂಬಂಧಿಸಿದ, ವೈಷ್ಣವ ಸಂಪ್ರದಾಯಕ್ಕೆ ಸಂಬಂಧಿಸಿದ ಹಾಗೂ ಇತರೆ ಹಿಂದೂ ಧರ್ಮ ಸಂಪ್ರದಾಯಕ್ಕೆ ಸಂಬಂಧಿಸಿದ ವಿಷಯಗಳ ಪ್ರಭಾವ ಪ್ರಧಾನವಾಗಿ ಗೋಚರಿಸುತ್ತವೆ. ರಾಮಾಯಣ ಮಹಾಭಾರತಗಳಂತಹ ಮಹಾಕಾವ್ಯಗಳ ಧರ್ಮಸಾರವನ್ನು ಪ್ರಕಟಪಡಿಸುವುದಲ್ಲದೇ ನಮ್ಮ ಪುರಾಣಶಾಸ್ತ್ರಗಳ ಹಾಗು ಧಾರ್ಮಿಕ ಪುರುಷರ ವ್ಯಕ್ತಿತ್ವವನ್ನು ಪ್ರಕಟಪಡಿಸಿದ್ದು ಕಂಡು ಬರುತ್ತದೆ. ಈ ಪುರಾಣಗಳ ಸ್ತ್ರಿ ಪುರುಷರ ವೇಷಭೂಷಣಗಳಲ್ಲಿ, ರೂಪಲಕ್ಷಣಗಳಲ್ಲಿ ಆಯಾ ಕಾಲಮಾನದ ಚಿತ್ರಕಲೆಯ ಪ್ರಭಾವವು ಬಿಂಬಿತವಾಗಿವೆ. ಅಲ್ಲದೇ ಪ್ರಾದೇಶಿಕ ಆಚರಣೆಯ ವಿಧಿವಿಧಾನಗಳನ್ನು ತರಲಾಗಿದೆ. ಇಲ್ಲಿ ವಿಶೇಷವಾಗಿ ಶಿವ–ಪಾರ್ವತಿ, ಗಣಪ, ಸುಬ್ರಹ್ಮಣ್ಯ, ವೀರಬಧ್ರ, ಉಮಾಮಹೇಶ್ವರ, ಶಂಕರ, ಗಂಗೆ ಶಿವನ ತಾಂಡವನೃತ್ಯ, ಕಾಲಭೈರವ, ಭಕ್ತಮಾರ್ಕಂಡೆಯ ಹೀಗೆ ಹಲವಾರು ದೇವಾನು ದೇವತೆಗಳ ರೂಪಲಕ್ಷಣಗಳು ಶೈವ ಸಂಪ್ರದಾಯದ ಹಿನ್ನೆಲೆಯಲ್ಲಿ ಅಭಿವ್ಯಕ್ತಗೊಂಡಿದ್ದು, ಆಯಾ ದೇವತೆಗಳ ಸಂಕೇತಗಳು, ಉಡುಗೆ, ತೊಡುಗೆಗಳು, ದೇಹಧಾರ್ಡ್ಯತೆ, ಆಭರಣ ವಿನ್ಯಾಸಗಳು, ವಿಷಯ ಸನ್ನಿವೇಶಗಳು ಹಾಗೂ ವರ್ಣ ವೈವಿಧ್ಯತೆಗಳು ರಸಭಾವ ನಿರೂಪಣೆಯಿಂದ ಕೂಡಿವೆ. ಇ ಪ್ರತಿಮೆಗಳಲ್ಲಿ ಧಾರ್ಮಿಕ ಭಕ್ತಿ, ಭಯ ಹಾಗೂ ಭಾವ ಪರವಶತೆಯ ಪ್ರಭಾವ ಎದದು ತೋರುತ್ತದೆ. ಅಮದರೆ ಶಿವನ ವ್ಯಕ್ತಿತ್ವದ ಪ್ರಭಾವವನ್ನು ಈ ಕಲಾಕಾರರು ತೋರ್ಪಡಿಸಿದ್ದಾರೆ. ಚಿತ್ರಸಂಖ್ಯೆ –I–ಅ–೦೧ 'ಶಿವನ ಕುಟುಂಬ' ಈ ಚಿತ್ರವು ಶಿವ ಹಾಗೂ ಪತ್ನಿ ಪಾರ್ವಿ ಮಕ್ಕಳಾದ ಗಣಪ, ಷಣ್ಮುಗರ ಸಮೂಹ ಚಿತ್ರವಾಗಿದೆ. ಇಲ್ಲಿ ಕಲಾವಿದನು ಸಂಯೋಜನೆ ಮಾಡಿದ್ದನ್ನು ಗಮನಿಸಿದರೆ ಶಿವಪಾರ್ವತಿಯರು ಸಿಂಹಾಸನದ ಮೇಲೆ ಕುಳಿತಿರುವರು ಅವರ ಅಕ್ಕ ಪಕ್ಕ ಷಣ್ಮುಗ ಹಾಗೂ ಗಣಪರು ಕುಳಿತಿರುವರು ಇವರು ಕುಳಿತಿರುವ ಭಂಗಿ. ಭಾವನಿರೂಪಣೆ ಉಡುಗೆ ತೊಡುಗೆಗಳು ಹಾಗೂ ಹಿನ್ನೆಲೆಯು ಒಟ್ಟು ಸುಸಂಸ್ಕೃತ ದಂಪತಿಗಲ ಅನ್ಯೋನ್ಯ ಬದುಕಿನ ಆಶಯವನ್ನು ಅಭಿವ್ಯಕ್ತಿಸಿದಂತೆ ತೋರುತ್ತದೆ. ಇವರು ದೇವತೆಗಳಿದ್ದರು ಸಹ, ಸಹ ಕುಟುಂಬದ ಅನ್ಯೋನ್ಯತೆಯನ್ನು ಸಮಾಕೇತಿಸುತ್ತದೆ.

ಶಿವನ ತಾಂಡವ ನೃತ್ಯ ಚಿತ್ರದಲ್ಲಿ ಶಿವ ನಾಟ್ಯ ಸ್ವರೂಪವು ಪ್ರಕಟಗೊಂಡರೆ, ವೀರಭದ್ರ ಚಿತ್ರದಲ್ಲಿ ಅವನ ಉಗ್ರ ಸ್ವರೂಪ ಹಾಗೂ ಶಕ್ತಿಯನ್ನು ನಿರೂಪಿಸುತ್ತವೆ.

ಬಾಲಕೃಷ್ಣನ ಲೀಲೆಗಳು, ವಿಷ್ಣು, ಶ್ರೀದೇವಿ, ಭೂದೇವಿ, ಗಜೇಂದ್ರ ಮೋಕ್ಷ, ವಿಷ್ಣುವಿನ ದಶಾವತಾರಗಳ ಕಾಲ್ಪನಿಕ ಸನ್ನಿವೇಷಗಳು ನಂದ, ಯಶೋದೆ, ಗೋಪಿಕಾ ಸ್ತ್ರೀಯರ ವಸ್ತ್ರಾಪಹರಣ, ಕೃಷ್ಣ, ರುಕ್ಮಿಣಿ, ಸತ್ಯಭಾಮೆ, ಬಲರಾಮ, ಕಾಳಿಂಗ ಮರ್ಧನ ಹೀಗೆ ಹಲವಾರು ದೃಶ್ಯ ಸನ್ನಿವೇಶಗಳನ್ನು ಅಭಿವ್ಯಕ್ತಿಸುವ ವೈಷ್ಣವ ಪರಂಪರೆಯನ್ನು ಅನುಸರಿಸುವ ಚಿತ್ರಗಳಲ್ಲಿ ಆಯಾ ವ್ಯಕ್ತಿಗೆ ಸಂಬಂಧಿಸಿದಂತೆ ದೈಹಿಕ ಧಾರ್ಢ್ಯತೆ, ಉಡುಗೆ ತೊಡುಗೆ, ಭಾವನಿರೂಪಣೆ, ವರ್ಣವೈವಿಧ್ಯತೆ ಕಥಾಸನ್ನಿವೇಷಗಳು ರಸಮಯವಾಗಿ ಹಾಗೂ ಭಕ್ತಿಪರವಶತೆಯಿಂದ ಕೂಡವೆ. ಈ ಪರಪರೆಯ ಧಾರ್ಮಿಕತೆಯ ಪ್ರಭಾವ ಇಲ್ಲಿ ಉದ್ದೀಪನಗೊಂಡಿವೆ. ಈ ದೇವತೆಗಳ ಪ್ರತಿಮೆಗಳಲ್ಲಿ ಆಯಾ ದೇವತೆಗಳ ವ್ಯಕ್ತಿತ್ವದ ದೇಹಸಿರಿಯನ್ನು ದೇವತೆಗಳಾದ ಬ್ರಹ್ಮ, ಸರಸ್ವತಿ, ಲಕ್ಷ್ಮೀ, ದತ್ತಾತ್ರೇಯರಂತಹ ಪ್ರತಿಮೆಗಳೂ ಸಹ ಆ ದೇವತೆಗಳ ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತವೆ. ಕೆಲವು ಚಿತ್ರಗಳಲ್ಲಿ ಭಾರತೀಯ ಸಾಂಪ್ರದಾಯಿಕ ಚಿತ್ರಗಳು ಪ್ರಭಾವ ಕಂಡು ಬರುತ್ತವೆ, ಕೆಲವು ಚಿತ್ರಗಳಲ್ಲಿ ಜನಪದರ ಆಶಯದ ಹಾಗೂ ಅಲಂಕಾರಿಕ ಆಶಯದ ಪ್ರಭಾವವು ಗೋಚರಿಸುತ್ತವೆ. ಸ್ತ್ರೀ ಹಾಗೂ ಮರುಷ ದೇವತೆಗಳ ದೈಹಿಕ ಲಕ್ಷಣಗಳನ್ನು ತರುವಲ್ಲಿ ಆಭರಣಗಳನ್ನು ಸಂಯೋಜಿಸುವಲ್ಲಿ, ಉಡುಮಗಳನ್ನು ಸಂಯೋಜಿಸುವಲ್ಲಿ ಹಾಗೂ ಚಿತ್ರದ ಹಿನ್ನೆಲೆಯನ್ನು ಸಂಯೋಜಿಸುವಲ್ಲಿ ಈ ಪ್ರಭಾವಗಳ ವೈಪರೀತ್ಯತೆಗಳನ್ನು ಗಮನಿಸಬಹುದು. ಕೆಲವೊಂದು ಸಲ ಗಾಜಿನ ಚಿತ್ರಕಾರರು ಸ್ವತಂತ್ರವಾಗಿ ವಿಷಯ ವಿವೇಚನೆ ಮಾಡದೇ ಆ ಸಂದರ್ಭದಲ್ಲಿ ವಿಷಯ ವಿವೇಚನೆ ಮಾಡದೇ ಆ ಸಂದರ್ಬದಲ್ಲಿ ಪ್ರಚಲಿತವಿದ್ದ ಸಾಂಪ್ರದಾಯಿಕ ಕಲಾಪ್ರಕಾರಗಳನ್ನು ಅನುಸರಿಸಿರಬಹುದೆಂದು ತೋರುತ್ತದೆ. ಹೀಗಾಗಿ ಈ ಚಿತ್ರಗಳಲ್ಲಿ ಒಂದು ನಿರ್ದಿಷ್ಟತೆಯುನ್ನು ಕಾಣುವುದು ಕಷ್ಟಕರವೆನಿಸಬಹುದಾಗಿದೆ. ಕೆಲವು ಸಂದರ್ಭಗಳಲ್ಲಿ ಆಧುನಿಕ ಚಿತ್ರಕಲೆಯ ಪ್ರಭಾವವು ಈ ಚಿತ್ರಗಳಲ್ಲಿ ಮೂಡಿಬಂದದ್ದನ್ನು ಕಾಣುತ್ತೇವೆ. ಇಂಥ ಸಂದರ್ಭದ ಚಿತ್ರವೊಂದು –II–೧–ಬ–೨೩ ದಮಯಂತಿ–ಹಂಸಪಕ್ಷಿಯ ಚಿತ್ರದಲ್ಲಿ ಗಮನಿಸಬಹುದು. ಈ ಸನ್ನಿವೇಶವನ್ನು ನಿರೂಪಿಸುವಂತಹ ಚಿತ್ರವೊಂದನ್ನು ರಾಜಾ ರವಿವರ್ಮನು ಕ್ಯಾನವಾಸ ಮೇಲೆ ಚಿತ್ರಿಸಿದ್ದಾನೆ. ಈ ಎರಡೂ ಚಿತ್ರಗಳನ್ನು ಗಮನಿಸಿದಾಗ ರವಿವರ್ಮನ ದಮಯಂತಿ ಹಾಗೂ ಹಂಸಪಕ್ಷಿಯ ಚಿತ್ರದ ಪ್ರಭಾವ ಇ ಗಾಜಿನ ಚಿತ್ರದ ಮೇಲೆ ಕಂಡು ಬಮದಿರುವುದನ್ನು ಮನಗಾಣಬಹುದು. ಹೀಗೆ ಇನ್ನು ಹಲವಾರು ಚಿತ್ರಗಳು ಈ ರೀತಿಯಾಗಿ ಪ್ರಭಾವಕ್ಕೊಳಗಾಗಿದ್ದನ್ನು ವಿವೇಚಿಬಹುದಾಗಿದೆ.

ಭಾರತೀಯ ಧಾರ್ಮಿಕ ವಿಷಯಗಳನ್ನೊಳಗೊಂಡ ಗಾಜಿನ ಚಿತ್ರಗಳನ್ನು ವಿದೇಶಿ ಕಲಾಕಾರರೂ ಸಹ ರಚನೆ ಮಾಡಿದ್ದಾರೆ. ಇವರಲ್ಲಿ ಪ್ರಮುಖರೆಂದರೆ ಚೀನಾದ ಕಲಾವಿದರು. ಜಯ ಅಪ್ಪಾಸ್ವಾಮಿಯವರು ಚೀನಿಯರು ರಚಿಸಿದ ಭಾರತೀಯ ದಾರ್ಮಿಕಪರ ಚಿತ್ರಗಳು ಸಾಂಸ್ಕೃತಿಕವಾಗಿ ಕಳಾಹೀನವಾಗಿವೆ ಎಂದು ಹೇಳುತ್ತಾರೆ. ಯಾಕೆಮದರೆ ಚೀನಾದ ಗ್ರಾಹಕರ ಇಚ್ಚಾಸಾರದನ್ವಯದಂತೆ ಈ ಚಿತ್ರಗಳು ರಚನೆಗೊಂಡಿರುವುದರಿಂದ ಸರಿಯಾಗಿ ಮೂಡಿಬರಲಿಲ್ಲವೆಂದು

ಅಭಿಪ್ರಾಯ ಪಡುತ್ತಾರೆ. ಇವರ ಅಭಿಪ್ರಾಯವು ಸಮ್ಮತವಾದುದೆಂದು ಹೇಳಬಹುದು. ಬಾಗಲಕೋಟೆಯ ಶ್ರೀ ಮಹೇಂದ್ರ ಸರಾಫರವರ ಮನೆಯಲ್ಲಿ ಸಂಗ್ರಹಗೊಂಡಿರುವ 'ಶೇಷಾಶಯನ ವಿಷ್ಣು' ಹಾಗೂ 'ದತ್ತಾತ್ರೇಯ' ಚಿತ್ರಗಳು ತಕ್ಕ ಉದಾಹರಣೆಯಾಗಿವೆ. ಈ ಚಿತ್ರಗಳಲ್ಲಿರುವ ಪ್ರತಿಮೆಗಳಲ್ಲಿ ದೈಹಿಕ ರೂಪಲಕ್ಷಣಗಳು, ಉಡುಗೆ ತೊಡುಗೆ, ಆಭರಣ ವಿನ್ಯಾಸಗಳು, ವರ್ಣ ವೈವಿಧ್ಯತೆಗಳು ಈ ಆಶಯಗಳನ್ನು ಪ್ರಕಟಪಡಿಸುತ್ತವೆ. ಇನ್ನೊಂದು ಶಿರಸಿಯ ರಾಯರ ಪೇಟೆಯ ಎಂ.ಡಿ. ಇಸ್ಲೂರು ಮಾಸ್ತರರ ಮನೆಯಲ್ಲಿ ಕಂಡು ಬರುವ ಗಣಪತಿಯ ಚಿತ್ರವು ಇಂಥ ವಿವೇಚನೆಗೆ ಪುಷ್ಠಿಕೊಡುತ್ತದೆ. ಈ ಚಿತ್ರದಲ್ಲಿ ಬಡಕಲು ದೇಹ, ಚತುರ್ಭುಜ, ಪದ್ಮಾಸನದ ಭಂಗಿ, ಸಂಕೇತಗಳು, ಪ್ರತಿಮಾ ಲಕ್ಷಣಗಳು ಉಡುಪುಗಳು ಆಭರಣಗಳ ವಿನ್ಯಾಸಗಳು ಕಳಾಹೀನವಾಗಿ ಬಿಂಬಿತವಾಗಿವೆ ಎನ್ನಬಹುದು. ಚಿತ್ರದ ಕೆಳಗೆ ಬಿಳಿವರ್ಣದ ಇಲಯೊಂದನ್ನು ಚಿತ್ರಿಸಲಾಗಿದ್ದು ಇಲಿಗೆ ಎರಡು ಬಾಲಗಳನ್ನು ಸಂಯೋಜಿಸಿದ್ದು ವಿವೇಚನೆಗೆ ಎಡೆ ಮಾಡಿಕೊಡುತ್ತದೆ. ಇಲ್ಲಿ ನಮ್ಮ ಸಾಂಪ್ರದಾಯಿಕ ಗಣಪತಿಗಿಂತ ಭಿನ್ನವಾಗಿ ರೂಪಗೊಂಡಿದೆ. ಹೀಗೆ ಚೀನಾ ಕಲಾವಿದರು ರಚಿಸಿದ ಅನೇಕ ಧಾರ್ಮಿಕ ಪರ ಚಿತ್ರಗಳು ಈ ಅಂಶಗಳನ್ನು ಪ್ರಚೋದಿಸುತ್ತವೆ.

ಹಿಂದೂ ಧರ್ಮ ದೇವತೆಗಳಲ್ಲದೇ ಕ್ರೈಸ್ತ ಮತದ ಧಾರ್ಮಿಕ ಚಿತ್ರಗಳು, ಕರ್ನಾಟಕದಲ್ಲಿ ಕಂಡು ಬರುತ್ತವೆ. ಈ ಚಿತ್ರಗಳು ಸಂಪೂರ್ಣ ಕಟ್ಟಡಗಳಲ್ಲಿ ಅಳವಡಿಸಿದ ಸ್ಟೇನ್ಡ್ ಗ್ಲಾಸ್ ಚಿತ್ರಗಳಾಗಿವೆ. ಇಲ್ಲಿ ಕ್ರೈಸ್ತ ಧಮ್ಮ ಸಂಸ್ಥಾಪಕ, ದೇವ ಮಾನವ ಯೇಸುವಿನ ಜೀವನ ಚಿತ್ರವನ್ನು ಹಾಗೂ ಆ ಧರ್ಮದ ಧರ್ಮಗುರುಗಳ ಪ್ರತಿಮೆಗಳನ್ನು ಬಿಂಬಿಸಿದ್ದಾರೆ. ಇಲ್ಲಿ ಬಿಂಬಿತವಾದ ಪ್ರತಿಮೆಗಳು ಯುರೋಪಿಯನ್ ಪ್ರಭಾವದಿಂದ ಕೂಡಿದ್ದು, ಆ ಧರ್ಮದ ಧರ್ಮಸಾರವನ್ನು ಪ್ರಕಟಗೊಳಿಸುತ್ತವೆ. ದೇವ ಯೇಸುವಿನ ಜನನ, ಅವನು ಮಾನವ ಕಲ್ಯಾಣಕಕ್ಕಾಗಿ ದೇಹತ್ಯಾಗ ಮಾಡಿದ ಸಂದರ್ಭವನ್ನು ಹಾಗೂ ಜಗತ್ತನ್ನು ಗೆಲ್ಲುವ ದೃಶ್ಯವನ್ನು ಈ ಧರ್ಮಿಯ ಕಲಾಕಾರರು ಕಾಲ್ಪನಿಕತೆಗಿಂತ ವಾಸ್ತವಿಕತೆಗೆ ಮಹತ್ವ ನೀಡಿರುವುದನ್ನು ವಿವೇಚನೆಗೆ ದಾರಿ ಮಾಡಿಕೊಡುತ್ತದೆ. ಇವು ಯುರೋಪಿಯನ್ ಸಂಸ್ಕೃತಿಯನ್ನು ಎತ್ತಿ ತೋರಿಸುತ್ತವೆ. ಅಲ್ಲದೇ ಮಾನವ ಬದುಕಿನ ಏರಿಳಿತಗಳನ್ನು ಹಾಗೂ ಮಾನವ ಕಲ್ಯಾಣವನ್ನು ದೇವ ಯೇಸುವಿನ ಜೀವನ ಚರಿತ್ರೆ ಮೂಲಕ ತಿಳಿಸಿಕೊಡಲು ಪ್ರಯತ್ನಿಸಿದ್ದಾರೆನ್ನಬಹುದು.

೧೮ ಹಾಗೂ ೧೯ನೆಯ ಶತಮಾನದಲ್ಲಿ ರಚನೆಗೊಮಡಿರುವ ಬಹುತೇಕ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಕರ್ನಾಟಕದ ಕರಾವಳಿ ಪ್ರದೇಶದ ಹಾಗೂ ಅನೇಕ ನಗರಗಳ ಚರ್ಚುಗಳಲ್ಲಿ ಕ್ರೈಸ್ತ ಧಾರ್ಮಿಕಪರ ಚಿತ್ರಗಳು ಕಂಡುಬರುತ್ತವೆ. ಈ ಶತಮಾನದ ಆರಂಭದಲ್ಲೂ ಕ್ರೈಸ್ತರ ಚಿತ್ರಗಲು ಬೃಹತ್ ಪ್ರಮಾಣದಲ್ಲಿ ರಚಿತವಾಗುತ್ತಿದ್ದವು. ಯುರೋಪಿನಿಂದ ೧೮೯೯ ರಲ್ಲಿ ಮಂಗಳೂರಿಗೆ ಬಂದ ಕಲಾವಿದ ಆಂಟ್ಯೊನಿಮೊಶ್ಚಿನಿಯ (Antony Moscheni) ಅಲ್ಲಿಯ ಸಂತ ಅಲಾಸಿಯಸ್ ಚರ್ಚನಲ್ಲಿ ೧೯೦೨-೦ಳ ಅವಧಿಯಲ್ಲಿ ನೂರಾರು ಚಿತ್ರಗಳನ್ನು ಕ್ಯಾನವಾಸ ಮೇಲೆ ರಚಿಸಿ ಮೇಲ್ಛಾವಣಿಗೆ ಹೊದಿಸಿರುವುದಲ್ಲದೇ ಪಕ್ಕದ ಭಿತ್ತಿಯಲ್ಲಿ ರಚಿಸಿದ್ದಾನೆ. ಪ್ರಾರ್ಥನಾ ಮಂದಿರವಲ್ಲದೇ ಊಟದ ಮನೆಯಲ್ಲೂ ಕ್ರೈಸ್ತಪರವಾದ ಅನೇಕ ಚಿತ್ರಗಳನ್ನು ಕಾಣಬಹುದು. ಈ ಚರ್ಚಿನಲ್ಲಿ

ಕಂಡು ಬರುವ ಭಿತ್ತಿ ಚಿತ್ರಗಳ ಪ್ರಭಾವ ಮೈಸೂರಿನ ಸಂತ ಫಿಲೋಮಿನಾ ಚರ್ಚಿನ ಸ್ಟೇನ್ಡ್ ಗ್ಲಾಸ್ ಚಿತ್ರಗಳಲ್ಲಿ ಕಂಡು ಬರುತ್ತವೆ.[೪] ಕ್ರಿಸ್ತನ ಶಿಲುಬೆಯ ಹಾದಿಯ ಸನ್ನಿವೇಶ ಚಿತ್ರಗಳು ಈ ಕ್ರಮವನ್ನು ಅನುಸರಿಸುತ್ತೇವೆ. ಈ ಚಿತ್ರಗಳಲ್ಲಿನ ಪ್ರತಿಮೆಗಳು ಮಂದವಾದ ವರ್ಣ ವೈವಿಧ್ಯತೆಯನ್ನು ಹೊಂದಿವೆ. ಈ ಪ್ರತಿಮೆಗಳ ರೂಪಲಕ್ಷಣಗಳು ಸಹ ಉತ್ತಮವಾದ ಚಿತ್ರಕ್ರಮವನ್ನು ಅನುಸರಿಸಿಲ್ಲ.

ಅದೇ ಚರ್ಚದ ಮೇಲಿನ ಕಿಟಕಿಗಳಲ್ಲಿರುವ ಚಿತ್ರಗಳು ಅತ್ಯಂತ ವರ್ಣ ರಂಜಿತವಾಗಿದ್ದು ಉತ್ತಮ ಪ್ರತಿಮಾ ಲಕ್ಷಣಗಳನ್ನು ಹೊಂದಿವೆ. ಕರ್ನಾಟಕದಲ್ಲಿ ಬಹುತೇಕ ರೂಪಗೊಂಡಿರುವ ಕ್ರೈಸ್ತಪರ ಗಾಜಿನ ಚಿತ್ರಗಳು ೧೮೮೫ ರಿಂದ ೧೯೧೦ ನೆಯ ಅವಧಿಯಲ್ಲಿ ರಚಿಸಿರಬಹುದು. ಚರ್ಚುಗಳು ಅತ್ಯಂತ ಹಳೆಯದಾದರೂ ಪುನರುತ್ಥಾನದ ಸಂದರ್ಭಗಳಲ್ಲಿ ಹೊರದೇಶಗಳಿಂದ ತರಿಸಿ, ಅಳವಡಿಸಿದ ಗಾಜಿನ ಚಿತ್ರಗಳು ಹೆಚ್ಚಿನ ಸಂಖ್ಯೆಗಳಲ್ಲಿ ಕಂಡು ಬರುತ್ತವೆ. ಈ ಗಾಜಿನ ಚಿತ್ರಗಳನ್ನು ಯುರೋಪ ರಾಷ್ಟ್ರಗಳಿಂದ ತರಿಸಿರಬಹುದಾದರೂ ಪ್ರಧಾನವಾಗಿ ಫ್ರಾನ್ಸದೇಶದಿಂದ ತರಿಸಿದ್ದು ಈ ಚಿತ್ರಗಳಿಂದ ತಿಳಿಯುತ್ತದೆ. ಯಾಕೆಂದರೆ ಬಹುತೇಕ ಫ್ರೆಂಚ್ ಕಲಾವಿದರು ರಚಿಸಿದ್ದನ್ನು ಗಮನಿಸಬಹುದು. ಫ್ರೆಂಚ ಕಲಾವಿದರ ರಚನಾ ಪ್ರಭಾವವು ಈ ಚಿತ್ರಗಳಲ್ಲಿ ಮೂಡಿಬಂದಿದೆ.

ಇತ್ತೀಚಿನ ಕೆಲವು ಚಿತ್ರಗಳಲ್ಲಿ ಆಧುನಿಕ ರೀತಿಯ ರಚನಾ ವೈವಿಧ್ಯತೆಯು ಕಂಡು ಬರುತ್ತಿದ್ದು ಇತ್ತೀಚಿನ ತಂತ್ರಗಾರಿಕೆಯನ್ನು ಬಳಸಿಕೊಂಡು ಸಿಂಥೆಟಿಕ್ ವರ್ಣಗಳಿಂದ ಪ್ರತಿಮಾ ಲಕ್ಷಣಗಳಲ್ಲಿ ಅನಾವರನಗೊಳಿಸುತ್ತಿದ್ದಾರೆ. ಕೆಲವೊಂದು ಚರ್ಚಗಳಲ್ಲಿ ಧಾರ್ಮಿಕ ಪರ ವಿಚಾರಗಳನ್ನು ಸಂಕೇತರೂಪವಾಗಿ ಬಿಂಬಿಸುತ್ತಿದ್ದಾರೆ. ಇಂಥ ಚಿತ್ರಗಳು ಆಧುನಿಕತೆಯ ಪ್ರಭಾವದಿಂದ ಕೂಡಿವೆ. ಮಂಗಳೂರಿನ ಫಾದರ ಮುಲ್ಲರ್ ಚರ್ಚನಲ್ಲಿ ಮೈಸೂರಿನ ಬಾರ್ಥೋಲೋಮ್ಯುವ್ ಚರ್ಚ ಹಾಗೂ ಬಾಲ ಹೇಸುವಿನ ಚರ್ಚನಲ್ಲಿ ಇಂಥ ಚಿತ್ರಗಳು ರಚನೆಗೊಂಡಿದ್ದನ್ನು ಗಮನಿಸಬಹುದು.

ಧಾರ್ಮಿಕೇತರ ಗಾಜಿನ ಚಿತ್ರಗಳಲ್ಲಿ ಶೃಂಗಾರ ಚಿತ್ರಗಳು, ಐತಿಹಾಸಿಕ ಸ್ತ್ರೀ ಪುರುಷರ ಚಿತ್ರಗಳು, ಐತಿಹಾಸಿಕ ಘಟನೆಯ ಚಿತ್ರಗಳು ಹಾಗೂ ಅಲಂಕಾರಿಕ ಚಿತ್ರಗಳು ಪ್ರಮುಖವಾಗಿವೆ. ಆಯಾ ಕಾಲಮಾನದ ವ್ಯಕ್ತಿಗಳ ಶ್ರೀಮಂತಿಕೆಯ ಬದುಕು, ಅಧಿಕಾರ ಹಾಗೂ ಸ್ತ್ರೀ ಪುರುಷರ ಸ್ವಚ್ಛಂದ ಬದುಕಿನ ಪ್ರಭಾವಗಳು ಈ ಚಿತ್ರಗಳಲ್ಲಿ ಪ್ರಧಾನವಾಗಿ ಮೂಡಿಬಂದಿವೆ. ಅಂದಿನ ಕಲಾವಿದರಿಗೆ ರಾಜ ಮಹಾರಾಜರೆಂದರೆ ಗಂಧರ್ವರಿದ್ದಂತೆ ಎಂಬ ಭಾವನೆ. ರಾಜನು ಸಾಮಾನ್ಯ ಪೋಷಾಕುವಿನಲ್ಲಿ ಇದ್ದರೂ ರಾಣಿಯನ್ನು ಗಂಧರ್ವಕನ್ಯೆಯಂತೆ ಚಿತ್ರಿಸಿ, ರಾಜನಿಗೂ ತನ್ನ ಪಟ್ಟದ ರಾಣಿ ಗಂಧರ್ವಕನ್ಯೆ ಎಂಬಂತಹ ಭಾವಗಳನ್ನು ತುಂಬುವಷ್ಟರಮಟ್ಟಿಗೆ ಕಲಾವಿದರಿಗೆ ಅರಮನೆಯ ಜೀವನ ಪದ್ಧತಿಯ ಪ್ರಭಾವ ಬೀರಿದೆ. ಶೃಂಗಾರದ ಚಿತ್ರದಲ್ಲಿ ರತಿ ವಿಲಾಸೀ ಭಾವವನ್ನು ಶೃಂಗಾರದ ನೆಲೆಯಲ್ಲಿಯೇ ಚಿತ್ರಿಸಿದ್ದಾರೆ. ಗೌಪ್ಯವಾಗಿರುತ್ತಿದ್ದ ಅರಮನೆಯ ಶೃಂಗಾರ ಘಟನೆಗಳನ್ನು ಅತ್ಯಂತ ದಿಟ್ಟತನದಿಂದ ಹೊರಜಗತ್ತಿಗೆ ಚಿತ್ರದ ಮೂಲಕ ಅನಾವರಣಗೊಳಿಸಿರುವ ಕಲಾವಿದರು, ಪ್ರತಿಮೆಗಳಲ್ಲಿ ಭಾವಪ್ರಚೋದಕ ಗುಣಗಳನ್ನು ತುಂಬಿದ್ದಾರೆ. ರಾಜ, ರಾಣಿಯರ ಚಿತ್ರಗಳನ್ನು ಅರಮನೆಯ ವಿಲಾಸೀ ಜೀವನದ

---

೪ ಡಾ. ಅ.ಲ.ನರಸಿಂಹನ್ : ಕರ್ನಾಟಕ ಭಿತ್ತಿಚಿತ್ರ ಪರಂಪರೆ, ಪುಟ ೮೪

ಪ್ರಭಾವದಿಂದ ಕಲಾವಿದರು ರಚಿಸಿದ್ದು ಇಲ್ಲಿನ ಚಿತ್ರಗಳಲ್ಲಿ ಕಂಡುಬರುತ್ತದೆ. ಪ್ರತಿಮೆಗಳಿಗೆ ಅಲಂಕಾರಿಕ ಪೋಷಾಕುಗಳನ್ನು ಚಿತ್ರಿಸಿರುವ ಕಲಾವಿದರು, ಹಿನ್ನೆಲೆಯಲ್ಲಿ ಅರಮನೆಯ ವಾಸ್ತು ವಿನ್ಯಾಸವನ್ನು ನಿರೂಪಿಸುವ ಕಂಬಗಳ ವಿನ್ಯಾಸ, ಪರದೆಗಳನ್ನು ಪೀಠೋಪಕರಣಗಳನ್ನು ಕೂಡಾ ವೈಭವೀಕರಣದ ನೆಲೆಯಲ್ಲಿ ಚಿತ್ರಿಸಿ ಜನಸಾಮಾನ್ಯರ ಗಮನವನ್ನು ಸೆಳೆಯುವಲ್ಲಿ ಯಶಸ್ವಿಯಾಗಿದ್ದಾರೆ.[೫]

ಸಾಮಾಜಿಕ ನೆಲೆಯಲ್ಲಿ ಬಿಂಬಿತವಾದ ಶೃಂಗಾರಮಯ ಸ್ತ್ರೀ ಪುರುಷರ ಚಿತ್ರಗಳು ಭಾವ ಪ್ರಚೋದನೆಯಿಂದ ಕೂಡಿವೆ. ಹಿಂದಿನ ಕಾಲದಲ್ಲಿ ಕೆಲವು ಶ್ರೀಮಂತರು ಮನೆಯಲ್ಲಿ ಪತ್ನಿಯರಿದ್ದರೂ ಸಹ ಪರಸ್ತ್ರೀಯ ವ್ಯಾಮೋಹಗಳಾಗಿದ್ದರೂ ಹಾಗೂ ಅವರ ಸಂಗಬಯಸುತ್ತಿದ್ದರು. ಅವರ ಜೊತೆ ರತಿವಿಲಾಸಿ ಬದುಕನ್ನು ಕಳೆಯುತ್ತಿದ್ದರೆಂದು ತೋರುತ್ತದೆ. ಕೆಲವು ಶೃಂಗಾರಮಯ ಚಿತ್ರಗಳಲ್ಲಿ ಶ್ರೀಮಂತ ವ್ಯಕ್ತಿಯು ಮದುವೆಯಾಗದ ಕನೆಯರ ಜೊತೆ ಸರಸ ಸಲ್ಲಾಪದಲ್ಲಿರುವ ದೃಶ್ಯಗಳನ್ನು ಕಾಣಬಹುದು. ಇವರು ಕನೆಯರೆಂದು ಹೇಳಬಹುದು. ಸ್ತ್ರೀಯರ ಉಡುಪಿನಲ್ಲಿ ಲಂಗ; ದಾವಣಿ ಹಾಗೂ ಕುಪ್ಪಸಗಳನ್ನು ಸಂಯೋಜಿತಗೊಳಿಸಿದ್ದು ಅವಳನ್ನು ಸುಪುಷ್ಟ ದೇಹದಾರ್ಢ್ಯವನ್ನು ಹೊಂದಿರುವಂತೆ, ಹಾಲು ಬಿಳುಪಿನ ಮೈಬಣ್ಣವನ್ನು ಹೊಂದಿರುವಂತೆ ಚಿತ್ರಿತಗೊಳಿಸಿದ್ದಾರೆ. ಇಲ್ಲಿ ಯುವಕ ಅಥವಾ ಅಧಿಕಾರಿಯು ೧೯ನೇ ಶತಮಾನದ ಪುರುಷ ಚಿತ್ರದಲ್ಲಿ ಬೆಲೆಬಾಳುವ ಕೋಟು, ಸೂಟುಗಳು, ಗಾಂಭೀರ್ಯದಿಂದ ಕೂಡಿದ ಮುಖಭಾವ, ಒಪ್ಪಾಗಿ ಬಾಚಿದ ತಲೆಗೂದಲು ಶ್ರೀಮಂತಿಕೆಯನ್ನು ವೈಭವೀಕರಿಸುವಂತೆ, ಹಿನ್ನೆಲೆಯಲ್ಲಿ ಪೀಠೋಪಕರಣಗಳು ಸ್ತ್ರೀ ಜೊತೆಗಿನ ಸಲ್ಲಪಾದ ಏಕಾಂತ ಪರಿಸರವನ್ನು ಕಾಣಬಹುದು. ಇವರಲ್ಲಿ ಕೆಲವರು ಭಾರತೀಯ ಪ್ರಭಾವಿ ವ್ಯಕ್ತಿಗಳಾಗಿದ್ದರೆ ಇನ್ನೂ ಕೆಲವರು ವಿದೇಶಿ ಅಧಿಕಾರಿಗಳಾಗಿದ್ದಾರೆ. ಇಂಥ ಚಿತ್ರಗಳ ರಚನೆಗೆ ಶ್ರೀಮಂತರ ಹಾಗೂ ಅಧಿಕಾರಿಗಳ ವಿಲಾಸಿ ಬದುಕೇ ಮೂಲ ಪ್ರೇರಣೆ ಎನ್ನಬಹುದು. ಇಂಥ ಶ್ರೀಮಂತ ವ್ಯಕ್ತಿಗಳಿಗೆ ಬಲಿಯಾದವರು ಬಡವರು. ದೀನ ದಲಿತ ಹೆಣ್ಣು ಮಕ್ಕಳು, ವಿಧವೆಯರು, ದೇವದಾಸಿಯರು ಪ್ರಮುಖರೆನ್ನಬಹುದು. ಈಗಲೂ ಸಹ ಇಂಥ ನಿದರ್ಶನಗಳು ಅಲ್ಲಲ್ಲಿ ಸಿಗುತ್ತವೆ. ಹೀಗಾಗಿ ಗಾಝಿನ ಕಲಾವಿದರು ಶ್ರೀಮಂತರ ದರ್ಪವನ್ನು ಹಾಗೂ ಅನೈತಿಕ ಚಟುವಟಿಕೆಗಳನ್ನು ಸಮಾಜಕ್ಕೆ ಗೊತ್ತುಪಡಿಸಲು ಪ್ರಯತ್ನಿಸಿದಾರೆನ್ನಬಹುದು.

೧೮೫೭ ರ ಸಿಪಾಯಿ ದಂಗೆಯ ತರುವಾಯ ಭಾರತದೇಶವೂ ಸಂಪೂರ್ಣ ಬ್ರೀಟಿಷರ ಕೈವಶವಾಯಿತು. ಅವರ ಪ್ರಾಬಲ್ಯವೂ ಹೆಚ್ಚಿತು. ಸ್ಥಳೀಯ ಆಳರಸರು ದಿವಾಳಿಯಾಗಿ ಆಡಳಿತವೂ ಅಧಿಕಾರಿಗಳ ಕೈವಶವಾಯಿತು. ಆಳರಸರು ಹೆಸರಿಗೆ ಮಾತ್ರ ರಾಜರಾಗಿರುತ್ತಿದ್ದರು. ಬ್ರೀಟಿಷರು ಹೇಳಿದಂತೆ ಕೇಳುವ ಸಂದಭ್ವೂ ಒದಗಿಬಂದವು. ಇಂಥ ಸಂದರ್ಭಗಳಲ್ಲಿ ಬ್ರೀಟಿಷರನ್ನು ಓಲೈಸುವ ಸಲುವಾಗಿ ಸ್ಥಳೀಯರಲ್ಲಿ ಆಂತರೀಕ ಕಲಹಗಳು ಹುಟ್ಟಿಕೊಂಡವು. ಆಂಗ್ಲ ಅಧಿಕಾರಿಗಳು ಅಧಿಕಾರದ ಆಸೆ ತೋರಿಸಿ ಇವರಿಂದ ವಿವಿಧ ಲಾಭಗಳನ್ನು ಪಡೆದರು. ಹಾಗೂ ಸ್ಥಳೀಯ ಚಿಕ್ಕಮಟ್ಟ ಆಳರಸರ ದೌರ್ಬಲ್ಯಗಳನ್ನು ಸದುಪಯೋಗ ಪಡಿಸಿಕೊಂಡರು. ಸ್ಥಳೀಕರು ಅಧಿಕಾರದ ದುರಾಸೆಯಿಂದ ಬ್ರೀಟಿಷ ಅಧಿಕಾರಿಗಳಿಗೆ ಔತಣಕೂಟಗಳನ್ನು ಏರ್ಪಡಿಸಿ ಮದ್ಯ, ಮಾಂಸದ

೫ ಶಕೀಲ ಅಹ್ಮದ ಪಿಂಜಾರ , ಗುಳೇದಗುಡ್ಡದ ಗಾಜಿನ ಮೇಲಿನ ಚಿತ್ರಗಳು, (ಅ.ಪ್ರ.ಯೋ.ವ) ಪುಟ ೪೩

ಭೋಜನದ ಜೊತೆಗೆ ಅವರ ಬಯಕೆಯಂತೆ ಅಮಾಯಕ ಹೆಣ್ಣುಮಕ್ಕಳನ್ನು ಅವರ ಮೋಜಿಗೆ ಬಲಿಕೊಡುತ್ತಿದ್ದರು. ಹೀಗೆ ತಮ್ಮ ಕೆಲಸ ಪಡೆಯುವ ಸಲುವಾಗಿ ಎಂಥ ಕೆಲಸವನ್ನು ಮಾಡಿಕೊಡುತ್ತಿದ್ದರು. ಇದಕ್ಕಾಗಿಯೇ ಆಳರಸರು ಪತನಗೊಳ್ಳುವ ಕಾರಣವೆನ್ನಬಹುದು. ಇಂಥ ಕೆಲಸಗಳನ್ನು ನೋಡುತ್ತಿದ್ದ ಗಾಜಿನ ಚಿತ್ರಕಲಾವಿದರು ಅವರ ಶೃಂಗಾರದ ಮೋಜುಗಳ ಚಿತ್ರಣವನ್ನು ಕೃತಿಗಳ ಮೂಲಕ ಹೊರಜಗತ್ತಿಗೆ ತಿಳಿಸಲು ಯತ್ನಿಸಿದ್ದಾರೆ. ಇದು ಕೂಡಾ ಇಂಥ ಚಿತ್ರಗಳ ರಚನೆಗೆ ಪ್ರೇರಣೆಯಾಗಿರಬಹುದೆಂದು ತೋರುತ್ತದೆ. ಯಾಕೆಂದರೆ ಯಾವುದೆ ಕಲೆಯ ಕಲಾವಿದನ ಅಭಿವ್ಯಕ್ತಿಗೆ ಮೂಲ ಪ್ರೇರನೆ ತನ್ನ ಸುತ್ತಮುತ್ತಲಿನ ಪರಿಸರದಲ್ಲಿ ನಡೆಯುತ್ತಿದ್ದ ದಿನಮಾನದ ಚಟುವಟಿಕೆಗಳೇ ಕಾರಣೀಭೂತವಾಗಿದೆ. ಹೀಗಾಗಿ ಹೆಣ್ಣು ಗಂಡುಗಳ ಪ್ರೇಮ ಸಲ್ಲಾಪದ ಅನೇಕ ಚಿತ್ರಗಳು ರೂಪಗೊಳ್ಳಲು ಕರಣವಾಗಿವೆ.

ಶೃಂಗಾರದ ಕೆಲವೊಂದು ಚಿತ್ರಗಳಲ್ಲಿ ಸ್ತ್ರೀ ಚಿತ್ರಗಳಿಗೆ ರೆಕ್ಕೆಗಳನ್ನು ಸಂಯೋಜಿಸಿದ್ದು ಕಂಡು ಬರುತ್ತದೆ. ಇಂಥ ಸ್ತ್ರೀಯ ಉಡುಪುಗಳು ಭಾರತೀಯ ಹಾಗೂ ಪಾಶ್ಚಿಮಾತ್ಯ ಪದ್ಧತಿಯನ್ನು ಅನುಕರಿಸುತ್ತವೆ. ಕೆಲವು ಸ್ತ್ರೀಯರು ಪುರುಷರ ಜೊತೆ ಸಲ್ಲಪಾದಲ್ಲಿ ನಿರತರಾಗಿದ್ದಾರೆ. ಇನ್ನೂ ಕಲೆವರು ವೀಣೆಯಂತಹ ಸಂಗೀತ ಸಾಧನಗಳನ್ನು ಹಿಡಿದು ಗಂಧರ್ವರಂತೆ ಬಿಂಬಿತವಾಗಿದ್ದಾರೆ. ಇವರ ವೇಷಭೂಷಣಗಳೂ ಸಹ ವೈಶಿಷ್ಟ್ಯ ಪೂರ್ಣವಾಗಿವೆ. ಈ ರೀತಿಯ ಚಿತ್ರಗಳು ಸಾಕಷ್ಟು ಸಂಖ್ಯೆಗಳಲ್ಲಿ ರಚನೆಗೊಂಡಿರುವುದನ್ನು ಇಲ್ಲಿ ಗಮನಿಸಬಹುದು. ೧೮ನೆಯ ಶತಮಾನ ಪ್ರವರ್ಧಮಾನದಲ್ಲಿ ಕೆಲವು ನಾಟಕಗಳು ತುಂಬಾ ಪ್ರಸಿದ್ಧಿಯನ್ನು ಹೊಂದಿದ್ದವು. ರಂಗ ಸಜ್ಜಿಕೆಗೆ ಬೇಕಾದಂತಹ ನಾಟಕದ ಕಥಾಸಾರವನ್ನು ಗಾಜಿನ ಚಿತ್ರಗಳ ಮೂಲಕ ಬಿಂಬಿಸಲಾಗಿದೆ. ಇದರ ಕಥಾನಾಯಕ ನಾಯಕಿಯರ ಶೃಂಗಾರ ಚೇಷ್ಟೆಯ ದೃಶ್ಯಾವಳಿಗಳನ್ನು ಕಲಾವಿದರು ಗಾಜಿನ ಮೇಲೆ ಚಿತ್ರಿಸಿರಬಹುದೆಂದು ವಿವೇಚನೆಗೆ ಎಡೆಮಾಡಿಕೊಡುತ್ತದೆ.

೧೮೫೩ರ ಸುಮಾರಿಗೆ ರಚನೆಗೊಂಡ ಇಂದರಸಭಾ ಎಂಬ ನಾಟಕವನ್ನು ಲಖನೌದ ಕೊನೆಯ ನವಾಬ ವಾಜೀವ ಅಲಿಶಾಹ್‌ನಂ ಆ ಆಸ್ಥಾನದಲ್ಲಿದ್ದ ಅಮಾನತ ಎಂಬ ಕವಿಯು ಬರೆದನು. ಈ ನಾಟಕವು ಆ ಸಂದರ್ಭದಲ್ಲಿ ಸಾಕಷ್ಟು ಪ್ರಸಿದ್ಧಿಯನ್ನು ಪಡೆಯಿತು. ಈ ನಾಟಕದ ಪ್ರತಿಯೊಂದು ದೃಶ್ಯಗಳು ಎಲ್ಲರ ಮನೆ ಮಾತಾಗಿತ್ತು. ಇಂದರ ಸಭಾದ ಕಥಾವಸ್ತುವೆನೆಂದರೆ ಅಮರಾವತಿಯ ದೊರೆ ಇಂದ್ರ, ಇವನ ನಾಲ್ಕು ಪರೀ ಅಥವಾ ಅಪ್ಸರೆಯರು ಹೀಗೆ ಪಾತ್ರಗಳ ವಿವರ. ಒಬ್ಬ ಅಪ್ಸರೆಯು ಭೂಲೋಕದ 'ಗುಲ್‌ಫಾಮ್' ಎಂಬ ಯುವಕನನ್ನು ಮೋಹಿಸಿದ್ದರಿಂದ ಇಂದ್ರ ಅವಳ ರೆಕ್ಕೆಗಳನ್ನು ಕತ್ತರಿಸಿ ಯುವಕನನ್ನು ಬಾವಿಯಲ್ಲಿ ನೂಕಿಸಿ ಶಿಕ್ಷೆ ಕೊಡುತ್ತಾನೆ. ಅಪ್ಸರೆ ಯೋಗಿನಿಯಾಗಿ ತನ್ನ ಸಂಗೀತದಿಂದ ಇಂದ್ರನನ್ನು ಮೆಚ್ಚಿಸಿ ತನ್ನ ಪ್ರೀಯಕರನನ್ನು ಮರಳಿ ಪಡೆಯುತ್ತಾಳೆ.[೬] ಈ ನಾಟಕದ ಕಥಾವಸ್ತು ಈ ಚಿತ್ರಗಳಿಗೆ ಪ್ರೇರಣೆಯಾಗಿರಬಹುದು.

ಇಂದ್ರನ ನಾಲ್ಕು ಪರೀಗಳಲ್ಲಿ ಒಬ್ಬಳು ಪುಷ್ಪ್ಯರಾಗದ ಅಪ್ಸರೆ, ಇನ್ನೊಬ್ಬಳು ಮಾಣಿಕ್ಯದ ಅಪ್ಸರೆ, ಮುರನೆಯವಳು ನೀಲಮಣಿಯ ಅಪ್ಸರೆ, ನಾಲ್ಕನೆಯವಳು ನಾಯಕಿ ಅವಳೇ,

೬. ಡಾ. ಕೃಷ್ಣಾ ಕಟ್ಟಿ : (ಸಂ) ಶ್ರೀಕೃಷ್ಣ ಪಾರಿಜಾತ, ಪುಟ ೧೯

ಪಚ್ಚೆ ಅಪ್ಸರೆ, ಇಲ್ಲಿ ನಾಲ್ಕು ರತ್ನಗಳನ್ನು ಸಾಂಕೇತಿಕವಾಗಿ ಬಿಂಬಿಸಿದ್ದಾರೆ. ಇಂಥ ಪಾತ್ರವರ್ಗಗಳು ಸಹ ಶೃಂಗಾರ ಸ್ತ್ರೀ ಪುರುಷ ಚಿತ್ರಗಳಿಗೆ ಪ್ರೇರಣೆಯಾಗಬಹುದು. ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಈ ನಾಟಕವೂ ಸಾಂಸ್ಕೃತಿಕ ಸಂಕರವನ್ನುಂಟು ಮಾಡಿತು.[7] ಈ ಸಂದರ್ಭದಲ್ಲಿ ಬ್ರಿಟಿಷ ಪ್ರಾಬಲ್ಯವಿದ್ದುದರಿಂದ ಈ ನಾಟಕದ ದೃಶ್ಯಾವಳಿಗಳನ್ನು ತಮ್ಮ ಆಶಯದಂತೆ ಕಲಾವಿದರಿಂದ ರಚಿಸಲು ಪ್ರೇರೆಪಿಸಿರಬಹುದೆಂದು ತೋರುತ್ತದೆ. ಚಿತ್ರ-II-೧-ಅ-೨೨, ೨೩, ೨೪ ಚಿತ್ರಗಳನ್ನು ಗಮನಿಸಬಹುದು. ಇಲ್ಲಿ ಬಿಂಬಿತವಾದ ಸ್ತ್ರೀ ಪುರುಷರು ಪಾತ್ರಧಾರಿಗಳಂತೆ ಚಿತ್ರಿತಗೊಂಡಿದ್ದಾರೆ. ಇವರ ವೇಷಭೂಷಣಗಳು ಸಹ ವೈವಿಧ್ಯಮಯವಾಗಿವೆ. ಚಿತ್ರ ಚಿತ್ರ-II-೧-೩೨, ೩೩ ಈ ಚಿತ್ರಗಳನ್ನು ಗಮನಿಸಬಹುದಾಗಿದೆ. ಇಕೆಲವು ಚಿತ್ರಗಳಲ್ಲಿ ಸ್ತ್ರೀಯರು ಅರ್ಧನಗ್ನವಾಗಿ ಸಂಗೀತವನ್ನು ನುಡಿಸುತ್ತಾ ವಿರಹವನ್ನು ಅನುಭವಿಸುತ್ತಿದ್ದಾರೆ. ಇಂಥ ಚಿತ್ರಗಳಿಗೂ ಈ ನಾಟಕದ ಕಥಾವಸ್ತು ಪ್ರೇರಣೆಯಾಗಬಹುದೆಂದು ತೋರುತ್ತದೆ. ಚಿತ್ರ-II-೧-ಅ-೩೪, ೧೪ ಈ ಚಿತ್ರಗಳನ್ನು ಗಮನಿಸಬಹುದಾಗಿದೆ.

ಐತಿಹಾಸಿಕ ಹಿನ್ನೆಲೆಯ ಸ್ತ್ರೀ-ಪುರುಷರ ಭಾವಚಿತ್ರಗಳು ಹಾಗೂ ಐತಿಹಾಸಿಕ ಘಟನೆಯ ಸಂಯೋಜನಾ ಚಿತ್ರಗಳು ಸಾಕಷ್ಟು ಸಂಖ್ಯೆಯಲ್ಲಿ ರೂಪಗೊಂಡಿದ್ದನ್ನು ಮನಗಾಣಬಹುದು. ಇವು ಕೂಡಾ ಭಾರತೀಯ ಹಾಗೂ ವಿದೇಶಿ ಕಲಾವಿದರಿಂದ ರಚಿಸಲ್ಪಟ್ಟಿವೆ. ಕೆಲವು ಚಿತ್ರಗಳು ಭಾರತೀಯ ಸಂಪ್ರದಾಯದ ಪ್ರತಿಮೆಗಳನ್ನು ಹೊಂದಿದ್ದರೆ ಕೆಲವೊಂದು ಯುರೋಪಿಯನ್ ಶೈಲಿಯನ್ನು ಹೊಂದಿವೆ. ಭಾವಚಿತ್ರಗಳಲ್ಲಿ ಸ್ಥಳೀಯ ರಾಜ ರಾಣಿಯರ ಹಾಗೂ ಬ್ರೀಟಿಷ ಅಧಿಕಾರಿಗಳ ಭಾವಚಿತ್ರಗಳು ಕಂಡು ಬರುತ್ತವೆ. ದಖನ್ನದಲ್ಲಿ ವಿಜಯನಗರ ಸಾಮ್ರಾಜ್ಯ ಹಾಗೂ ದಖನ್ ಸುಲ್ತಾನ ರಾಜ್ಯಗಳು ಪತನ ಹೊಂದಿದ ನಂತರ ೧೮ನೆಯ ಶತಮಾನದಲ್ಲಿ ಕೇಂದ್ರಿಕೃತ ಆಡಳಿತ ಕೊನೆಗೊಂಡು ಸ್ಥಳೀಯ ಸಾಮಂತರು ತಲೆ ಎತ್ತಿದರು. ಈ ಸಾಮ್ರಾಜ್ಯಗಳಲ್ಲಿ ಸ್ಥಾಪನೆಯಾಗಿದ್ದು ಚಿತ್ರಕಲಾ ಕಾರ್ಖಾನೆಗಳು ರಾಜಾಶ್ರಯವಿಲ್ಲದೆ ಮುಚ್ಚತೊಡಗಿದವು. ಇಲ್ಲಿ ಕೆಲಸ ಮಾಡುತ್ತಿದ್ದ ಕಲಾವಿದರು ಚಿಕ್ಕಪುಟ್ಟ ಅರಸರ ಅಥವಾ ಶ್ರೀಮಂತ ಐರೋಪ್ಯ ಅಧಿಕಾರಿಗಳನ್ನು ಆಶ್ರಯಿಸ ತೊಡಗಿದರು. ಈಸ್ಟ ಇಂಡಿಯಾ ಕಂಪನಿಯ ಅಧಿಕಾರಿಗಳು ಈ ಕಲಾವಿದರಿಂದ ತಮ್ಮ ವೈಯಕ್ತಿಕ ಚಿತ್ರಗಳನ್ನು ಹಾಗೂ ತಮ್ಮ ಮೆಚ್ಚಿನ ಪ್ರಾಣಿ, ಪಕ್ಷಿ, ನಾಡಿನ ಐತಿಹಾಸಿಕ ಸ್ಮಾರ ಇತ್ಯಾದಿಗಳನ್ನು ರಚಿಸಿಕೊಳ್ಳುತ್ತಿದ್ದರು.[8] ಹೀಗಾಗಿ ಸ್ಥಳೀಯ ಹಾಗೂ ಐರೋಪ್ಯ ಕಲಾವಿದರು ಈ ಪ್ರಭಾವ ವ್ಯಕ್ತಿಗಳ ಚಿತ್ರಗಳನ್ನು ಬರೆದು ಉದರ ತುಂಬಿಸಿಕೊಳ್ಳುತ್ತಿದ್ದರೆಂದು ತಿಳಿಯುತ್ತದೆ. ಮುಂಬೈ, ಗೋವಾ, ವಿಶಾಖಪಟ್ಟಣ, ಮದ್ರಾಸ್, ಹೈದರಬಾದ್ ಮುಂತಾದ ಸ್ಥಳಗಳು ಕಂಪನಿ ಚಿತ್ರಕಲೆಯ ಪ್ರಮುಖ ಕೇಂದ್ರಗಳಾಗಿದದ್ದು, ಈ ಕೇಂದ್ರಗಳ ಮೂಲಕ ಜನರ ಬೇಡಿಕೆಗನುಗುಣವಾಗಿ ಗಾಜಿನ ಮೇಲೆ ಚಿತ್ರಬರೆದು ಸಾಂಸ್ಕೃತಿಕ ಸಂಪನ್ನತೆಯನ್ನು ಮೆರೆದಿದ್ದಾರೆ. ಈ ಸಂದರ್ಭಗಳಲ್ಲಿ ಈ ಚಿತ್ರಗಳ ಬೇಡಿಕೆ ಅಪಾರ ಪ್ರಮಾಣದಲ್ಲಿತ್ತೆನ್ನಬಹುದು. ಶ್ರೀಮಂತ ಹಾಗೂ ಅಧಿಕಾರಿಗಳ ಪ್ರೇರಣೆಯೇ ಈ

---

೭ ತಾ. ಕೃಷ್ಣಾ ಕಟ್ಟಿ : (ಸಂ) ಶ್ರೀಕೃಷ್ಣ ಪಾರಿಜಾತ, ಪುಟ ೧೬-೧೧
೮ ಎಸ್.ಕೆ. ಅರುಣಿ ; ದಖನಿ ಚಿತ್ರಕಲೆ, ಪುಟ ೧೧೭
೯ ಅದೇ-

ಚಿತ್ರಗಳಿಗೆ ಕಾರಣವಾಗಿದೆ. ಚಿತ್ರ-II-೧-ಬ-೧೮, ೧೨, II-೧-ಅ-೦೧, ೧೪-೨-ಬ-೦೧,೦೩, ೦೨ ಹೀಗೆ ಹಲವಾರು ಚಿತ್ರಗಳನ್ನು ಗಮನಿಸಿರಿ. ಈ ಚಿತ್ರಗಳು ಐರೋಪ್ಯ ಶೈಲಿಯ ಪ್ರಭಾವಕ್ಕೆ ಒಳಗಾಗಿವೆ.

ಪ್ರಕೃತಿಯನ್ನು ನಿದರ್ಶಿಸುವ ಹಲವಾರು ನಿಸರ್ಗ ದೃಶ್ಯಗಳು ಗಾಜಿನ ಮೇಲೆ ಚಿತ್ರಿತಗೊಂಡಿದ್ದನ್ನು ಕಾಣುತ್ತೇವೆ. ಈ ಚಿತ್ರಗಳು ವೈವಿಧ್ಯಮಯ ಅಳತೆಗಳಲ್ಲಿ ಹಾಗೂ ತೈಲವರ್ಣಗಳಲ್ಲಿ ರೂಪಿತಗೊಂಡಿವೆ. ಈ ಚಿತ್ರಗಳು ಅಲಂಕಾರದ ಆಶಯಗಳನ್ನು ಹೊಂದಿದ್ದು ಗಿಡ, ಮರ, ನದಿ, ಸರೋವರ, ಬೆಟ್ಟ, ನವಿಲು ಹಾಗೂ ಇತರ ಪಕ್ಷಿಗಳ ಸಮೂಹವು ಅಭಿವ್ಯಕ್ತಗೊಂಡಿವೆ. ಇಂಥ ಚಿತ್ರಗಳು ಜನರ ಪರಿಸರ ಪ್ರಜ್ಞೆಯನ್ನು ಹಾಗೂ ಸಕಲ ಪ್ರಾಣಿಗಳ ಹಾಗೂ ಪಕ್ಷಿಗಳ ಮೇಲಿನ ಪ್ರೀತಿಯನ್ನು ನಿದರ್ಶಿಸುತ್ತವೆ. ಇಜನರ ಪರಿಸರ ಕಾಳಜಿಯ ಪ್ರಭಾವ ಇಂಥ ಚಿತ್ರಗಳಲ್ಲಿ ಒಡಮೂಡಿ ಬಂದಿವೆ ಎನ್ನಬಹುದು. ಯಾವುದೇ ಕಲೆಯು ರೂಪಗೊಳ್ಳಬೇಕಾದರೆ ಪರಿಸರ ಪ್ರಜ್ಞೆ ಸೌಂದರ್ಯ ಹಾಗೂ ಅಲಂಕಾರ ಪ್ರಜ್ಞೆ ಇದ್ದಾಗ ಮಾತ್ರ ಸಾಧ್ಯವಾಗುತ್ತದೆ. ಪರಿಸರ ಚಿತ್ರಗಳಲ್ಲಿ ಆಧುನಿಕ ಚಿತ್ರಕಲೆಯ ಪ್ರಭಾವ ಎದ್ದು ತೋರುತ್ತಿದ್ದು ತ್ರಿಕರಣ ಮೈವಳಿಕೆಯ ಪ್ರಜ್ಞೆ, ತೈಲವರ್ಣದ ಬಳಕೆ ಹಾಗೂ ನೈಜ ವಿವರಣೆಯು ಈ ಚಿತ್ರಗಳಲ್ಲಿ ಕಾಣಸಿಗುತ್ತವೆ. ಕೆಲವೊಂದು ಚಿತ್ರಗಳಲ್ಲಿ ಜನಪದದ ಆಶಯಗಳೂ ಒಡಮೂಡಿದ್ದನ್ನು ವಿವೇಚಿಸಬಹುದು. ಚಿತ್ರ-II-೩-೦೧,೦೨,೦೩,೦೪ ಈ ಚಿತ್ರಗಳನ್ನು ಗಮನಿಸಿರಿ ಜನಪದ ಅಂಶಗಳು ಕಂಡುಕೊಳ್ಳಲು ಚಿತ್ರ-II-೩-೦೫,೦೬,೦೭ ಇವನ್ನು ವಿವೇಚಿಸಬಹುದು.

ಅಲಂಕಾರಿಕ ನೆಲೆಯಲ್ಲಿ ಅನೇಕ ನಕ್ಷಾವಿನ್ಯಾಸಗಳನ್ನೊಳಗೊಂಡ ಚಿತ್ರಗಳು ರಚನೆಗೊಂಡಿವೆ. ಇವು ಸಂಪೂರ್ಣ ಅಲಂಕಾರಕ ಆಶಯವನ್ನು ಸಾಂಪ್ರದಾಯಿಕ ಹಾಗೂ ಆಧುನಿಕ ರೀತಿಯ ರೇಖಾ ವಿನ್ಯಾಸಗಳಿಂದ ಕೂಡಿವೆ. ಪ್ರಕೃತಿಯಲ್ಲಿ ಕಂಡು ಬರುವ ಪ್ರಾಣಿ, ಪಕ್ಷಿಗಳು, ಎಲೆಗಳು, ಹೂವುಗಲು, ಬಳ್ಳಿಗಳು ಹಾಗೂ ವೈವಿಧ್ಯಮಯ ವಸ್ತುಗಳನ್ನು ಜ್ಯಾಮಿತಿಕವಾಗಿ ನೈಸರ್ಗಿಕವಾಗಿ ಹಾಗೂ ಅಲಂಕಾರಿಕವಾಗಿ, ಚಿತ್ರವಿನ್ಯಾಸಗಳನ್ನು ಬಿಂಬಿಸಲಾಗಿದೆ. ಈ ಚಿತ್ರಗಳಿಗೆ ಮೂಲಪ್ರೇರಣೆ ಪ್ರಕೃತಿಯಲ್ಲಿರುವ ಸಸ್ಯಸಂಪತ್ತು ಹಾಗೂ ಪ್ರಾಣಿ ಸಂಪತ್ತೇ ಕಾರಣವೆನ್ನಬಹುದು, ಇಂಥ ಚಿತ್ರಗಳಲ್ಲಿ ಕಲಾಕಾರರ ಕುಶಲತೆಯು ಅನಾವರಣಗೊಂಡಿದೆ.

ಅಲಂಕಾರಿಕ ನಕ್ಷಾವಿನ್ಯಾಸಗಳು ಮೊಗಲ್ ಅರಸರ ಕಾಲದಿಂದ ಕಂಪನಿ ಸರಕಾರದ ಕಾಲದ ವೈವಿಧ್ಯಮಯ ಗಾಜಿನ ವಸ್ತುಗಳ ಮೇಲೆ ಹಾಗೂ ವಾಸ್ತು ಕಟ್ಟಡಗಳಲ್ಲಿನ ಗಾಜಿನ ಚಿತ್ರಗಳಲ್ಲಿ ಗಣನೀಯವಾಗಿ ಬೆಳವಣಿಗೆಯಾದುದನ್ನು ಕಾಣುತ್ತೇವೆ. ಗಾಜು ಒಂದು ಆಕರ್ಷಕ ವಸ್ತುವಾಗಿರುವುದರಿಂದ ಇದರ ಮೇಲೆ ಇದರ ಮೇಲೆ ವೈವಿಧ್ಯಮಯ ನಕ್ಷೆಗಳನ್ನು ಬರೆಯಲು ಕೊರೆಯಲು ಹಾಗೂ ಬೇಕಾದ ಬಣ್ಣಗಳನ್ನು ತುಂಬಬಹುದಾಗಿದೆ. ಹೀಗಾಗಿ ಈ ವಸ್ತುಗಳ ಉತ್ಪಾದನೆಯು ೧೯-೨೦ ನೆಯ ಶತಮಾನಗಳಲ್ಲಿ ವಿಪುಲವಾಗಿ ಬೆಳೆದು ಬಂದಿತು. ಇದಕ್ಕೆ ಆ ಕಾಲದ ಶ್ರೀಮಂತ ವರ್ಗದವರ ವೈಭವ ಬದುಕಿನ ಪ್ರೇರಣೆಯೇ ಕಾರಣವೆನ್ನಬಹುದು.

ಇಂದು ಗಾಜನ್ನು ಹೇರಳವಾಗಿ ಬಳಸುತ್ತಿದ್ದು ಪ್ರತಿಯೊಂದು ಕ್ಷೇತ್ರದಲ್ಲಿ ಇದರ ಪ್ರಮಾಣ ಶೇಕಡಾ ೫೦ ರಿಂದ ೬೦ ರಷ್ಟು ಬಳಕೆಯಾಗುತ್ತಿದೆ. ಆಯಾ ಉಧ್ಯಮದವರು ತಮಗೆ ಬೇಕಾದಂತೆ ಪರಿವರ್ತಿಸಿಕೊಂಡು ಪ್ರಯೋಜನ ಮೂಲದ ಜೊತೆಗೆ ಕಲಾ ಮೂಲವನ್ನಾಗಿ ಬಳಸಿಕೊಳ್ಳುತ್ತಲಿದ್ದಾರೆ.

**ತಂತ್ರ ಮತ್ತು ಶೈಲಿ**

ಗಾಜಿನ ಮೇಲಿನ ಚಿತ್ರಕಲೆ ಮೂಲರ್ತ ಪಾಶ್ಚಿಮಾತ್ಯ ಕಲೆ, ಈ ಕಲೆಯು ಭಾರತದಲ್ಲಿ ೧೭-೧೮ ನೆಯ ಶತಮಾನಗಳಲ್ಲಿ ಕಾಣಿಸಿಕೊಂಡು ೨೧ ನೆಯ ಶತಮಾನದ ತನಕವೂ ಪ್ರಚಲಿತದಲ್ಲಿತ್ತು. ಅದರಲ್ಲೂ ವಿಶೇಷವಾಗಿ ೧೮-೧೯ನೆಯ ಶತಮಾನಗಳ ಕಾಲಾವಧಿಯಲ್ಲಿ ಉತ್ತುಂಗ ಸ್ಥಿತಿಯಲ್ಲಿತ್ತೇಂದು ಹೇಳಬಹುದು. ಈ ಕಲೆಯು ಪಾಶ್ಚಿಮಾತ್ಯರ ವ್ಯಾಪಾರದ ಮೂಲಕ ಭಾರತದ ಕರಾವಳಿ ಪ್ರದೇಶಗಳಲ್ಲಿ ಕಾಣಿಸಿಕೊಂಡಿತು. ಅದರಲ್ಲಿ ಕರ್ನಾಟಕದ ಕರಾವಳಿ ಭಾಗವೂ ಒಂದಾಗಿದೆ. ಈ ಕಲೆಯನ್ನು ಚೀನಾದ ವ್ಯಾಪಾರಸ್ಥರು ವಿಪುಲವಾಗಿ ಬಳಸಿಕೊಂಡು ಸಮುದ್ರ ತೀರದ ಮೂಲಕ ಕರಾವಳಿ ದೇಶಗಳಿಗೆ ರಫ್ತು ಮಾಡುತ್ತಿದ್ದರು. ಕ್ರಮೇಣ ಸ್ವತಃ ಚೀನಾದ ಕಲಾವಿದರೇ ಆಯಾ ದೇಶಗಳಿಗೆ ಹೋಗಿ ಅಲ್ಲಿ ಆಶ್ರಯ ಪಡೆದು ಈ ಕಲೆಯನ್ನು ಹರಡಿದರು. ಚೀನಾದ ಕಲಾವಿದರು ಯುರೋಪಿಯನ್ ಶೈಲಿಯ ಈ ಕಲೆಯ ತಂತ್ರಗಳನ್ನು ಸರಿಯಾಗಿ ಬಳಸಿಕೊಂಡು ತಮ್ಮದೇ ವಿಷಯಗಳನ್ನು ಹಾಗೂ ತಂತ್ರಗಳನ್ನು ವಿನಿಯೋಗಿಸಿಕೊಂಡು ಸ್ವತಂತ್ರ ಶೈಲಿಯಲ್ಲಿ ಚಿತ್ರಗಳನ್ನು ಬರೆಯಲು ಕಲಿತರು. ಟಿಪ್ಪು ಸುಲ್ತಾನನು ಯುರೋಪಿಯನ್ ರಾಷ್ಟ್ರಗಳ ಜೊತೆ ಅದರಲ್ಲೂ ಫ್ರೆಂಚರ ಜೊತೆಗೆ ಉತ್ತಮ ವಾಣಿಜ್ಯ ವಹಿವಾಟನ್ನು ಹೊಂದಿದ್ದನು. ಇದರ ಪರಿಣಾಮವಾಗಿ ಯುರೋಪಿಯನ್ ವ್ಯಾಪಾರಿಗಳು, ಕಲಾವಿದರು ಹಾಗು ಇತರ ಕುಶಲಗಾರರು ಭಾರತದಲ್ಲಿ ಬಂದು ನೆಲೆಸುವಂತಾಯಿತು. ಇವರಿಗೆ ವ್ಯಾಪಾರ ಮಾಡಲು ಮುಕ್ತ ಅವಕಾಶ ಮಾಡಿಕೊಟ್ಟಿದ್ದರಿಂದ ಕಲಾವಿದರೂ ಸಹ ತಮ್ಮ ಅಸ್ತಿತ್ವವನ್ನು ಕಂಡು ಕೊಳ್ಳುವಂತಾಯಿತು.

ಟಿಪ್ಪು ಸುಲ್ತಾನನ ಮರಣದ ನಂತರ ಬ್ರೀಟಿಷರ ಪ್ರಾಬಲ್ಯ ಹೆಚ್ಚಿ, ಕಲಾವಿದರು ಹಾಗೂ ವ್ಯಾಪಾರಿಗಳು ಹೊಸ ತಿರುವುಗಳನ್ನು ಕಂಡುಕೊಂಡರು. ಗಾಜಿನ ಚಿತ್ರಗಳ ಉಗಮಕ್ಕೆ ಹಾಗೂ ಬೆಳವಣಿಗೆ ಟಿಪ್ಪುಸುಲ್ತಾನನು ಮೂಲ ಪ್ರೇರಣೆಯನ್ನಬಹುದು. ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಟಿಪ್ಪು ಸುಲ್ತಾನನಿಗೆ ಸಂಬಂದಿಸಿದ ಹಾಗೂ ಅವನ ಸಮಕಾಲೀನ ವ್ಯಕ್ತಿಗಳ ಗಾಜಿನ ಚಿತ್ರಗಳು ಸಂಗ್ರಹಗೊಂಡಿವೆ. ಈ ಕೃತಿಗಳು ಅವನ ಕಲಾಪ್ರೇಮುವನ್ನು ಸಾರುತ್ತವೆ. ಕರ್ನಾಟಕದಲ್ಲಿ ಕಂಡು ಬರುವ ಬಹುತೇಕ ಗಾಜಿನ ಚಿತ್ರಗಳು, ವಿದೇಶಿ ಕಲೆಯ ತಂತ್ರಗಳನ್ನೇ ಅನುಸರಿಸುತ್ತವೆ. ಅದರಲ್ಲೂ ವಿಶೇಷವಾಗಿ ಚೀನಾ ಕಲಾವಿದರ ರಚನಾ ತಂತ್ರಗಳನ್ನೇ ನಮ್ಮ ಗಾಜಿನ ಚಿತ್ರಗಳು, ಪ್ರಾರಂಭದಲ್ಲಿ ಅನುಸರಿಸಿದ್ದನ್ನು ಕಾಣುತ್ತೇವೆ.

ಜಯಾ ಅಪ್ಪಾಸ್ವಾಮಿಯವರು ಹೇಳುವಂತೆ ಚೀನಿಯರು ರಚಿಸಿದ ಕಲಾಕೃತಿಗಳನ್ನು ಮೂರು ಭಾಗಗಳನ್ನಾಗಿ ವಿಂಗಡಿಸುತ್ತಾರೆ. ಒಂದನೆಯದು ಭಾರತೀಯ ಧಾರ್ಮಿಕ ಉದ್ದೇಶವುಳ್ಳವು. ಎರಡನೆಯದು ಮಾದರಿಯಾಗಬಲ್ಲ ಮಹಿಳಾ ಚಿತ್ರಗಳು, ಮೂರನೆಯದು ಸಾಮಾನ್ಯ ಚಿತ್ರಗಳು.

ಧಾರ್ಮಿಕ ವಿಷಯವುಳ್ಳ ಚಿತ್ರಗಳು ಸರಿಯಾಗಿ ಮೂಡಿ ಬರಲಿಲ್ಲ. ಇವು ಚೀನಾದಲ್ಲಿ ಗ್ರಾಹಕರ ಮೇರೆಗೆ ರಚಿತವಾದವು ಹಾಗೂ ಸಾಂಸ್ಕೃತಿಕ ಹಿನ್ನೆಲೆ ಇರದಿದ್ದರಿಂದ ಕಳಾಹೀನವಾಗಿವೆ. ಇವರ ಚಿತ್ರಗಳಲ್ಲಿ ವೈಯಕ್ತಿಕತೆಗಿಂತ ಶೈಲಿ ಮತ್ತು ತಂತ್ರಗಾರಿಕೆ ಪ್ರಮುಖವಾಗಿವೆ ಎನ್ನುತ್ತಾರೆ. ಚೀನಿಯ ಚಿತ್ರಗಳಲ್ಲಿ ಬಹುತೇಕ ನೀಲಿ, ಕೆಂಪು ಮಿಶ್ರಿತ ನೀಲಿ, ಕಪ್ಪು ಮಿಶ್ರಿತ ಬಿಳಿ, ಹಳದಿ ಹಾಗೂ ಬಿಳಿ ವರ್ಣಗಳು ಬಳಕೆಗೊಂಡಿವೆ. ಇವರ ಚಿತ್ರಗಳಲ್ಲಿ ತೈಲವರ್ಣ ಹಾಗೂ ರೇಖಾ ಪ್ರಾಧಾನ್ಯತೆಗಿಂತ ನೈಜ ವಿವರಣೆಯು ಪ್ರಧಾನವಾಗಿ ಕಂಡುಬರುತ್ತದೆ. ಮೇಲಾಗಿ ವಿಷಯ ಸಂಯೋಜನೆಗಿಂತ ಸೂಕ್ಷ್ಮತೆಗೆ ಹೆಚ್ಚು ಪ್ರಾಧಾನ್ಯತೆ ಕೊಡಲಾಗಿದೆ. ಈ ಚಿತ್ರಕಾರರು ಗಾಜಿನ ಒಂದು ಮೇಲ್ಮೈ ಮೇಲೆ ಚಿತ್ರಿಸಿ ಇನ್ನೊಂದು ಮುಖವಾಗಿ ವೀಕ್ಷಿಸುವ ತಂತ್ರಗಾರಿಕೆಯು ವಿಶಿಷ್ಟವಾದುದು. ಈ ರೀತಿಯಾಗಿ ಬರೆದ ಚಿತ್ರವನ್ನು ಸುಸಜ್ಜಿತ ಮರದ ಚವಕಟ್ಟಿಗೆ ಹೊದಿಸಿ ಹಿಂಬದಿಗೆ ಮರದ ಹಲಗೆಯನ್ನು ಬಡಿದು ತೂಗುಹಾಕುವ ವಿಧಾನವು ವಿಶಿಷ್ಟವಾದುದು.

ಚೀನಾ ಕಲವಿದರ ರಚನಾತಂತ್ರಗಳನ್ನೇ ನಮ್ಮ ಗಾಜಿನ ಕಲಾವಿದರು ಅನುಸರಿಸಿದಾರೆ. ಇವರು ನಮ್ಮ ಸಾಂಪ್ರದಾಯಿಕ ಚಿತ್ರಗಳನ್ನು ಬಳಸಿಕೊಂಡು ತಮ್ಮದೇ ಆದ ತಂತ್ರಗಾರಿಕೆಯಿಂದ ಚಿತ್ರ ಬರೆಯಲು ಕಲಿತರು, ಇವರು ಪೌರಾಣಿಕ ಹಾಗೂ ಸಾಮಾಜಿಕ ಚಿತ್ರಗಳನ್ನು ಬರೆದು ತಮ್ಮ ಕಲಾ ಪ್ರೌಢಿಮೆಯನ್ನು ಮೆರೆದಿದ್ದಾರೆ. ತೈಲ ಹಾಗೂ ಟೆಂಪರಾ ವರ್ಣಗಳನ್ನು ಬಳಸಿಕೊಂಡು ಅನೇಕ ಚಿತ್ರಗಳನ್ನು ಬರೆದರು, ಜೊತೆಗೆ ಮೆರಗು ಕಾಗದಗಳನ್ನು ಚಿನ್ನದ ಹಾಳೆ ಬ್ಯಾಗಡಿ ಕಾಗದಗಳನ್ನು ಹಾಗೂ ಮೆರಗು ಬಣ್ಣಗಳನ್ನು ಬಳಸಿಕೊಂಡು ತಮ್ಮ ಕುಶಲತೆಯನ್ನು ಈ ಚಿತ್ರಗಳ ಮೂಲಕ ತೋರಿಸಿದ್ದಾರೆ. ಈ ಚಿತ್ರಕಾರರು ದಪ್ಪವಾದ ಕಪ್ಪು ವರ್ಣದಿಂದ ಬಾಹ್ಯರೇಖೆಗಳನ್ನು ಬರೆದು ಅಪಾರದಕ್ಷ ಪದ್ಧತಿಯಂತೆ ವರ್ಣವಿನ್ಯಾಸವನ್ನು ಪ್ರತಿಮೆಗಳಲ್ಲಿ ತರಲಾಗಿದೆ. ಈ ಕಲಾವಿದರು ಪ್ರಾದೇಶಿಕ ಚಿತ್ರ ಪದ್ಧತಿಯನ್ನೇ ಅನುಸರಿಸಿದ್ದಾರೆ.

ಕರ್ನಾಟಕದಲ್ಲಿ ಕಂಡುಬರುವ ಗಾಜಿನ ಚಿತ್ರಗಳು ವೃತ್ತಿಪರ ಕಲಾವಿದರು, ಹವ್ಯಾಸಿ ಕಲಾವಿದರು, ಕುಶಲಕಲಾವಿದರು ಹಾಗೂ ಜನಪದ ಕಲಾವಿದರ ಕೈಯಲ್ಲಿ ಮೂಡಿಬಂದಿವೆ. ವೃತ್ತಿಪರ ಕಲಾವಿದರ ಚಿತ್ರಗಳಲ್ಲಿ ಶಿಷ್ಟತೆಯಿಂದ ಕೂಡಿದ ಪ್ರತಿಮೆಗಳು, ರೇಖೆಗಳು, ವರ್ಣವೈವಿಧ್ಯತೆಯ ಸಂಯೋಜನೆಯು ಒಡಮೂಡಿವೆ. ಹವ್ಯಾಸಿ ಕಲಾವಿದರ ಚಿತ್ರಗಳಲ್ಲಿ ಕ್ರಮ ಬದ್ಧತೆಯನ್ನು ಅನುಸರಿಸಿಲ್ಲ., ಕುಶಲ ಕಲಾವಿದರ ಚಿತ್ರಗಳಲ್ಲಿ ಪರಿಕರಗಳ ವೈಭವಿಕರಣ, ಆಡಂಭರತೆ ಎದ್ದು ತೋರುತ್ತದೆ. ಜನಪದ ಚಿತ್ರ ಕಲಾವಿದರಲ್ಲಿ ಸ್ವಚ್ಛಂದ ರೇಖೆಗಳು ನಿರ್ಭಯದ ವರ್ಣ ವೈವಿಧ್ಯತೆ ವಿಷಯ ವಿವೇಚನೆಯು ಮೂಡಿಬಂದಿವೆ. ಇವರೆಲ್ಲರ ತಂತ್ರವು ಒಂದೇಯಾಗಿದ್ದರೂ ನಿರೂಪಣಾ ವಿಧಾನ ಹಾಗೂ ಅನುಭವದ ವೈಪರೀತ್ಯತೆ ಕಂಡುಬರುತ್ತದೆ.

ಸ್ಟೇನ್ಡ್‌ಗ್ಲಾಸ್ ಚಿತ್ರಗಳಲ್ಲಿ ಯುರೋಪಿಯನ್ ಚಿತ್ರಗಳ ತಂತ್ರವನ್ನೇ ಅಳವಡಿಸಲಾಗಿದೆ. ರೋಮನ್ ಹಾಗೂ ಗಾತಿಕ್ ಪದ್ಧತಿಯ ರಚನಾಕ್ರಮವನ್ನು ಈ ಚಿತ್ರಗಳಲ್ಲಿ ಅನುಸರಿಸಲಾಗಿದೆ.ಕೆಲವು ಸ್ಟೇನ್ಡ್ ಗ್ಲಾಸ್ ಚಿತ್ರಗಳು ಆಧುನಿಕ ರಚನಾ ತಂತ್ರಗಳನ್ನು ಒಳಗೊಂಡಿದ್ದು, ಗಾಜಿನ ಒಂದು ಮೇಲ್ಮೈಯನ್ನು ಬೇಕಾದಂತೆ ಏರಿಳಿತಗಳನ್ನು ಕೊರೆದು, ಉಬ್ಬು ತಗ್ಗುಗಳನ್ನು ಹಾಗೂ ಬೇಕಾದ

ಮೈವಳಿಕೆಯನ್ನು ತಂದು ರಾಸಾಯನಿಕ ವರ್ಣಗಳಿಂದ ರಚನೆಗೊಂಡಿವೆ. ಇವು ಪಾರದರ್ಶಕ ವರ್ಣಪದ್ಧತಿಯನ್ನು ಒಳಗೊಂಡಿವೆ.

ಕನ್ನಡಿಯ ಗಾಜಿನ ಚಿತ್ರಗಳು ಸಹ ಸಾಕಷ್ಟು ಸಂಖ್ಯೆಯಲ್ಲಿ ರಚನೆಗೊಂಡಿರುವುದನ್ನು ಗಮನಿಸಬಹುದು. ಕ್ಯಾಲೆಂಡರ ಚಿತ್ರಗಳು ಬಂದ ನಂತರ ದೇವಾನುದೇವತೆಗಳ ಹಾಗೂ ಭಾವಚಿತ್ರಗಳನ್ನು ಬಳಸಿಕೊಂಡು ಕನ್ನಡಿ ಚಿತ್ರಗಳನ್ನು ರಚನೆ ಮಾಡಲಾಗುತ್ತಿತ್ತು. ಜಯಾ ಅಪ್ಪಾಸ್ವಾಮಿಯವರು. ಕನ್ನಡಿ ಚಿತ್ರಗಳು ವಿಶಿಷ್ಟವಾದವು, ಕುಶಲ ಕೆಲಸಗಾರರು ಇವುಗಳನ್ನು ರಚಿಸಲು ಕಲಾವಿದನ ಮೇಲೆ ಅವಲಂಬಿತನಾಗಿದ್ದ, ಅವುಗಳ ನಡುವೆ ಅಲ್ಲಲ್ಲಿ ಸೂಕ್ತವಾಗಿ ಬಂಗಾರದ ಬಣ್ಣವನ್ನು ತುಂಬಲ್ಪಡುತ್ತಿತ್ತು. ಉಡುಪುಗಳಿಗೆ ಬಣ್ಣದ ನಂತರ ಅಲಂಕಾರಕ್ಕಾಗಿ ಪೆನ್ನಿನಿಂದ ಆಭರಣಗಳನ್ನು ಚಿತ್ರಿಸುತ್ತಿದ್ದರು. ಬಣ್ಣವು ಉದರದಂತೆ ಗಟ್ಟಿಗೊಳಿಸಲು ಮೊಟ್ಟೆ, ಸುಣ್ಣ ಮತ್ತು ಅಂಟನ್ನು ಉಪಯೋಗಿಸುತ್ತಿದ್ದರೆಂದು ಹೇಳುತ್ತಾರೆ. ಕಲಾವಿದರು ಆಯಾ ಕಾಲಕ್ಕನುಗುಣವಾಗಿ ಸಿಗುವ ಪರಿಕರಗಳನ್ನು ಬಳಸಿಕೊಂಡು ಚಿತ್ರಗಳನ್ನು ಬರೆಯುತ್ತಿದ್ದರು. ಅಂದರೆ ರಚನಾ ತಂತ್ರಗಾರಿಕೆಯು ಕಾಲಕ್ರಮದಂತೆ ಕಲಾವಿದನ ಸೃಜನಶೀಲತೆಯನ್ನು ಪರೀಕ್ಷೆಗೊಡ್ಡುತ್ತದೆ.

ಕರ್ನಾಟಕದಲ್ಲಿ ಸಂಗ್ರಹಗೊಂಡಿರುವ ಹಾಗೂ ಸಂಗ್ರಹೇತರ ಗಾಜಿನ ಚಿತ್ರಗಳು ಬಹುತೇಕ ತಂಜಾವೂರು, ಮೈಸೂರು ಹಾಗೂ ಮರಾಠ ಶೈಲಿಯಲ್ಲಿ ರಚನೆಗೊಂಡಿವೆ. ಈ ಮೂರು ಶೈಲಿಗಳಲ್ಲದೇ ಭಾರತೀಯ ಪ್ರಾದೇಶಿಕ ಚಿತ್ರಕಲೆಯ ಪ್ರಭಾವವು ಸಹ ಕೆಲವೊಂದು ಚಿತ್ರಗಳಲ್ಲಿ ಕಂಡು ಬರುತ್ತವೆ. ಶೈಲಿ ಎಂಬುದನ್ನು ಅರ್ಥೈಸಬಹುದಾದರೆ ಯಾವುದೇ ಒಂದು ಕೆಲಸದ ನಿರ್ದಿಷ್ಟ ಕ್ರಮ, ಅಂದರೆ ಒಂದು ಕೆಲಸದ ನಿರ್ದಿಷ್ಟತೆಯನ್ನು ಗುರುತಿಸುವುದು. ಹೀಗಾಗಿ ಕಲೆಯ ಪ್ರಾಕಾರಗಳನ್ನು ಸಹ ಒಂದು ಕೆಲಸದ ಕ್ರಮ ಅಥವಾ ನಿರ್ದಿಷ್ಟತೆಯಿಂದ ಕಂಡುಕೊಳ್ಳಬಹುದು. ಗಾಜಿನ ಚಿತ್ರಗಳಲ್ಲಿಯೂ ಸಹ ಇಂಥ ನಿರ್ದಿಷ್ಟತೆಯನ್ನು ಗುರುತಿಸುವುದೇ ಆ ಕಲೆಯ ಕಲಾಶೈಲಿಯ ಬಗೆ. ಕರ್ನಾಟಕದಲ್ಲಿ ಸಾಕಷ್ಟು ಬಗೆಯ ಸಾಂಪ್ರದಾಯಿಕ ಚಿತ್ರಶೈಲಿಗಳಿವೆ. ೧೮-೧೯ನೆಯ ಶತಮಾನಗಳ ಸಂದರ್ಭಗಳಲ್ಲಿ ಹಲವಾರು ಕಲಾ ಪ್ರಕಾರಗಲು ಹುಟ್ಟಿಕೊಳ್ಳುತ್ತವೆ. ಉತ್ತರದಲ್ಲಿ ಮೊಗಲ್, ದಖನಿ, ವಿಜಯನಗರ ಅರಸರ ಪತನದ ನಂತರ ಅನೇಕ ಸಮ್ಮಿಶ್ರ ಶೈಲಿಗಳು ಉದಯಗೊಮಡವು. ಇವು ಒಂದು ಕಲಾ ಪ್ರಕಾರಗಲ ಜೊತೆಗೆ ಮಗದೊಂದು ಕಲಾಪ್ರಕಾರಗಳು, ಮಿಲನಗೊಂಡು ಸ್ವತಂತ್ರ ಶೈಲಿಗಳಾಗಿ ಮಾರ್ಪಾಟಗೊಂಡವು. ಅಂಥ ಕಲಾ ಶೈಲಿಗಳಲ್ಲಿ ತಂಜಾವೂರು ಮರಾಠ ಮತ್ತು ಮೈಸೂರು ಪ್ರಮುಖವಾದವು.

ಮರಾಠ ವಾಡಾ, ಮೈಸೂರು ಮತ್ತು ತಂಜಾವೂರು ಅರಸರು ಗಾಜಿನ ಚಿತ್ರಕಲಾ ವಿಧಾನಕ್ಕೆ ಹೆಚ್ಚಿನ ಪ್ರಾಧಾನ್ಯತೆ ನೀಡಿ ಈ ಕಲೆಯನ್ನು ಪ್ರೋತ್ಸಾಹಿಸಿ ಪೋಷಿಸಿರುವ ಕಾರಣದಿಂದಾಗಿ ಇಡೀ ದಕ್ಷಿಣ ಭಾರತದ ತುಂಬ ಈ ಕಲಾ ಪ್ರಕಾರವು ವ್ಯಾಪಿಸಿಕೊಂಡು, ಅಸಂಖ್ಯೆ ಕಲಾಕೃತಿಗಳು ಬೆಳಕಿಗೆ ಬಂದವು. ಮರಾಠರ ಸರದಾರ ಶಿವಾಜಿಯ ಹೋರಾಟಗಳಿಂದ ಪ್ರಾರಂಭಗೊಂಡು ರಾಜ್ಯಭಾರದ ಕೊನೆಯತನಕವೂ ಯುದ್ಧ ಮಾಡುವುದರಲ್ಲಿಯೇ ತೊಡಗಿತ್ತು. ಮರಾಠರ ಇತಿಹಾಸ ಕೇವಲ ಯುದ್ಧಗಳ ಇತಿಹಾಸವೆಂದು ವಿದ್ವಾಂಸರ ಅಭಿಪ್ರಾಯ. ಬೇರೆ ರಾಜ್ಯಗಳಲ್ಲಿ ಬೆಳೆದು

ಬಂದಂತೆ ಕಲೆ ವಾಸ್ತು ಶಿಲ್ಪ ಮತ್ತು ಸಾಹಿತ್ಯ ಇವರ ಕಾಲದಲ್ಲಿ ಬೆಳೆದು ಬಂದಿಲ್ಲವೆಂದು ಅಭಿಪ್ರಾಯ ಪಡುತ್ತಾರೆ.[೧೦]

ಮರಾಠರು ಕೇವಲ ಮಹಾರಾಷ್ಟ್ರ ರಾಜ್ಯವಲ್ಲದೇ ದಕ್ಷಿಣದ ತಮೀಳುನಾಡಿನವರೆಗೂ ತಮ್ಮ ರಾಜ್ಯವಿಸ್ತಾರಗೊಳಿಸಿದ್ದರು. ಆ ಕಾರಣದಿಂದಾಗಿ ಉತ್ತರ ಮತ್ತು ದಕ್ಷಿಣ ಭಾರತದ ಕಲೆಯ ಕಲಾವಿದರು ಇವರ ಆಶ್ರಯ ಪಡೆದಿದ್ದರು. ಈ ವಿಭಿನ್ನ ಶೈಲಿಯ ಹಿನ್ನೆಲೆಯ ಕಲಾವಿದರಿಂದ ರಚನೆಯಾದ ಚಿತ್ರಕಲೆ ಮರಾಠರ ಆಶ್ರಯದಲ್ಲಿ ಬೆಳೆದು ಬಂದಿತು. ಇದನ್ನು ಮರಾಠ ಚಿತ್ರಕಲೆ ಎಂದು ಕರೆಯಲ್ಪಡುತ್ತದೆ.[೧೧] ಹೀಗಾಗಿ ಇವರ ಕಲೆಯಲ್ಲಿ ಸಮ್ಮಿಶ್ರ ಶೈಲಿಗಳ ಜೊತೆಗೆ ಮರಾಠ ಚಿತ್ರಶೈಲಿ ಎಂದು ಗುರುತಿಸುವ ಮಟ್ಟಕ್ಕೆ ಬೆಳೆದು ಬಂದಿತು. ಇವರ ಕಲೆಯನ್ನು ಭಿತ್ತಿಚಿತ್ರಕಲೆ, ಚಿಕಣಿ ಚಿತ್ರಕಲೆ ಹಾಗೂ ಗಾಜಿನ ಚಿತ್ರಕಲೆ ಎಂದು ವಿಭಾಗಿಸಿಕೊಂಡು ನೋಡಲಾಗುತ್ತದೆ. ಈ ಮೂರು ವಿಧಾನಗಳಲ್ಲಿ ಒಂದೇ ರೀತಿಯ ಶೈಲಿಯನ್ನು ಕಾಣಬಹುದಾಗಿದೆ. ಎಸ್.ಕೆ. ಅರುಣಿಯವರು ಮರಾಠ ಚಿತ್ರಕಲೆಯ ಮುಖ್ಯ ಲಕ್ಷಣಗಳನ್ನು ಹೀಗೆ ಗುರುತಿಸುತ್ತಾರೆ. ಮರಾಠ ಚಿತ್ರಶೈಲಿಯ ಮುಖ್ಯ ಲಕ್ಷಣಗಳೆನೆಂದರೆ ಮುಕ್ಕಾಲು ಭಾಗ ಪಾರ್ಶ್ವಮುಖವನ್ನು ಆಕೃತಿಗಳು ಹೊಂದಿವೆ. ಆಕೃತಿಗಳ ಗಾತ್ರ ಹಾಗೂ ಪ್ರಮಾಣತೆಗೆ ಪ್ರಧಾನ್ಯತೆ ನೀಡಿಲ್ಲ. ಆಕೃತಿಗಳ ಸೌಮದರ್ಯತೆಗೆ ಹೆಚ್ಚು ಪ್ರಾಮುಖ್ಯತೆ ಕೊಡಲಾಗಿದೆ. ಪುರುಷ ಹಾಗೂ ಸ್ತ್ರೀಯರ ಚಿತ್ರಗಳು ಸ್ಥಳೀಯ ಮರಾಠ ಜನಾಂಗದ ದೈಹಿಕ ಲಕ್ಷಣಗಳನ್ನು ಹೋಲುತ್ತವೆ. ಎತ್ತರವಾದ ಹಣೆ, ಚುಪಾದ ಮೂಗು, ದಪ್ಪತುಟಿ, ಅಗಲವಾದ ಮುಖ, ನೀಳವಾದ ಕೇಶ, ಚಿಕ್ಕ ಗಾತ್ರದ ಕತ್ತು, ಅಗಲವಾದ ಎದೆ ಇತ್ಯಾದಿ ದೈಹಿಕ ಲಕ್ಷಣಗಳು.

ಸ್ತ್ರೀಯ ಉಡುಪುಗಳು ಮಹಾರಾಷ್ಟ್ರದ ಸ್ತ್ರೀಯರು ಧರಿಸುವ ಶೈಲಿಯಲ್ಲಿ ಸೀರೆ ಧರಿಸಿರುವರು. ಕೈಯಲ್ಲಿ ಬಳೆ, ಕೊರಳುಗಳಲ್ಲಿ ಮುತ್ತಿನ ಹಾಗು ಚಿನ್ನಾಭರಣಗಳು, ವಿವಿಧ ಬಗೆಯ ಕರ್ಣಾಭರಣಗಳು ಮೂಗಲ್ಲಿ ಉದ್ದನೆ ಮುತ್ತಿನ ನತ್ತು, ಧರಿಸಿದ್ದರೆ ಸ್ತ್ರೀಯರು ನೀಳವಾದ ಕೇಶವನ್ನು ಹೊಂದಿದ್ದು ಅವುಗಳನ್ನು ಹಿಂಭಾಗದಲ್ಲಿ ಗಟ್ಟಿಯಾಗಿ ಕಟ್ಟಿಕೊಂಡಿರುವರು. ಮಶ್ಚಿಮ ಮಹಾರಾಷ್ಟ್ರದ ಮಹಿಳೆಯರು ಹಣೆಯ ಮೇಲೆ ಅಡ್ಡಲಾಗಿ ಗೆರೆಯಂತೆ ಕುಂಕುಮ ಧರಿಸುವ ಸಂಪ್ರದಾಯವಿದ್ದು ಅದೇ ರಿತಿಯ ಕುಂಕುಮವನ್ನು ಚಿತ್ರದ ಸ್ತ್ರೀಯರ ಹಣೆಯ ಮೇಲೆ ಧರಿಸಿರುವರು. ಇವರ ಚಿತ್ರಗಳಲ್ಲಿ ಪ್ರಧಾನ ಆಕೃತಿಯನ್ನು ತೋರಿಸಬೇಕಾದರೆ ವಿಶಿಷ್ಟವಾದ ಅಲಂಕಾರ ಮಾಡಿದ್ದು ಕಂಡು ಬರುತ್ತದೆ.

ಮರಾಠ ಚಿತ್ರಗಳಲ್ಲಿ ಆಕೃತಿಗಳ ಬಾಹ್ಯರೇಖೆಗಳು ದಪ್ಪ ರೇಖೆಗಳಲ್ಲಿ ಕಂಡು ಬರುತ್ತವೆ. ವರ್ಣಗಳನ್ನು ಚಪ್ಪಟೆಯಾಗಿ ಬಾಹ್ಯರೇಖೆಗಳ ಮಧ್ಯದಲ್ಲಿ ಲೇಪಿಸಲಾಗಿದೆ. ಇವರು ಹೆಚ್ಚಾಗಿ ಉಷ್ಣವರ್ಣಗಳನ್ನು ಬಳಸಿದ್ದು, ಹಳದಿ ಬಣ್ಣ ಪ್ರಮುಖವಾಗಿದೆ. ದಖನಿ ಮೂಲದ ಕಲಾವಿದರು ರಚಿಸಿದ ಚಿತ್ರಗಳಲ್ಲಿ ಪಾರದರ್ಶಕ ವರ್ಣಗಳನ್ನು ಬಳಸಲಾಗಿದೆ. ಗುಜರಾತ ಹಾಗೂ ರಾಜಸ್ಥಾನ ಮೂಲದ ಕಲಾವಿದರು ನೀಲಿ, ಪಾಟಲ, ಹಸಿರು ಇತ್ಯಾದಿ ಬಣ್ಣಗಳನ್ನು ಬಳಸಿರುವರೆಂದು ಗುರುತಿಸಿದ್ದಾರೆ. ಗಾಜಿನ ಚಿತ್ರಗಳಲ್ಲಿ ಇವರ ಅಭಿಪ್ರಾಯ ಲಕ್ಷಣಗಳು ಸಾಮಾಜಿಕ ಹಿನ್ನೆಲೆಯ

೧೦ ಎಸ್.ಕೆ. ಅರುಣಿ ; ದಖನಿ ಚಿತ್ರಕಲೆ, ಪುಟ ೮೫

೧೧ ಎಸ್.ಕೆ.ಅರುಣಿ ; ದಖನಿ ಚಿತ್ರಕಲೆ, ಪುಟ ೮೫

ಚಿತ್ರಗಳಲ್ಲಿ ಗುರುತಿಸಲು ಸಾಧ್ಯವಾಗುತ್ತದೆ. ಅಲ್ಲದೇ ಕೆಲವೊಂದು ಲಕ್ಷಣಗಳು ಧಾರ್ಮಿಕ ಚಿತ್ರಗಳಲ್ಲಿ ಕಂಡು ಬರುತ್ತವೆ. ಸ್ತ್ರಿಯರ ಆಕೃತಿಗಳ ದೈಹಿಕ ಲಕ್ಷಣಗಳು ಸ್ಥಳೀಯ ಮರಾಠ ಜನಾಂಗದ ದೇಹ ಸಿರಿಯನ್ನು ಹೊಂದಿವೆ ಎಂಬುದರಲ್ಲಿ ಸಂದೇಹವೇ ಇಲ್ಲ. ಸ್ತ್ರೀಯರು ಸೀರೆ, ಕುಪ್ಪಸ ಧರಿಸುವ ಪದ್ಧತಿಯು ಆ ಜನಾಂಗದವರ ಪದ್ಧತಿಯಂತೆ ಇವೆ. ಮುಖ ಲಕ್ಷಣಗಳು ಸಹ ಅವರಂತೆಯೇ ಹೋಲುತ್ತವೆ. ಚಿತ್ರ-II-೧-ಬ-೩೨, ೩೩, ೩೧, ಈ ಮೂರು ಚಿತ್ರಗಳನ್ನು ಗಮನಿಸಿದರೆ ಈ ಮೇಲಿನ ಲಕ್ಷಣಗಳು ರೂಪಗೊಮಡಿವೆ. ಆಕರ್ಷಕ ಮುಖ ಲಕ್ಷಣ ಸಂಪದ್ಭರಿತ ಹಾಲು ಬಿಳುಪು ದೇಹಸಿರಿ, ಆಕಷ್ಕ ನಿಲುವು, ಕಚ್ಚೆ ಹಾದಿ ಹದಿನಾರು ಮೊಳದ ಸೀರೆ, ಚಿನ್ನಾಭರಣಗಳು, ಮರಾಠ ಜನಾಂಗದ ಶ್ರೀಮಂತ ಸ್ತ್ರೀಯಂತೆ ಇಲ್ಲಿ ಬಿಂಬಿತಗೊಂಡಿದ್ದಾರೆ.

ತಂಜಾವೂರು ಮರಾಠ ಚಿತ್ರಕಲೆಯ ಮುಖ್ಯ ಕೇಂದ್ರವಾಗಿತ್ತು ಅದರಲ್ಲೂ ವಿಶೇಷವಾಗಿ ಗಾಜಿನ ಚಿತ್ರಕಲೆಗೆ ಪ್ರಧಾನಕೇಂದ್ರವೆಂದೇ ಹೇಳಬಹುದು. ತಂಜಾವೂರು ಮತ್ತು ಮಧುರೈಗಳನ್ನು ಆಳುತ್ತಿದ್ದ ಮರಾಠ ಅರಸರು ದಖನಿ ಚಿತ್ರಕಲಾ ಶೈಲಿಯಿಂದ ಪ್ರೇರಿತರಾಗಿ ಸ್ಥಳೀಯ ವಿಜಯನಗರ ಶೈಲಿಗಳೊಂದಿಗೆ ಮಿಲನಗೊಳಿಸಿ ತಂಜಾವೂರು ಶೈಲಿಯೆಂದು ಗುರುತಿಸುವ ಹೊಸ ಶೈಲಿಯೊಂದನ್ನು ಬಳಕೆಗೆ ತಂದರು.[೧೨] ಈ ಚಿತ್ರಶೈಲಿಯಲ್ಲಿ ಧಾರ್ಮಿಕ ಪರ ವಿಚಾರಗಳು ಮತ್ತು ಧಾರ್ಮಿಕೇತರ ಪರ ವಿಚಾರಗಳನ್ನೊಳಗೊಂಡ ಚಿತ್ರಗಳು ರಚನೆಗೊಂಡಿವೆ. ಈ ಎರಡು ವಿಚಾರಗಳ ನೆಲೆಯಲ್ಲಿ ಹುಟ್ಟಿಕೊಂಡ ಗಾಜಿನ ಚಿತ್ರಗಳು ಒಂದೇ ರೀತಿಯ ರಚನಾ ಶೈಲಿಯನ್ನು ಒಳಗೊಮಡಿವೆ. ತಂಜಾವುರು ಗಾಜಿನ ಚಿತ್ರಗಳ ಮುಖ್ಯ ಲಕ್ಷಣಗಳೇನೆಂದರೆ ರೇಖಾ ಪ್ರಧಾನವಾದ ಚಿತ್ರ ಸಂಯೋಜನೆ ಸ್ತ್ರೀ ಹಾಗೂ ಪುರುಷ ಆಕೃತಿಗಳಲ್ಲಿ ಸದೃಢತೆಯಿಮದ ಕೂಡಿದ ದೇಹಸಿರಿ, ಆಕರ್ಷಕ ನಿಲುವು, ಕೆನೆ ಬಣ್ಣದ ಮೈಬಣ್ಣ, ಬಟ್ಟಲು ಕಂಗಳು ವಿಶಾಲವಾದ ನೇತ್ರ, ದುಂಡುಮುಖ, ನೀಳ ಮೂಗು, ಕೆಂದುಟಿ, ಒಪ್ಪಾಗಿ ಬಾಚಿಕಟ್ಟಿದ ಕಪ್ಪು ಕೇಶ, ಉತ್ತಮ ಭಾವ ನಿರೂಪಣೆ ಕಂಡು ಬಂದರೆ, ಉಡುಪುಗಳಲ್ಲಿ ಆ ವ್ಯಕ್ತಿಗಳ ಘನತೆಗೆ ತಕ್ಕಂತಹ ಬೆಲೆ ಬಾಳುವ ಸೀರೆ, ಕುಪ್ಪಸ, ಕೊರಳಲ್ಲಿ ವಿವಿಧ ಚಿನ್ನದ ಸರಗಲು, ಸೊಂಟದಲ್ಲಿ ಚಿನ್ನದ ಡಾಬು, ಒಡ್ಯಾಣ, ಕೈ-ಕಾಲುಗಳಲ್ಲಿ ಚಿನ್ನದ ಹಾಗೂ ಮುತ್ತಿನ ಬಳೆಗಳು, ಕಿವಿಯಲ್ಲಿ ಓಲೆಗಳು, ಸ್ತ್ರೀ ಚಿತ್ರಗಳಲ್ಲಿ ಕಂಡು ಬಂದರೆ, ಪುರುಷ ಚಿತ್ರಗಳಲ್ಲಿ ಬೆಲೆಬಾಳುವ ಕೋಟು, ಪ್ಯಾಂಟು, ಟೊಪ್ಪಿಗೆ, ಕಾಲುಗಳಲ್ಲಿ ಬೂಟುಗಳು ಕಂಡು ಬರುತ್ತವೆ. ಹಿನ್ನೆಲೆಯಲ್ಲಿ ವ್ಯಕ್ತಿಯ ಅಂತಸ್ತಿಗೆ ತಕ್ಕಂತೆ ಬೆಲೆಬಾಳುವ ವಸ್ತುಗಳನ್ನು ಹಾಗೂ ವಾಸ್ತುವಿನ್ಯಾಸಗಳನ್ನು ಕಾಣುತ್ತೇವೆ. ಈ ಲಕ್ಷಣಗಳು ಸಾಮಾಜಿಕ ಪರ ಚಿತ್ರಗಳಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಶೃಂಗಾರಗೊಂಡ ಮಹಿಳೆಯರು, ವಿವಿಧ ಪ್ರಾಣಿ, ಪಕ್ಷಿಗಳೊಂದಿಗೆ ಆಟವಾಡುತ್ತಿರುವ ಸ್ತ್ರೀಯರು, ಸರಸ ಸಲ್ಲಾಪದಲ್ಲಿ ನಿರತರಾದ ದಂಪತಿಗಳು ಅಥವಾ ಪ್ರೇಮಿಗಳ ಚಿತ್ರಗಳು ಪ್ರಮುಖವಾಗಿವೆ.

ಹೈದರಬಾದ ಮೂಲದ ಕಲಾವಿದರು ರಚಿಸಿದ ಸ್ತ್ರೀಚಿತ್ರಗಳಲ್ಲಿ ಶ್ವೇತ ವರ್ಣಗಳ ಲಂಗ  ಅದಕ್ಕೆ ಚಿನ್ನದ ಅಂಚು, ವಿವಿಧ ವರ್ಣಮಯ ಕುಪ್ಪಸಗಳು, ಚಿತ್ತಾರದ ದಾವಣಿಗಳು, ನಡುಪಿಗೆ ಡಾಬು, ಎತ್ತಿಕಟ್ಟಿದ ತುರುಬು, ತುರಿಬಿಗೆ ಮುತ್ತಿನ ಹಾಗೂ ಹೂವಿನ ಸರ, ಅಗಲ

೧೨ ಶಕೀಲ ಅಹ್ಮದ ಹಿಂಜಾರ : ಗುಳೇದಗುಡ್ಡದ ಗಾಜಿನ ಮೇಲಿನ ಚಿತ್ರಗಳು, (ಅ.ಪ್ರ.ಯೋ.ವ) ಪುಟ ೪೪

ಮುಖ, ದುಂಡು ದೇಹ ಹಾಗು ವಿವಿಧ ಕಂಠಾಭರಗಳು ಕಂಡು ಬರುತ್ತವೆ. ಚಿತ್ರ-II-೧-ಬ-೨೭, ೨೯ ಈ ಚಿತ್ರಗಳನ್ನು ಗಮನಿಸಬಹುದು.

ಅದೇ ರೀತಿ ಸಲ್ಲಾಪದಲ್ಲಿರುವ ಸ್ತ್ರಿ ಪುರುಷರ ಚಿತ್ರಗಳಲ್ಲಿ ಈ ಲಕ್ಷಣಗಳು ಬಿಂಬಿತವಾಗಿವೆ. ಇಲ್ಲಿ ಪುರುಷ ಚಿತ್ರಗಳಲ್ಲಿ ಕಪ್ಪುಕೋಟು, ಪ್ಯಾಂಟು ಹಾಗೂ ಬಿಗಿಯಾದ ಕಾಲು ಚೀಲ ಆಕರ್ಷಕ ಬೂಟುಗಳನ್ನು ಕಾಣಬಹುದು. ಚಿತ್ರ-II-೧-ಅ-೧೬, ೧೭, ೧೮ ಇವನ್ನು ಗಮನಿಸಬಹುದಾಗಿದೆ.

ಕೆಲವೊಂದು ಚಿತ್ರಗಳಲ್ಲಿ ಸ್ತ್ರೀ ಚಿತ್ರಗಳಿಗೆ ವಿಶಿಷ್ಟವಾದ ಸಲ್ವಾರ ಕಮೀಜ್ (ಚೂಡಿದಾರಂ ಅಲಂಕಾರಿಕವಾಗಿ ರೂಪಗೊಳಿಸಿದ್ದನ್ನು ಕಾಣುತ್ತೇವೆ. ಇವುಗಳಲ್ಲಿ ಕಲಾವಿದನು ಅಲಂಕಾರದ ಆಶಯದೊಮದಿಗೆ ಕೆಲಸದ ನಿರ್ದಿಷ್ಟತೆಯನ್ನು ಅನುಸರಿಸಿಲ್ಲ. ತನಗೆ ಸುಂದರವಾಗಿ ಕಂಡದ್ದನ್ನು ಈ ಸಂದರ್ಭಗಳಲ್ಲಿ ಬಳಸಿಕೊಂಡಿದ್ದಾನೆಂದು ತೋರುತ್ತದೆ. ಇಲ್ಲಿ ರಚನಾ ಕ್ರಮಬದ್ಧತೆ ಮೂಡಿಬಂದಿಲ್ಲ. ಚಿತ್ರ-II-೧-ಅ-೨೩, ೨೪, ೨೫, ೧೮, ೨೬ ಈ ಚಿತ್ರಗಳನ್ನು ಗಮನಿಸಿದರೆ ವಸ್ತ್ರಾಭರಣಗಳಲ್ಲಿ ವೈರುಧ್ಯತೆ ಕಂಡು ಬರುತ್ತದೆ. ಪ್ರತಿಮೆಗಳಲ್ಲಿ ಪಾಶ್ಚಿಮಾತ್ಯ ಚಿತ್ರಶೈಲಿಗಳ ಪ್ರಭಾವ ಮೂಡಿಬಂದಿದೆ. ಮಿನಿಸ್ಕರ್ಟ ನಿಲುವಂಗಿ, ಬಿಗಿಯಾದ ಪ್ಯಾಂಟು, ಆಕರ್ಷಕ ಬೂಟುಗಳು, ಯುರೋಪಿಯನ್ ಪ್ರಭಾವವನ್ನು ಹೋಲುತ್ತವೆ. ಕಲಾವಿದರು ಇಲ್ಲಿ ಸ್ವತಂತ್ರ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಿದ್ದಾರೆಂದು ತೋರುತ್ತದೆ. ಅಥವಾ ಆಂಗ್ಲರ ಆಶಯಗಳು ಕುಡೂ ಬಿಂಬಿತವಾಗಿವೆ ಎಂದು ತೋರುತ್ತದೆ.

ಪುರುಷ ಚಿತ್ರಗಳಲ್ಲಿ ತಲೆಗೂದಲು, ಮೀಸೆ, ವೈವಿಧ್ಯತೆಯಿಂದ ಕೂಡಿವೆ. ಕೆಲವು ಚಿತ್ರಗಳಲ್ಲಿ ಪುರುಷರ ಮೀಸೆ ಚುಪಾಗಿವೆ. ಅಂದರೆ ಕತ್ತಿಯಾಕಾರಾಗಿವೆ. ಕೆಲವು ಪುರುಷರ ಮೀಸೆ ಸುರುಳಿ ಸುತ್ತಿದಂತೆ ದಪ್ಪವಾಗಿವೆ. ಇವು ಸ್ಥಳೀಯ ಆಳರಸರ ವ್ಯಕ್ತಿತ್ವವನ್ನು ನಿರೂಪಿಸುತ್ತವೆ. ಇನ್ನೂ ವಿಶೇಷವೆನೆಂದರೆ ಕೆಲವು ಪುರುಷರ ಹೇರಕಟಗಳು ಕಿವಿಯ ಕೆಳಭಾಗದ ತನಕ ಕಂಡು ಬರುತ್ತಿದ್ದು ಕೊನೆಯ ತುದಿಗಳು ಅಗಲವಾಗಿವೆ. ಕೆಲವೊಂದು ಬಾಗಿವೆ. ಇವು ಬಹುಶಃ ಪಾಶ್ಚಿಮಾತ್ಯರ ಹೇರ ಸ್ಟೈಲ್‌ನ್ನು ಅನುಕರಿಸುತ್ತವೆ. ಅಥವಾ ಅವರ ಪ್ರಭಾವಕ್ಕೊಳಗಾಗಿವೆ ಎನ್ನಬಹುದು. ಈ ಶೈಲಿಯನ್ನು ನಾಯಕ ಅವಧಿಯ ಚಿತ್ರಗಳಲ್ಲಿ ಕಾಣುತ್ತೇವೆ.

ತಂಜಾವೂರು ಶೈಲಿಯ ಧಾರ್ಮಿಕ ಚಿತ್ರಗಳಲ್ಲಿ ಪ್ರಮುಖವಾಗಿ ಕೃಷ್ಣನ ಬಾಲ್ಯಲೀಲೆಗೆ ಸಂಬಂಧಿಸಿದಂತಹ ಚಿತ್ರಗಳು ಕಂಡು ಬರುತ್ತವೆ. ಬಾಲಕ ಕೃಷ್ಣನನ್ನು, ತಾಯಿ ಮಗುವಿನ ಸಂಬಂಧ ಹೇಗೆ ಇರುತ್ತದೆ ಎಂಬುದನ್ನು ತಾಯಿಯ ಮಮಕಾರ ಹಾಗೂ ಮಾತೃತ್ವವನ್ನು ಈ ಚಿತ್ರಗಳ ಮೂಲಕ ಅಭಿವ್ಯಕ್ತಿಸಿದ್ದಾರೆ. ಧಾಮಿಕ ವಿಷಯವಿದ್ದರೂ ಸಹ ಸಾಮಾನ್ಯ ಬದುಕಿನ ತಾಯಿ ಮಗುವಿನ ಸಂಬಂಧಗಳ ಪ್ರಭಾವ ಎದ್ದು ತೋರುತ್ತದೆ. ಜೊತೆಗೆ ಕೃಷ್ಣ ಭಕ್ತಿಯನ್ನು ನಿರೂಪಿಸುತ್ತವೆ. ಬೆಣ್ಣೆ ಮೆಲ್ಲುತ್ತಿರುವ ಕೃಷ್ಣ. ಅಂಬೆಗಾಲಿಡುವ ಕೃಷ್ಣ, ಸ್ತನಪಾ ಮಾಡುತ್ತಿರುವ ಕೃಷ್ಣ, ಸಿಂಹಾಸನದ ಮೇಲೆ ಕುಳಿತಿರುವ ಕೃಷ್ಣ, ವೇಣುಗೊಪಾಲ ಹೀಗೆ ಹಲವಾರು ಸಂದರ್ಭಗಳ ಚಿತ್ರಗಳು ಗಾಜಿನ ಮೇಲೆ ಮೂಡಿಬಂದಿವೆ. ಇಲ್ಲಿ ಬಾಲಕ ಕೃಷ್ಣನನ್ನು ಆರೋಗ್ಯಪೂರ್ಣ ದೇಹದಾರ್ಢ್ಯತೆ, ದುಂಡುಮುಖ, ವಿಶಾಲ ನೇತ್ರ, ಕಪ್ಪು ಕೂದಲು, ಜುಟ್ಟಿಗೆ ನವಿಲುಗರಿ, ಆಭರಣಗಳು, ಮುಖದಲ್ಲಿ ಮಂದಹಾಸವು ತೋರುವಂತೆ ಕಲಾವಿದನು ಮುತುವರ್ಜಿವಹಿಸಿದ್ದಾನೆ. ಇಲ್ಲಿ ದೈವಿ ಭಕ್ತಿಗಿಂತ ಮಗುವಿನ ಪ್ರೀತಿಯನ್ನು

ತರಲಾಗಿದೆ. ಚಿತ್ರ-I-ಬ-೫೫, ೩೪, ೫೩, ೪೦, ೫೧, ೫೭, ೩೩ ಇನ್ನೂ ಹಲವಾರು ಚಿತ್ರಗಳನ್ನು ಗಮನಿಸಬಹುದು. ಇಲ್ಲಿ ಯಶೋದೆಯನ್ನು ಮಾತೃದೇವತೆಯಂತೆ ಬಿಂಬಿಸಲಾಗಿದೆ.

ರಾಮನ ಪಟ್ಟಾಭಿಷೇಕದ ಹಲವಾರು ಚಿತ್ರಗಳು ತಂಜಾವೂರು ಶೈಲಿಯಲ್ಲಿ ರಚನೆಗೊಂಡಿವೆ. ಇಲ್ಲಿ ಪ್ರಧಾನ ವ್ಯಕ್ತಿ ರಾಮನನ್ನು ಹೂವಿನ ಮೇಲೆ ಚಿತ್ರಿಸಿದ್ದು ಸುತ್ತಲು ರಾಮನ ಪರಿವಾರವನ್ನು ಸಂಯೋಜಿಸಲಾಗಿದೆ. ಈ ಚಿತ್ರವು ಮೂಲತಃ ವಿಜಯನಗರ ಭಿತ್ತಿಚಿತ್ರದಿಂದ ಪ್ರೇರನೆಗೊಂಡಿದೆ. ಈ ದೃಶ್ಯಗಳನ್ನೊಳಗೊಂಡ ಹಲವಾರು ಚಿತ್ರಗಳು ಪ್ರತಿಕೃತಿಗೊಂಡಿದ್ದು, ಒಂದೇ ರೀತಿಯ ರಚನಾ ಶೈಲಿಯಲ್ಲಿ ಹೊಂದಿವೆ. ರೇಖೆ, ವರ್ಣ ಹಾಗು ಸಂಯೋಜನಾ ದೃಷ್ಟಿಯಿಂದ ಆಯಾ ಕಲಾಕೃತಿಗಳ ಕಲಾವಿದರ ಅನುಭವದ ವೈರುಧ್ಯತೆಯನ್ನು ಕಾಣಬಹುದಾಗಿದೆ. ವಸ್ತ್ರಾಭರಣಗಳು ಹಾಗೂ ಹಿನ್ನೆಲೆಯ ಸಂಯೋಜನೆಯು ತಂಜಾವೂರು ಸಾಂಪ್ರದಾಯಿಕ ಚಿತ್ರಗಳ ಪ್ರಭಾವದಿಂದ ಕೂಡಿದೆ. ವಿಷ್ಣು, ಶ್ರೀದೇವಿ, ಭೂದೇವಿ, ಬಲರಾಮ, ಲಕ್ಷ್ಮೀ ಇತ್ಯಾದಿ ದೇವತೆಗಳು ಸಹ ಈ ಶೈಲಿಯ ಸಾಂಪ್ರದಾಯಿಕ ಚಿತ್ರಗಳನ್ನು ಅನುಕರಿಸುತ್ತವೆ. ರಚನಾ ಕ್ರಮವು ಒಂದೇ ರೀತಿಯಾಗಿದ್ದು ಆಯಾ ದೇವತೆಗಳ ಪ್ರತಿಮೆಗಳಿಗೆ ತಕ್ಕಂತೆ ರೂಪಕಕ್ಷನಗಳನ್ನು ಕೊಡಲಾಗಿದೆ.

ಶೈವ ಸಂಪ್ರದಾಯದಲ್ಲಿ ಶಿವ ಪಾರ್ವತಿಯರು, ಗಣಪ, ಸುಬ್ರಹ್ಮಣ್ಯ, ನಂದಿ, ವೀರಭದ್ರ, ಉಮಾ ಮಹೇಶ್ವರ ಇತ್ಯಾದಿ ಚಿತ್ರಗಳು ರೇಖಾ ಪ್ರಧಾನವಾಗಿ ಆಕರ್ಷಕ ವರ್ಣಸಂಯೋಜನೆಯಿಂದ ಕೂಡಿದೆ. ಇಲ್ಲಿ ಶಿವ ಸ್ವರೂಪವನ್ನು ಈ ಚಿತ್ರಶೈಲಿಯಲ್ಲಿ ಆಕರ್ಷಕವಾಗಿ ತರಲಾಗಿದೆ. ಒಟ್ಟಾರೆ ತಂಜಾವೂರು ಚಿತ್ರಶೈಲಿಯಲ್ಲಿ ಪೌರಾಣಿಕ ಕಥೆಗಳ ಹಾಗೂ ದೇವಾನುದೇವತೆಗಳ ಚಿತ್ರಗಳು ಪ್ರಾಧಾನ್ಯವಾಗಿ ಮೂಡಿಬಂದಿವೆ. ಇಲ್ಲಿ ಗಮನಿಸಬೇಕಾದುದು, ಸ್ಥಳಾವಕಾಶದ ಕೊರತೆಯಿಂದ ಇತರ ಭಿತ್ತಿ ಹಾಗೂ ಕ್ಯಾನ್ವಾಸ ಚಿತ್ರಗಳ ಸಮೂಹ ಚಿತ್ರಗಳಂತೆ ಗಾಜಿನ ಮೇಲೆ ಸಂಯೋಜಿಸಿಲ್ಲ, ದೇವತೆಗಳಾಗಲಿ ಸಾಮಾನ್ಯ ವ್ಯಕ್ತಿಗಳಾಗಲಿ ಒಂದು ಅಥವಾ ಎರಡಕ್ಕಿಂತ ಹೆಚ್ಚು ಆಕೃತಿಗಳನ್ನು ಸಂಯೋಜಿಸಲಾಗಿದೆ. ಹೆಚ್ಚೆಂದರೆ ನಾಲ್ಕೈದು ಆಕೃತಿಗಳು ರೂಪಿತಗೊಂಡಿವೆ. ಇಲ್ಲಿ ಆಕೃತಿಗಳನ್ನು ದೊಡ್ಡ ಪ್ರಮಾಣಗಳಲ್ಲಿ ರಚನೆ ಮಾಡಲಾಗಿದೆ. ಇದು ಗಾಜಿನ ಚಿತ್ರಗಳ ವಿಶೇಷವೆನ್ನಬಹುದು. ಇದೇ ಕ್ರಮವನ್ನು ಇತರ ಹಿಂದೂ ದೇವತೆಗಳಾದ ಬ್ರಹ್ಮ, ಸರಸ್ವತಿ, ದತ್ತಾತ್ರೇಯರಂತಹ ಚಿತ್ರಗಳಲ್ಲಿ ಅನುಸರಿಸಲಾಗಿದೆ.

ಐತಿಹಾಸಿಕ ನೆಲೆಯ ರಾಜ ರಾಣಿಯರ ಭಾವಚಿತ್ರಗಳು ತಂಜಾವೂರು ಚಿತ್ರಶೈಲಿಗಳಲ್ಲಿ ರಚನೆಗೊಂಡಿದ್ದರೂ ಸಹ ಯುರೋಪಿಯನ್ ಚಿತ್ರಶೈಲಿಯಿಂದ ಪ್ರಭಾವಿತಗೊಂಡಿವೆ. ಶರಭೋವಿ ಮಹಾರಾಜರು, ಮರಾಠ ಅರಸರು, ಅಲ್ಲದೆ ಮುಮ್ಮಡಿ ಕೃಷ್ಣರಾಜ ಒಡೆಯರು, ನಾಯಕ ಅರಸರು ಹಾಗೂ ಅರಸಿಯರ ಭಾವಚಿತ್ರಗಳು ಪ್ರಮುಖವಾಗಿವೆ. ಮೈಸೂರು ಮತ್ತು ತಂಜಾವೂರು ಚಿತ್ರಶೈಲಿಯಲ್ಲಿ ವಸ್ತುವಿಷಯಗಳು ಒಂದೇಯಾಗಿದ್ದರೂ ತಂತ್ರಗಾರಿಕೆಯಲ್ಲಿ ಭಿನ್ನತೆ ಹೊಂದಿವೆ. ಅದರಲ್ಲೂ ವಿಶೇಷವಾಗಿ ಗಾಜಿನ ಚಿತ್ರಗಳಲ್ಲಿ ಈ ಭಿನ್ನತೆಯನ್ನು ಗುರುತಿಸಲು ಕಷ್ಟಸಾಧ್ಯ, ಆದರೂ ಈ ಎರಡೂ ಚಿತ್ರಶೈಲಿಯಲ್ಲಿ ತಾಂತ್ರಿಕ ದೃಷ್ಟಿಯಿಂದ ಭಿನ್ನತೆಯನ್ನು ಗುರುತಿಸಬಹುದು.

ತಂಜಾವೂರು ಗಾಜಿನ ಚಿತ್ರಕಲೆಯ ಪ್ರಮುಖ ಕೇಂದ್ರವಾದರೂ ಸಹ ಮೈಸೂರಿನ

ಕಲಾವಿದರು ಚೀನಿಯದಿಂದ ಕಲಿತು, ಶ್ರೀರಂಗಪಟ್ಟನದ ಅವನಿತಯ ನಂತರ ತಂಜಾವೂರಿಗೆ ಸ್ಥಳಾಂತರಗೊಂಡವರು. ಇವರು ಆಂಧ್ರರ ರಾಜ ಮನೆತನಕ್ಕೆ ಸೇರಿದವರೆಂದು ಜಯಾ ಅಪ್ಪಾಸ್ವಾಮಿಯವರು ಅಭಿಪ್ರಾಯ ಪಡುತ್ತಾರೆ. ಮರದ ಹಲಗೆಗಳ ಮೇಲೆ ಕೆತ್ತಿದ ವಿಗ್ರಹ ಸ್ವರೂಪವನ್ನೇ ಗಾಜಿನ ವರ್ಣಚಿತ್ರಕಾರರು ಅನುಸರಿಸಿದ್ದಾರೆ. ಈ ಚಿತ್ರಗಳು ಎದ್ದು ತೋರುತ್ತಿದ್ದು ಫ್ರೇಮನಲ್ಲಿ ಒತ್ತಿ ಕೂಡಿಸಿದಂತಿವೆ. ಸುತ್ತಲೂ ಅವಕಾಶವಿಲ್ಲ. ಬಾಹ್ಯರೇಖೆ ಒತ್ತಾಗಿದ್ದು, ಕಪ್ಪು ಶಾಹಿಯಿಂದ ಹೊರರೇಖೆಗಳಿಂದ ಕೂಡಿವೆ. ಬಂಗಾರ ಹಾಗೂ ಇತರೆ ಲೋಹಗಳ ಫಾಯಿಲ್‌ಗಳನ್ನು ಅಲಂಕಾರಕ್ಕಾಗಿ ಬಳಸಿರುವರು. ಈ ಶೈಲಿಯಲ್ಲಿ ಮರದ ಕೆತ್ತನೆಯ ಶೈಲಿ, ಉತ್ತರದ ವ್ಯಕ್ತಿ ಚಿತ್ರಣ ಶೈಲಿಯನ್ನು ಬಳಸಿಕೊಂಡು ಕೆಲವು ಅಂಶಗಳನ್ನು ಪಾಶ್ಚಾತ್ಯರಿಂದ ಪಡೆದರು. ಉದಾಹರಣೆಗೆ ಹಿನ್ನೆಲೆಯ ಪರದೆಗಳು, ರೆಕ್ಕೆಗಳ ದೇವತೆಗಳು, ವಾಸ್ತುಶಿಲ್ಪಗಳು ಹಾಗೂ ಪೀಠೋಪಕರಣಗಳು ಪ್ರಮುಖವಾಗಿವೆ.

ಜಯಾ ಅಪ್ಪಾಸ್ವಾಮಿಯವರ ಅಭಿಪ್ರಾಯದಂತೆ ಮೈಸೂರು ಅರಸರು ವಿದೇಶಿಯರ ಕಲೆಯನ್ನು ಮುಕ್ತವಾಗಿ ಒಪ್ಪದಿದ್ದರಿಂದ ಈ ಕಲೆ ಏಳ್ಗೆಯಾಗಲಿಲ್ಲ ಎಂದು ಹೇಳುತ್ತಾರೆ. ಮೈಸೂರು ಚಿತ್ರಶೈಲಿಯ ಚಿತ್ರಗಳು ಚಿಕ್ಕ ಗಾತ್ರದಿಂದ ಕೂಡಿದ್ದು, ಆಕೃತಿಗಳು ಸಹ ಚಿಕ್ಕ ಚಿಕ್ಕವಾಗಿ ಸಂಯೋಜಿತಗೊಂಡಿವೆ. ಧಾಮಿಕ ವಿಷಯಗಳನ್ನು ಒಳಗೊಂಡಿದ್ದು, ಆಡಂಭರತೆಯು ಕಂಡು ಬರುವುದಿಲ್ಲ. ಸರಳ ಶೈಲಿಯ ರೇಖೆಗಳು, ವರ್ಣಸಂಯೋಜನೆ, ರೇಖಾ ಲಾವಣ್ಯತೆಯು ವಿಶಿಷ್ಟವಾಗಿವೆ. ಅಲಂಕಾರಕ್ಕಾಗಿ ಅಷ್ಟೊಂದು ಆಭರಣಗಳ ವೈಭವೀಕರಣ ಕಂಡು ಬರುವುದಿಲ್ಲವಾದರೂ ಸರಳತೆಯ ಅಲಂಕಾರ ಬಿಂಬಿತವಾಗಿವೆ. ಅದರಲ್ಲೂ ದೇವತೆಗಳ ಪ್ರತಿಮೆಗಳಿಗನುಗುಣವಾಗಿ ವಸ್ತ್ರಾಭರಣಗಳನ್ನು ಸಂಯೋಜಿಸಲಾಗಿದೆ ಎಂದು ಜಯಾ ಅಪ್ಪಾಸ್ವಾಮಿಯವರು ವಿವರಿಸುತ್ತಾರೆ.

ಇವರ ಅಭಿಪ್ರಾಯವನ್ನು ಒಪ್ಪಬಹುದಾದರೂ ೧೯೦೦ ರ ಕೊನೆಯ ಭಾಗದಲ್ಲಿ ಮೈಸೂರಿನಲ್ಲಿ ಮೈಸೂರು ಶೈಲಿಯ ಗಾಜಿನ ಚಿತ್ರಗಳು ರಚನೆಗೊಂಡಿದ್ದನ್ನು ಗಮನಿಸಬಹುದು. ಅರಮನೆಯ ನಿರ್ಮಾಣದ ಕಾಲದಲ್ಲಿ ಗಾಜನ್ನು ಹೆಚ್ಚು ಪ್ರಮಾಣದಲ್ಲಿ ಬಳಸಿಕೊಂಡಿದ್ದನ್ನು ವಿವೇಚಿಸಬಹುದು. ಮೈಸೂರಿನ ಅರಮನೆಯ ಎದುರಿಗಿರುವ ನಿಷಾದಬಾಗ್ ಪಾರ್ಕನ ಗಾಜಿನ ಮಂಟಪದಲ್ಲಿ ಪೌರಾಣಿಕ ವ್ಯಕ್ತಿಗಳ ಹಲವಾರು ಭಾವಚಿತ್ರಗಳು ಮೈಸೂರು ಶೈಲಿಯಲ್ಲಿ ರೂಪಗೊಂಡಿವೆ. ಈ ಚಿತ್ರಗಳು ಇಂದಿಗೂ ಸಹ ಅತ್ಯಂತ ಆಕರ್ಷಕವಾಗಿದ್ದು, ನೋಡುಗರನ್ನು ಮಂತ್ರಮುಗ್ಧರನ್ನಾಗಿಸುತ್ತವೆ. ಮೈಸೂರು ಹಾಗೂ ತಂಜಾವೂರು ಅರಸರು ಉತ್ತಮ ಸ್ನೇಹ ಸಂಪರ್ಕ ಹೊಂದಿದ್ದರಿಂದ, ಎರಡೂ ಮನೆತನಗಳ ಕಲಾವಿದರ ವಿನಿಮಯದಿಂದ ಚಿತ್ರಶೈಲಿಗಳು ಬಹುತೇಕ ಒಂದನ್ನೊಂದು ಅನುಕರಿಸುತ್ತವೆ. ತಂಜಾವೂರು ಶೈಲಿಯಲ್ಲಿ ಅಲಂಕರಣದ ವೈಭವ, ಹರಳುಗಳ ಬಳಕೆ ಹಾಗೂ ಅತಿಯಾದ ಉಬ್ಬುಗಳಿಂದ ಮೈಸೂರು ಶೈಲಿಗಿಂತ ಭಿನ್ನತೆ ಹೊಂದಿವೆ. ಮೈಸೂರು ಶೈಲಿಯಲ್ಲಿ ವಸ್ತು ವಿಷಯ ಒಂದೆಯಾಗಿದ್ದರೂ ಅಲಂಕರಣದ ಆಶಯ ಚಿನ್ನದ ರೇಖಿನ ಬಳಕೆಯು ಮಿತ ಹಾಗೂ ಸ್ವಲ್ಪ ಪ್ರಮಾಣದಲ್ಲಿ ಬಳಸಲಾಗಿದೆ. ಇವೇ ಚಿತ್ರಗಳನ್ನು ಗಾಜಿನ ಕಲಾಕಾರರು ನೇರವಾಗಿ ಬಳಸಿಕೊಂಡಿದ್ದಾರೆ.

ಮೈಸೂರು ಶೈಲಿಯ ಗಾಜಿನ ಚಿತ್ರಗಳು ಧಾರ್ಮಿಕವಾಗಿದ್ದು ಗಣಪತಿ, ಸರಸ್ವತಿ,

ಚಾಮುಂಡೇಶ್ವರಿ, ಕೃಷ್ಣ, ರಂಗನಾಥ, ಮಹಿಷಾಸುರ ಮರ್ದನಿ, ರಾಮನ ಪಟ್ಟಾಭಿಷೇಕ, ಪಾರ್ವತಿ, ಶಿವ ಇತ್ಯಾದಿ ಚಿತ್ರಗಳು ಈ ಶೈಲಿಯಲ್ಲಿ ರಚನೆಗೊಂಡಿವೆ. ತಂಜಾವೂರು ಕಲಾವಿದರು ಚಿತ್ರ ರಚನೆಯಲ್ಲಿ ಬಂಗಾರ, ಮೆರಗು ಕಾಗದಗಳನ್ನು ಹಾಗೂ ಬ್ಯಾಗಡಿ ಕಾಗದಗಳನ್ನು ಬಳಸಿದರೆ, ಇವರು ಚಿನ್ನದ ಹಾಳೆಯನ್ನು ಬಳಸಿದ್ದು ವಿಶೇಷವಾಗಿದೆ. ಇಲ್ಲಿ ರೇಖೆಗಳ ಸೂಕ್ಷ್ಮತೆ ಹೆಚ್ಚಿದ್ದು, ರೇಖಾ ಮಾಧುರ್ಯವು ಆಕರ್ಷಕವಾಗಿ ಮೂಡಿಬಂದಿವೆ ಹಾಗೂ ಸರಳ ನಿರೂಪಣೆಯನ್ನು ಹೊಂದಿದೆ. ಚಿತ್ರ-I-ಬ-೧೧೨,ಡ-೦೬, ಬ-೩೬, ೫೬, ೬೨ ಈ ಚಿತ್ರಗಳನ್ನು ಗಮನಿಸಬಹುದು. ಮೈಸೂರು ಚಿತ್ರಶೈಲಿಯಲ್ಲಿ ವಿಶೇಷವಾಗಿ ಚಿತ್ರಗಳ ಸುತ್ತಲೂ ಹೂವಿ ನಕ್ಷಾವಿನ್ಯಾಸಗಳು ರೂಪಗೊಂಡಿವೆ. ಚಿತ್ರಗಳಿಗೆ ಇವು ಆಕರ್ಷಕ ಮೆರಗನ್ನು ಕೊಡುತ್ತವೆ. ಈ ಶೈಲಿಯ ಚಿತ್ರಗಳಲ್ಲಿ ಕೆಂಪು, ಹಳದಿ, ಬಿಳಿ, ನೀಲಿ, ಕಪ್ಪು, ಹಸಿರು ವರ್ಣಗಳಲ್ಲದೇ ಚಿನ್ನದ ರೇಖನ್ನು ವಿಶಿಷ್ಟವಾಗಿ ಬಳಸಲ್ಪಟ್ಟಿವೆ. ಈ ಶೈಲಿಯ ಚಿತ್ರಗಳಲ್ಲಿ ಕಲಾವಿದನ ಶಿಸ್ತನ್ನು ಹಾಗೂ ಚಿತ್ರಪ್ರಜ್ಞೆಯನ್ನು ತೋರಿಸುತ್ತವೆ. ಮೈಸೂರು ಚಿತ್ರಶೈಲಿಯಲ್ಲಿನ ರೇಖೆಗಳು ಚಲನಾತ್ಮಕ ಹಾಗೂ ಜೀವಂತಿಕೆಯಿಂದ ಕೂಡಿವೆ. ಬಹುಶಃ ಈ ಚಿತ್ರಗಳನ್ನು ಸಾಂಪ್ರದಾಯಿಕ ವೃತ್ತಿಪರ ಕಲಾವಿದರು ರಚಿಸಿರಬಹುದೆಂದು ತೋರುತ್ತದೆ.

ಕರ್ನಾಟಕದಲ್ಲಿ ಮೈಸೂರು ಅರಸರ ಸಮಕಾಲೀನ ರಾಜ ಮನೆತನಗಳೂ ಈ ಕಲೆಗೆ ಪ್ರೋತ್ಸಾಹ ನೀಡಿದ್ದು ತಿಳಿದು ಬರುತ್ತದೆ. ಚಿತ್ರದುರ್ಗದ ನಾಯಕರು, ಕೆಳಗಿ ನಾಯಕರು, ಹರಪನಹಳ್ಳಿಯ ಪಾಳೆಯಗಾರರು, ಅಲ್ಲದೇ ಇತರ ಚಿಕ್ಕ ಪುಟ್ಟ ಸಂಸ್ಥಾನಿಕರು ಆಡಳಿತಾವಧಿಯಲ್ಲಿ ಇತರ ಕಲೆಗಳಂತೆ ಗಾಜಿನ ಚಿತ್ರಕಲೆಯನ್ನು ಪ್ರೋತ್ಸಾಹಿಸಿದ್ದು ಹಲವಾರು ಚಿತ್ರಗಳಿಂದ ತಿಳಿಯಬಹುದು. ಇವರ ಚಿತ್ರಗಳಲ್ಲಿ ಧಾರ್ಮಿಕ ಪರವಾದ ಹಾಗು ಸಾಮಾಜಿಕ ಪರವಾದ ವಿಚಾರಗಳು ಬಿಂಬಿತವಾಗಿವೆ. ಇವರ ಚಿತ್ರಗಳು ಮೈಸೂರು ಚಿತ್ರಶೈಲಿಯ ಪ್ರಭಾವದಿಂದ ಕೂಡಿದ್ದು ಚಿತ್ರಕ್ರಮವು ಉತ್ತಮವಾಗಿ ಮೂಡಿಬಂದಿಲ್ಲ. ಅಂದರೆ ಸೌಂದರ್ಯ ಪ್ರಜ್ಞೆಯಿಂದ ಕಳಾಹೀನವಾಗಿವೆ ಎನ್ನಬಹುದು. ಪ್ರತಿಮೆಗಳಲ್ಲಿ ನಿಖರ ಹಾಗೂ ಸೂಕ್ಷ್ಮವಿವರಗಳು ಕಂಡುಬರುವುದಿಲ್ಲ. ಚಿತ್ರ-I-ಬ-೧೩, ೪೮, ೯೯ ಈ ಚಿತ್ರಗಳನ್ನು ವೀಕ್ಷಿಸಬಹುದು. ಸಾಮಾಜಿಕ ಪರ ಚಿತ್ರಗಳಲ್ಲಿ II-೧-ಅ-೨೦ ಈ ಚಿತ್ರದಲ್ಲಿ ದಂಪತಿಗಳು ಪ್ರೇಮ ಸಲ್ಲಾಪದಲ್ಲಿದ್ದಾರೆ. ರೇಖೆಗಳು ಸೂಕ್ಷ್ಮತೆಯಿಂದ ಕೂಡಿದ್ದರೂ ಸ್ಪಷ್ಟತೆ ಇಲ್ಲ. ಮುಖದಲ್ಲಿ ಪ್ರೇಮಭವನೆಗಳನ್ನು ತಂದಿಲ್ಲ. ಉಡುಪುಗಳ ವಿನ್ಯಾಸದಲ್ಲಿ ಸ್ಪಷ್ಟತೆ ಮೂಡಿಬಂದಿಲ್ಲ. ವರ್ಣಗಳು ಕಳಾಹೀನವಾಗಿ ಮೂಡಿಬಂದಿವೆ. ಹಿನ್ನೆಲೆಯ ಸಂಯೋಜನೆ ಸರಿಯಾಗಿ ಮೂಡಿಬಂದಿಲ್ಲ. ಇದು ಬಹುಶಃ ಚಿತ್ರದುರ್ಗದ ನಾಯಕರ ಕಾಲಕ್ಕೆ ಸಂಬಂಧಿಸಿರಬಹುದು. ಯಾಕೆಂದರೆ ಈ ಪ್ರತಿಮೆಗಳ ರೂಪಲಕ್ಷಣಗಳು ನಾಯಕನ ದೈಹಿಕ ಲಕ್ಷಣಗಳಂತೆ ವ್ಯಕ್ತಗೊಂಡಿವೆ.

ಸುರಪುರದ ಭಾಗದಲ್ಲಿಯು ಸಹ ಗಾಜಿನ ಚಿತ್ರಗಳು ಧಾರ್ಮಿಕ ನೆಲೆಯಲ್ಲಿ ರೂಪಗೊಂಡಿದ್ದನ್ನು ಕಾಣುತ್ತೇವೆ. ಈ ಚಿತ್ರಗಳು ಮೇಲ್ನೋಟಕ್ಕೆ ತಂಜಾವೂರು ಚಿತ್ರಶೈಲಿಯನ್ನು ಹೋಲುತ್ತಿದ್ದರೂ ಸಹ ಸ್ಥಳೀಯ ಕಲಾವಿದರು ರಚಿಸಿದ್ದಾರೆ. ಕೃಷ್ಣ-ರುಕ್ಮೀಣಿ, ವಿಷ್ಣು, ಶ್ರೀದೇವಿ-ಭೂದೇವಿ, ಸರಸ್ವತಿ, ಯುವಕೃಷ್ಣ, ಸತ್ಯನಾರಾಯಣ ಇತ್ಯಾದಿ ಚಿತ್ರಗಳು ಪ್ರಮುಖವಾಗಿವೆ. ಈ ಕಲಾವಿದರು ಚಿತ್ರಗಳಲ್ಲಿ ತೈಲವರ್ಣಗಳಲ್ಲಿ ಬಳಕೆ ಮಾಡಿದ್ದು, ಪ್ರತಿಮೆಗಳಲ್ಲಿ ದುಂಡುತನ ತರಲಾಗಿದೆ.

ಹಿನ್ನೆಲೆಯ ವಾಸ್ತುವಿನ್ಯಾಸವು ಸಾಂಕೇತಿಕ ರೇಖೆಗಳಿಂದ ಕಂಬ ಹಾಗೂ ಪರದೆಗಳನ್ನು ಸಂಯೋಜಿಸಿದ್ದಾರೆ. ಈ ಚಿತ್ರಗಳಲ್ಲಿ ಅಲಂಕಾರದ ಆಶಯ ತುಂಬಾ ವಿರಳವಾಗಿದೆ. ಹಿನ್ನೆಲೆಗಿಂತ ಇಲ್ಲಿ ಪ್ರತಿಮೆಗಳಿಗೆ ಪ್ರಾಮುಖ್ಯತೆಯನ್ನು ಕೊಡಲಾಗಿದೆ. ಕೆಂಪು, ಹಳದಿ, ನೀಲಿ, ಕಪ್ಪು, ಬಿಳಿ ಹಾಗೂ ಮೆರಗು ಬಣ್ಣಗಳನ್ನು ಬಳಸಲಾಗಿದೆ. ಆಕೃತಿಗಲ ಬಾಹ್ಯರೇಖೆಗಳನ್ನು ಕಪ್ಪು ಬಣ್ಣದಿಂದ ಸ್ಥೂಲವಾಗಿ ಬರೆಯಲಾಗಿದೆ. ಉಡುಪು ಹಾಗೂ ಆಭರಣಗಳ ವಿನ್ಯಾಸಗಳಲ್ಲಿ ಆಡಂಭರತೆಗಿಂತ ಸರಳತೆಯನ್ನು ಕಾಣಬಹುದಾಗಿದೆ. ಪ್ರತಿಮೆಗಳ ದೈಹಿಕ ಲಕ್ಷಣಗಳು ಆಕರ್ಷಕವಾಗಿ ಕಾಣುವಂತೆ ಕಲಾವಿದರು ಪ್ರಯತ್ನಿಸಿದ್ದಾರೆ.

ಈ ಕಲಾವಿದರು ರಚಿಸಿದ ಚಿತ್ರಗಲು ಸುರಪುರ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕಂಡುಬರುತ್ತವೆ. ಈ ಚಿತ್ರಗಳು ೧೯೦೦ ರ ಪ್ರಾರಂಭದ ದಶಕದಲ್ಲಿ ಚಿತ್ರಿತಗೊಂಡಿರಬಹುದು. ಇವು ಸುರಪುರ ಚಿತ್ರಶೈಲಿಯಂದು ಹೇಳಲಾಗದಿದ್ದರೂ ಸಂಯೋಜನಾ ಚಿತ್ರಗಳೆಂದು ವಿವೇಚಿಸಬಹುದು. ಚಿತ್ರ-II-೧-ಬ-೮೫, ೦೬ ಡ, ೦೮ ಬ, ೧೦೧, ೧೦ ಇವುಗಳನ್ನು ವೀಕ್ಷಿಸಿರಿ. ತಂಜಾವೂರು, ಮೈಸೂರು, ಚಿತ್ರಶೈಲಿಗಳಲ್ಲದೇ ಉತ್ತರ ಭಾರತ ಹಾಗೂ ದಕ್ಷಿಣ ಭಾತರದ ಶೈಲಿಯ ಗಾಜಿನ ಚಿತ್ರಗಳು ಕರ್ನಾಟಕದಲ್ಲಿ ಸಿಗುತ್ತವೆ. ಹೈದರಾಬಾದ, ಉತ್ತರ ಪ್ರದೇಶ, ಗುಜರಾತ, ಕೇರಳ, ರಾಜಸ್ಥಾನ, ಮಧ್ಯಪ್ರದೇಶ ಇತ್ಯಾದಿ ಪ್ರದೇಶಗಳ ಕಲಾಶೈಲಿಗಳ ಪ್ರಭಾವವು ಚಿತ್ರಗಳಲ್ಲಿ ಮೂಡಿಬಂದಿದೆ. ಜಯಾ ಅಪ್ಪಾಸ್ವಾಮಿಯವರು ಪ್ರಾದೇಶಿಕ ಭಿನ್ನತೆಯನ್ನು ಗುರುತಿಸಿದ್ದಾರೆ. ಆಂಧ್ರ ಪ್ರದೇಶದ ಹೈದರಾಬಾದ ಪ್ರಾಂತವು ಮೊದಲು ಮೊಗಲರ ಕೈವಶದಲ್ಲಿತ್ತು. ನಿಜಾಮ ಉಲ್ ಮುಲ್ಕನು ಮೊಗಲರ ವೈಸರಾಯನಾಗಿ ಅಭಿವೃದ್ಧಿ ಪಡಿಸಿದ. ಈ ಭಾಗದಲ್ಲಿ ಕನ್ನಡಿಯ ಮೇಲೆ ರಚಿಸಿದ ಚಿತ್ರಗಳು ಕಂಡು ಬರುತ್ತವೆ. ನಂತರ ಆಸ್ಥಾನಿಕರ, ರಾಜಮನೆತನದವರ ವ್ಯಕ್ತಿಚಿತ್ರಗಳು ರಚನೆಯಾಗಿವೆ. ಇವು ಮಹಾರಾಷ್ಟ್ರ ಶೈಲಿಯನ್ನೇ ಅನುಕರಿಸುತ್ತವೆ. ಪ್ರಮುಖವಾಗಿ ನರ್ತಕಿಯರು, ರಾಜಕುಮಾರರು, ಸಂಗೀತಗಾರ್ತಿಯರು ಇತ್ಯಾದಿ ವಿಷಯಗಳಾಗಿವೆ. ಈ ಚಿತ್ರ ಸೂತ್ರವನ್ನು ಕರ್ನಾಟಕದಲ್ಲಿಯು ಅನುಸರಿಸಲಾಗಿದೆ. ಶೋರಾಪೂರದಲ್ಲಿ ಹಲವಾರು ಕನ್ನಡಿ ಚಿತ್ರಗಳು ರಚನೆಗೊಂಡಿದ್ದು, ಇವು ಶಿಲ್ಪಕಲಾ ಸೂತ್ರವನ್ನು ಅನುಸರಿಸಿವೆ.

ಗುಜರಾತದ ಕಚ್ಚ ಭಾಗದಲ್ಲಿ ಪ್ರಚಲಿತವಿದ್ದ ಗಾಜಿನ ಚಿತ್ರಗಳು ಜಾನಪದ ಶೈಲಿಯಿಂದ ಪ್ರಭಾವಿತಗೊಂಡಿವೆ. ಇಲ್ಲಿ ರಾಜರು, ಸೇನಾಪತಿಗಳು, ಬ್ರೀಟಿಷ ಅಧಿಕಾರಿಗಳು ಅಲ್ಲವೇ ಮುಸ್ಲಿಂ ಅಧಿಕಾರಿಗಳು ಸಹ ಇದ್ದಾರೆ. ಇವು ಬಹುಶಃ ವಿದೇಶಿ ಕಲಾವಿದರಿಂದ ರಚಿಸಲ್ಪಟ್ಟಿವೆ. ಇಂಥ ಚಿತ್ರಗಳನ್ನು ಮೈಸೂರಿನ ಜಗನ್ಮೋಹನ ಅರಮನೆಯಲ್ಲಿ ಸಂಗ್ರಹಿಸಲಾಗಿದೆ. ಆ ಭಾಗದ ಶೈಲಿಯ ಪ್ರಭಾವ ಈ ಚಿತ್ರಗಳಲ್ಲಿಯೂ ಮೂಡಿಬಂದಿದೆ. ರಾಜಸ್ಥಾನ ಶೈಲಿಯ ಚಿತ್ರಗಳಲ್ಲಿ ಚಿಕಣಿ ಚಿತ್ರಗಳ ಪ್ರಭಾವವಿದ್ದು ಪಕ್ಷಿಗಳ ಜೊತೆ ಸುಂದರ ಸ್ತ್ರೀಯರನ್ನು ಚಿತ್ರಿಸಿದ್ದು ಕಂಡು ಬರುತ್ತದೆ.

ಉತ್ತರ ಪ್ರದೇಶದ ಕಲಾಕೃತಿಗಳಲ್ಲಿ ಹಿಂದೂ ಇಸ್ಲಾಂ ಹಾಗೂ ಧಾರ್ಮಿಕೇತರ ಪ್ರಭಾವದ ಚಿತ್ರಗಳು ಕಂಡು ಬರುತ್ತಿದ್ದು, ಮೂರ್ತಿ ಶಿಲ್ಪ ಸೂತ್ರವನ್ನು ಅನುಸರಿಸಲಾಗಿದೆ. ದೆಹಲಿ ಪ್ರಾಂತದ ಕಲಾಕೃತಿಗಳಲ್ಲಿ ಪಾಶ್ಚಿಮಾತ್ಯರ ಪ್ರಭಾವವನ್ನು ಕಾಣಬಹುದು. ಇವುಗಳಲ್ಲಿ ಹುಕ್ಕಾ

ಸೇದುತ್ತಿರುವ ಬೇಗಂ, ಕೇಶಾಲಂಕಾರ ಮಾಡಿಕೊಳ್ಳುತ್ತಿರುವ ನಾಯಕಿ, ಇತ್ಯಾದಿ ಪ್ರಮುಖವಾದವುಗಳು. ಪಂಜಾಬಿನಲ್ಲಿ ಸಿಖ್ ಗುರುಗಳ ಕುರಿತಾಗಿದ್ದು ರಣಜಿತ್ ಸಿಂಗ್ ಕೃತಿಯು ಜನಪ್ರೀಯವಾಗಿದೆ.

ಪೂರ್ವಭಾರತದ ಬಿಹಾರ ಹಾಗೂ ಬೆಂಗಾಲಗಳಲ್ಲಿ ಬ್ರೀಟಿಷ ಪ್ರಾಬಲ್ಯವಿದ್ದುದರಿಂದ ಜನಜೀವನ ಅಸ್ತವ್ಯಸ್ಥವಾಗಿತ್ತು. ಅಂದರೆ ಯುರೋಪಿಯನ್ ಪ್ರಭಾವ ಜನಜೀವನದ ಮೇಲೆ ಕಂಡು ಬರುತ್ತಿತ್ತು. ಈ ಭಾಗದ ಶೈಲಿಯ ಚಿತ್ರಗಳಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ವಿಷಯಗಲು ಒಡಮೂಡಿವೆ. ಹನುಮಾನ್ ಹಾಗೂ ನರ್ತಕಿಯರ ಚಿತ್ರಗಳು ಪ್ರಮುಖವಾದವು. ಈ ಶೈಲಿಯಲ್ಲಿ ಮೈ ಕಾಣುವ ಸೀರೆ, ಮುಡಿಕಟ್ಟಿದ ಕೇಶವಿನ್ಯಾಸ, ವೈವಿಧ್ಯಮಯವಾದ ಸೀರೆಯ ನಿರಿಗೆಗಳು, ಅಗಲವಾದ ನೇತ್ರ, ಸುಂದರ ಕಾಯ, ನಸುಗೆಂಪು ಮೈಬಣ್ಣ ಈ ಚಿತ್ರಗಳ ಲಕ್ಷಣ. ಬಂಗಾಳದ ಚಿತ್ರಗಳಲ್ಲಿ ದುರ್ಗಾ ಚಿತ್ರವು ಪ್ರಮುಖವಾದುದು. ಶಿಲ್ಪಸೂತ್ರ ಹಾಗು ಬಂಗಾರದ ಅಲಂಕಾರ ಎದ್ದು ತೋರುತ್ತದೆ. ಅದರಂತೆ ಕಾಳಿ, ಶಿವ, ಸರಸ್ವತಿ ಚಿತ್ರಗಳು ಪ್ರಮುಖವಾದವು.

ಕಾಳಿಘಾಟ ಚಿತ್ರಗಳ ಶೈಲಿಯಲ್ಲಿ ಧಾರ್ಮಿಕ ಪರ ವಿಚಾರಗಳು ಹಾಗೂ ಸಾಮಾಜಿಕ ಪರ ವಿಷಯಗಳು ರಚನೆಗೊಂಡಿವೆ. ಇಲ್ಲಿ ರಾಮನ ಪಟ್ಟಾಭಿಷೇಕ ಹಾಗೂ ಸಂಗೀತಗಾರ್ತಿಯ ಚಿತ್ರಗು ಪ್ರಮುಖವಾದವುಗಳು. ಸಂಗೀತಗಾರ್ತಿಯರ ಚಿತ್ರಗಳಲ್ಲಿ ತೆರೆದ ಎದೆ, ಬಿಳಿ ಸೀರೆ, ಹರಡಿದ ಕೂದಲೂ, ನಸುಗೆಂಪು ಮೈಬಣ್ಣವು ಈ ಶೈಲಿಯ ಲಕ್ಷಣಗಳು. ಕೇರಳ ಶೈಲಿಯ ಚಿತ್ರಗಳಲ್ಲಿ ಕೇರಳದ ಪ್ರಾದೇಶಿಕ ಮಹಿಳೆಯರ ದೈಹಿಕ ಲಕ್ಷಣಗಳು ಹಾಗೂ ಉಡುಪುಗಳ ಸಂಯೋಜನೆ ಕಂಡು ಬರುತ್ತದೆ. ಚಿತ್ರ-II-೧-ಅ-೩೩, ೪೬, ೩೪, ೩೫ ಈ ಚಿತ್ರಗಳು ಕಾಳಿಘಾಟ ಶೈಲಿಯ ಪ್ರಭಾವವನ್ನು ಅನುಸರಿಸುತ್ತವೆ. ಚಿತ್ರ-II-೧-ಬ-೦, ಇದು ಕೇರಳ ಶೈಲಿಯ ಪ್ರಭಾವದ ಚಿತ್ರವಾಗಿದೆ.

ಜನಪದ ಶೈಲಿಯ ಕೆಲವು ಕಲಾಕೃತಿಗಳು ಗಾಜಿನ ಮೇಲೆ ರಚನೆಗೊಂಡಿವೆ. ಇವು 'ಸ್ಥಳೀಯ ಕಲಾವಿದರುಗಳಿಂದ ರಚಿಸಲ್ಪಟ್ಟಿವೆ. ಈ ಚಿತ್ರಗಳು ಧಾರ್ಮಿಕ ವಿಷಯವನ್ನು ಒಳಗೊಂಡಿದ್ದು ತೈಲವರ್ಣಗಳಿಂದ ರಚಿಸಲ್ಪಟ್ಟಿವೆ. ಇವರು ಚಿನ್ನದ ಮೆರಗು ಕಾಗದಗಳನ್ನು ಹಾಗೂ ಬ್ಯಾಗಡಿ ಕಾಗದಗಳನ್ನು ಚಿತ್ರದ ಅಲಂಕಾರಕ್ಕಾಗಿ ಬಳಸಿದ್ದಾರೆ. ಕಪ್ಪು ವರ್ಣದಿಂದ ಬಾಹ್ಯರೇಖೆಯನ್ನು ಸ್ಥೂಲವಾಗಿ ವಿನ್ಯಾಸಗೊಳಿಸಿದ್ದು, ಒಳಗೆ ಚಪ್ಪಟೆಯಾಗಿ ಇತರ ವರ್ಣಗಳನ್ನು ಲೇಪನಮಾಡಲಾಗಿದೆ. ಇವರು ಚಿತ್ರಸೂತ್ರಕ್ಕಿಂತ ವಿಷಯ ನಿರೂಪಣೆಗೆ ಮಹತ್ವ ನೀಡಿದ್ದಾರೆ. ಹೆಚ್ಚಾಗಿ ವಿಷ್ಣುವಿನ ದಶಾವತಾರಕ್ಕೆ ಸಂಬಂಧಿಸಿದ ವಿಷಯಗಳನ್ನು ಒಳಗೊಂಡಿವೆ. ಈ ಚಿತ್ರಗಳಲ್ಲಿ ಮೂರ್ತಿಶಿಲ್ಪಗಳಿಗೆ ಬಣ್ಣ ಬರೆಯುವ ಕ್ರಮವನ್ನೇ ಇಲ್ಲಿಯೂ ಸಹ ಅನುಸರಿಸಲಾಗಿದೆ. ಗ್ರಾಮ ದೇವತೆ ಚಿತ್ರಗಳು, ದುರುಗು ಮುರುಗಿ ಚಿತ್ರಗಳು ಅಥವಾ ಶಕ್ತಿ ದೇವತೆಗಳ ಚಿತ್ರಗಳ ಸೂತ್ರಗಳನ್ನು ಈ ಗಾಜಿನ ಚಿತ್ರಗಳಲ್ಲಿ ಅನುಸರಿಸಲಾಗಿದೆ. ಇಂಥ ಚಿತ್ರಗಳು ಕರ್ನಾಟಕದ ನರಗುಂದ, ನವಲಗುಂದ ಹಾಗೂ ರಾಮದುರ್ಗ ಭಾಗಗಳಲ್ಲಿ ಸಾಮಾನ್ಯವಾಗಿ ಕಾಣಸಿಗುತ್ತವೆ. ಈ ಚಿತ್ರಗಳಲ್ಲಿ ಜನಪದರ ಭಾವನೆಗಳು ಅಭಿವ್ಯಕ್ತಗೊಂಡಿವೆ.

ಧಾರ್ಮಿಕ ಹಾಗೂ ಧಾರ್ಮಿಕೇತರ ನೆಲೆಯಲ್ಲಿ ರಚನೆಗೊಂಡಿರುವ ಹಲವಾರು ಚಿತ್ರಗಳು ಸಮಕಾಲೀನ ಪ್ರಭಾವಕ್ಕೊಳಗಾಗಿದ್ದು, ಗಾಜನ್ನು ಬೇಕಾದಂತೆ ಕೊರೆದು ಬೇಕಾದ

ಮೈವಳಿಕೆಯನ್ನು ತಂದು ತ್ರಿಕರಣ ರೂಪದ ವರ್ಣಛಾಯೆಗಳಿಂದ ಪ್ರತಿಮೆಗಳು ಹಾಗೂ ಹಿನ್ನೆಲೆಯ ವಿವರಣೆಯು ಅತ್ಯಂತ ಮನೋಜ್ಞವಾಗಿ ಮೂಡಿಬಂದಿವೆ. ಇಂಥ ಚಿತ್ರಗಳು ಪಾರದರ್ಶಕ ವರ್ಣ ಪದ್ಧತಿಯನ್ನು ಹೊಂದಿದ್ದು, ಆಕರ್ಷಕ ವರ್ಣ ವಿವರಣೆಯನ್ನು ಹೊಂದಿವೆ. ರಾಸಾಯನಿಕ ವರ್ಣಗಳಾದ ಇವು ಅತ್ಯಂತ ಉಜ್ವಲತೆಯನ್ನು ಹಾಗೂ ಉತ್ಕೃಷ್ಟತೆಯನ್ನು ಹೊಂದಿವೆ. ಮೂರ್ತ ಹಾಗೂ ಅಮೂರ್ತ ಕಲ್ಪನೆಯನ್ನು ಹೊಂದಿದ್ದು ಸಮಕಾಲೀನ ಪರಿಕಲ್ಪನೆಯೊಂದಿಗೆ ಕಲಾವಿದನ ಸೃಜನ ಶೀಲತೆಯನ್ನು ಅಭಿವ್ಯಕತಪಡಿಸುತ್ತವೆ.

ಕರ್ನಾಟಕದಲ್ಲಿ ಬಿಂಬಿತವಾದ ಗಾಜಿನ ಚಿತ್ರಗಳು ಪ್ರಾಚೀನತೆಯಿಂದ ಆಧುನಿಕತೆಯ ತಂತ್ರ ಸೂತ್ರಗಳನ್ನು ಮೈಗೂಡಿಸಿಕೊಂಡು ತನ್ನದೇ ಆದ ಪಥದತ್ತ ನಡೆದಿವೆ ಎನ್ನಬಹುದು. ವಿಶೇಷವಾಗಿ ನಮ್ಮ ಸಾಂಪ್ರದಾಯಿಕ ಚಿತ್ರಸೂತ್ರ, ಜಾನಪದ ಚಿತ್ರಸೂತ್ರ ಹಾಗೂ ಸಮಕಾಲೀನ ಚಿತ್ರಸೂತ್ರಗಳಿಂದ ಪ್ರಜ್ಞಾವಂತ ವಿಚಾರವಾದಿಗಳಿಗೆ ಚಿಂತನಕಾರರಿಗೆ ದೃಷ್ಟಿಕೊಡುತ್ತವೆ.

■■■



## ಅಧ್ಯಾಯ – ಆರು

# ಗಾಜಿನ ಮೇಲಿನ ಚಿತ್ರಕಲೆಯ ಪೋಷಕರು, ಚಿತ್ರಗಳ ಸ್ಥಿತಿಗತಿ ಮತ್ತು ಸಂರಕ್ಷಣಾ ವಿಧಾನ.

ನಮ್ಮ ಹಿರಿಯರು ಕಲಾಪ್ರೇಮಿಗಳಾಗಿದ್ದರಿಂದ ಅಲಂಕಾರಿಕ ವಸ್ತುಗಳು, ವರ್ಣಚಿತ್ರಗಳು, ಕರಕುಶಲ ವಸ್ತುಗಳು ಶಿಲ್ಪಕಲಾಕೃತಿಗಳ ಜೊತೆಗೆ ಗಾಜಿನ ಮೇಲೆ ರಚನೆಗೊಂಡ ವರ್ಣಚಿತ್ರಗಳು, ಗಾಜಿನ ಇತರ ಅಲಂಕಾರಿಕ ವಸ್ತುಗಳನ್ನು ಸಂಗ್ರಹ ಮಾಡಿದ್ದಾರೆ. ಕರ್ನಾಟಕದಲ್ಲಿ ಈ ಬಗೆಯ ಅಭೂತಪೂರ್ವ ಗಾಜಿನ ಕಲಾಕೃತಿಗಳು ಬೇರೆ ಬೇರೆ ಮತಪಂಗಡಗಳ ಶ್ರೀಮಂತ ವ್ಯಾಪಾರಸ್ಥರ ಮನೆತನಗಳಲ್ಲಿ, ಮಠಮಾನ್ಯಗಳಲ್ಲಿ, ಚರ್ಚುಗಳಲ್ಲಿ, ಆರಾಧನಾ ಮಂದಿರಗಳಲ್ಲಿ, ದೇವಸ್ಥಾನಗಳಲ್ಲಿ, ಸರಕಾರಿ ಹಾಗೂ ಖಾಸಗಿ ವಸ್ತು ಸಂಗ್ರಹಾಲಯಗಳಲ್ಲಿ ಸಂಗ್ರಹಗೊಂಡಿವೆ. ಈ ಕಲಾಕೃತಿಗಳನ್ನು ನಮ್ಮ ಪೋಷಕರು ಸುಮಾರು ಎರಡು ಮೂರು ತಲೆಮಾರುಗಳಿಂದ ಪೋಷಿಸಿಕೊಂಡು ಬಂದಿದ್ದಾರೆ.

ಇಲ್ಲಿ ಮುಖ್ಯವಾಗಿ ಗಾಜಿನ ಚಿತ್ರಗಳ ಪೋಷಕರನ್ನು, ಪೋಷಿಸಲ್ಪಟ್ಟ ಗಾಜಿನ ಚಿತ್ರಗಳನ್ನು ಹಾಗೂ ಅವುಗಳ ಸಂರಕ್ಷಣೆಯ ಕುರಿತಾಗಿ ಈ ಅಧ್ಯಾಯದಲ್ಲಿ ವಿವೇಚಿಸಲು ಪ್ರಯತ್ನಿಸಲಾಗಿದೆ. ಗಾಜಿನ ಚಿತ್ರಗಳ ಪೋಷಕರನ್ನು ಮತ್ತು ಕಲಾಕೃತಿಗಳನ್ನು ಈ ಕೆಳಗಿನಂತೆ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ.

ಅ. ಮನೆಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನಚಿತ್ರಗಳು

ಬ. ಅರಮನೆಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳು

ಕ. ವಸ್ತು ಸಂಗ್ರಹಾಲಯಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳು

ಡ. ದೇವಸ್ಥಾನಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳು

ಈ. ಚರ್ಚುಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳು

ಫ. ಮಹ್ಮದೀಯರ ಕಟ್ಟಡಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳು

ಗ. ಸಾರ್ವಜನಿಕ ಹಾಗೂ ಖಾಸಗಿ ಕಟ್ಟಡಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳೆಂದು ವಿವೇಚಿಸಲಾಗುತ್ತದೆ.

ಅ. ಮನೆಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನಚಿತ್ರಗಳು

ಕರ್ನಾಟಕದಲ್ಲಿ ಗಾಜಿನ ಮೇಲಿನ ಚಿತ್ರಗಳನ್ನು ನಮ್ಮ ಹಿರಿಯರು ಬೇರೆ ಬೇರೆ ಸಂದರ್ಭಗಳಲ್ಲಿ ಸಂಗ್ರಹಿಸಿದ ಹಾಗೂ ಸ್ವತಃ ಚಿತ್ರಿಸಿದ್ದನ್ನು ಕಾಣುತ್ತೇವೆ. ಈ ಗಾಜಿನ ಚಿತ್ರಗಳನ್ನು ಮನೆಯ ಅಲಂಕಾರಕ್ಕಾಗಿ, ಹಬ್ಬ ಹರಿದಿನಗಳಲ್ಲಿ ವಿಶೇಷ ಮಂಟಪಗಳನ್ನು ನಿರ್ಮಿಸಿ ಈ ಚಿತ್ರಗಳನ್ನು ಅಲಂಕರಿಸಿ ಆಚರಣೆ ಮಾಡುತ್ತಿದ್ದುದನ್ನು ಹಾಗೂ ವಿಶೇಷ ಸಂದರ್ಭಗಳಲ್ಲಿ ಗಾಜಿನ ಚಿತ್ರಗಳನ್ನು ಅಲಂಕರಿಸಿದ್ದನ್ನು ಪ್ರಸ್ತುತ ಚಿತ್ರಗಳ ಪೋಷಕರಿಂದ ತಿಳಿದುಬರುತ್ತದೆ. ಅವರ ಪೂರ್ವಜರು ಚಿತ್ರಗಳನ್ನು ಸಂಗ್ರಹಿಸಿದ ಹಾಗೂ ಕಾರಣಗಳನ್ನು ಪೋಷಕರು ವೈವಿಧ್ಯ ರೀತಿಯಲ್ಲಿ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಅವರ ಪೂರ್ವಜರು ಖರೀದಿಸಿ ಸಂಗ್ರಹಿಸಿದ ಚಿತ್ರಗಳನ್ನು ಇಂದಿನ ತನಕ ಪೋಷಿಸಿಕೊಂಡು ಬಂದಿರುವುದನ್ನು ಶ್ಲಾಘಿಸಬೇಕು. ಇಂಥ ಪೋಷಕರ ಮನೆತನದವರನ್ನು ಹಾಗೂ ಚಿತ್ರಗಳನ್ನು ಕುರಿತು ವಿವೇಚಿಸಲಾಗುತ್ತದೆ.

ಬಾಗಲಕೋಟೆಯ ಜವಳಿ ವ್ಯಾಪಾರಸ್ಥ ಕುಟುಂಬವಾದ ಹಳೆಪೇಟೆಯ ಶ್ರೀ ಎಸ್. ಎಸ್. ನಾರಾರವರ ಮನೆಯಲ್ಲಿ ಸುಮಾರು ಹನ್ನೊಂದು ತೂಗುಹಾಕುವ ಗಾಜಿನ ಮೇಲಿನ ಚಿತ್ರಗಳು ಸಂಗ್ರಹಗೊಂಡಿವೆ. ಇವು ಸುಮಾರು ಎರಡು ಮೂರು ತಲೆಮಾರುಗಳ ಹಿಂದೆ ನಮ್ಮ ಪೂರ್ವಜರು ದೂರದ ಮುಂಬೈಯಿಂದ ತಂದು ಸಂಗ್ರಹಿಸಿರುವರೆಂದು ಮನೆತನದ ಹಿರಿಯರಾದ ಶ್ರೀ ಬಿ. ಎಸ್. ನಾರಾರವರು ಅಭಿಪ್ರಾಯ ಪಡುತ್ತಾರೆ. ಇವರ ಮನೆಯಲ್ಲಿ ಲಭ್ಯವಿರುವ ಎಲ್ಲ ಗಾಜಿನ ಚಿತ್ರಗಳು ಒಂದೇ ಅಳತೆಯಲ್ಲಿ ಚಿತ್ರಿತಗೊಂಡಿದ್ದು, ಒಂದೇ ಕಾಲಮಾನವನ್ನು ಸೂಚಿಸುತ್ತವೆ. ಬಾಗಲಕೋಟೆಯ ಹಳೆಪೇಟೆಯಲ್ಲಿ ವಿಶಿಷ್ಟ ವಾಸ್ತುವಿನ್ಯಾಸ ಹೊಂದಿದ ಇವರ ಮನೆಯು ಆಕರ್ಷಕ ಚಿತ್ರವಿನ್ಯಾಸಗಳಿಂದ ದೊಡ್ಡ ಕಂಬಗಳು, ಬೋಧಿಗೆಗಳು ವಿಶಾಲವಾದ ಪಡಸಾಲೆ, ಗೋಡೆಗಳಲ್ಲಿ ಮರದ ಕಪಾಟುಗಳು ಕಂಡು ಬರುತ್ತಿದ್ದು, ಅತ್ಯಂತ ಹಳೆಯ ಮನೆಯೆನ್ನಬಹುದು. ಈ ಮನೆತನದಲ್ಲಿ ಹೋಳಿಹಬ್ಬದ ಸಂದರ್ಭಗಳಲ್ಲಿ ರಂಗಪಂಚಮಿಯ ದಿವಸ ವಿಶಿಷ್ಟ ಮಂಟಪಗಳನ್ನು ನಿರ್ಮಿಸಿ ಮರದ ಕಟೌಟಗಳನ್ನು, ಚಿತ್ರವಿನ್ಯಾಸಗಳಿಂದ ಕೂಡಿದ ವಸ್ತುಗಳನ್ನು ಅಳವಡಿಸಿ, ಕಾಮರತಿ ಶಿಲ್ಪಗಳನ್ನು ಪ್ರತಿಷ್ಠಾಪಿಸಿ ಹೋಲಿಹಬ್ಬವನ್ನು ವೈಭವದಿಂದ ಆಚರಿಸಲಾಗುತ್ತಿತ್ತು. ಇದನ್ನು ನಮ್ಮ ಪೂರ್ವಜರು ಅತ್ಯಂತ ವೈಭವದಿಂದ ನಡೆಸಿಕೊಂಡು ಬರುತ್ತಿದ್ದುದನ್ನು ಮನೆಯ ಹಿರಿಯರು ಸ್ಮರಿಸುತ್ತಾರೆ. ಇಂಥ ವಿಶಿಷ್ಟ ಮಂಟಪಗಳಲ್ಲಿ ಗಾಜಿನ ಚಿತ್ರಗಳನ್ನು ನೇತುಹಾಕಿ ಅಲಂಕರಿಸುತ್ತಿದ್ದರು. ಆ ಕಾರಣಕ್ಕಾಗಿಯೇ ಅವರ ಪೂರ್ವಜರು ಈ ಚಿತ್ರಗಳನ್ನು ಅತೀ ಕಡಿಮೆ ಬೆಲೆತೆತ್ತು, ದೂರದ ನಗರಗಳಿಂದ ಖರೀದಿಸಿ ತಂದಿದ್ದಾರೆ. ಆದರೆ ಇಂದು ಈ ಹಬ್ಬವನ್ನು ಅಷ್ಟೊಂದು ವೈಭವದಿಂದ

ಆಚರಿಸುವುದಿಲ್ಲ, ಈ ರೀತಿ ಮಂಟಪಗಳನ್ನು ನಿರ್ಮಿಸುವುದಿಲ್ಲ ಎಂದು ಬಿ. ಎಸ್. ನಾರಾರವರು ತಿಳಿಸುತ್ತಾರೆ. ಇವರ ಮನೆಯಲ್ಲಿರುವ ಹನ್ನೊಂದು ಚಿತ್ರಗಳು ಉತ್ತಮ ಸ್ಥಿತಿಯಲ್ಲಿದ್ದರೂ ಸಹ ಮರದ ಚೌಕಟ್ಟುಗಳು ಶಿಥಿಲಾವಸ್ಥೆಯಲ್ಲಿವೆ. ಬಣ್ಣಗಳು ಕಿತ್ತುಬರುವ ಸ್ಥಿತಿಯಲ್ಲಿವೆ. ಆದರೆ ವರ್ಣಚಿತ್ರಗಳು ಇನ್ನೂ ಸುರಕ್ಷಿತವಾಗಿರುವುದರಿಂದ ಅವುಗಳನ್ನು ಸುಸ್ಥಿತಿಯಲ್ಲಿ ರಕ್ಷಿಸಲು ಪ್ರಯತ್ನಿಸಬೇಕು. ಉತ್ತಮವಾದ, ಗಟ್ಟಿ ಮುಟ್ಟಾದ ಚೌಕಟ್ಟುಗಳು, ರಕ್ಷಣಾ ಫಲಕಗಳನ್ನು ಅಳವಡಿಸಬೇಕು. ಮುಂದಿನ ಪೀಳಿಗೆಯವರಿಗೆ ಸಿಗುವಂತೆ ಕಾಪಾಡುವುದು ಪೋಷಕರ ಜವಾಬ್ದಾರಿಯಾಗಿದೆ.

ಬಾಗಲಕೋಟೆಯ ಇನ್ನೊಂದು ಮನೆತನವಾದ ಶ್ರೀ ಬಿ. ಎಂ. ಹಲಕಾಟಿಯವರ ಮನೆಯಲ್ಲಿ ಸುಮಾರು ೨೦ಕ್ಕೂ ಅಧಿಕ ತೂಗುಹಾಕುವ ಗಾಜಿನ ಚಿತ್ರಗಳಿದ್ದವು. ಆದರೆ ಇಂದು ಮೂರು ಚಿತ್ರಗಳು ಮಾತ್ರ ಲಭ್ಯಇವೆ. ಇವರ ಮನೆಯು ಬಾಗಲಕೋಟೆಯಲ್ಲಿಯೇ ವಿಶಿಷ್ಟವಿನ್ಯಾಸಹೊಂದಿದ ಬಂಗಲೆಯಾಗಿದೆ. ಸುಮಾರು ೨೦೦ ವರ್ಷಗಳ ಹಿಂದೆ ಕೆಂಪುಕಲ್ಲುಗಳಿಂದ ಬ್ರಿಟೀಷ ವಾಸ್ತುಶೈಲಿಯಲ್ಲಿ ಕಟ್ಟಲಾಗಿದೆ. ಈ ಬಂಗಲೆಯಲ್ಲಿ ಅನೇಕ ಕನ್ನಡ ಹಾಗೂ ಹಿಂದಿ ಚಲನಚಿತ್ರಗಳು, ಧಾರಾವಾಹಿಗಳು, ಚಿತ್ರೀಕರಣಗೊಂಡಿವೆ. ಅಂಥ ವೈಭವ ಹೊಂದಿದ ಈ ಮನೆಯು ಆಲಮಟ್ಟಿ ಹಿನ್ನಿರಿನಿಂದ ಮುಳುಗಡೆ ಹೊಂದಿ ಇಂದು ಶಿಥಿಲಾವಸ್ಥೆಯಲ್ಲಿ ನಿಂತಿದೆ.

ಈ ಮನೆತನವು ಪೂರ್ವಜರ ಕಾಲದಿಂದಲೂ ವ್ಯಾಪಾರಸ್ಥ ಹಾಗೂ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದಿರುವ ಮನೆತನವಾಗಿದೆ. ಇವರ ಮನೆಯಲ್ಲಿ ಹೋಳಿಹಬ್ಬ, ಗಣೇಶ ಚತುರ್ಥಿ, ಮಹಾಲಕ್ಷ್ಮೀ ಪೂಜೆ ಸಂದರ್ಭಗಳಲ್ಲಿ ವೈವಿಧ್ಯಮಯ ಮಂಟಪಗಳನ್ನು ನಿರ್ಮಿಸಿ ಈ ಗಾಜಿನ ಚಿತ್ರಗಳನ್ನು ಅಲಂಕರಿಸಿ ಹಬ್ಬವನ್ನು ಆಚರಣೆ ಮಾಡಲಾಗುತ್ತಿತ್ತೆಂದು ಬಿ.ಎಂ. ಹಾಲಕಾಟಿಯವರು ಅಭಿಪ್ರಾಯ ಪಡುತ್ತಾರೆ. ಆದರೆ ಇಂದು ಈ ಚಿತ್ರಗಳನ್ನು ಕೇವಲ ಮನೆಯ ಭೋದಿಗೆಗೆ ನೇತು ಹಾಕಿದ್ದನ್ನು ಕಾಣುತ್ತೇವೆ. ಇಂದು ಆ ವಿಶಿಷ್ಟ ಸಾಂಪ್ರದಾಯಿಕ ಹಬ್ಬ ಆಚರಣೆಗಳು ಮಾಯವಾಗಿವೆ ಎಂದು ಮನೆಯವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಲಭ್ಯವಿರುವ ಮೂರು ಚಿತ್ರಗಳು ಶಿಥಿಲಾವಸ್ಥೆಯಲ್ಲಿದ್ದು ಚೌಕಟ್ಟುಗಳು, ರಕ್ಷಣಾಫಲಕಗಳು ಜಖಂಗೊಂಡಿವೆ. ಆದ್ದರಿಂದ ಪೋಷಕರು ಅವುಗಳಿಗೆ ಸುಸಜ್ಜಿತ ಚೌಕಟ್ಟು ಹಾಗೂ ರಕ್ಷಣಾ ಫಲಕಗಳನ್ನು ಹಾಕಿ ಸಂರಕ್ಷಿಸಬೇಕು.

ಬಾಗಲಕೋಟೆಯಲ್ಲಿಯೇ ಇನ್ನೂ ಹಲವಾರು ಮನೆತನಗಳಲ್ಲಿ ಈ ಅಪರೂಪದ ಗಾಜಿನ ಮೇಲಿನ ಚಿತ್ರಗಳು ಲಭ್ಯ ಇವೆ. ಶ್ರೀ ಎಸ್. ಬಿ. ಹೊಕ್ರಾಣಿ ಶ್ರೀ ಮಾಣಿಕಚಂದ್ ಬೇತಾಳ, ಶ್ರೀ ಮಹೇಂದ್ರ ಸರಾಫ್ ಹಾಗೂ ಶ್ರೀ ಅಶೋಕ ಗೋಣಿಯವರ ಮನೆಯಲ್ಲಿ ವೈವಿಧ್ಯಮಯ ಹಾಗೂ ವಿವಿಧ ಕಾಲಘಟ್ಟಗಳಲ್ಲಿ ಸಂಗ್ರಹಿಸಿದ ಚಿತ್ರಗಳು ಕಂಡು ಬರುತ್ತಿವೆ. ಶ್ರೀ ಎಸ್. ಬಿ. ಹೊಕ್ರಾಣಿಯವರ ಮನೆಯಲ್ಲಿ ಸುಮಾರು ೧೩ ಚಿತ್ರಗಳು ೨೦೦ ವರ್ಷಗಳ ಹಿಂದೆ ಅವರ ಪೂರ್ವಜರು ಸಂಗ್ರಹಿಸಿದ್ದನ್ನೂ ತಿಳಿಯುತ್ತವೆ. ಇವು ೧೯ನೇ ಶತಮಾನಕ್ಕೆ ಸಂಬಂಧಿಸಿವೆ. ಈ ಮನೆತನವು ಬಾಗಲಕೋಟೆಯಲ್ಲಿಯೇ ಅತ್ಯಂತ ಹಳೆಯ ಮನೆತನವಾಗಿದ್ದು, ಮನೆಯವರು ಅನೇಕ ತಲೆಮಾರುಗಳಿಂದ ವ್ಯಾಪಾರವನ್ನೇ ಮಾಡಿಕೊಂಡು ಬಂದಿದ್ದಾರೆ. ಹಳೆಬಾಗಲಕೋಟೆಯ

ಇವರ ಬಂಗಲೆಯಲ್ಲಿ ಇವರ ಪೂರ್ವಜರು ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಿದ್ದರು. ಗಣೇಶ ಚತುರ್ಥಿ, ಮಹಾಲಕ್ಷ್ಮೀ ಪೂಜೆ, ಹೋಳಿ ಹಬ್ಬದ ಸಂದರ್ಭಗಳಲ್ಲಿ ಅವರ ವಠಾರದಲ್ಲಿ ವಿಶೇಷ ಮಂಟಪಗಳನ್ನು ನಿರ್ಮಿಸಿ ದೊಡ್ಡಾಟ ಹಾಗೂ ಸಣ್ಣಾಟಗಳನ್ನು ಆಡಿಸುತ್ತಿದ್ದರು. ಅನೇಕ ಸಂಗೀತ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಅಂಥ ಸಂದರ್ಭಗಳಲ್ಲಿ ಮಂಟಪಗಳ ಅಲಂಕಾರಕ್ಕಾಗಿ ವೈವಿಧ್ಯಮಯ ಗಾಜಿನ ವಸ್ತುಗಳನ್ನು, ಕಸೂತಿ ಬಟ್ಟೆಗಳನ್ನು, ಗೊಂಬೆಗಳನ್ನು ಹಾಗೂ ಗಾಜಿನ ಚಿತ್ರಗಳನ್ನು ತೂಗುಹಾಕುತ್ತಿದ್ದರು. ಈ ಚಿತ್ರಗಳನ್ನು ಸಂದರ್ಭಕ್ಕನುಗುಣವಾಗಿ ಪ್ರಣಯಕ್ಕೆ ಸಂಬಂಧಿಸಿದ, ಸಂಗೀತಕ್ಕೆ ಸಂಬಂಧಿಸಿದ ಚಿತ್ರಗಳನ್ನು ಹಾಗೂ ಧಾರ್ಮಿಕ ಸನ್ನಿವೇಷದ ಚಿತ್ರಗಳನ್ನು ಅಲಂಕರಿಸುತ್ತಿದ್ದರು ಎಂದು ಮನೆಯ ಹಿರಿಯರಾದ ಶ್ರೀ ಬಿ. ಎಂ. ಹೊಕ್ರಾಣಿಯವರು ನೆನಪಿಸುತ್ತಾರೆ. ಅವರು ಚಿಕ್ಕವರಿದ್ದಾಗ ಈ ಸಂಭ್ರಮವನ್ನು ಅನುಭವಿಸಿದ್ದನ್ನು ಮೆಲುಕುಹಾಕುತ್ತಾಖುಷಿ ಪಡುತ್ತಾರೆ. ಈಗ ಬಂಗಲೆಯ ಹಿನ್ನೀರಿನಲ್ಲಿ ಮುಳುಗಿದುದರಿಂದ ನವನಗರದ ಆಧುನಿಕ ಶೈಲಿಯ ಕಾಂಕ್ರೆಟ್ ಕಟ್ಟಡದಲ್ಲಿ ಈ ಅಪರೂಪದ ಗಾಜಿನಚಿತ್ರಗಳನ್ನು ತೂಗುಹಾಕಿದ್ದಾರೆ. ಇವು ನಮ್ಮ ಪೂರ್ವಜರು ಸಂಗ್ರಹಿಸಿದ ಅಮೂಲ್ಯ ಚಿತ್ರಗಳು. ಇವನ್ನು ರಕ್ಷಿಸುವುದು ನಮ್ಮ ಕರ್ತವ್ಯವೆಂದು ಮನೆಯವರು ಅಭಿಪ್ರಾಯ ಪಡುತ್ತಾರೆ. ಇಂದು ಈ ಹದಿಮೂರು ಚಿತ್ರಗಳು ಸುಸಜ್ಜಿತವಾಗಿದ್ದು, ಚಿತ್ರವಿನ್ಯಾಸಗಳ ಚೌಕಟ್ಟು ಹಾಗೂ ಉಜ್ವಲ ವರ್ಣಗಳಿಂದ ಶೋಭಿಸುತ್ತಿರುವ ವರ್ಣಚಿತ್ರಗಳು ಉತ್ತಮ ರೀತಿಯಲ್ಲಿ ಸಂರಕ್ಷಿಸಲ್ಪಟ್ಟಿವೆ.

ಬಾಗಲಕೋಟೆಯ ಶ್ರೀ ಮಾಣಿಕಚಂದ್ ಹನ್ಸ್‌ರಾಜ್ ಬೇತಾಳ ಇವರ ದಲಾಲಿ ಅಂಗಡಿಯ ಮಳಿಗೆಯಲ್ಲಿ ಚಿತ್ರಗಳು ಸಂಗ್ರಹಗೊಂಡಿವೆ. ಇವರ ಮನೆತನವು ಕಾಳುಕಡಿ ವ್ಯಾಪಾರಸ್ಥ ಮನೆತನವಾಗಿದ್ದು, ವ್ಯಾಪಾರದ ನಿಮಿತ್ಯ ನಮ್ಮ ತಾತನವರು ದೂರದ ಮಹಾರಾಷ್ಟ್ರದಿಂದ ತಂದಿರುವರೆಂದು ವ್ಯಾಪಾರಸ್ಥರಾದ ಶ್ರೀ ಮಾಣಿಕಚಂದ್‌ರು ಹೇಳುತ್ತಾರೆ. ಇವರು ಮೂಲತಃ ರಾಜಸ್ಥಾನದ ಮಾರವಾಡಿ ಜನಾಂಗದವರು. ವ್ಯಾಪಾರದ ನಿಮಿತ್ಯ ನಮ್ಮ ಪೂರ್ವಜರು ಬಾಗಲಕೋಟೆಗೆ ಬಂದು ನೆಲೆಸಿರುವರು. ಅವರು ವ್ಯಾಪಾರಕ್ಕೆಂದು ಬೇರೆ ರಾಜ್ಯಗಳಿಗೆ ಹೋದಾಗ ಅಲ್ಲಿ ವಿಶೇಷವಾಗಿ ಸಿಗುವ ವಸ್ತುಗಳನ್ನು, ವರ್ಣಚಿತ್ರಗಳನ್ನು ಗೊಂಬೆಗಳನ್ನು ಹಾಗೂ ಗಾಜಿನ ಚಿತ್ರಗಳನ್ನು ಖರೀದಿಸಿ ತರುತ್ತಿದ್ದರೆಂದು ಚಿತ್ರಗಳ ಪೋಷಕರು ಅಭಿಪ್ರಾಯ ಪಡುತ್ತಾರೆ. ಈ ಚಿತ್ರಗಳನ್ನು ವಿಶೇಷ ಸಂದರ್ಭಗಳಲ್ಲಿ ಬಳಸಿಕೊಂಡು, ಮನೆಯ ಅಲಂಕಾರಕ್ಕಾಗಿ ಬೋಧಿಗೆಗೆ ನೇತು ಹಾಕಲಾಗುತ್ತದೆ ಎನ್ನುತ್ತಾರೆ. ಈ ಚಿತ್ರಗಳು ಕೃಷ್ಣ, ಲಕ್ಷ್ಮೀ ಹಾಗೂ ದೇವತೆಗಳ ದೃಶ್ಯಗಳನ್ನು ಒಳಗೊಂಡಿವೆ. ಚಿತ್ರಗಳು ಸುಸಜ್ಜಿತವಾಗಿದ್ದರೂ ಚೌಕಟ್ಟುಗಳು ಶಿಥಿಲಗೊಂಡಿವೆ. ಇವುಗಳ ಚೌಕಟ್ಟುಗಳನ್ನು ದುರಸ್ತಿಗೊಳಿಸಿ ಮುಂದಿನ ತಲೆಮಾರಿನವರಿಗೆ ಸಿಗುವಂತಾಗಬೇಕು.

ಹೊಸಪೇಟೆಯ ಶ್ರೀ ಮಹೇಂದ್ರ ಸರಾಫ್‌ರವರ ಮನೆಯಲ್ಲಿ ಸುಮಾರು ೨೦೦ ವರ್ಷಗಳಿಂದ ಪೋಷಿಸಲ್ಪಟ್ಟ ಚೀನಾ ಕಲಾವಿದರು ರಚಿಸಿದ ಹನ್ನೊಂದು ಚಿತ್ರಗಳು ಲಭ್ಯವಿವೆ. ಇವರ ಮನೆತನವು ಬೆಳ್ಳಿ, ಬಂಗಾರ ವ್ಯಾಪಾರಸ್ಥ ಮನೆತನವಾಗಿದ್ದು, ಪೂರ್ವಜರಿಂದಲೂ ಕಂಡುಕೊಳ್ಳಲಾಗುತ್ತಿದೆ. ಇವರ ಮನೆಯಲ್ಲಿರುವ ಚಿತ್ರಗಳು ದುಸ್ಥಿತಿಯಲ್ಲಿದ್ದು, ಚೌಕಟ್ಟುಗಳು.

ಹಿಂಬದಿಯ ಸಂರಕ್ಷಣಾ ಹಲಗೆಗಳು ಕಿತ್ತು ಬರುವ ಸ್ಥಿತಿಯಲ್ಲಿವೆ. ಚಿತ್ರಗಳಲ್ಲಿನ ವರ್ಣಗಳು ಅಲ್ಲಲ್ಲಿ ಕಿತ್ತು ಹೋಗಿವೆ. ಇವುಗಳ ಸಂರಕ್ಷಣೆಯ ಅಗತ್ಯತೆ ಇದೆ. ಮಹೇಂದ್ರ ಸರಾಫರ ಅಜ್ಜನು ೧೫೦ ವರ್ಷಗಳ ಹಿಂದೆ ವ್ಯಾಪಾರದ ನಿಮಿತ್ಯ ಉತ್ತರಭಾರತದ ಕಡೆಗೆ ಹೋದಾಗ ಖರೀದಿಸಿ ತಂದಿದ್ದನೆಂದು ಹೇಳುತ್ತಾರೆ. ಅವರ ಅಜ್ಜ, ಕಲಾವಿದನೂ ಹಾಗೂ ಕಲಾಪ್ರೇಮಿಯೂ ಆಗಿದ್ದನೆಂದೂ ಅವರ ಗುಣಗಳು ಅವರ ಮೊಮ್ಮಕ್ಕಳಲ್ಲಿ ಹರಿದು ಬಂದಿವೆ. ಇವರು ಅಜ್ಜನಂತೆ ಗಾಜಿನ ಮೇಲೆ ಚಿತ್ರಗಳನ್ನು, ಕಾಗದದ ಮೇಲೆ ಚಿತ್ರಗಳನ್ನು ಬರೆದಿದ್ದಾರೆ ಎಂದು ಸರಾಫ್‌ರು ಹರ್ಷ ವ್ಯಕ್ತಪಡಿಸುತ್ತಾರೆ. ಇವರ ಮನೆಯಲ್ಲಿರುವ ಎಲ್ಲ ಚಿತ್ರಗಳು ೫೫ x ೬೫ ಸೆಂ.ಮೀ ಅಳತೆಯಲ್ಲಿವೆ. ಅರಸನ ಭಾವಚಿತ್ರ, ವ್ಯಕ್ತಿಚಿತ್ರಗಳು, ಯುವತಿಯ ಚಿತ್ರಗಳು, ಶೇಷಾಶಯನ ವಿಷ್ಣು, ದತ್ತಾತ್ರೇಯನ ಚಿತ್ರಗಳು ಸಂಗ್ರಹ ಇವೆ. ಈ ಚಿತ್ರಗಳ ರಚನಾವಿಧಾನವು ಒಂದೇ ರೀತಿಯಿದ್ದು, ಬಹುಶಃ ಚೀನಾ ಕಲಾವಿದರು ರಚಿಸಿದ ಚಿತ್ರಗಳಾಗಿವೆ.

ಬಾಗಲಕೋಟೆಯ ಶ್ರೀ ಕೃಷ್ಣದಾಸ್, ಹನುಮನ್‌ದಾಸ್ ಗೋಣಿಯವರ ಮನೆಯಲ್ಲಿ ಮೂರು ಚಿತ್ರಗಳು ಲಭ್ಯಇವೆ. ಇವರ ಮನೆಯಲ್ಲಿ ೧೦ಕ್ಕಿಂತಲೂ ಅಧಿಕ ಚಿತ್ರಗಳಿದ್ದವು ಸರಿಯಾದ ಸಂರಕ್ಷಣೆ ಇಲ್ಲದೇ ಕೆಲವು ಚಿತ್ರಗಳು ಬಿದ್ದು ಒಡೆದುಹೋಗಿವೆ. ಪ್ರಸ್ತುತ ಮುರು ಚಿತ್ರಗಳು ಮಾತ್ರ ಲಭ್ಯಇವೆ. ಸಧ್ಯ ಲಭ್ಯವಿರುವ ಮೂರು ಚಿತ್ರಗಳು ಸಾಂಪ್ರದಾಯಿಕ ಶೈಲಿಯ ಪೌರಾಣಿಕ ದೃಶ್ಯಗಳನ್ನೊಳಗೊಂಡಿವೆ. ಶಿವ ಮತ್ತು ಯಮನ ಚಿತ್ರ ೨೫ x ೩೦ ಸೆಂ.ಮೀ ವೇಣುಗೋಪಾಲನ ಚಿತ್ರ, ೩೦ x ೩೫ ಸೆಂ.ಮೀ, ಕೃಷ್ಣ-ರುಕ್ಮಿಣಿ, ಸತ್ಯಭಾಮರ ಚಿತ್ರಗಳು ೫೫ x ೬೦ ಸೆಂ.ಮೀ ಅಳತೆಯಲ್ಲಿ ರಚನೆಗೊಂಡಿವೆ. ಈ ಮೂರು ಚಿತ್ರಗಳ ಚೌಕಟ್ಟುಗಳು ಜಖಂಗೊಂಡಿದ್ದು, ಹಿನ್ನೆಲೆಯ ಸಂರಕ್ಷಣಾ ಹಾಳೆಗಳು ತುಕ್ಕು ಹಿಡಿದು ಅವಸಾನದ ಅಂಚಿನಲ್ಲಿವೆ. ಇವನ್ನು ಪೋಷಕರು ಸುಸಜ್ಜಿತ ಚೌಕಟ್ಟು ಹಾಗೂ ಗಟ್ಟಿಮುಟ್ಟಾದ ಹಿಂಬದಿ ಹಾಳೆಯನ್ನು ಹೊದಿಸಿ ಸಂರಕ್ಷಿಸಬೇಕು. ಈ ಚಿತ್ರಗಳನ್ನು ಮನೆಯ ಭೋದಿಗೆಯ ಮೇಲೆ ಇತರ ಕ್ಯಾಲೆಂಡರ ಚಿತ್ರಗಳಂತೆ ನೇತು ಹಾಕಲಾಗಿದೆ. ಈ ಚಿತ್ರಗಳು ಸುಮಾರು ೨೦೦ ವರ್ಷಗಳ ಹಿಂದಿನವು ಎಂದು ಮನೆಯ ಹಿರಿಯರು ಅಭಿಪ್ರಾಯ ಪಡುತ್ತಾರೆ.

ಬಾಗಲಕೋಟೆ ಜಿಲ್ಲೆ ಹುನಗುಂದ ತಾಲೂಕಿನ ಅಮೀನಗಡ ಗ್ರಾಮದ ಶ್ರೀ ಶಿಲವಂತಪ್ಪ. ಸಣ್ಣಬಸಪ್ಪ. ಗರಡಿಯವರ ಹಾಗೂ ಶ್ರೀ ಗುರಪ್ಪ ಕಣ್ಣೂರರವರ ಮನೆಗಳಲ್ಲಿ ಸುಮಾರು ೨೦೦ ವರ್ಷಗಳ ಹಿಂದೆ ಸಂಗ್ರಹಿಸಿದ ೧೦ಕ್ಕಿಂತಲೂ ಹೆಚ್ಚು ತೂಗುಹಾಕುವ ಚಿತ್ರಗಳು ಲಭ್ಯ ಇವೆ. ಶ್ರೀ ಶಿಲವಂತಪ್ಪ. ಸಣ್ಣಬಸಪ್ಪ. ಗರಡಿಯವರ ಮನೆಯಲ್ಲಿ ೯ ಚಿತ್ರಗಳು ಲಭ್ಯವಿದ್ದು, ಪೌರಾಣಿಕ, ಸಾಮಾಜಿಕ ಹಿನ್ನೆಲೆಯ ವಿಷಯಗಳನ್ನೊಳಗೊಂಡಿವೆ. ಇವು ಕ್ರಮವಾಗಿ ೫೫ x ೬೫ ಸೆಂ.ಮೀ ಅಳತೆಯನ್ನು ಹೊಂದಿವೆ. ಶ್ರೀ ಶಿಲವಂತಪ್ಪ. ಗರಡಿಯವರ ಮನೆತನ ಅವರ ಮುತ್ತಾತನ ಕಾಲದಿಂದಲೂ ಶ್ರೀಮಂತ ಮನೆತನವೆಂದು, ಗ್ರಾಮದವರು ಅಭಿಪ್ರಾಯ ಪಡುತ್ತಾರೆ. ಇವರ ಮನೆಯು ಅಪರೂಪದ ವಾಸ್ತುವಿನ್ಯಾಸವನ್ನು ಹೊಂದಿದ್ದು ಚಿತ್ರವಿನ್ಯಾಸಗಳಿಂದ ಕೂಡಿದ ಮರದ ಕಂಬಗಳು, ಕಪಾಟುಗಳು, ಬೋಧಿಗೆಗಳು, ಇಂದು ಬೆಲೆವುಳ್ಳದ್ದಾಗಿವೆ. ಅವರ ಮನೆಯನ್ನು

ಪ್ರವೇಶಿಸಿದರೆ ಒಂದು ಸಾಂಪ್ರದಾಯಿಕ ಕಲಾಗ್ಯಾಲರಿಯನ್ನು ನೋಡಿದಂತಾಗುತ್ತದೆ. ತರತರಹದ ಗಾಜಿನ ಚಿತ್ರಗಳು, ಗೊಂಬೆಗಳು, ವರ್ಣಚಿತ್ರಗಳು & ಕಲಾ ವಸ್ತುಗಳು ಕಣ್ಣಿಗೆ ಬೀಳುತ್ತವೆ. ಇವರ ಮನೆಯಲ್ಲಿರುವ ಗಾಜಿನ ವರ್ಣಚಿತ್ರಗಳು ಶ್ರೀ ಶಿಲವಂತಪ್ಪನವರು ಹೇಳುವಂತೆ ಅವರ ಮುತ್ತಾತನ ಮದುವೆ ಸಂದರ್ಭದಲ್ಲಿ ಮದುವೆ ಮಂಟಪವನ್ನು ಅಲಂಕರಿಸಲು ಬೇರೆ ಬೇರೆ ಕಡೆಗಳಿಂದ ಈ ಚಿತ್ರಗಳನ್ನು ತರಿಸಲಾಗಿತ್ತು ಎಂದು ಹೇಳುತ್ತಾರೆ. ಇವನ್ನು ಅವರ ಸ್ನೇಹಿತರು ಮದುವೆಗೆ ಕಾಣಿಕೆಯಾಗಿ ನೀಡಿದ್ದರೂ ಎಂದು ಅಭಿಪ್ರಾಯ ಪಡುತ್ತಾರೆ. ಈ ಚಿತ್ರಗಳನ್ನು ಬಹುಶಃ ಮದ್ರಾಸಿನಿಂದ ತರಿಸಲಾಗಿತ್ತೆಂದು ಹೇಳುತ್ತಾರೆ. ಗೋಪಾಲಸ್ವಾಮಿಯ ಚಿತ್ರ, ಶ್ರೀರಾಮನ ಪಟ್ಟಾಭಿಷೇಕದ ಚಿತ್ರ, ಬೆಣ್ಣೆಕೃಷ್ಣ, ಕೃಷ್ಣ–ಯಶೋದೆ, ಮಧುರೈ ವೀರ, ಪ್ರೇಮಿಗಳ ಸರಸ ಸಲ್ಲಾಪಗಳ ಶೃಂಗಾರ ಚಿತ್ರಗಳು ಲಭ್ಯ ಇವೆ. ಈ ಚಿತ್ರಗಳು ಶಿಥಿಲಾವಸ್ಥೆಯಲ್ಲಿದ್ದು, ಸಂರಕ್ಷಣೆಯ ಅಗತ್ಯತೆ ಇದೆ.

ಶ್ರೀ ಗುರಪ್ಪ ಕಣ್ಣೂರರವರ ಮನೆಯಲ್ಲಿ ಮೊದಲು ಆರು ಚಿತ್ರಗಳಿದ್ದವು. ಸಧ್ಯಕ್ಕೆ ಮೂರು ಚಿತ್ರಗಳು ನೋಡಲು ಇಭ್ಯ ಇವೆ. ಯುವತಿಯ ಚಿತ್ರ, ರಾಮಸೀತೆಯರ ವಿವಾಹದೃಶ್ಯ, ವೇಣುಗೋಪಾಲನ ಚಿತ್ರಗಳನ್ನು ಒಳಗೊಂಡಿವೆ. ಇವು ೫೫ x ೬೫ ಸೆಂ.ಮೀ ಅಳತೆಯನ್ನು ಹೊಂದಿವೆ. ಈ ಮನೆಯೂ ಸಹ ಅತ್ಯಂತ ಕಲಾತ್ಮಕ ವಾಸ್ತುವಿನ್ಯಾಸ ಹೊಂದಿದ್ದು ಸುಮಾರು ನೂರು ಐವತ್ತು ವರ್ಷಗಳಿಗಿಂತಲೂ ಹಳೆಯದೆಂದು ೯೦ ವರ್ಷದ ವಯೋವೃದ್ಧ ಶ್ರೀ ಗುರಪ್ಪ ಕಣ್ಣೂರರವರು ಅಭಿಪ್ರಾಯ ಪಡುತ್ತಾರೆ. ಈ ಚಿತ್ರಗಳನ್ನು ಮದ್ರಾಸ್‌ದಿಂದ ನಮ್ಮ ಹಿರಿಯರು ತಂದಿರುವರೆಂದು ಹೇಳುತ್ತಾರೆ. ಈ ಮೂರು ಚಿತ್ರಗಳು ಸಧ್ಯ ಅವಸಾನದ ಸ್ಥಿತಿಯಲ್ಲಿದ್ದು, ಸಂರಕ್ಷಣಾ ಚೌಕಟ್ಟುಗಳು, ಹಿಂಬದಿಯ ತಗಡಿನ ಹಾಳೆಗಳು ಕಿತ್ತು ಬರುವ ಸ್ಥಿತಿಯಲ್ಲಿವೆ. ಅವುಗಳನ್ನೂ ದುರಸ್ಥಿ ಮಾಡುವುದು ಪೋಷಕರ ಜವಾಬ್ದಾರಿಯಾಗಿದೆ.

ಹುನಗುಂದ ತಾಲೂಕಿನ ಇಳಕಲ್ ನಗರದ ಶ್ರೀ ಆರ್. ಜಿ. ಬುತಡಾರ ಮನೆಯ ಕಪಾಟಿನ ಪಡಕುಗಳಿಗೆ ಅಳವಡಿಸಿದ ಗಾಜಿನ ಫಲಕಗಳ ಮೇಲೆ ಲಕ್ಷ್ಮೀ ಹಾಗೂ ವೇಣುಗೋಪಾಲನ ಚಿತ್ರಗಳನ್ನು ಚಿತ್ರಿಸಲಾಗಿದೆ. ಎರಡು ಚಿತ್ರಗಳು ಎಪ್ಪತ್ತು ವರ್ಷಗಳ ಹಿಂದೆ ಸ್ಥಳೀಯ ಕಲಾವಿದನಿಂದ ಚಿತ್ರಿಸಲ್ಪಟ್ಟಿವೆ ಎಂದು ಮನೆಯ ಹಿರಿಯರು ಅಭಿಪ್ರಾಯ ಪಡುತ್ತಾರೆ. ಈ ಚಿತ್ರಗಳು ೨೦ x ೭೫ ಸೆಂ.ಮೀ ಅಳತೆಯಲ್ಲಿ ರೂಪಗೊಂಡಿವೆ. ಈ ಮನೆಯು ಸಹ ಅತ್ಯಂತ ಹಳೆಯದಾಗಿದ್ದು ಆ ಚಿತ್ರಗಳನ್ನು ಬಹು ಸುರಕ್ಷತೆಯಿಂದ ಪೋಷಿಸಿಕೊಂಡು ಬಂದಿದ್ದಾರೆ. ಈ ಚಿತ್ರಗಳನ್ನು ನೋಡಲು ಇಂದಿಗೂ ಸುಸ್ಥಿತಿಯಲ್ಲಿ ಸಿಗುತ್ತವೆ.

ಬಾಗಲಕೋಟೆ ಜಿಲ್ಲೆಯ ಬಾದಾಮಿ ತಾಲೂಕಿನ ಗುಳೇದಗುಡ್ಡದ ಅನೇಕ ಮನೆತನಗಳಲ್ಲಿ ಅನೇಕ ತಲೆಮಾರುಗಳಿಂದ ಸಂರಕ್ಷಿಸಲ್ಪಟ್ಟ ನೂರಾರು ತೂಗುಹಾಕುವ ಚಿತ್ರಗಳು ಕಂಡು ಬರುತ್ತವೆ. ಗುಳೇದಗುಡ್ಡವು ಹಿಂದಿನ ಕಾಲದಿಂದಲೂ ಸಾಂಸ್ಕೃತಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ನಗರವೆಂದೇ ಹೇಳಬಹುದು. ಇದು ಮಹಿಳೆಯರು ಧರಿಸುವ ಕುಬುಸದ ಖಣಗಳಿಗೆ ಹೆಸರುವಾಸಿಯಾದುದು. ಸಾಂಪ್ರದಾಯಿಕ ಚಿತ್ರವಿನ್ಯಾಸಗಳಿಂದ ಕೂಡಿದ ಕೈಮಗ್ಗಗಳಲ್ಲಿ ಸಿದ್ಧಗೊಂಡ ಖಣಗಳು ರಾಷ್ಟ್ರ, ಅಂತರಾಷ್ಟ್ರ ಮಟ್ಟದಲ್ಲಿ ಪ್ರಸಿದ್ಧಿಯನ್ನು ಪಡೆದಿವೆ. ಈ ನಗರ ಪ್ರಮುಖ ನೆಯ್ಗೆ

ಕೈಗಾರಿಕೆಯ ಕೇಂದ್ರವೆಂತಲೂ ಹೇಳಬಹುದು. ಈ ನಗರದ ಶೇಕಡಾ ೬೦ ರಷ್ಟು ಕುಟುಂಬಗಳು ನೆಯ್ಗೆಯ ಉದ್ಯಮವನ್ನೇ ಅವಲಂಭಿಸಿವೆ. ಇದು ಇಂದಿನದಲ್ಲ ಬಹುಹಿಂದೆಯೇ ಈ ನಗರವು ಈ ಉದ್ಯಮದಲ್ಲಿ ಪ್ರಗತಿಯಲ್ಲಿತ್ತು. ಹೀಗಾಗಿ ಇಲ್ಲಿನ ಜವಳಿ ವ್ಯಾಪಾರಿಗಳು "ಖಣ"ಗಳ ವ್ಯಾಪಾರ ನಿಮಿತ್ಯ ಮಹಾರಾಷ್ಟ್ರ, ಗುಜರಾತ, ಆಂಧ್ರಪ್ರದೇಶ, ತಮಿಳುನಾಡು, ಕೇರಳ, ಗೋವಾ, ಮಧ್ಯಪ್ರದೇಶಗಳಂತಹ ದೂರದ ರಾಜ್ಯಗಳಿಗೆ ಹೋಗಿ ವ್ಯಾಪಾರ ಮಾಡಿಕೊಂಡು ಬರುವಾಗ ಅಲ್ಲಿರುವ ವಿಶೇಷತೆಯ ವಸ್ತುಗಳನ್ನು, ಗಾಜಿನ ಚಿತ್ರಗಳನ್ನು ಹಾಗೂ ಕರಕುಶಲ ವಸ್ತುಗಳನ್ನು ಮನೆಗೆ ಕೊಂಡು ತರುತ್ತಿದ್ದರೆಂದು ಅಲ್ಲಿನ ನಿವಾಸಿಗಳು ಹೇಳುತ್ತಾರೆ. ಆ ಸಂದರ್ಭಗಳಲ್ಲಿ ಸಂಗ್ರಹಿಸಿದ ಹಲವಾರು ಗಾಜಿನ ಚಿತ್ರಗಳು ನಗರದ ಕೆಲವು ಮನೆಗಳಲ್ಲಿ ಕಂಡು ಬರುತ್ತವೆ.

ಗುಳೇದಗುಡ್ಡದ ಶ್ರೀ ಬಸವಪ್ರಭು ಮಹಾದೇವಪ್ಪ ಗಂಗಾವತಿ, ಶ್ರೀ ರಾಜಶೇಖರ ಶೀಲವಂತ, ಶ್ರೀ ಅಶೋಕ ವೀರುಪಾಕ್ಷಪ್ಪ ತಿಪ್ಪಾ, ಶ್ರೀ ವೀರಬಸಪ್ಪ ರಾಚಪ್ಪ ತಿಪ್ಪಾ, ಶ್ರೀ ಬನ್ಸಿಲಾಲಜಿ ಬಾಲಕಿಶನ್ ಕಾಬ್ರಾ, ಶ್ರೀ ವೀರಗಂಟೆಪ್ಪ ಸಂಗಪ್ಪ ಕರಡಿ, ಶ್ರೀ ಶಂಕರಸಾ ಫಕೀರಸಾ ಪವಾರ, ಶ್ರೀ ಯೋಗಿಶಪ್ಪ ಸಂಗಪ್ಪ ರಾಜನಾಳ, ಶ್ರೀ ವೀರಸಂಗಪ್ಪ ಈಶ್ವರಪ್ಪ ಭಾವಿ, ಶ್ರೀ ಶೇಖರಪ್ಪ ಉಮಚಗಿಯವರ ಮನೆಗಳಲ್ಲಿ ನೂರಾರು ತೂಗುಹಾಕುವ ವೈವಿಧ್ಯಮಯ ಅಳತೆಯ ಗಾಜಿನ ಮೇಲಿನ ಚಿತ್ರಗಳು ಲಭ್ಯ ಇವೆ.

ಶ್ರೀ ಬಸವಪ್ರಭು ಮಹಾದೇವಪ್ಪ ಗಂಗಾವತಿಯವರು ನಿವೃತ್ತ ತಹಶೀಲದಾರರು ಇವರ ಮನೆಯಲ್ಲಿ ವೈವಿಧ್ಯಮಯ ಅಳತೆಗಳ, ಬೇರೆ ಬೇರೆ ವಿಷಯಗಳನ್ನೊಳಗೊಂಡ ಚಿತ್ರಗಳು ಮನೆಯ ಬೋಧಿಗೆಯ ಮೇಲೆ ರಾರಾಜಿಸುತ್ತವೆ. ಈ ಚಿತ್ರಗಳನ್ನು ಬಸವಪ್ರಭು ಅವರ ದೊಡ್ಡಪ್ಪನವರಾದ ನಿಂಬೆಣ್ಣಪ್ಪ ನಾಗಪ್ಪ ಗಂಗಾವತಿಯವರು ಮದ್ರಾಸಿನಲ್ಲಿ ಬರೆಯಿಸಿ ತಂದಿದ್ದರೆಂದು ಅಭಿಪ್ರಾಯ ಪಡುತ್ತಾರೆ. ಬಸವಪ್ರಭು ಅವರಿಗೆ ಈಗಾಗಲೇ ೬೦ ವರ್ಷ ಮೇಲ್ಪಟ್ಟಿವೆ. ಇವರ ಮನೆತನವು ಶಿವಶಿಂಪಿ ಮತಕ್ಕೆ ಸೇರಿದೆ. ಇವರ ಮನೆಯು ಗುಳೇದಗುಡ್ಡದಲ್ಲಿಯೇ ವಿಶಿಷ್ಟವಾದ ಮನೆಯನ್ನಬಹುದು. ಅದ್ಭುತ ವಾಸ್ತುವಿನ್ಯಾಸವನ್ನು ಹೊಂದಿದ ಈ ಮನೆಯನ್ನು ೧೮೫೮ ರಲ್ಲಿ ನಿರ್ಮಿಸಲಾಯಿತು. ಇದನ್ನು 'ಮಹಾಮನೆ' ಎಂದೇ ಕರೆಯಲಾಗುತ್ತಿದೆ. ಈ ಮನೆಯನ್ನು ನೋಡುವುದೇ ಒಂದು ಅಂದ. ಗಾಜಿನ ಚಿತ್ರಗಳನ್ನು ಅದೇ ಸಂದರ್ಭದಲ್ಲಿ ತಂದಿರಬಹುದೆಂದು ತೋರುತ್ತದೆ. ಇವರ ಮನೆಯಲ್ಲಿ ೨೦ಕ್ಕೂ ಹೆಚ್ಚು ಕೃತಿಗಳು ಲಭ್ಯ ಇವೆ. ವೀರಭದ್ರ ದೇವರ ಚಿತ್ರ ೨೮ ೧/೨ x ೩೩ ೧/೨ ಸೆಂ.ಮೀ ಅಳತೆಯನ್ನು ಹೊಂದಿದೆ. ಚಿತ್ರದ ಸಂರಕ್ಷಣಾ ಚೌಕಟ್ಟು ಮತ್ತು ಸಂರಕ್ಷಣಾ ಹಲಗೆ ಕ್ಷೀಣ ಸ್ಥಿತಿಯಲ್ಲಿದೆ. ಇನ್ನೊಂದು ಚಿತ್ರ ಶ್ರೀಕೃಷ್ಣ ಹಾಗೂ ವೀಣಾನಿರತ ಸ್ತ್ರೀಯರು ೨೧ ೧/೨ x ೪೮ ೧/೨ ಸೆಂ.ಮೀ ಅಳತೆಯಲ್ಲಿದೆ. ಈ ಚಿತ್ರವು ಸಹ ಶಿಥಿಲಾವಸ್ಥೆಯಲ್ಲಿದೆ.

೬೫ x ೭೫ ಸೆಂ.ಮೀ ಅಳತೆಯ ೨ ದೊಡ್ಡ ಗಾಜಿನ ಚಿತ್ರಗಳು ಮನಸೆಳೆಯುವಂತಿವೆ. ಇವು ಓರ್ವ ಸಂಗೀತಗಾರ್ತಿ ಹಾಗೂ ಓರ್ವ ರಾಜನ ಭಾವಚಿತ್ರಗಳಾಗಿದ್ದು ಸಾಂಪ್ರದಾಯಿಕ ರಚನಾ ವಿನ್ಯಾಸವನ್ನು ಒಳಗೊಂಡಿವೆ. ೪೮ x ೬೫ ಸೆಂ.ಮೀ ಅಳತೆಗಳನ್ನೊಳಗೊಂಡ ೧೦ ಚಿತ್ರಗಳಿದ್ದು, ೬ ಚಿತ್ರಗಳು ಪ್ರೇಮಕಥೆಗಳನ್ನೊಳಗೊಂಡಿವೆ. ಇನ್ನೆರಡು ಓರ್ವಯುವರಾಜನ ಹಾಗೂ

ಸ್ತ್ರೀಯ ಭಾವಚಿತ್ರಗಳನ್ನೊಳಗೊಂಡಿವೆ. ಹೀಗೆ ಪೌರಾಣಿಕ ಹಾಗೂ ಕಾಲ್ಪನಿಕ ವಿಷಯಗಳನ್ನೊಳಗೊಂಡ ಚಿತ್ರಗಳು ಇಂದು ಅವಸಾನದ ಅಂಚಿನಲ್ಲಿವೆ. ಶ್ರೀ ಬಸವಪ್ರಭು ಅವರ ಹೇಳಿಕೆಯ ಪ್ರಕಾರ ಗುಳೇದಗುಡ್ಡದ ಸಾಕಷ್ಟು ಮನೆತನಗಳಲ್ಲಿ ಇಂಥ ಚಿತ್ರಗಳು ಸಿಗುತ್ತಿದ್ದವು ಆದರೆ ಈಗ ಕೆಲವೇ ಕೆಲವು ಮನೆತನಗಳಲ್ಲಿ ಮಾತ್ರ ಉಳಿದುಕೊಂಡಿವೆ ಎನ್ನುತ್ತಾರೆ. ಕೆಲವರು ಮಾರಾಟ ಮಾಡಿರುವರು. ಕೆಲವರು ಸಂರಕ್ಷಣೆ ಮಾಡದೇ ಇರುವುದರಿಂದ ಬಿದ್ದು ಒಡೆದು ಹೋಗಿವೆ ಎಂದು ವಿಷಾಧಿಸುತ್ತಾರೆ.

ಬಸವಪ್ರಭುರವರ ಮನೆಯಲ್ಲಿ ಪ್ರತಿವರ್ಷ ಗಣೇಶ ಚತುರ್ಥಿಯಂದು ಐದು ದಿನಗಳ ಕಾಲ ವಿಶೇಷ ಮಂಟಪವನ್ನು ನಿರ್ಮಿಸಿ ಗಾಜಿನ ಚಿತ್ರಗಳನ್ನು ಅಲಂಕರಿಸುತ್ತಿದ್ದರು. ಈ ಪರಂಫರೆಯನ್ನು ಅವರ ಹಿರಿಯರ ಕಾಲದಿಂದಲೂ ಅನಸರಿಸುತ್ತಾ ಬಂದಿದ್ದಾರೆ. ಸಧ್ಯ ಈ ಅಪರೂಪದ ತೂಗುಹಾಕುವ ಗಾಜಿನ ಮೇಲಿನ ಚಿತ್ರಗಳು ದುಃಸ್ಥಿತಿಯಲ್ಲಿ ಕಂಡು ಬರುತ್ತವೆ. ಕೆಲವೊಂದು ಚಿತ್ರಗಳನ್ನು ಮಾರಲಾಗಿದೆ. ಇದ್ದ ಚಿತ್ರಗಳಲ್ಲಿ ಚೌಕಟ್ಟುಗಳು ರಕ್ಷಣಾ ಹಲಗೆಗಳು ಕಿತ್ತು ಬರುವ ಸ್ಥಿತಿಯಲ್ಲಿವೆ. ಇವನ್ನು ದುರಸ್ತಿ ಮಾಡಿಸಿ, ಮುಂದಿನ ಪೀಳಿಗೆಯವರು ನೋಡುವಂತಾಗಬೇಕು.

ಶ್ರೀ ರಾಜಶೇಖರ, ಶೀಲವಂತರ ಮನೆಯಲ್ಲಿ ೪ ಚಿತ್ರಗಳು ಲಭ್ಯ ಇವೆ. ಇವು ೨೨" x ೨೭" ಇಂಚ್ ಅಳತೆಯನ್ನು ಹೊಂದಿವೆ. ಇವರ ಮನೆತನವು ಹಿರಿಯರ ಕಾಲದಿಂದಲೂ ಬೆಳ್ಳಿ ಬಂಗಾರ ವ್ಯಾಪಾರ ಮಾಡುವ ಮನೆತನವಾಗಿದ್ದು, ಇಂದಿಗೂ ಸಹ ಅದೇ ವೃತ್ತಿಯಲ್ಲಿ ನಿರತರಾಗಿದ್ದಾರೆ. ಈ ಚಿತ್ರಗಳನ್ನು ವ್ಯಾಪಾರದ ನಿಮಿತ್ಯ ಮುಂಬೈದಿಂದ ಖರೀದಿಸಿ ತಂದಿದ್ದೆಂದು ಮನೆಯ ಹಿರಿಯರು ಅಭಿಪ್ರಾಯ ಪಡುತ್ತಾರೆ. ಸಧ್ಯ ಈ ಚಿತ್ರಗಳು ಆಧುನಿಕ ಚೌಕಟ್ಟುಗಳಿಂದ, ಸುಸಜ್ಜಿತ ಸಂರಕ್ಷಕ ಹಲಗೆಗಳಿಂದ ಪೋಷಣೆಗೊಂಡಿದ್ದು, ನೋಡಲು ಅವರ ಸರಾಫ ಅಂಗಡಿಯಲ್ಲಿ ಸಿಗುತ್ತವೆ. ಈ ಮನೆಯವರಿಗೆ ಹಿರಿಯರು ತಂದಿರುವ ಅಮೂಲ್ಯ ವರ್ಣಚಿತ್ರಗಳ ಬಗ್ಗೆ ಅಪಾರ ಪ್ರೀತಿಯಿದೆ ಎಂದು ಹರ್ಷ ವ್ಯಕ್ತಪಡಿಸುತ್ತಾರೆ.

ಶ್ರೀ ಅಶೋಕ. ವೀರುಪಾಕ್ಷಪ್ಪ. ತಿಪ್ಪಾ ಇವರ ಮನೆತನವು ಪೂರ್ವದಿಂದಲೂ ಖಣದ ವ್ಯಾಪಾರವನ್ನು ಮಾಡಿಕೊಂಡು ಬಂದಿರುವ ಮನೆತನವಾಗಿದ್ದು, ಇಲ್ಲಿ ಸುಮಾರು ೧೮ ತೂಗುಹಾಕುವ ಗಾಜಿನ ಮೇಲಿನ ಚಿತ್ರಗಳು ಸಂಗ್ರಹ ಇವೆ. ಈ ಚಿತ್ರಗಳು ಒಳಗೊಂಡಿದ್ದು, ಆರು ಚಿತ್ರಗಳು ಸಾಮಾಜಿಕ ಪ್ರೇಮ ಕಥೆಗಳನ್ನು ಒಳಗೊಂಡಿವೆ. ಇನ್ನೂ ಆರು ಚಿತ್ರಗಳು ಸ್ತ್ರೀಯರ ಚಿತ್ರಗಳನ್ನೊಳಗೊಂಡಿವೆ. ಈ ೧೮ ಚಿತ್ರಗಳು ೪೮ x ೬೫ ಸೆಂ.ಮೀ ಅಳತೆಯಲ್ಲಿವೆ. ಆರು ಪುರಾಣ ಚಿತ್ರಗಳಲ್ಲಿ ಉಮಾಮಹೇಶ್ವರನ ಚಿತ್ರದ ಅಲಂಕಾರಿಕ ಚೌಕಟ್ಟು ಹಾಗೂ ಹಿಂಬದಿಯ ಸಂರಕ್ಷಣಾ ಹಲಗೆ ಶಿಥಿಲಾವಸ್ಥೆಯಲ್ಲಿದೆ. ಅಲ್ಲಲ್ಲಿ ವರ್ಣಗಳು ಕಿತ್ತು ಹೋಗಿವೆ. ಗಾಜಿನ ಹಿಮ್ಮುಖವಾಗಿ ಚಿತ್ರವನ್ನು ಬರೆದಿರುವುದರಿಂದ ವರ್ಣಗಳು ಪ್ರಖರತೆಯನ್ನು ಕಳೆದುಕೊಂಡಿಲ್ಲ. ಬೆಣ್ಣೆಕೃಷ್ಣ, ಬಾಲಕೃಷ್ಣ, ವೇಣುಗೋಪಾಲ, ಕೃಷ್ಣ-ರುಕ್ಮೀಣಿ ಇತ್ಯಾದಿ ಕಥೆಗಳನ್ನು ಸೂಚಿಸುವ ಎಲ್ಲ ಚಿತ್ರಗಳು ಶಿಥಿಲಾವಸ್ಥೆಯಲ್ಲಿವೆ. ಈ ಚಿತ್ರಗಳ ಕುರಿತು ಪೋಷಕರಾದ ಶ್ರೀ ಅಶೋಕ. ತಿಪ್ಪಾರವರು ಸುಮಾರು ನೂರು ವರ್ಷಗಳ ಹಿಂದೆ ಅವರ ಮುತ್ತಜ್ಜ ದೂರದ ಮುಂಬೈಯಿಂದ ಖರೀದಿಸಿ ತಂದಿದ್ದಾರೆಂದು ಹೇಳುತ್ತಾರೆ.

ಇವನ್ನು ಮನೆಯ ಭೋದಿಗೆಗಳಲ್ಲಿ ವಿಶಿಷ್ಟವಾಗಿ ಸಂಯೋಜಿಸಿ ನೇತುಹಾಕಲಾಗಿದ್ದು, ಇಂದಿಗೂ ನಮಗೆ ನೋಡಲು ಸಿಗುತ್ತವೆ. ಪ್ರತಿ ದೀಪಾವಳಿ ಹಬ್ಬದಂದು ಅವುಗಳನ್ನು ಬಿಚ್ಚಿ ಸ್ವಚ್ಚಗೊಳಿಸಿ ಮತ್ತೇ ಅವನ್ನು ಯಥಾರೀತಿ ಅಲಂಕರಿಸುತ್ತಾರೆ.

ಗುಳೇದಗುಡ್ಡದ ಶ್ರೀ ಅಶೋಕ. ತಿಪ್ಪಾರವರ ಸೋದರ ಸಂಬಂಧಿ ಶ್ರೀ ವೀರಬಸಪ್ಪ. ರಾಚಪ್ಪ. ತಿಪ್ಪಾ ಇವರ ಮನೆಯಲ್ಲಿ ಮೂರು ಗಾಜಿನ ಚಿತ್ರಗಳು ಲಭ್ಯ ಇವೆ. ಕೃಷ್ಣ-ರಾಧೆ ೪೮ x ೬೫ ಸೆಂ.ಮೀ ಅಳತೆಯಲ್ಲಿದೆ. ಸುತ್ತಲಿನ ಚೌಕಟ್ಟು ಸರಿಯಾಗಿದೆ. ಅದರ ಹಿಂದಿರುವ ಸಂರಕ್ಷಣಾ ಹಲಗೆ ಕಿತ್ತುಹೋಗಿದೆ. ಇನ್ನೊಂದು ಚಿತ್ರ ೪೮ x ೬೫ ಸೆಂ.ಮೀ ಅಳತೆಯ ಯುವರಾಜನ ಭಾವಚಿತ್ರ, ಈ ಚಿತ್ರದ ಚೌಕಟ್ಟು ದುರಸ್ತಿಯಲ್ಲಿದೆ. ಇನ್ನೊಂದು ಚಿತ್ರ ಸಂಗೀತಗಾರ್ತಿಯ ಚಿತ್ರ ೪೮ x ೬೫ ಸೆಂ.ಮೀ ಅಳತೆಯನ್ನು ಹೊಂದಿದ್ದು, ಇದು ಕೂಡಾ ಶಿಥಿಲಾವಸ್ಥೆಯಲ್ಲಿದೆ. ವೀರ ಬಸಪ್ಪನವರ ಮನೆಯಲ್ಲಿ ಒಟ್ಟು ಆರು ಚಿತ್ರಗಳಿದ್ದವು, ಮೂರು ಚಿತ್ರಗಳು ಒಡೆದು ಹೋಗಿ ಮೂರು ಚಿತ್ರಗಳು ಮಾತ್ರ ಉಳಿದಿವೆ ಎಂದು ಹೇಳುತ್ತಾರೆ.

ಗುಳೇದಗುಡ್ಡದ ಇನ್ನೊಂದು ಮನೆತನವಾದ ಶ್ರೀ ಬನ್ಸಿಲಾಲಜಿ. ಕಿಶನಜಿ ಕಾಬ್ರಾ ಇವರ ಮನೆಯಲ್ಲಿ ೫ ಗಾಜಿನ ಮೇಲಿನ ಚಿತ್ರಗಳು ಲಭ್ಯ ಇವೆ. ಈ ಚಿತ್ರಗಳನ್ನು ಬನ್ಸಿಲಾಲರ ಮುತ್ತಜ್ಜ ಶ್ರೀ ಲಕ್ಷ್ಮೀನಾರಾಯಣ ರಾಮದಾಸುಕ್ ಕಾಬ್ರಾರವರು ೯೦ ವರ್ಷಗಳ ಹಿಂದೆ ಮಹಾರಾಷ್ಟ್ರದಲ್ಲಿ ವ್ಯಾಪಾರಕ್ಕೆಂದು ಹೋದ ಸಂದರ್ಭದಲ್ಲಿ ಖರೀಸಿ ತಂದಿರುವರೆಂದು ಅಭಿಪ್ರಾಯ ಪಡುತ್ತಾರೆ. ಈ ೫ ಚಿತ್ರಗಳನ್ನು ಇಲ್ಲಿಯತನಕ ಯಾವುದೇ ರೀತಿಯಲ್ಲಿ ದಕ್ಕೆಯಾಗದಂತೆ ಮನೆಯವರು ಸಂರಕ್ಷಣೆ ಮಾಡುತ್ತಾ ಬಂದಿದ್ದಾರೆ. ೫ ಚಿತ್ರಗಳು ಪೌರಾಣಿಕ ಕಥೆಗಳನ್ನು ಒಳಗೊಂಡಿದ್ದು, ೩೫ x ೪೦ ಸೆಂ.ಮೀ ಅಳತೆಯನ್ನು ಹೊಂದಿವೆ. ಕೃಷ್ಣ-ರುಕ್ಮೀಣಿ, ಭಾಮೆಯರ ಚಿತ್ರ, ಯಶೋದೆಯ ಮಡಲಿಲ್ಲಿ ಬಾಲಕೃಷ್ಣನ ಎರಡು ಚಿತ್ರಗಳು, ಅಲ್ಲದೇ ಸುಬ್ರಹ್ಮಣ್ಯಸ್ವಾಮಿ ಹಾಗೂ ಶಿವನ ತಾಂಡವ ನೃತ್ಯದ ಚಿತ್ರಗಳಾಗಿವೆ.

ಶ್ರೀ ವೀರಗಂಟೆಪ್ಪ ಸಂಗಪ್ಪ ಕರಡಿಯವರ ಮನೆಯಲ್ಲಿ ೫ ತೂಗುಹಾಕುವ ಚಿತ್ರಗಳಿದ್ದು, ಭಾವಚಿತ್ರ ಹಾಗೂ ಕಾಲ್ಪನಿಕ ಚಿತ್ರಗಳ ವಿಷಯಗಳಾಗಿವೆ. ಈ ಮನೆತನವೂ ಕೂಡಾ ಖಣಗಳ ವ್ಯಾಪಾರಸ್ಥ ಮನೆತನವಾಗಿದ್ದು, ಮೂರು ನಾಲ್ಕು ತಲೆಮಾರುಗಳಿಂದ ಇದನ್ನೇ ಮಾಡುತ್ತಾ ಬಂದಿದ್ದೇವೆ ಎಂದು ವೀರಗಂಟೆಪ್ಪನವರು ಅಭಿಪ್ರಾಯ ಪಡುತ್ತಾರೆ. ಈ ಚಿತ್ರಗಳನ್ನು ಅವರ ಮುತ್ತಜ್ಜನವರು ಮುಂಬೈದಿಂದ ಕಡಿಮೆ ಬೆಲೆಗೆ ಕೊಂಡು ತಂದಿದ್ದನೆಂದು ನೆನಪಿಸುತ್ತಾರೆ. ಐದು ಚಿತ್ರಗಳು ೧೧೧/₂ x ೧೩೧/₂ ಇಂಚ್ ಅಳತೆಯನ್ನು ಹೊಂದಿದ್ದು, ಕೆಲವೊಂದು ಚಿತ್ರಗಳ ಚೌಕಟ್ಟುಗಳು ಕಿತ್ತುಬರುವ ಸ್ಥಿತಿಯಲ್ಲಿವೆ. ಇವುಗಳ ದುರಸ್ತಿಯ ಅಗತ್ಯತೆ ಕಂಡು ಬರುತ್ತದೆ. ಇಂದಿಗೂ ಸಹ ಈ ಚಿತ್ರಗಳನ್ನು ನೋಡಲು ಅವರ ಮನೆಯ ಮೊಗಸಾಲೆಯ ಬೋಧಿಗೆಯ ಮೇಲೆ ತೂಗುಹಾಕಲಾಗಿದೆ. ಚಿತ್ರಗಳ ಕುರಿತು ಮನೆತನದವರು ಬಹಳ ಹೆಮ್ಮೆಯನ್ನು ವ್ಯಕ್ತಪಡಿಸುತ್ತಾರೆ.

ಗುಳೇದಗುಡ್ಡದ ಇನ್ನೊಂದು ಮನೆತನವಾದ ಶ್ರೀ ಶಂಕರಸಾ ಫಕೀರಸಾ ಪವಾರ ಇವರ ಮನೆಯಲ್ಲಿ ಸುಮಾರು ೧೫೦ ವರ್ಷಗಳ ಹಳೆಯದಾದ ೦೪ ತೂಗುಹಾಕುವ ಚಿತ್ರಗಳು

ಲಭ್ಯ ಇವೆ. ಇವು ೪೩ ೧/೨ x ೪೮ ೧/೨ ಸೆಂ. ಮೀ. ಅಳತೆಯನ್ನು ಹೊಂದಿವೆ. ವೀಣೆ ನುಡಿಸುತ್ತಿರುವ ಸ್ತ್ರೀ, ಸರಸ ಸಲ್ಲಾಪದಲ್ಲಿರುವ ಯುವ ಪ್ರೇಮಿಗಳು ಎಂಬ ದೃಶ್ಯಗಳನ್ನೊಳಗೊಂಡಿವೆ. ಶಂಕರಸಾರ ತಂದೆಯವರು ಪ್ರಸಿದ್ಧ ಮಂತ್ರವಾದಿಗಳಾಗಿದ್ದರು. ಇವರು ತಮ್ಮ ಮಂತ್ರಶಕ್ತಿಯಿಂದ ಹಲವಾರು ವ್ಯಾಧಿಗಳಿಂದ ಬಳಲುತ್ತಿದ್ದ ವ್ಯಕ್ತಿಗಳನ್ನು ಗುಣಮುಖರನ್ನಾಗಿ ಮಾಡುತ್ತಿದ್ದರು. ಅಷ್ಟೊಂದು ಮನೆ ಮಾತಾಗಿದ್ದರು. ಆ ಕಾರಣಕ್ಕಾಗಿ ಗುಣಮುಖರಾದವರು ಇವರಿಗೆ ಅನೇಕ ಕಾಣಿಕೆಗಳನ್ನು ಕೊಡುತ್ತಿದ್ದರು ಎಂದು ಫಕೀರಸಾ ಪವಾರರ ೧೦೬ ವರ್ಷದ ಶಾವಂತ್ರಿಬಾಯಿ ಪವಾರರು ಹೇಳುತ್ತಾರೆ. ಈ ನಾಲ್ಕುಚಿತ್ರಗಳನ್ನು ಕಾಣಿಕೆಯಾಗಿ ಕೊಟ್ಟಿದ್ದೆಂದು ನಾಲ್ಕು ಚಿತ್ರಗಳಚೌಕಟ್ಟು ಹಾಗೂ ಸಂರಕ್ಷಣಾ ಹಾಳೆಗಳು ದುಃಸ್ಥಿತಿಯಲ್ಲಿದ್ದು ಸಂರಕ್ಷಣೆಯ ಅಗತ್ಯತೆ ಇದೆ. ನಾಲ್ಕು ಚಿತ್ರಗಳ ಬಣ್ಣಗಳು ಅಲ್ಲಲ್ಲಿ ಉದುರಿಹೋಗಿವೆ. ಚಿತ್ರಗಳು ಆಕರ್ಷಕ ವರ್ಣವಿಧಾನದಿಂದ ರಚನೆಗೊಂಡಿದ್ದು, ಇವುಗಳನ್ನು ರಕ್ಷಿಸಿ ಮುಂದಿನ ಪಿಳಿಗೆಯವರಿಗೆ ಸಿಗುವಂತಾಗಬೇಕು.

ಶ್ರೀ ಯೋಗಿಶಪ್ಪ ಸಂಗಪ್ಪ ರಾಜನಾಳ ಇವರ ಮನೆಯಲ್ಲಿ ಗಜೇಂದ್ರ ಮೋಕ್ಷ ದೃಶ್ಯವನ್ನು ತೋರಿಸುವ ಒಂದು ಗಾಜಿನ ಚಿತ್ರವು ಲಭ್ಯವಿದ್ದು, ಒಂದೇ ಚಿತ್ರವಿರುವುದರಿಂದ ಪೋಷಕರು ಉತ್ತಮ ರೀತಿಯಲ್ಲಿ ಸಂರಕ್ಷಣೆ ಮಾಡಿದ್ದಾರೆ. ಅದೇ ರೀತಿ ನಗರದ ಇನ್ನೊಂದು ಮನೆತನವಾದ ಶ್ರೀ ವೀರಸಂಗಪ್ಪ ಈಶ್ವರಪ್ಪ ಭಾವಿಯವರ ಮನೆಯಲ್ಲಿ ೨೧ ಗಾಜಿನ ಚಿತ್ರಗಳು ಲಭ್ಯ ಇವೆ. ಈ ಚಿತ್ರಗಳನ್ನು ೧೮೮೩ ರಲ್ಲಿ ವೀರಸಂಗಪ್ಪನವರ ಅಜ್ಜನವರು ದೂರದ ಮುಂಬೈದಿಂದ ಖರೀದಿಸಿ ತಂದಿರುವರು. ಆಗೀನ ಕಾಲದಲ್ಲಿ ೫ ರಿಂದ ೧೦ ರೂಪಾಯಿಗಳಿಗೆ ಕೊಂಡಿದ್ದರೆಂದು ಅಭಿಪ್ರಾಯ ಪಡುತ್ತಾರೆ. ಇವರ ಮನೆಯಲ್ಲಿರುವ ಚಿತ್ರಗಳಲ್ಲಿ ಕೆಲವೊಂದು ದೊಡ್ಡ ಸಂದುಕದಲ್ಲಿ ಕಾಯ್ದಿರಿಸಿದ್ದರೆ. ಕೆಲವೊಂದು ಚಿತ್ರಗಳು ಮನೆಯ ಭೋದಿಗೆಯ ಮೇಲೆ ನೇತು ಹಾಕಿದ್ದಾರೆ. ಇವುಗಳಲ್ಲಿ ಕೆಲವು ಚಿತ್ರಗಳು ಸೀಳಿವೆ. ಚಿತ್ರವಿನ್ಯಾಳಗಳ ಚೌಕಟ್ಟುಗಳು ಕಿತ್ತು ಹೋಗಿವೆ. ಕೆಲವು ಚಿತ್ರಗಳ ವರ್ಣಗಳು ಅಳಿಸಿಹೋಗಿವೆ. ಹಿಂಬದಿಯ ಸಂರಕ್ಷಣ ಹಲಗೆಗಳು ಕಿತ್ತು ಹೋಗಿವೆ. ಇನ್ನು ಕೆಲವೊಂದು ಚಿತ್ರಗಳು ಹಾಳಾಗದಂತೆ ಉಳಿಸಿಕೊಂಡು ಬಂದಿದ್ದಾರೆ.

ಇವರ ಮನೆಯಲ್ಲಿ ಇನ್ನೊಂದು ವಿಶೇಷವೆನೆಂದರೆ ಗೌರಿಹುಣ್ಣಿಮೆಯ ಹಬ್ಬದಲ್ಲಿ ವಿಶೇಷ ಮಂಟಪವನ್ನು ಕಟ್ಟಿ ಅಲ್ಲಿ ಈ ಚಿತ್ರಗಳನ್ನು ಅಲಂಕರಿಸಲಾಗುತ್ತದೆ. ದೀಪಾವಳಿ ಅಮವಾಸ್ಯೆ ಆದ ಐದು ದಿನಕ್ಕೆ ಅಂತಿಮ ಪಂಚಮಿ ದಿವಸದಿಂದ ಹನ್ನೊಂದು ದಿನಗಳವರೆಗೆ, ಇವರ ಮನೆಯಲ್ಲಿ ಗೌರಿ ಹುಣ್ಣಿಮೆಯವರೆಗೂ ಅತೀ ವಿಜೃಂಭಣೆಯಿಂದ ಪೂಜಾಉತ್ಸವವು ನಡೆಯುತ್ತದೆ. ಪೂಜೆ ಆರಂಭವಾಗುವ ಸಮಯವು ೭ ರಿಂದ ೯ ಘಂಟೆಯವರೆಗೂ ಸಾಂಪ್ರದಾಯದಂತೆ ಗಲ್ಲಿಯ ಸುಮಂಗಲಿಯರು ವಸ್ತ್ರಾಭರಣಗಳಿಂದ ಭೂಷಿತಗೊಂಡು, ಕೈಯಲ್ಲಿ ಆರತಿ ತಟ್ಟೆಯನ್ನು ಹಿಡಿದುಕೊಂಡು ಸಾಲು ಸಾಲಾಗಿ ನಿಂತು ಶ್ರೀ ವೀರಸಂಗಪ್ಪ ಭಾವಿಯವರ ಮನೆಯಲ್ಲಿ ಆರಂಭವಾದ ಗೌರಿಪೂಜೆಗೆ ಆರತಿಯನ್ನು ಬೆಳಗಲು ಬರುವ ದೃಶ್ಯವು ಮನೋಹರವಾದುದು. ಇಲ್ಲಿ ವಿಶೇಷತೆ ಎನೆಂದರೆ ಈ ಮಂಟಪದ ಅಲಂಕರಣವು ಒಂದು ಅರಮನೆಯ ಎದುರು ನೋಟವನ್ನು ಕಲ್ಪಿಸುತ್ತದೆ. ಚಿನ್ನದ ಹಾಳೆಗಳಿಂದ ಹೊಳಪಿನ ಹರಳುಗಳಿಂದ ಗಾಜಿನ ದೀಪಗಳಿಂದ ಗಾಜಿನ

ಚಿತ್ರಗಳಿಂದ ಮಂಟಪವು ರಾತ್ರಿ ವೇಳೆಯಲ್ಲಿ ಅತ್ಯಂತ ಸುಂದರವಾಗಿ ಕಂಡು ಬರುತ್ತದೆ. ರಸಿಕರ ಕಂಗಳಿಗೆ ಔತನ ನೀಡುತ್ತದೆ. ಈ ಪರಂಪರೆಯನ್ನು ಅಜ್ಜ ಮುತ್ತಜ್ಜರ ಕಾಲದಿಂದಲೂ ಪ್ರತಿ ವರ್ಷ ಚಾಚುತಪ್ಪದೇ ನಡೆಸಿಕೊಂಡು ಬರುತ್ತಿದ್ದೇವೆ ಎಂದು ಮನೆಯವರು ಹರ್ಷ ವ್ಯಕ್ತಪಡಿಸುತ್ತಾರೆ.

ಇದೇ ಊರಿನ ಶ್ರೀ ಶೇಖರಪ್ಪ ಉಮಚಗಿಯವರ ಮನೆಯಲ್ಲಿ ಎರಡು ಚಿತ್ರಗಳು ಲಭ್ಯ ಇವೆ. ಬಹುತೇಕ ಈ ಊರಿನಲ್ಲಿರುವ ಗಾಜಿನ ಚಿತ್ರಗಳು, ಮನೆಯಲ್ಲಿ ಆಚರಿಸಲಾಗುವ ಹಬ್ಬ ಹರಿದಿನಗಳಲ್ಲಿ ಉತ್ಸವಗಳಲ್ಲಿ ಹಾಗೂ ವಿಶೇಷ ದಿನಗಳಲ್ಲಿ ಅಲಂಕಾರ ಮಾಡಲು, ಮಂಟಪಗಳನ್ನು ಶೃಂಗಾರ ಮಾಡಲು ಸಂಗ್ರಹಿಸಲಾಗಿದೆ ಎನ್ನಬಹುದು. ಹಿರಿಯರು ಅಂದು ಲಭ್ಯವಿರುವ ವಿಶೇಷವಾದ, ಸಾಂಪ್ರದಾಯಿಕವಾದ ಕರಕುಶಲ ವಸ್ತುಗಳನ್ನು ಬೇರೆ ಬೇರೆ ಕಡೆಯಿಂದ ಖರೀದಿಸಿ ತಂದಿದ್ದರೆಂದು ತೋರುತ್ತದೆ. ಹೀಗಾಗಿಯೇ ಈ ಊರಿನ ಹೆಚ್ಚು ಮನೆತನಗಳಲ್ಲಿ ಹಲವಾರು ಗಾಜಿನ ಚಿತ್ರಗಳು ಕಂಡುಬರುತ್ತವೆ.

ಧಾರವಾಡ ಜಿಲ್ಲೆಯ ಹಲವಾರು ಮನೆತನಗಳಲ್ಲಿ ವಿವಿಧ ಕಾಲಮಾನಗಳ ವೈವಿಧ್ಯಮಯ ತಗುಹಾಕುವ ಚಿತ್ರಗಳು, ಮಂಟಪಗಳಲ್ಲಿ ಅಳವಡಿಸಿದ ಗಾಜಿನಚಿತ್ರಗಳು ಕಂಡು ಬರುತ್ತವೆ. ಈ ಚಿತ್ರಗಳ ಪೋಷಕರು ಅವುಗಳನ್ನು ವಿಶೇಷ ದಿನಗಳಲ್ಲಿ ಬಳಸಿಕೊಂಡು ಮನೆಯಲ್ಲಿ ಅಲಂಕರಿಸಿ, ಪೋಷಿಸಿಕೊಂಡು ಬಂದಿದ್ದಾರೆ. ನವಲಗುಂದದ ಶ್ರೀ ದತ್ತಾತ್ರೇಯ ರುಕ್ಮಪ್ಪ ಆನೆಗೊಂದಿ, ಶ್ರೀ ಹನುಮಂತಪ್ಪ. ಹರಿಹರ, ಶ್ರೀ ವಿಷ್ಣು ಪುಂಡ್ಲಿಕಪ್ಪ ಮಾಡಿಕರ್‌ರವರ ಮನೆಗಳಲ್ಲಿ ಕೆಲವು ಗಾಜಿನ ಚಿತ್ರಗಳು ಲಭ್ಯ ಇವೆ.

ಶ್ರೀ ದತ್ತಾತ್ರೇಯ ರುಕ್ಮಪ್ಪ ಆನೆಗೊಂದಿಯವರ ಮನೆತನವು ಬೆಳ್ಳಿ, ಬಂಗಾರದ ವ್ಯಾಪಾರಸ್ಥ ಮನೆತನವಾಗಿದ್ದು, ಇವರ ಮನೆಯಲ್ಲಿ ೩೬ x ೪೦ ಸೆಂ.ಮೀ ಅಳತೆಯನ್ನು ಹೊಂದಿದ 'ಗಜಲಕ್ಷ್ಮಿಯ' ಚಿತ್ರವಿದೆ. ಚಿತ್ರವು ಕಪ್ಪು ಚೌಕಟ್ಟು ಹಾಗೂ ಹಿಂಬದಿಯ ಸಂರಕ್ಷಣಾ ಹಲಗೆಯು ತಗಡಿ (ಲೋಹ)ನಿಂದ ಬಂದಿತವಾಗಿದೆ. ಚಿತ್ರವು ಸಧ್ಯ ಸುರಕ್ಷಿತವಾಗಿದ್ದರೂ ಸಹ ಯೋಗ್ಯ ರಕ್ಷಣೆಯ ಅಗತ್ಯತೆ ಇದೆ. ಇವರ ಮನೆಯಲ್ಲಿ ಮರದ ಗಣಪತಿಯ ಮಂಟಪವಿದ್ದು, ಸುತ್ತಲೂ ಚಿಕ್ಕಚಿಕ್ಕ ಚೌಕಾನೆಗಳನ್ನು ಹೊಂದಿದೆ. ಈ ಚೌಕಾಣೆಯ ಹಿಂಬದಿಯಲ್ಲಿ ದಶಾವತಾರಕ್ಕೆ ಸಂಬಂಧಿಸಿದ ಚಿಕ್ಕ ಚಿಕ್ಕ ಗಾಜಿನ ಚಿತ್ರಗಳಿದ್ದವು, ಸಧ್ಯ ಎಲ್ಲ ಚಿತ್ರಗಳು ಒಡೆದು ಹೋಗಿರುವುದರಿಂದ ಆಖಾನೆಗಳಲ್ಲಿ ಮುದ್ರಿತ ದೇವರ ಚಿತ್ರಗಳನ್ನು ಅಳವಡಿಸಲಾಗಿದೆ. ಇಂಥದೇ ಮಂಟಪಗಳು ಊರಿನ ಅನೇಕರ ಮನೆತನಗಳಲ್ಲಿ ಕಂಡು ಬರುತ್ತಿದ್ದು, ಅಲ್ಲಿಯೂ ಸಹ ಈ ದಶಾವತಾರಕ್ಕೆ ಸಂಬಂಧಿಸಿದ ಗಾಜಿನ ಚಿತ್ರಗಳು ರಚನೆಗೊಂಡಿವೆ. ಬಹುಶಃ ಈ ಮಂಟಪಗಳನ್ನು ಒಬ್ಬನೇ ಕಲಾವಿದನು ತಯಾರಿಸಿರಬಹುದೆಂದು ತೋರುತ್ತದೆ. ಯಾಕೆಂದರೆ ಮಂಟಪಗಳ ವಿನ್ಯಾಸ, ಚಿತ್ರಗಳ ರೇಖೆ, ವರ್ಣಗಳು ಒಂದೇ ರೀತಿಯ ರಚನಾಕ್ರಮವನ್ನು ಹೊಂದಿವೆ.

ವಿಷ್ಣು, ಪುಂಡಲೀಕಪ್ಪ ಮಾಡಿಕರ್ ಇವರ ಮನೆಯಲ್ಲಿರುವ ಗಣಪತಿ ಮಂಟಪವು ಸುರಕ್ಷಿತವಾಗಿದ್ದು ಗಾಜಿನ ಚಿತ್ರಗಳು ಉತ್ತಮ ಸ್ಥಿತಿಯಲ್ಲಿವೆ. ಆದರೆ ಈ ಮಂಟಪವನ್ನು ಕಿತ್ತು ಮನೆ ಜಂತಿಗೆ ಕಟ್ಟಲಾಗಿದೆ. ಇದನ್ನು ಹಬ್ಬದಂದು ಬಳಸುತ್ತಿಲ್ಲ. ಇನ್ನೊಂದು ವಿಶೇಷವೆಂದರೆ

ವಿಷ್ಣು ಮಾಡಿಕರ್ ರವರ ಅಜ್ಜ ನರಸಪ್ಪನವರು ಹಿಂದೆ ಬಹುದೊಡ್ಡ ಚಿತ್ರಕಲಾವಿದರಾಗಿದ್ದರು. ಇವರು ಕಾಮ ರತಿ ಶಿಲ್ಪಗಳು, ಗ್ರಾಮದೇವತೆಗಳು, ಉತ್ಸವಮೂರ್ತಿಗಳಿಗೆ ಚಿತ್ರಗಳನ್ನು ಬರೆಯುತ್ತಿದ್ದರು. ಇವರು ಬರೆದ ಸಾವಿರಾರು ಕಲಾಕೃತಿಗಳು ನಗರದ ಹಾಗೂ ಸುತ್ತಮುತ್ತಲಿನ ಊರುಗಳಲ್ಲಿ ಸಿಗುತ್ತವೆ. ಇವರು ಗೋಕಾಕದಿಂದ ಬಂದು ನೆಲೆಸಿದ ಕಲಾವಿದ, ಚಿತ್ರಗಾರ ಇಟ್ಟಪ್ಪನವರ ಶಿಷ್ಯರಾಗಿದ್ದರು. ಇವರು ನರದಗುಂದ ಬಾಬಾಸಾಹೇಬರ ಜೀವಿತ ಕಾಲದಲ್ಲಿ ನವಲಗುಂದದಲ್ಲಿ ನೆಲೆಸಿದ್ದರು. ಈ ಚಿತ್ರಗಳನ್ನು ಚಿತ್ರಗಾರ ಇಟ್ಟಪ್ಪನವರೇ ಬರೆದಿರಬೇಕೆಂದು ವಿಷ್ಣು ಮಾಡಿಕರ್‌ರು ಅಭಿಪ್ರಾಯ ಪಡುತ್ತಾರೆ. ಅಜ್ಜನಂತೆ ವಿಷ್ಣು ಅವರು ಕೂಡಾ ಚಿತ್ರಗಳನ್ನು ಬರೆಯುತ್ತಾರೆ.

ಹುಬ್ಬಳ್ಳಿಯ ಗುರುಸಿದ್ಧ ಪ್ರಭು, ವೀರಪ್ಪ ಕರವೀರ ಶೆಟ್ಟರ ಇವರ ಮನೆಯಲ್ಲಿ ಮೂರು ಚಿತ್ರಗಳು ಲಭ್ಯ ಇವೆ. ಇವರಮನೆಯು ಅದ್ಭುತ ವಾಸ್ತುಶೈಲಿಯನ್ನು ಹೊಂದಿದ ಅತ್ಯಂತ ದೊಡ್ಡ ಮನೆಯಾಗಿದೆ. ಶೈವ ಸಂಪ್ರದಾಯಸ್ಥ ಕುಟುಂಬವಾದ ಈ ಮನೆಯಲ್ಲಿ ಬಸವಣ್ಣ, ನೀಲಾಂಬಿಕೆ, ಶಿವ–ಪಾರ್ವತಿ, ಗಣೇಶ–ಷಣ್ಮುಗರ ಚಿತ್ರಗಳು ಲಭ್ಯ ಇವೆ. ೫೧¹/₂ x ೬೨ ¹/₂ ಸೆಂ.ಮೀ ಅಳತೆಯನ್ನು ಹೊಂದಿವೆ. ಈ ಚಿತ್ರಗಳನ್ನು ಮನೆಯವರು ದಿನಾಲೂ ಪೂಜೆ ಮಾಡುತ್ತಾರೆ. ಇವುಗಳನ್ನು ಸುಮಾರು ೧೫೦ ವರ್ಷಗಳ ಹಿಂದೆ ತಂದಿರುವರೆಂದು ಹೇಳುತ್ತಾರಾದರೂ ಅಷ್ಟೊಂದು ವರ್ಷದ ಹಳೆಯದಾದ ಚಿತ್ರಗಳಲ್ಲ. ಇತ್ತೀಚಿನ ಕಲಾವಿದರು ಆ ಚಿತ್ರಗಳನ್ನು ತೈಲವರ್ಣಗಳಿಂದ ಪುನಃ ರಚನೆ ಮಾಡಿದ್ದಾರೆ ಚಿತ್ರಗಳ ಚೌಕಟ್ಟುಗಳು ಸುಸ್ಥಿತಿಯಲ್ಲಿದ್ದು ಹಿಂಬದಿಯ ರಕ್ಷಣಾ ಹಾಳೆಗಳು ಶಿಥಿಲಾವಸ್ಥೆಯಲ್ಲಿವೆ.

ಕುಂದಗೋಳ ತಾಲೂಕು ಗುಡಗೇರಿಯ ಶ್ರೀ ಬಸವರಾಜ ಚನ್ನಬಸಪ್ಪ ಹುತಗೊಣ್ಣನವರ ಇವರ ಮನೆಯಲ್ಲಿ ತೂಗುಹಾಕುವ ನಾಲ್ಕು ಚಿತ್ರಗಳಿವೆ. ನಾಲ್ಕು ಚಿತ್ರಗಳು ೫೦¹/₂ x ೬೫ ¹/₂ ಸೆಂ.ಮೀ ಅಳತೆಯನ್ನು ಹೊಂದಿವೆ. ಮಹಿಷಮರ್ದಿನಿ, ಶಿವಾಜಿಯ ಹಾಗೂ ನೀಲಾಂಬಿಕೆಯ ಚಿತ್ರದೃಶ್ಯಗಳಾಗಿವೆ. ಈ ಚಿತ್ರಗಳನ್ನು ೧೦೦ ವರ್ಷಗಳ ಹಿಂದೆ ಹೈದರಾಬಾದನಿಂದ ತರಲಾಗಿದೆ. ನಮ್ಮ ಅಜ್ಜ ಚನ್ನಬಸಪ್ಪನವರ ತಂದೆಯವರು ಬುದಗಾಂವ ಸಂಸ್ಥಾನದ ಕೌನ್ಸಿಲಿಂಗ್ ಸದಸ್ಯರಾಗಿದ್ದರು. ಆ ಸಂದರ್ಭಗಳಲ್ಲಿ ಈ ಚಿತ್ರಗಳನ್ನು ಬರೆಯಿಸಿ ತರಲಾಗಿದೆ ಎಂದು ಯಜಮಾನರಾದ ಬಸವರಾಜರು ಅಭಿಪ್ರಾಯ ಪಡುತ್ತಾರೆ. ಈ ಚಿತ್ರಗಳಲ್ಲದೇ ಇನ್ನೂ ಹಲವಾರು ಶೈವ ಪಂಥದ ದೇವರ ಚಿತ್ರಗಳಿದ್ದವೆಂದು, ಸರಿಯಾದ ಸಂರಕ್ಷಣೆ ಇರಲಾರದೇ ಕೆಲವು ಚಿತ್ರಗಳು ಒಡೆದು ಹೋಗಿ ನಾಲ್ಕು ಚಿತ್ರಗಳು ಉಳಿದಿವೆ ಎನ್ನುತ್ತಾರೆ. ಇವರ ಮನೆಯಲ್ಲಿ ಪ್ರತಿವರ್ಷ ಬಸವ ಜಯಂತಿ ದಿವಸ ಎತ್ತುಗಳನ್ನು, ಚಕ್ಕಡಿಗಳನ್ನು ಶೃಂಗಾರಗೊಳಿಸಿ ಅದರ ಮೇಲೆ ಬಸವೇಶ್ವರರ ಭಾವಚಿತ್ರವನ್ನು ಮೆರವಣಿಗೆ ಮಾಡಲಾಗುತ್ತದೆ. ಆ ಸಂದರ್ಭದಲ್ಲಿ ಈ ಗಾಜಿನ ಚಿತ್ರಗಳನ್ನು ಚಕ್ಕಡಿಗೆ ತೂಗುಹಾಕಿ ಅಲಂಕರಿಸಲಾಗುತ್ತದೆ ಮತ್ತು ಗಣೇಶನ ಹಬ್ಬದಂದು ಮಂಟಪದಲ್ಲಿ ಶೃಂಗರಿಸಿ ಆನಂದ ಪಡುತ್ತಾರೆ. ಸಧ್ಯ ಲಭ್ಯವಿರುವ ಚಿತ್ರಗಳ ಚೌಕಟ್ಟುಗಳು ದುಸ್ಥಿತಿಯಲ್ಲಿದ್ದು ಹಿಂಬದಿಯ ಸಂರಕ್ಷಣಾ ಹಲಗೆಗಳು ಕಿತ್ತು ಬರುವ ಸ್ಥಿತಿಯಲ್ಲಿವೆ. ಈ ನಾಲ್ಕು ಚಿತ್ರಗಳನ್ನು ಸ್ಥಳೀಯ ಕಲಾವಿದರಿಂದ ಅಳಿಸಿಹೋದಲ್ಲಿ ಪುನಃ ಚಿತ್ರ ಬರೆಯಿಸಿದ್ದಾರೆ. ಹೀಗಾಗಿ ನಾಲ್ಕು ಚಿತ್ರಗಳು ಮೂಲ ಸ್ವರೂಪವನ್ನು ಕಳೆದುಕೊಂಡು

ಆಧುನಿಕತೆಯ ರಚನಾ ವೈವಿಧ್ಯತೆಯನ್ನು ಪಡೆದುಕೊಂಡಿವೆ. ಈ ಚಿತ್ರಗಳನ್ನು ಸಂರಕ್ಷಿಸುವುದು ಬಹಳ ಅಗತ್ಯವಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಮಲಪನ ಗುಡಿಯ ಕೆಲವು ಮನೆತನಗಳಲ್ಲಿ ತೂಗುಹಾಕುವ ಜನಪದ ಹಿನ್ನೆಲೆಯ ಗಾಜಿನ ಚಿತ್ರಗಳು ಸಂಗ್ರಹಗೊಂಡಿವೆ. ಶ್ರೀ ಕೆ. ಶ್ರೀನಿವಾಸ ತಂದೆ ಕೊಲ್ಲಾಭೀಮಸೇನ ಶೆಟ್ಟಿ, ಶ್ರೀ ಮೂರ್ತ್ಯಾಚಾರ್ ಬಡಿಗೇರ, ಶ್ರೀ ತಾಯಪ್ಪ, ಪಂಪಣ್ಣ, ಬಳಾಪೂರ ಇವರ ಮನೆಗಳಲ್ಲಿ ತಲಾ ಒಂದೊಂದು ಚಿತ್ರಗಳು ಲಭ್ಯ ಇವೆ. ಈ ಚಿತ್ರಗಳನ್ನು ಸ್ಥಳೀಯ ಕಲಾವಿದರಾದ ಶ್ರೀ ಮೂರ್ತ್ಯಾಚಾರ್ ಬಡಿಗೇರ ರವರ ತಂದೆ ಕುಡಿತಿನಿ ವೀರಾಚಾರ್ಯರು ರಚಿಸಿದ್ದಾರೆ.

ಶ್ರೀ ಕೊಲ್ಲಾ ಶ್ರೀನಿವಾಸ, ಭೀಮಸೇನ ಶೆಟ್ಟಿಯವರ ಮನೆಯಲ್ಲಿ ವಿಷ್ಣು, ಶ್ರೀದೇವಿ-ಭೂದೇವಿಯ ಚಿತ್ರವಿದ್ದು ೫೫ x ೫೯ ಸೆಂ.ಮೀ ಅಳತೆಯನ್ನು ಹೊಂದಿವೆ. ಈ ಚಿತ್ರವನ್ನು ಶ್ರೀನಿವಾಸ ಶೆಟ್ಟಿಯವರ ಅಜ್ಜ ಶ್ರೀ ವೀರುಪಾಕ್ಷಶೆಟ್ಟಿಯವರು ೮೦ ವರ್ಷಗಳ ಹಿಂದೆ ಸ್ಥಳೀಯ ಕಲಾವಿದನಿಂದ ಮಾಡಿಸಿದ್ದರೆಂದು ಹೇಳುತ್ತಾರೆ. ಇದನ್ನು ಅಜ್ಜನ ಕಾಲದಿಂದಲೂ ಅವರ ಮನೆಯಲ್ಲಿ ಸಂರಕ್ಷಿಸಲಾಗಿದೆ. ಈ ವರ್ಣಚಿತ್ರವನ್ನು ದಿನಾಲು ಪೂಜೆ ಮಾಡುತ್ತಾ ಬಂದಿದ್ದಾರೆ.

ಇದೇ ಊರಿನ ಶ್ರೀ ತಾಯಪ್ಪ. ಪಂಪಣ್ಣ ಬಳಾಪೂರ ಇವರ ಮನೆಯಲ್ಲಿ ಕಾಮಧೇನುವಿನ ಈ ಚಿತ್ರವನ್ನು ತಾಯಪ್ಪನವರ ತಂದೆ ಮಲಪನ ಗುಡಿಯ ಚಿತ್ರಕಲಾವಿದರಾದ ಶ್ರೀ ವೀರಾಚಾರ್ ಬಡಿಗೇರ ರವರಿಂದ ಬರೆಯಿಸಿದ್ದೆಂದು ಹೇಳುತ್ತಾರೆ. ಈ ಚಿತ್ರವನ್ನು ಮನೆಯವರು ದಿನಾಲೂ ಪೂಜೆ ಮಾಡುತ್ತಿದ್ದು, ಚಿತ್ರವು ಸುರಕ್ಷಿತವಾಗಿದೆ. ಮಲಪನ ಗುಡಿಯ ಕಲಾವಿದರಾದ ಮೂರ್ತ್ಯಾಚಾರ ಬಡಿಗೇರ ಅವರ ಮನೆಯಲ್ಲಿ 'ಕಾಮಧೇನು'ವಿನ ಚಿತ್ರ ಒಂದು ಲಭ್ಯವಿದ್ದು, ಇದನ್ನು ಮೂರ್ತ್ಯಾಚಾರ್‌ರ ತಂದೆ ದಿ. ವೀರಾಚಾರ್ ಬಡಿಗೇರವರು ರಚನೆಮಾಡಿದ್ದಾರೆ. ವೀರಾಚಾರರು ಮೂರ್ತಿಕೆಲಸ, ಬಣ್ಣದ ಕೆಲಸ ಮತ್ತು ಪ್ರವಚನ, ಕೀರ್ತನೆಯನ್ನು ಮಾಡುತ್ತಿದ್ದರು. ಇವರು ಗ್ರಾಮದೇವತೆಗಳ, ಕಾಮ ರತಿಶಿಲ್ಪ ಹಾಗೂ ಅನೇಕ ಶಿಲ್ಪಗಳಿಗೆ ಬಣ್ಣಗಳನ್ನು ಮಾಡಿದ್ದು ಇವರ ಮನೆಯಲ್ಲಿ ಲಭ್ಯವಿರುವ ಸುತ್ತಮುತ್ತಲಿನ ಗ್ರಾಮಗಳಲ್ಲಿ ಕಂಡು ಬರುತ್ತಿವೆ. ಇವರ ಮನೆಯಲ್ಲಿ ಲಭ್ಯವಿರುವ ಗಾಜಿನಚಿತ್ರವು ೪೮ x ೬೩ ಸೆಂ.ಮೀ ಅಳತೆಯನ್ನು ಹೊಂದಿದ್ದು, ಚೌಕಟ್ಟು ಹಾಗೂ ಸಂರಕ್ಷಣಾ ಹಲಗೆಗಳು ದುಸ್ಥಿತಿಯಲ್ಲಿವೆ, ರಕ್ಷಣೆಯ ಅಗತ್ಯತೆ ಇದೆ.

ಬೀದರ ಜಿಲ್ಲೆಯ ಹುಮನಾಬಾದದ ಶ್ರೀ ಶಿವಶಂಕರ ಅಣ್ಣೆಪ್ಪ ಬಪ್ಪಣ್ಣ ಇವರ ಮನೆಯಲ್ಲಿ ಎರಡು ಚಿತ್ರಗಳು ಲಭ್ಯವಿದ್ದು ಶೇಕಡಾ ಎಪ್ಪತ್ತರಷ್ಟು ಭಾಗ ಚಿತ್ರಗಳು ಹಾಳಾಗಿಹೋಗಿವೆ. ಚಿತ್ರಗಳ ಚೌಕಟ್ಟುಗಳು ಕಿತ್ತು ಬಂದಿದ್ದು ಅವನ್ನು ದಾರದಿಂದ ಕಟ್ಟಲಾಗಿದೆ. ಇವರ ಮನೆತನವು ಹಿಂದಿನಿಂದಲೂ ವ್ಯಾಪಾರಿ ಕುಟುಂಬವಾಗಿದ್ದು, ಸಾಂಸ್ಕೃತಿಕವಾಗಿ ಮಹತ್ವತೆಯನ್ನು ಪಡೆದುಕೊಂಡ ಮನೆತನವಾಗಿದೆ. ಈ ಚಿತ್ರಗಳನ್ನು ನೂರು ವರ್ಷಗಳ ಹಿಂದೆ ಶಿವಶಂಕರರ ಅಜ್ಜನವರು ಖರೀದಿಸಿ ತಂದಿದ್ದೆಂದು ಅಭಿಪ್ರಾಯ ಪಡುತ್ತಾರೆ. ಮನೆಯಲ್ಲಿ ಇನ್ನು ಅನೇಕ ದೇವರ ಚಿತ್ರಗಳಿದ್ದವು ಅವುಗಳ ಸಂರಕ್ಷಣೆಯನ್ನು ಸರಿಯಾಗಿ ಮಾಡದೇ ಇದ್ದುದರಿಂದ ಒಡೆದು ಹೋಗಿವೆ ಸಧ್ಯ

ಎರಡು ಚಿತ್ರಗಳು ಮಾತ್ರ ಉಳಿದಿವೆ ಎನ್ನುತ್ತಾರೆ. ಮನೆಯಲ್ಲಿ ವಿಶೇಷ ದಿನಗಳಲ್ಲಿ ಅಂದರೆ ಹಬ್ಬ ಹರಿದಿನಗಳಲ್ಲಿ ಈ ಚಿತ್ರಗಳನ್ನು ಅಲಂಕರಿಸಿ ಆಚರಣೆಯನ್ನು ಮಾಡಲಾಗುತ್ತಿತ್ತು ಎಂದು ಮನೆಯವರು ಹೇಳುತ್ತಾರೆ.

ಗುಲ್ಬರ್ಗ ಜಿಲ್ಲೆಯಲ್ಲಿ ಹಲವಾರು ಗಾಜಿನ ಚಿತ್ರಗಳು ಲಭ್ಯವಿದ್ದು, ಗುಲ್ಬರ್ಗ ನಗರದ ಡಾ. ವ್ಹಿ. ಸಿ. ಮೈಲಾಪೂರು ಇವರ ಮನೆಯಲ್ಲಿ 'ರಾಧಾಕೃಷ್ಣರ' ೭೦ x ೧೦೦ ಸೆಂ.ಮೀ ಅಳತೆಯ ಗಾಜಿನ ಮೇಲಿನ ಚಿತ್ರವು ಲಭ್ಯವಿದೆ. ೧೯೭೦ ರ ದಶಕದಲ್ಲಿ ನಿರ್ಮಿತಗೊಂಡ ಈ ಕೃತಿಯು ಕೊರೆದ ಮಾಧ್ಯಮವಾಗಿದೆ. ಕಲಾ ತಪಸ್ವಿ ಡಾ. ಎಸ್. ಎಂ. ಪಡಿತರು ಸ್ನೇಹಿತರಾದ ಡಾ. ವ್ಹಿ. ಸಿ. ಮೈಲಾಪೂರರವರಿಗೆ ಮನೆಯ ಗೃಹ ಪ್ರವೇಶದ ಸಂದರ್ಭದಲ್ಲಿ ಮುಂಬೈನಿಂದ ತರಿಸಿ ಕಾಣಿಕೆಯಾಗಿ ನೀಡಿದ್ದಾರೆಂದು ಡಾ. ರವರ ಪತ್ನಿಯವರು ಹೇಳುತ್ತಾರೆ. ಇವರು ಚಿತ್ರಕಲೆಯ ಪ್ರೀಯರೂ, ಅಭಿಮಾನಿಗಳೂ ಮತ್ತು ಉತ್ತಮ ಕಲಾಪೋಷಕ ಭಾವದವರು. ಹೀಗಾಗಿ ಇವರ ಮನೆಯಲ್ಲಿ ಬೆಲೆಬಾಳುವ ದೇಶಿಯ ಸಾಂಪ್ರದಾಯಿಕ ಚಿತ್ರಗಳು, ಶಿಲ್ಪಗಳು ಹಾಗೂ ಇತರ ಕರಕುಶಲ ವಸ್ತುಗಳು ಸಂಗ್ರಹಗೊಂಡಿವೆ. ಈ ಚಿತ್ರವು ಉತ್ತಮ ಸ್ಥಿತಿಯಲ್ಲಿದ್ದು, ಡಾ.ರವರ ಮಲಗುವ ಕೋಣೆಯ ಗೋಡೆಯ ಮೇಲೆ ಅಲಂಕೃತಗೊಂಡಿವೆ.

ಗುಲ್ಬರ್ಗದ ಸರಾಫ್ ಬಜಾರದಲ್ಲಿರುವ ಶ್ರೀ ಹನ್ಸರಾಜ್ ಮೋತಿಲಾಲ್ ಮುಂದಡಾ ಇವರ ಮನೆಯಲ್ಲಿ 'ವಿಷ್ಣು-ಶ್ರೀದೇವಿ, ಭೂದೇವಿಯ' ತೂಗುಹಾಕುವ ಗಾಜಿನ ಚಿತ್ರ ಹಾಗೂ ಸುಮಾರು ೧೦೦ ವರ್ಷಗಳ ಹಳೆಯದಾದ ಮರದ ಮಂಚದ ಖಾನೆಗಳಲ್ಲಿ ಗಾಜಿನ ಚಿತ್ರಗಳು ಲಭ್ಯ ಇವೆ. ಚಿತ್ರಗಳು ಅವಸಾನದ ಸ್ಥಿತಿಯಲ್ಲಿದ್ದು, ಮಂಚದಲ್ಲಿರುವ ಚಿತ್ರಗಳಲ್ಲಿನ ವರ್ಣಗಳು ಕಿತ್ತು ಹೋಗಿವೆ. ವರ್ಣಚಿತ್ರದ ಚೌಕಟ್ಟು ಹಾಗೂ ಹಿಂಬದಿಯ ಹಲಗೆಯು ದುರಸ್ತಿಯಲ್ಲಿವೆ. ವಿಷ್ಣು-ಶ್ರೀದೇವಿ-ಭೂದೇವಿಯ ಚಿತ್ರವನ್ನು ನಮ್ಮ ಹಿರಿಯರು ಸುಮಾರು ವರ್ಷಗಳ ಹಿಂದೆ ಮದ್ರಾಸದಿಂದ ತಂದಿರುವರು ಇದನ್ನು ಪ್ರತಿನಿತ್ಯ ಪೂಜೆಯನ್ನು ಮಾಡುತ್ತಿದ್ದೇವೆ ಎಂದು ಹೇಳುತ್ತಾರೆ.

ತುಮಕೂರು ಜಿಲ್ಲೆಯ ಕೆಲವು ಮನೆತನಗಳಲ್ಲಿ ವೈವಿಧ್ಯಮಯ ತೂಗುಹಾಕುವ ಗಾಜಿನ ಚಿತ್ರಗಳು ಲಭ್ಯವಿದ್ದು, ಚಿತ್ರಗಳು ದುರಸ್ತಿಯಲ್ಲಿವೆ. ತುಮಕೂರು ನಗರದ ಚಿಕ್ಕಪೇಟೆಯ ಶ್ರಿ ಟಿ ಆರ್. ಮಂಜುನಾಥ, ರಾಮಕೃಷ್ಣಯ್ಯರವರ ಮನೆಯಲ್ಲಿ ಎರಡು ಚಿತ್ರಗಳು ಲಭ್ಯವಿದ್ದು, ೫೦ x ೬೫ ಸೆಂ.ಮೀ ಅಳತೆಯನ್ನು ಹೊಂದಿವೆ. ಒಂದು ಚಿತ್ರವು ಯಶೋದೆಯ ಮಡಿಲಲ್ಲಿ ಬಾಲಕೃಷ್ಣ ಇನ್ನೊಂದು ಸೀತೆರಾಮರ ಮದುವೆಯ ದೃಶ್ಯವನ್ನು ಒಳಗೊಂಡಿವೆ.

ಮಂಜುನಾಥರ ಮನೆತನವು ಮುತ್ತಾತನ ಕಾಲದಿಂದಲೂ ವ್ಯಾಪಾರಿ ಮನೆತನವಾಗಿದ್ದು, ಇವರ ಮನೆಯಲ್ಲಿ ಹಿಂದೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ವಿಶೇಷವಾಗಿ ನಡೆಸುತ್ತಿದ್ದರು. ಆ ಸಂದರ್ಭಗಳಲ್ಲಿ ನಮ್ಮ ಮನೆಯಲ್ಲಿ ವೈವಿಧ್ಯಮಯ ಕರಕುಶಲ ವಸ್ತುಗಳು ಸಾಕಷ್ಟು ಸಂಖ್ಯೆಯಲ್ಲಿದ್ದವು ಅದರಲ್ಲೂ ವಿಶೇಷಾಗಿ ಗಾಜಿನ ಮೇಲಿನ ಚಿತ್ರಗಳು ಅನೇಕವಿದ್ದವು. ಅವುಗಳ ಸರಿಯಾದ ಸಂರಕ್ಷಣೆ ಇಲ್ಲದೇ ಎಲ್ಲ ಚಿತ್ರಗಳು ಒಡೆದು ಹೋಗಿವೆ. ಸಧ್ಯಕ್ಕೆ ಎರಡು ಚಿತ್ರಗಳು ಮಾತ್ರ ಉಳಿದಿವೆ ಎನ್ನುತ್ತಾರೆ. ಎರಡು ಚಿತ್ರಗಳ ಚೌಕಟ್ಟುಗಳು ಹಾಗೂ ಹಿಂಬದಿಯ

ಸಂರಕ್ಷಣೆಯ ಫಲಕಗಳು ಜಖಂಗೊಂಡಿದ್ದು ಪೋಷಕರು ಇವುಗಳನ್ನು ಸರಿಯಾದ ರೀತಿಯಲ್ಲಿ ಸಂರಕ್ಷಣೆ ಮಾಡುವುದು ಅಗತ್ಯವಾಗಿದೆ.

ತುಮಕೂರು ಜಿಲ್ಲೆ ಗುಬ್ಬಿಯ ಶ್ರೀ ಜಿ. ಎಂ. ಸುಬ್ಬಣ್ಣ, ಧರ್ಮಪತ್ನಿ ಚಿನ್ನಮ್ಮನವರ ಮನೆಯಲ್ಲಿ ಕೆಲವು ಮೈಸೂರು ಸಾಂಪ್ರದಾಯಿಕ ಚಿತ್ರಗಳು ಸಂಗ್ರಹಗೊಂಡಿವೆ. ಅವುಗಳ ಗಾಜಿನ ಮೇಲಿನ ತೂಗುಹಾಕುವ ಚಿತ್ರಗಳು ಎರಡು ಲಭ್ಯ ಇವೆ. ಇವು ಪೌರಾಣಿಕ ಹಿನ್ನೆಲೆಯನ್ನು ಒಳಗೊಂಡಿವೆ. ಈ ಚಿತ್ರಗಳನ್ನು ಚಿನ್ನಮ್ಮನವಗ ಅತ್ತೆಯವರಾದ ವೆಂಕಟಮ್ಮನವರು ಅವರ ತವರು ಮನೆ ಬೆಂಗಳೂರಿನಿಂದ ತಂದಿರುವರೆಂದು ಚಿನ್ನಮ್ಮನವರು ಹೇಳುತ್ತಾರೆ. ಎರಡು ಚಿತ್ರಗಳು ೪೮ ೧/೨ x ೫೮ ೧/೨ ಸೆಂ.ಮೀ ಅಳತೆಯನ್ನು ಹೊಂದಿದ್ದು, ಚಿತ್ರಗಳ ಚೌಕಟ್ಟುಗಳು, ಹಿಂಬದಿಯ ಸಂರಕ್ಷಣಾ ಹಾಳೆಗಳು ದುಸ್ಥಿತಿಯಲ್ಲಿವೆ. ಇವುಗಳ ಸಂರಕ್ಷಣೆಯ ಅಗತ್ಯವು ಕಂಡು ಬರುತ್ತದೆ. ಗುಬ್ಬಿಯ ಇನ್ನೊಂದು ಮನೆತನವಾದ ಪಿಟಿಲು ಜಿ. ಕೆ. ಅಪ್ಪಾಜಪ್ಪ ಪತ್ನಿ ರಾಜಮ್ಮನವರ ಮನೆಯಲ್ಲಿ ಎರಡು ಗಾಜಿನ ಚಿತ್ರಗಳು ಲಭ್ಯ ಇವೆ. ಈ ಚಿತ್ರಗಳು ೪೩ x ೫೮ ಸೆಂ.ಮೀ ಅಳತೆಯನ್ನು ಹೊಂದಿವೆ.

ರಾಜಮ್ಮನವರ ಪತಿ ದಿವಂಗತ ಜಿ. ಕೆ. ಅಪ್ಪಾಜಪ್ಪನವರು ಖ್ಯಾತ ಪಿಟಿಲು ವಾದಕರಾಗಿದ್ದರು. ಇವರ ಮನೆಯಲ್ಲಿ ದಿನಾಲು ಸಂಗೀತ ಕಛೇರಿಯನ್ನು ನಡೆಸಲಾಗುತ್ತಿತ್ತು. ಗುಬ್ಬಿ ವೀರಣ್ಣ ಹಾಗೂ ಸಮಕಾಲೀನ ಕಲಾವಿದರು ಇಲ್ಲಿ ಪಾಲ್ಗೊಳ್ಳುತ್ತಿದ್ದರು ಎಂದು ರಾಜಮ್ಮನವರು ನೆನಪಿಸುತ್ತಾರೆ. ಹೀಗಾಗಿ ಇವರ ಪತಿ ಬೇರೆ ಬೇರೆ ರಾಜ್ಯದಲ್ಲಿ ಸಂಗೀತ ಕಾರ್ಯಕ್ರಮಗಳನ್ನು ನಡೆಸಿಕೊಡುತ್ತಿದ್ದರು. ಈ ಎರಡು ಚಿತ್ರಗಳನ್ನು ಮದ್ರಾಸನಿಂದ ತಂದಿರಬಹುದೆಂದು ವಯೋವೃದ್ಧ ಅಜ್ಜಿಯು ಅಭಿಪ್ರಾಯ ಪಡುತ್ತಾಳೆ. ಇವರ ಮನೆಯಲ್ಲಿರುವ ಎರಡು ಚಿತ್ರಗಳ ಚೌಕಟ್ಟುಗಳು ಹಾಗೂ ಹಿಂಬದಿಯ ಹಲಗೆಗಳು ಶಿಥಿಲಾವಸ್ಥೆಯಲ್ಲಿದ್ದು, ಚಿತ್ರಗಳ ಕೆಲವು ಕಡೆ ವರ್ಣಗಳು ಕಿತ್ತು ಬರುವ ಸ್ಥಿತಿಯಲ್ಲಿವೆ. ಇವುಗಳನ್ನು ಸರಿಯಾದ ರೀತಿಯಲ್ಲಿ ಸಂರಕ್ಷಣೆ ಮಾಡುವುದು ಪೋಷಕರ ಮೇಲಿದೆ.

ಗಾಜಿನ ಮೇಲಿನ ತೂಗುಹಾಕುವ ಚಿತ್ರಗಳು ಬಹುತೇಕ ಶ್ರೀಮಂತ ಹಾಗೂ ವ್ಯಾಪಾರಸ್ಥ ಕುಟುಂಬಗಳಲ್ಲೇ ಸಂಗ್ರಹವಿದ್ದುದು ಹೆಚ್ಚಿನ ಸಂಖ್ಯೆಗಳಲ್ಲಿ ಕಂಡು ಬರುತ್ತವೆ. ಈ ಮನೆತನಗಳು ಪಾರಂಪರಿಕವಾಗಿ ಸಾಂಸ್ಕೃತಿಕ ಹಿರಿಮೆಯನ್ನು ಕಾಪಾಡಿಕೊಂಡು ಬಂದಿವೆ ಎನ್ನಬಹುದು. ವರ್ಷದ ಬಾರಮಾಸಗಳಲ್ಲಿ ವೈವಿಧ್ಯಮಯ ಹಬ್ಬಗಳು, ಉತ್ಸವಗಳು, ಆಚರಣೆಗಳು, ಇತ್ಯಾದಿ ವಿಶೇಷ ದಿನಗಳು ನಮ್ಮ ನಾಡಿನಲ್ಲಿ ಬಹು ಹಿಂದಿನಿಂದಲೂ ನಡೆದುಕೊಂಡು ಬಂದಿವೆ. ಇಂಥ ಸಂದರ್ಭಗಳಲ್ಲಿ ಮನೆಯ ಅಲಂಕಾರಗಳು ನಡೆಯುತ್ತವೆ. ಅಲಂಕಾರ ಸಂದರ್ಭಗಳಲ್ಲಿ ವೈವಿಧ್ಯಮಯ ಅಲಂಕಾರಿಕ ಕರಕುಶಲ ವಸ್ತುಗಳನ್ನು ಸಂಯೋಜಿಸಲಾಗುತ್ತಿತ್ತು. ಮಂಟಪದ ಅಲಂಕಾರದಲ್ಲಿ ಗಾಜಿನ ಚಿತ್ರಗಳನ್ನು ಹೆಚ್ಚು ಹೆಚ್ಚು ಬಳಸಲಾಗುತ್ತಿತ್ತು ಎಂಬುದು ಈ ಚಿತ್ರಗಳ ಪೋಷಕರಿಂದ ತಿಳಿದು ಬರುತ್ತದೆ. ಬಹುತೇಕ ಕರ್ನಾಟಕದ ಹೆಚ್ಚಿನ ಸಂಖ್ಯೆಯ ಶ್ರೀಮಂತ ಕುಟುಂಬಗಳಲ್ಲಿ ಕಂಡುಬರುತ್ತವೆ. ನನಗೆ ಲಭ್ಯವಾದ ಚಿತ್ರಗಳ ಮನೆತನಗಳ ಪೋಷಕರನ್ನು ಇಲ್ಲಿ ಪಿವೇಚಿಸಿದೆ.





ಶ್ರೀ ಎಸ್ ಎಸ್ ನಾರಾಯಣರ ಮನೆ
ಬಾಗಲಕೋಟೆ



ಶ್ರೀ ಎಸ್. ಬಿ ಜೊಕ್ರಾಶೆ
ಯವರ ಮನೆ ಬಾಗಲಕೋಟೆ



ಶ್ರೀ ಮಾಣಿಕಚಂದ್ ಜೀತಾಳ
ಬಾಗಲಕೋಟೆ

ಮನೆಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳು

ಬ. ಅರಮನೆಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳು

ಕರ್ನಾಟಕದಲ್ಲಿ ವಿವಿಧ ಕಾಲಮಾನಗಳ ರಾಜಮನೆತನದವರ ಆಡಳಿತಾವಧಿಯಲ್ಲಿ ನಿರ್ಮಿತಗೊಂಡ ಹಲವಾರು ಅರಮನೆಗಳು ಕಂಡುಬರುತ್ತದೆ. ಅದರಲ್ಲೂ ವಿಶೇಷವಾಗಿ ೧೭, ೧೮ನೇ ಶತಮಾನಗಳಲ್ಲಿ ನಿರ್ಮಿತಗೊಂಡ ಅರಮನೆಯ ಕಟ್ಟಡಗಳಲ್ಲಿ ಸಂಗ್ರಹಗೊಂಡ ತೂಗುಹಾಕುವ ಗಾಜಿನ ಚಿತ್ರಗಳು ಹಾಗೂ ಅರಮನೆಗಳ ಕಿಟಕಿ, ಬಾಗಿಲು ಹಾಗೂ ಮೇಲ್ಛೆತ್ತುಗಳಲ್ಲಿ ಅಳವಡಿಸಲಾದ ಗಾಜಿನ ಚಿತ್ರಗಳು ಶತಮಾನಗಳಿಂದ ಪೋಷಿಸಲ್ಪಟ್ಟಿವೆ. ಬಹುತೇಕ ಇಲ್ಲಿ ಬಿಂಬಿತವಾಗಿರುವ ಚಿತ್ರಗಳು ಸ್ಟೇನ್ಡ್ ಗ್ಲಾಸ್ ಚಿತ್ರಗಳಾಗಿವೆ.

ಬಾಗಲಕೋಟೆ ಜಿಲ್ಲೆಯ ಜಮಖಂಡಿಯ ರಾಯಲ್ ಪ್ಯಾಲೇಸ್ (ರಾಮತೀರ್ಥ ಪ್ಯಾಲೇಶ) ಅತ್ಯಂತ ಸುಂದರ ವಾಸ್ತುಶಿಲ್ಪಗಳಲ್ಲಿ ಒಂದು. ಜಮಖಂಡಿಯ ಬೆಟ್ಟದ ಮೇಲೆ ಕಂಡು ಬರುವ ಈ ಅರಮನೆಯಲ್ಲಿ ನೂರಾರು ಕಿಟಕಿ, ಬಾಗಿಲುಗಳಿವೆ. ಇಲ್ಲಿ ಕಂಡು ಬರುವ ಕಿಟಕಿ, ಬಾಗಿಲುಗಳು ಪಾರದರ್ಶಕ ಗಾಜುಗಳ ಫಲಕಗಳನ್ನು ಹೊಂದಿದ್ದು, ಇವುಗಳ ಮೇಲೆ ರಾಜ ಮನೆತನದ ಎಂಬ್ಲಮ್ ಹಾಗೂ ರಾಜಮನೆತನದವರು ನಡೆಸುತ್ತಿರುವ ಶಿಕ್ಷಣ ಸಂಸ್ಥೆಯ ಎಂಬ್ಲಮ್ ಚಿತ್ರಗಳು ರೂಪಿತಗೊಂಡಿವೆ. ಈ ಗಾಜಿನ ಫಲಕಗಳ ಸುತ್ತಲೂ ಅಲಂಕಾರಿಕ ನಕ್ಷಾವಿನ್ಯಾಸಗಳನ್ನು ರಚಿಸಲಾಗಿದೆ. ಈ ಚಿತ್ರಗಳನ್ನು ಕೊರೆದ ಮಾಧ್ಯಮದಲ್ಲಿ ರಚಿಸಿದ್ದು, (Etching) ಸುಮಾರು ನೂರು ವರ್ಷಗಳಿಗಿಂತಲೂ ಹಳೆಯದಾದ ರಚನಾ ಪದ್ಧತಿಯನ್ನು ಅನುಸರಿಸಲಾಗಿದೆ. ಈ ಅರಮನೆಯ ಕಟ್ಟಡವು ಪ್ರಸ್ತುತ ಹೊಟೇಲಾಗಿ ಪರಿವರ್ತನೆಗೊಂಡಿದ್ದು ಇದನ್ನು ಸಂಪೂರ್ಣ ಪುನರುಜ್ಜೀವನ ಗೊಳಿಸಲಾಗುತ್ತಿದೆ. ಮೂಲ ವಾಸ್ತುಶಿಲ್ಪಕ್ಕೆ ದಕ್ಕೆಯಾಗದಂತೆ ಹೊಸ ವಿನ್ಯಾಸಗಳನ್ನು ರಚಿಸುತ್ತಿದ್ದು ಕಿಟಕಿಗಳಲ್ಲಿರುವ ಗಾಜಿನ ಫಲಕಗಳನ್ನು ಮೂಲ ರೂಪದಲ್ಲಿಯೇ ಇರಿಸಲಾಗಿದೆ.

ಮುಧೋಳದ ಶ್ರೀ ಮಾಲೋಜಿರಾವ್ ವೆಂಕಟರಾವ್ ಘೋರ್ಪಡೆಯವರ ಸಂಸ್ಥಾನದ ಅರಮನೆಯ ಕಟ್ಟಡವು ೧೮೮೪ ರಲ್ಲಿ ನಿರ್ಮಿತಗೊಂಡಿದ್ದು ಆಧುನಿಕ ವಾಸ್ತುವಿನ್ಯಾಸವನ್ನು ಹೊಂದಿದೆ. ಈ ಅರಮನೆಯಲ್ಲಿ ವಿದೇಶಿ ಕಲಾವಿದರು ರಚಿಸಿದ ತೈಲವರ್ಣದ ಭಾವಚಿತ್ರಗಳು, ಮರದ ವಸ್ತುಗಳು, ಗಾಜಿನ ವಸ್ತುಗಳು ಕಂಡು ಬರುತ್ತವೆ. ಗಾಜಿನ ವಸ್ತುಗಳಲ್ಲಿ ವೈವಿಧ್ಯಮಯ ತೂಗುದೀಪಗಳು, ಹೂಜಿಗಳು, ಕನ್ನಡಿಗಳು, ಇತ್ಯಾದಿ ವಸ್ತುಗಳು ಸಂಗ್ರಹಿಸಲ್ಪಟ್ಟಿವೆ. ಇವುಗಳ ಮೇಲೆಯೂ ವೈವಿಧ್ಯಮಯವಾದ ಚಿತ್ರವಿನ್ಯಾಸಗಳು ರಚನೆಗೊಂಡಿವೆ. ಇಲ್ಲಿ ಸಂಗ್ರಹಗೊಂಡಿರುವ ಗಾಜಿನ ವಸ್ತುಗಳು ಸುರಕ್ಷಿತವಾಗಿದ್ದು ಈ ಅರಮನೆಯನ್ನು ನೋಡಲು ಅನೇಕ ಕೆಲಸಗಾರರು ಇದ್ದಾರೆ. ಅರಮನೆಯ ವಾರಸುದಾರರೂ ಸಧ್ಯಕ್ಕೆ ಮಹಾರಾಷ್ಟ್ರದ ಪುಣೆಯಲ್ಲಿ ವಾಸಿಸುತ್ತಿದ್ದು, ವರ್ಷದಲ್ಲಿ ಒಂದೋ ಅಥವಾ ಎರಡು ಸಲ ಬಂದು ಅರಮನೆಗೆ ಭೇಟ್ಟಿ ಕೊಟ್ಟು ಹೋಗುತ್ತಾರೆ. ಆದರೆ. ಇಲ್ಲಿ ಗಾಜಿನ ವರ್ಣಚಿತ್ರಗಳು ಕಂಡು ಬರುವುದಿಲ್ಲ.

ಮೈಸೂರು ನಗರದಲ್ಲಿಯೇ ಹಲವಾರು ಅರಮನೆಗಳು ಕಂಡು ಬರುತ್ತಿದ್ದು, ಇವು ಬಹುತೇಕ ಒಡೆಯರ ಕಾಲಮಾನಗಳಲ್ಲಿ ನಿರ್ಮಿತಗೊಂಡಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಮೈಸೂರಿನ ಮುಖ್ಯ ಅರಮನೆ, ಜಗನ್ಮೋಹನ ಅರಮನೆಗಳು

ಪ್ರಮುಖವಾದವುಗಳು. ಅಲ್ಲದೇ ಮೈಸೂರಿನಲ್ಲಿರುವ ಅನೇಕ ಕಟ್ಟಡಗಳು ವಿಶಿಷ್ಟ ವಾಸ್ತುಶೈಲಿಯಲ್ಲಿ ರೂಪಗೊಂಡಿವೆ. ಆ ಕಟ್ಟಡಗಳಲ್ಲಿ ಅಳವಡಿಸಲಾದ ಕಿಟಕಿಗಳ ಗಾಜುಗಳು ವೈವಿಧ್ಯಮಯ ಚಿತ್ರಗಳಿಂದ ಕೂಡಿವೆ. ಇವುಗಳಲ್ಲಿ ಪ್ರಕೃತಿ ಚಿತ್ರಗಳು ಪ್ರಾಣಿ, ಪಕ್ಷಿಗಳು, ಹೂವಿನ ನಕ್ಷೆಗಳು ರಚನೆಗೊಂಡಿವೆ. ಇಲ್ಲಿ ಮುಖ್ಯವಾಗಿ ಗಾಜಿನ ಚಿತ್ರಗಳ ದೃಷ್ಟಿಯಿಂದ ನೋಡಿದರೆ ಹೊಸ ಅರಮನೆಯಲ್ಲಿ ಕಂಡು ಬರುವ ಗಾಜಿನ ಕಲೆ ಹಾಗೂ ಜಗನ್ಮೋಹನ ಅರಮನೆಯಲ್ಲಿ ಕಂಡು ಬರುವ ತೂಗುಹಾಕುವ ಚಿತ್ರಗಳು ವಿಶಿಷ್ಟ ರೀತಿಯಲ್ಲಿ ಪೋಷಿಸಲ್ಪಟ್ಟಿವೆ.

ಮೈಸೂರಿನ ಹೊಸ ಅರಮನೆಯ ವಾಸ್ತುಕಟ್ಟಡವು ದೇಶದಲ್ಲಿಯೇ ಅತ್ಯಂತ ಸುಂದರವಾದ ಕಟ್ಟಡವೆನ್ನಬಹುದು. ಹಳೆಯ ಅರಮನೆಯು ಬೆಂಕಿಯ ಅನಾಹುತಕ್ಕೆ ತುತ್ತಾಗಿ ಬಹುತೇಕ ಕಟ್ಟಡ ಸುಟ್ಟುಹೋಗಿತ್ತು. ಅದರ ಪುನರ್ ನಿರ್ಮಾಣ ಕಾರ್ಯವು ೧೮೯೭ ರಲ್ಲಿ ನಡೆಯಿತು. ಮೈಸೂರು ರಾಜ್ಯದ ಅರಮನೆ ವಿಭಾಗದ ಕಾರ್ಯಪಾಲಕ ಇಂಜನೀಯರ ಆಗಿದ್ದ ಶ್ರೀ ಬಿ. ಪಿ. ರಾಘವುಲು ನಾಯ್ಡು ಇದರ ಉಸ್ತುವಾರಿಯನ್ನು ವಹಿಸಿದ್ದರು. ಅರಮನೆಯ ಕಾರ್ಯ ೧೯೧೨ ರಲ್ಲಿ ಪೂರ್ಣಗೊಂಡಿತು. ಇದಕ್ಕೆ ತಗುಲಿದ ಒಟ್ಟು ವೆಚ್ಚ ಆ ಸಂದರ್ಭದಲ್ಲಿ ೪೧,೪೭,೯೧೩ ರೂಪಾಯಿಗಳು. ಕಟ್ಟಡವನ್ನು ಬಹುತೇಕ ಸ್ಥಳೀಯ ಸಾಮಗ್ರಿಗಳಿಂದ ನಿರ್ಮಿಸಲಾಗಿದೆ. ಈ ಕಟ್ಟಡದ ನಿರ್ಮಾಣದಲ್ಲಿ ಅಗ್ನಿ ನಿರೋಧಕ ವಿಧಾನದ ಅಳವಡಿಕೆಯು ಬಹು ವಿಶೇಷವಾಗಿದೆ. ಕಟ್ಟಡವು ಬೂದು ಬಣ್ಣದ ಗ್ರಾನೈಟ್‌ನಿಂದ ನಿರ್ಮಾಣಗೊಂಡಿದ್ದು, ಮೂರು ಅಂತಸ್ತನ್ನು ಹೊಂದಿದೆ. ಇಲ್ಲಿ ಮುಖ್ಯವಾಗಿ ಗಾಜಿನ ಕುಶಲಕಲೆಗಳಿರುವುದು ಅರಮನೆಯ ಕಲ್ಯಾಣ ಮಂಟಪ, ಅಂಬಾವಿಲಾಸ ಹಾಲನಲ್ಲಿ ಹಾಗೂ ಕಿಟಕಿಗಳಲ್ಲಿ. ಕಲ್ಯಾಣಮಂಟಪವು ರಾಜರ ಕುಟುಂಬದ ಎಲ್ಲ ವಿವಾಹ ಕಾರ್ಯಗಳಿಗೆ ನಾಜೂಕಿನಿಂದ ರಚಿಸಲಾಗಿರುವ ಮತ್ತು ಅಲಂಕೃತವಾಗಿರುವ ಸಭಾಂಗಣವಾಗಿತ್ತು. ಇದರ ಮೇಲ್ಛಾವಣಿಯು ಸಂಪೂರ್ಣ ಗಾಜಿನ ಚಿತ್ರಗಳಿಂದ ಕೂಡಿದ್ದು, ಅಷ್ಟ ಭುಜಾಕೃತಿಯಲ್ಲಿ ನಿರ್ಮಾಣಗೊಂಡಿದೆ. ಅಷ್ಟಭುಜಾಕೃತಿ ಮಂಟಪ ಮತ್ತು ಮಯೂರ ಅಲಂಕರಣದ ಬಣ್ಣದ ಛಾವಣಿಯನ್ನು ಪ್ರಖ್ಯಾತ ವಾಲ್ಟರ್ ಮ್ಯಾಕ್ ಫರ್‌ಲೇನ್ ಸ್ಯಾರಸೆನ್ ಫೌಂಡ್ರಿ, ಗ್ಲಾಸ್ಗೋನಲ್ಲಿ ತಯಾರಿಸಲಾಗಿದೆ. ಅಷ್ಟ ಭುಜಾಕೃತಿಯ ಅಲಂಕರಣೆಯಲ್ಲಿ ಜ್ಯಾಮಿತಿಕ, ಅಲಂಕಾರಿಕ ಹಾಗೂ ನೈಸರ್ಗಿಕ ನಕ್ಷಾವಿನ್ಯಾಸಗಳು ರಚಿತಗೊಂಡಿದ್ದು, ವಿಶೇಷವಾಗಿ ಮಯೂರದ ಚಿತ್ರವು ಬಹು ಆಕರ್ಷಕವಾಗಿ ಮೂಡಿಬಂದಿದೆ. ಚಿತ್ರವಿನ್ಯಾಸಗಳಿಂದ ಕೂಡಿದ ಗಾಜಿನ ಚಿತ್ರಸಮೂಹವು ಇಂದಿಗೂ ಸುರಕ್ಷಿತವಾಗಿದ್ದು, ವರ್ಣಗಳ ಪ್ರಖರತೆಯು ಎದ್ದುತೋರುತ್ತದೆ. ಈ ಚಿತ್ರಗಳನ್ನು ನೈಸರ್ಗಿಕ ವಿಕೋಪಕ್ಕೆ ಮತ್ತು ಮಾನವ ದಾಳಿಗೆ ತುತ್ತಾಗದಂತೆ ಕಾಪಾಡಿಕೊಳ್ಳುವುದು ಬಹುಮುಖ್ಯವಾಗಿದೆ.

ಅರಮನೆಯ ಇನ್ನೊಂದು ಬಹುಮುಖ್ಯ ಭಾಗವಾದ ಅಂಬಾ ವಿಲಾಸದಲ್ಲಿ ಗಾಜಿನ ಮೇಲ್ಛಾವಣಿಯು ಅತ್ಯಂತ ಸುಂದರವಾಗಿದೆ. ಮತ್ತು ವೈವಿಧ್ಯಮಯವಾಗಿದೆ. ಅಂಬಾ ವಿಲಾಸದಲ್ಲಿ ಮಹಾರಾಜರು ಖಾಸಗಿ ದರ್ಬಾರುಗಳನ್ನು ನಡೆಸುತ್ತಿದ್ದರು. ಸಭಾಂಗಣದ ಪಶ್ಚಿಮದ ಕೊನೆಯಲ್ಲಿರುವ ಅಷ್ಟಭುಜಾಕೃತಿಯ ಮಂಟಪದ ಮೇಲ್ಛಾವಣಿಯು ಗಾಜಿನ ಚಿತ್ರಗಳಿಂದ ರಚನೆಗೊಂಡಿದ್ದು ಇದರಲ್ಲಿ

ವೈವಿಧ್ಯಮಯ ಅಲಂಕಾರಿಕ ನಕ್ಷೆಗಳನ್ನು ರಚಿಸಲಾಗಿದೆ. ಈ ಚಿತ್ರಗಳನ್ನು ಲೋಹದ ಬಂಧಕಗಳಿಂದ ಬಂಧಿಸಲಾಗಿದೆ. ಅಂಬಾವಿಲಾಸದ ಗಾಜಿನ ಮೇಲ್ಛಾವಣಿಯು ಏಳು ವಿಭಾಗಗಳಿಂದ ಕೂಡಿದ್ದು, ಪ್ರಾರಂಭದ ಎರಡು ವಿಭಾಗಗಳಲ್ಲಿ ಅರ್ಧವೃತ್ತಾಕಾರಗಳ ನಕ್ಷಾವಿನ್ಯಾಸಗಳಿಂದ ರಚನೆಗೊಂಡಿದೆ. ಮಧ್ಯದ ಎರಡು ವಿಭಾಗಗಳ ಪಟ್ಟಿಕೆಗಳು ಹೂವಿನ ಜ್ಯಾಮಿತಿಕ ನಕ್ಷೆಗಳಿಂದ ಕೂಡಿವೆ. ಇವುಗಳ ಮಧ್ಯದ ಮೂರು ವಿಭಾಗಗಳ ಆಯತಾಕಾರದ ಗಾಜಿನ ಪಟ್ಟಿಕೆಗಳಲ್ಲಿ ಅಲಂಕಾರಿಕ ನೈಸರ್ಗಿಕ ನಕ್ಷೆಗಳನ್ನು ರಚಿಸಲಾಗಿದೆ. ಈ ಛಾವಣಿಯು ಸುಸಜ್ಜಿತ ಲೋಹದ ಸರಳುಗಳಿಂದ ನಿರ್ಮಾಣಗೊಂಡಿದ್ದು, ಇದು ಕೂಡಾ ಚಿತ್ರಮಯವಾಗಿದೆ. ಗಾಜಿನ ಚಿತ್ರಗಳಿಗೆ ಬಳಸಲಾದ ತೆಳುವಾದ ವರ್ಣಗಳು ಬೆಳಕಿನ ಪ್ರಖರತೆಯಿಂದ ಆಕರ್ಷಕವಾಗಿ ಕಾಣುತ್ತವೆ. ಈ ಚಿತ್ರ ಸಮೂಹವು ಇಂದಿಗೂ ಸಹ ಸುಸಜ್ಜಿತವಾಗಿದ್ದು, ನೋಡುಗರನ್ನು ಆಕರ್ಷಿಸುತ್ತವೆ. ಇವನ್ನು ಉತ್ತಮ ರೀತಿಯಲ್ಲಿ ಸಂರಕ್ಷಿಸಲಾಗಿದೆ.

ಅರಮನೆಯ ಬೆಳ್ಳಿ ಬಾಗಿಲಿನ ಮೇಲಿನ ಗಾಜಿನ ಛಾವಣಿಯು ಸಹ ವರ್ಣಮಯ ನಕ್ಷೆಗಳಿಂದ ಚಿತ್ರಿತಗೊಂಡಿದೆ. ಇವು ಕೂಡಾ ಉತ್ತಮ ರೀತಿಯಲ್ಲಿ ಸಂರಕ್ಷಿಸಲ್ಪಟ್ಟಿದ್ದು, ನಕ್ಷೆ ಹಾಗೂ ವರ್ಣಗಳು ಉಜ್ವಲವಾಗಿ ಗೋಚರಿಸುತ್ತವೆ. ಅದೇ ರೀತಿ ಅರಮನೆಯ ವಿವಿಧ ಕಿಟಕಿಗಳಲ್ಲಿ ವರ್ಣರಂಜಿತ ಗಾಜುಗಳನ್ನು ಅಳವಡಿಸಲಾಗಿದ್ದು ಅವುಗಳಲ್ಲಿ ಅರಸು ಮನೆತನದ ಲಾಂಛನಗಳನ್ನು ಹಾಗೂ ವಿವಿಧ ನಕ್ಷೆಗಳನ್ನು ಚಿತ್ರಿಸಲಾಗಿದೆ. ಇವುಗಳಲ್ಲಿ ಕೆಲವೊಂದು ಚಿತ್ರಗಳ ವರ್ಣಗಳು ಕಿತ್ತುಹೋಗಿವೆ. ಇನ್ನು ಕೆಲವು ವರ್ಣಗಳು ಮೂಲ ವರ್ಣಗಳ ಉಜ್ವಲತೆಯನ್ನೇ ಉಳಿಸಿಕೊಂಡಿವೆ.

ಮೈಸೂರು ಅರಮನೆಗಳಲ್ಲಿ ಇನ್ನೊಂದು ಮುಖ್ಯವಾದ ಅರಮನೆಯೆಂದರೆ ಜಗನ್ಮೋಹನ ಅರಮನೆ. ಇದು ಮುಖ್ಯವಾಗಿ ಚಿತ್ರಕಲೆಗೆ ಸೀಮಿತವಾದ ಒಂದು ವಿಶಿಷ್ಟ ಕಲಾಶಾಲೆ ಎನ್ನಬಹುದು. ಇಲ್ಲಿ ಸಧ್ಯ ಈ ಅರಮನೆಯು ಒಂದು ಕಲಾ ಸಂಗ್ರಹಾಲಯವಾಗಿ ಮಾರ್ಪಟ್ಟು ಕಲಾಭಿಮಾನಿಗಳನ್ನು ಗಮನ ಸೆಳೆಯುತ್ತಿದೆ. ಈ ಅರಮನೆಯಲ್ಲಿ ಪಾಶ್ಚಿಮಾತ್ಯ ಹಾಗೂ ಪೌರಮಾರ್ತ್ಯ ಕಲಾಕಾರರು ರಚಿಸಿದ ಅನೇಕ ಗಾಜಿನ ಮೇಲಿನ ಚಿತ್ರಗಳು ಸಂಗ್ರಹಿಸಲ್ಪಟ್ಟಿವೆ. ಇಲ್ಲಿ ಬಹುಮುಖ್ಯವಾಗಿ ಭಾವಚಿತ್ರಗಳು, ಐತಿಹಾಸಿಕ ಘಟನೆಯ ಚಿತ್ರಗಳು ಕಂಡು ಬರುತ್ತವೆ. ಈ ಎಲ್ಲ ಚಿತ್ರಗಳು ಸುರಕ್ಷಿತವಾಗಿದ್ದು ನೋಡುರನ್ನು ಕಣ್ಮನ ಸೆಳೆಯುತ್ತವೆ.

ಕರ್ನಾಟಕದಲ್ಲಿ ಕಂಡುಬರುವ ಬೇರೆ ಬೇರೆ ಕಾಲಮಾನದ ರಾಜರುಗಳ ಅರಮನೆಗಳಲ್ಲಿ ಸಧ್ಯಕ್ಕೆ ತೂಗುಹಾಕುವ ಗಾಜಿನ ಚಿತ್ರಗಳು ಕಂಡು ಬರದಿದ್ದರೂ ಸಹ ಕಟ್ಟಡದ ಕಿಟಕಿಗಳಲ್ಲಿ ಅಳವಡಿಸಿದ ಗಾಜಿನ ಮೇಲಿನ ಚಿತ್ರಗಳು ಕಂಡು ಬರುತ್ತವೆ. ಅವುಗಳನ್ನು ಇಲ್ಲಿ ಗಂಭೀರವಾಗಿ ಯೋಚಿಸಲಾಗಿಲ್ಲ. ಬಹುತೇಕ ಈ ಕಟ್ಟಡಗಳು ನೋಡಲು ಸಿಗುವುದಿಲ್ಲ. ಸಿಕ್ಕರೂ ಸಹ ಹೊಸವಿನ್ಯಾಸವನ್ನು ಪಡೆದುಕೊಂಡಿವೆ. ಚಾಮುಂಡಿಬೆಟ್ಟದ ಮೇಲಿರುವ ರಾಜೇಂದ್ರ ವಿಲಾಸ ಅರಮನೆಯನ್ನು ೧೮೨೨ ರ ಸುಮಾರಿಗೆ ನಿರ್ಮಿಸಲಾಗಿದ್ದು ಇದು ಇಂಗ್ಲೀಷ ಮತ್ತು ಹಿಂದೂ ಶೈಲಿಗಳ ಮಿಶ್ರಣಹೊಂದಿವೆ. ಇದರ ಕಿಟಕಿಗಳು ಸಹ ಬಣ್ಣದ ಗಾಜುಗಳಿಂದ ಹಾಗೂ ವರ್ಣಮಯ ಚಿತ್ರಗಳ ಹೊಸ ವಿನ್ಯಾಸವನ್ನು ಹೊಂದಿದೆ. ಚನ್ನಪಟ್ಟಣದ ತಿಮ್ಮಪ್ಪ ರಾಜಅರಸ ಬಂಗಲೆಯು

ಮೂರು ಅಂತಸ್ತುಗಳಿಂದ ಕೂಡಿದ್ದು, ಆಯತಾಕಾರದ ಜಗುಲಿ, ವಿಶಾಲವಾದ ಹಜಾರ, ಕೊಠಡಿಗಳನ್ನು ಹೊಂದಿದೆ. ಇದಕ್ಕೆ ತಕ್ಕ ವೈವಿಧ್ಯಮಯ ಕಿಟಕಿಗಳು ಕಂಡು ಬರುತ್ತಿದ್ದು ಅವುಗಳಿಗೆ ವರ್ಣಮಯ ಗಾಜಿನ ಚಿತ್ರಗಳನ್ನು ಅಳವಡಿಸಲಾಗಿದೆ. ಮಡಿಕೇರಿಯ ಅರಮನೆ, ಬೆಂಗಳೂರು ಅರಮನೆ ಹೀಗೆ ಇನ್ನು ಅನೇಕ ಅರಮನೆಗಳ ವಾಸ್ತುಗಳಲ್ಲಿ ಗಾಜಿನ ಚಿತ್ರಗಳು ಕಂಡು ಬರುತ್ತಿವೆ.

**ಕ. ವಸ್ತು ಸಂಗ್ರಹಾಲಯಗಳಲ್ಲಿ ಪೋಷಿತಗೊಂಡ ಗಾಜಿನ ಚಿತ್ರಗಳು**

ಕರ್ನಾಟಕದಲ್ಲಿ ವಸ್ತು ಸಂಗ್ರಹಾಲಯಗಳು ಸಾಕಷ್ಟು ಸಂಖ್ಯೆಗಳಲ್ಲಿ ಇತ್ತೀಚಿನ ದಿನಗಳಲ್ಲಿ ಕಂಡು ಬರುತ್ತಿದ್ದು, ಕೆಲವೊಂದು ಸರಕಾರಿ ವಸ್ತು ಸಂಗ್ರಹಾಲಯಗಳು ಕೆಲವೊಂದು ಖಾಸಗಿಯ ವಸ್ತು ಸಂಗ್ರಹಾಲಯಗಳೆಂದು ವಿವರಿಸಬಹುದಾಗಿದೆ. ವಸ್ತು ಸಂಗ್ರಹಾಲಯಗಳು ನಿರ್ದಿಷ್ಟ ಪ್ರದೇಶದ ಅಥವಾ ಸಮುದಾಯದ ಕಲೆ ಮತ್ತು ಸಂಸ್ಕೃತಿಗಳನ್ನು ಉಳಿಸಿಕೊಂಡು ಬರುವುದರಲ್ಲಿ ಮಾತ್ರವಲ್ಲದೇ ಮಾನವನ ಸೃಜನಶೀಲತೆ ಮತ್ತು ಪ್ರಕೃತಿಯ ಮೇಲನ ನಿಯಂತ್ರಣದ ಬಗ್ಗೆ ಮೂಲಭೂತ ಸಾಕ್ಷ್ಯಗಳನ್ನು ಸಾದರಪಡಿಸುವುದರ ಮೂಲಕ ಮಾನವತೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಉತ್ಥಾನಕ್ಕೆ ನೆರವಾಗುವುದರಲ್ಲೂ ಜೀವಂತ ಪಾತ್ರವಹಿಸುವುದು ಇಂದು ವಸ್ತುಸಂಗ್ರಹಾಲಯಗಳ ಉದ್ದೇಶವೆನ್ನಬಹುದು. ಅದರ ಜೊತೆಗೆ ವಸ್ತುಗಳ ಸಂಗ್ರಹ ಹಾಗೂ ಸಂರಕ್ಷಣೆಯ ಅಗತ್ಯತೆಯನ್ನು ಸಾರ್ವಜನಿಕರಿಗೆ ತಿಳಿಹೇಳುವುದು ಕೂಡಾ ಮುಖ್ಯವೆನಿಸುತ್ತದೆ. ವಸ್ತುಗಳ ಕಾಲಮಾನ, ಅವುಗಳ ಹಿನ್ನೆಲೆ, ರೂಪ ವಿನ್ಯಾಸ, ಪರಿಕರ ಹಾಗೂ ಅವುಗಳ ಮಹತ್ವವನ್ನು ತಿಳಿಯ ಪಡಿಸುವುದು ಮಹತ್ವವೆನಿಸುತ್ತದೆ. ಆ ಕೆಲಸವನ್ನು ಈ ವಸ್ತು ಸಂಗ್ರಹಾಲಯಗಳು ಇಂದು ಮಾಡುತ್ತಲಿವೆ.

ಕರ್ನಾಟಕದಲ್ಲಿ ನೂರಾರು ಸಂಖ್ಯೆಗಳಲ್ಲಿ ವಸ್ತುಸಂಗ್ರಹಾಲಯಗಳಿದ್ದು ಇವು ಆಯಾ ಪ್ರದೇಶದ ವಾಸ್ತು, ಶಿಲ್ಪ, ಚಿತ್ರ, ವಿವಿಧ ವಸ್ತುಗಳು, ಶಾಸ್ತ್ರಗ್ರಂಥಗಳು, ಜನಪದ ಪರಿಕರಗಳು, ಆಭರಣಗಳು ಹೀಗೆ ಹಲವಾರು ವಸ್ತುಗಳನ್ನು ಸಂಗ್ರಹಿಸಲಾಗಿದ್ದು ಇವುಗಳ ಕಲೆ ಮತ್ತು ಸಂಸ್ಕೃತಿಯನ್ನು ಸಾರ್ವಜನಿಕರಿಗೆ ತೋರಿಸಲು ಪ್ರಯತ್ನಿಸುತ್ತಲಿವೆ. ಮಡಿಕೇರಿಯ ಸರಕಾರಿ ವಸ್ತು ಸಂಗ್ರಹಾಲಯದಲ್ಲಿ ಎರಡು ತೂಗುಹಾಕುವ ಗಾಜಿನ ಮೇಲಿನ ಚಿತ್ರಗಳು ಸಂಗ್ರಹಗೊಂಡಿವೆ. ಈ ಕಟ್ಟಡವು ಹಳೆಯ ಚರ್ಚು ಆಗಿದ್ದರಿಂದ ಇದರ ಉತ್ತರದ ಗೋಡೆಯ ಕಿಟಕಿಗಳಲ್ಲಿ ೧೯ನೆ ಶತಮಾನಕ್ಕೆ ಸಂಬಂಧಿಸಿದ ಕ್ರೈಸ್ತ ಕಥಾನಕ ದೃಶ್ಯಗಳನ್ನೊಳಗೊಂಡ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಕಂಡುಬರುತ್ತವೆ. ಈ ಚಿತ್ರಗಳು ಇಂದು ಸಹ ಅತ್ಯಂತ ವರ್ಣಮಯವಾಗಿವೆ. ಇಲ್ಲಿ ತಂಜಾವೂರು ಶೈಲಿಯ ಎರಡು ಚಿತ್ರಗಳಿದ್ದು ಎರಡೂ ಚಿತ್ರಗಳು ಸುರಕ್ಷಿತವಾಗಿವೆ.

ಕೆಳದಿಯ ಸರಕಾರಿ ವಸ್ತು ಸಂಗ್ರಹಾಲಯದಲ್ಲಿ ಕೆಲವು ತೂಗುಹಾಕುವ ಗಾಜಿನಚಿತ್ರಗಳು ಸಂಗ್ರಹಗೊಂಡಿದ್ದು, ಈ ಚಿತ್ರಗಳ ಚೌಕಟ್ಟುಗಳು ಹಾಗೂ ಸಂರಕ್ಷಣಾ ಹಲಗೆಗಳು ದುಸ್ಥಿತಿಯಲ್ಲಿದ್ದರೂ ಸಧ್ಯಕ್ಕೆ ಮೂಲ ಸ್ಥಿತಿಯಲ್ಲಿ ಪೋಷಿಸಲ್ಪಟ್ಟಿವೆ. ಚಿತ್ರಗಳ ವರ್ಣಗಳು, ರೇಖೆಗಳು ತಮ್ಮ ಉಜ್ವಲತೆಯನ್ನು ಕಾಪಾಡಿಕೊಂಡಿವೆ. ಬೆಂಗಳೂರಿನ ವಸಂತ ನಗರದಲ್ಲಿ ತಲೆ ಎತ್ತಿರುವ

ಮಾಡರ್ನ ಆರ್ಟಗ್ಯಾಲರಿಯಲ್ಲಿ ನಾಲ್ಕು ಚಿತ್ರಗಳು ಸಂಗ್ರಹಗೊಂಡಿದ್ದು ಈ ಚಿತ್ರಗಳು ಉತ್ತರಭಾರತದ ಶೈಲಿಯಲ್ಲಿ ರಚನೆಗೊಂಡಿವೆ. ಇವು ಶ್ರೀಮಂತ ವ್ಯಕ್ತಿಗಳ ಭಾವಚಿತ್ರಗಳನ್ನು ಪ್ರತಿನಿಧಿಸುತ್ತವೆ. ಈ ಚಿತ್ರಗಳನ್ನು ಅತ್ಯಂತ ಸುರಕ್ಷಿತವಾಗಿ ಸಂರಕ್ಷಿಸಿ ಸಾರ್ವಜನಿಕರಿಗೆ ನೋಡಲು ಲಭ್ಯಇವೆ. ಇವುಗಳ ಚೌಕಟ್ಟು ಹಾಗೂ ಹಿಂಬದಿಯ ಹಲಗೆಗಳು ಜಖಂಗೊಂಡಿದ್ದರೂ ಸಹ ಅವುಗಳಿಗೆ ಯಾವುದೇ ರೀತಿಯಲ್ಲಿ ದಕ್ಕೆಯಾಗದಂತೆ ಗೋಡೆಗೆ ನೇತುಹಾಕಲಾಗಿದೆ.

ದಕ್ಷಿಣಕನ್ನಡ ಜಿಲ್ಲೆಯ ಧರ್ಮಸ್ಥಳದ 'ಮಂಜುಷಾ' ವಸ್ತು ಸಂಗ್ರಹಾಲಯದಲ್ಲಿ ಸುಮಾರು ಇಪ್ಪತ್ತಕ್ಕೂ ಹೆಚ್ಚು ಗಾಜಿನಚಿತ್ರಗಳು ಸಂಗ್ರಹಗೊಂಡಿವೆ. ಈ ಅಮೂಲ್ಯ ಚಿತ್ರಗಳನ್ನು 'ಮಂಜುಷಾ'ದ ಕ್ಯೂರೆಟರ್ ಆಗಿದ್ದ ಖ್ಯಾತ ಚಿತ್ರಕಲಾವಿದರಾದ ಶ್ರೀ ಪಿ. ಆರ್. ತಿಪ್ಪೇಸ್ವಾಮಿಯವರು ದಕ್ಷಿಣ ಕರ್ನಾಟಕದ ವಿವಿಧ ಪ್ರದೇಶಗಳನ್ನು ಸಂದರ್ಶಿಸಿ ಸಂಗ್ರಹ ಮಾಡಿದ್ದಾರೆ. ಹಲವಾರು ಮನೆತನಗಳಲ್ಲಿ ಅವರ ಪೂರ್ವಜರೂ ಖರೀದಿಸಿ ತಂದಿದ್ದ ಈ ಗಾಜಿನ ಚಿತ್ರಗಳನ್ನು ಅಲಕ್ಷಿಸಿರುವುದರಿಂದ ಸಾವಿರಾರು ಚಿತ್ರಗಳು ಹಾಳಾಗಿಹೋಗಿವೆ. ಅಳಿದುಳಿದ ಚಿತ್ರಗಳನ್ನು ಗಾಜಿನ ಚಿತ್ರಗಳ ಪೋಷಕರನ್ನು ಮನವಲಿಸಿ ಅವುಗಳನ್ನು ಮಂಜುಷಾದಂತಹ ವಸ್ತು ಸಂಗ್ರಹಾಲಯದಲ್ಲಿ ಸಾರ್ವಜನಿಕರಿಗೆ ನೋಡಲು ಸಿಗುವಂತೆ ಶ್ರಮಿಸಿದ್ದಾರೆ. ಈ ಚಿತ್ರಗಳ ಮಹತ್ವವನ್ನು ಕಲಾವಿದರಿಗೆ ಹಾಗೂ ಪೋಷಕರಿಗೆ ಮನವರಿಕೆ ಮಾಡಿಕೊಟ್ಟಿದ್ದಾರೆ. ಇಲ್ಲಿ ಸಂಗ್ರಹಗೊಂಡಿರುವ ೨೧ ಚಿತ್ರಗಳು ವಿವಿಧ ಅಳತೆಗಳಲ್ಲಿ ರಚನೆಗೊಂಡಿದ್ದು, ಬಾಲಕೃಷ್ಣನಿಗೆ ಸಂಬಂಧಿಸಿದ, ಶ್ರೀರಾಮಚಂದ್ರನ ಪಟ್ಟಾಭಿಷೆಕಕ್ಕೆ ಸಂಬಂಧಿಸಿದ ಚಿತ್ರಗಳು, ಅದರಂತೆ ಗಜಲಕ್ಷ್ಮೀ, ಶಿವನ ತಾಂಡವ ನೃತ್ಯ, ವೀರಭದ್ರ ಹೀಗೆ ಹಲವಾರು ಪೌರಾಣಿಕ ಕಥೆಗಳನ್ನು ಒಳಗೊಂಡ ಚಿತ್ರಗಳಾಗಿವೆ. ಈ ಎಲ್ಲ ಚಿತ್ರಗಳ ಮೂಲ ಚೌಕಟ್ಟುಗಳನ್ನು ತೆಗೆದು ಗಟ್ಟಿಮುಟ್ಟಾದ ಹೊಸ ಚೌಕಟ್ಟುಗಳನ್ನು ಹಾಕಿ, ಹಿಂಬದಿಯ ಸಂರಕ್ಷಣೆಯ ಹಲಗೆಗಳನ್ನು ಹೊದಿಸಿ ಪ್ರದರ್ಶಿಸಲಾಗುತ್ತಿದೆ.

ಮೈಸೂರು ವಿಶ್ವವಿದ್ಯಾಲಯದ ಜನಪದ ವಸ್ತು ಸಂಗ್ರಹಾಲಯದಲ್ಲಿ ಸುಮಾರು ೧೨ಕ್ಕು ಹೆಚ್ಚು ತೂಗುಹಾಕುವ ಗಾಜಿನ ಚಿತ್ರಗಳು ಸಂಗ್ರಹಗೊಂಡಿವೆ. ಈ ಎಲ್ಲ ಚಿತ್ರಗಳ ಸ್ಥಿತಿ ಚಿಂತಾಜನಕವಾಗಿವೆ. ಚೌಕಟ್ಟುಗಳು ಕಿತ್ತುಹೋಗಿವೆ. ಕೆಲವೊಂದು ಚೌಕಟ್ಟುಗಳು ಮುರಿದಿವೆ. ಕೆಲವು ಕಿತ್ತು ಬರುತ್ತಿವೆ. ಇನ್ನು ಕೆಲವು ಸಂಪೂರ್ಣ ನಾಶಹೊಂದಿವೆ. ಈ ಚಿತ್ರಗಳ ಹಿಂಬದಿಯ ಹಲಗೆಗಳು ಕೆಲವೊಂದು ಕಿತ್ತುಬರುವ ಸ್ಥಿತಿಯಲ್ಲಿವೆ. ಕೆಲವೊಂದು ಚಿತ್ರಗಳಿಗೆ ಹಲಗೆಗಳೇ ಇಲ್ಲ. ಆದ್ದರಿಂದ ಈ ಅಪರೂಪದ ಚಿತ್ರಗಳಿಗೆ ಸುಸಜ್ಜಿತ ಚೌಕಟ್ಟುಗಳನ್ನು ಹಾಕಿ, ಹಿಂಬದಿಯ ಹಲಗೆಗಳನ್ನು ಗಟ್ಟಿಮುಟ್ಟಾಗಿ ಹೊದಿಸಿ ಸಾರ್ವಜನಿಕರಿಗೆ ನೋಡಲು ಅವಕಾಶ ಮಾಡಿಕೊಡಬೇಕು. ಇನ್ನೊಂದು ಗೊಂಬೆ ಮಂಟಪವು ಈ ವಸ್ತು ಸಂಗ್ರಹಾಲಯದಲ್ಲಿ ಸಂಗ್ರಹಗೊಂಡಿದ್ದು, ಇದು ಅತ್ಯಂತ ಕುಸುರಿ ಕೆಲಸದಿಂದ ಕೂಡಿದೆ. ಸೂಕ್ಷ್ಮ ರೀತಿಯ ಕೆತ್ತನೆ, ಹರಳುಗಳ ಬಳಕೆ ಗಾಜಿನ ಚಿತ್ರಗಳ ಅಳವಡಿಕೆಯು ಉತ್ತಮವಾಗಿದೆ. ಈ ಮಂಟಪದಲ್ಲಿ ೧೩ ಚಿತ್ರಗಳನ್ನು ಅಳವಡಿಸಿದ್ದು, ಕೆಲವು ಚಿತ್ರಗಳು ವಿರೂಪಗೊಂಡಿವೆ. ಈ ವಿಶಿಷ್ಟ ಮಂಟಪವು ನಮಗೆ ನೋಡಲು ಇಂದು ಲಭ್ಯಇವೆ. ಇಲ್ಲಿನ ಕಲಾಕೃತಿಗಳನ್ನು ಕಲಾವಿದ ಪಿ.ಆರ್.ತಿಪ್ಪೇಸ್ವಾಮಿಯವರು ಶ್ರಮವಹಿಸಿ ಸಂಗ್ರಹಿಸಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದ ಜನಪದ ಅಧ್ಯಯನ ವಿಭಾಗದ ವಸ್ತುಸಂಗ್ರಹಾಲಯದಲ್ಲಿ ಎರಡು ಚಿತ್ರಗಳು ಸಂಗ್ರಹಗೊಂಡಿವೆ. ಈ ಎರಡೂ ಚಿತ್ರಗಳು ಶಿಥಿಲಾವಸ್ಥೆಯಲ್ಲಿದ್ದು ಸಂರಕ್ಷಣೆಯ ಅಗತ್ಯತೆ ಇದೆ. ಈ ಚಿತ್ರಗಳನ್ನು ಬಸವನ ಬಾಗೇವಾಡಿ ತಾಲೂಕಿನ ದೇವರ ಹಿಪ್ಪರಗಿಯ ಚನ್ನಯ್ಯನವರು. ಸಿ. ಪರದೇಶಿಮಠ ಇವರು ವಸ್ತುಸಂಗ್ರಹಾಲಯಕ್ಕೆ ೧೯೮೫ ರಲ್ಲಿ ನೀಡಿದ್ದಾರೆಂದು ವಿಭಾಗದ ಮುಖ್ಯಸ್ಥರು ಹೇಳುತ್ತಾರೆ. ಈ ಎರಡೂ ಚಿತ್ರಗಳು ೪೦ x ೪೫ ಸೆಂ.ಮೀ ಅಳತೆಯನ್ನು ಹೊಂದಿವೆ. ಒಂದು ಸರಸ್ವತಿ ಇನ್ನೊಂದು ಕೃಷ್ಣ-ರುಕ್ಮಿಣಿಯ ಚಿತ್ರವಾಗಿದೆ.

ಉಡುಪಿಯ ಮಣಿಪಾಲದಲ್ಲಿರುವ ಶ್ರೀ ವಿಜಯನಾಥ ಶೆಣೈರವರು ಸ್ಥಾಪಿಸಿರುವ 'ಹೆರಿಟೇಜ್ ವಿಲ್ಲೇಜ್' ಎಂಬ ವಸ್ತು ಸಂಗ್ರಹಾಲಯದಲ್ಲಿ ಸುಮಾರು ಮೂವತ್ತಕ್ಕೂ ಹೆಚ್ಚು ವಿವಿಧ ಬಗೆಯ ಗಾಜಿನ ಚಿತ್ರಗಳು ಸಂಗ್ರಹಗೊಂಡಿವೆ. ಇವರು ರಾಜ್ಯದ ಹಾಗೂ ಹೊರ ರಾಜ್ಯಗಳಿಂದ ವಿವಿಧ ಶೈಲಿಗಳ ಗಾಜಿನ ಚಿತ್ರಗಳನ್ನು ಸಂಗ್ರಹಿಸಿದ್ದು ವಿಶೇಷವಾಗಿದೆ. ಶೆಣೈಯರವರು ಮಣಿಪಾಲದ ಸುಮಾರು ಏಳೆಂಟು ಎಕರೆಯಲ್ಲಿ ಸುಸಜ್ಜಿತವಾದ ಮ್ಯೂಜಿಯಂನ್ನು ನಿರ್ಮಿಸಿ ಕೋಟಿ ರೂಪಾಯಿ ಬೆಲೆಬಾಳುವ ವಸ್ತುಗಳನ್ನು ಸಂಗ್ರಹಣ ಮಾಡಿದ್ದಾರೆ. ಇವರ ವಸ್ತು ಸಂಗ್ರಹಾಲಯದಲ್ಲಿ ಲಭ್ಯವಿರುವ ಎಲ್ಲ ಗಾಜಿನಚಿತ್ರಗಳು ಉತ್ತಮವಾಗಿ ಸಂರಕ್ಷಿಸಲ್ಪಟ್ಟಿವೆ. ನಾಯಕ ಅವಧಿಯ ಸಂಗೀತಗಾರ ಹಾಗೂ ವಿದ್ವಾಂಸರ ಚಿತ್ರಗಳು, ಶ್ರೀರಾಮನ ಚಿತ್ರಗಳು, ಹನುಮಂತ, ರಾವಣ, ಬಲರಾಮ ಚಿತ್ರಗಳು ಕಂಡುಬರುತ್ತವೆ. ಇವು ೩೦ x ೩೦ ಸೆಂ.ಮೀ ಅಳತೆಯಲ್ಲಿ ರಚನೆಗೊಂಡಿವೆ. ಇನ್ನು ಕೆಲವು ಚಿತ್ರಗಳಾದ ಬಾಲಕೃಷ್ಣ, ಬೆಣ್ಣೆ ಕೃಷ್ಣ, ವೇಣುಗೋಪಾಲ, ಸರಸ್ವತಿ, ಕೃಷ್ಣ-ರುಕ್ಮಿಣಿ ಸತ್ಯಭಾಮೆಯರ ಚಿತ್ರಗಳು ಸಂಗ್ರಹಗೊಂಡಿದ್ದು ಕೆಲವೊಂದು ಚಿತ್ರಗಳ ಚೌಕಟ್ಟುಗಳು ಕಿತ್ತುಬರುವ ಸ್ಥಿತಿಯಲ್ಲಿವೆ. ಜೊತೆಗೆ ನಾಲ್ಕು ನಿಸರ್ಗದೃಶ್ಯಗಳು ಇಲ್ಲಿ ಕಂಡುಬರುತ್ತಿದ್ದು ಆಧುನಿಕ ರಚನಾ ವಿಧಾನವನ್ನು ಹೊಂದಿವೆ.

ಬಾಗಲಕೋಟೆಯ ನವನಗರದ ಜನಪದ ವಸ್ತು ಸಂಗ್ರಹಾಲಯದಲ್ಲಿ ಎರಡು ಗಾಜಿನ ಚಿತ್ರಗಳನ್ನು ಸಂಗ್ರಹಿಸಲಾಗಿವೆ. ಎರಡೂ ಚಿತ್ರಗಳು ಸುಸಜ್ಜಿತವಾಗಿದ್ದು, ಉತ್ತಮವಾಗಿ ಸಂರಕ್ಷಿಸಲ್ಪಟ್ಟಿವೆ. ಚಿತ್ರಗಳ ಚೌಕಟ್ಟುಗಳು ಹಾಗೂ ಹಿಂಬದಿಯ ಹಲಗೆಗಳು ದುಸ್ಥಿತಿಯಲ್ಲಿದ್ದರೂ ಚಿತ್ರಗಳು ಉತ್ತಮ ರೀತಿಯಲ್ಲಿ ಪೋಷಿಸಲ್ಪಟ್ಟಿವೆ. ಚಿತ್ರದುರ್ಗದ ಬೃಹನ್ಮಠದ ವಸ್ತು ಸಂಗ್ರಹಾಲಯದಲ್ಲಿ ಐದು ಚಿತ್ರಗಳು ಸಂಗ್ರಹಗೊಂಡಿವೆ. ಈ ಐದು ಚಿತ್ರಗಳು ಸಾಂಪ್ರದಾಯಿಕ ಪೌರಾಣಿಕ ಕಥೆಗಳನ್ನೊಳಗೊಂಡಿವೆ. ಈ ಚಿತ್ರಗಳನ್ನು ಚಿತ್ರದುರ್ಗದ ಸುತ್ತಲಿನ ಪ್ರದೇಶಗಳಿಂದ ತಂದು ಸಂಗ್ರಹಿಸಲಾಗಿದೆ. ಚಿತ್ರಗಳ ಚೌಕಟ್ಟು ಹಾಗೂ ಹಿಂಬದಿಯ ಹಲಗೆಗಳು ಸುಸಜ್ಜಿತವಾಗಿವೆ.

ಹೀಗೆ ಕರ್ನಾಟಕದಲ್ಲಿ ಕಂಡು ಬರುವ ಅನೇಕ ವಸ್ತು ಸಂಗ್ರಹಾಲಯಗಳಲ್ಲಿ ಗಾಜಿನ ಚಿತ್ರಗಳು ಸಂಗ್ರಹಗೊಂಡಿದ್ದನ್ನು ಕಾಣುತ್ತೇವೆ. ಎಲ್ಲ ವಸ್ತು ಸಂಗ್ರಹಾಲಯಗಳಲ್ಲಿ ಕಂಡು ಬರದೇ ಇದ್ದರೂ ಕೆಲವೊಂದು ವಸ್ತು ಸಂಗ್ರಹಾಲಯಗಳಲ್ಲಿ ಈ ಚಿತ್ರಗಳು ಸಂಗ್ರಹಗೊಂಡಿದ್ದನ್ನು ಮಾತ್ರ ಇಲ್ಲಿ ಗಮನಿಸಲಾಗಿದೆ.

ಡ. ದೇವಸ್ಥಾನಗಳಲ್ಲಿ ಪೋಷಿತಗೊಂಡ ಗಾಜಿನ ಚಿತ್ರಗಳು

ಭಾರತೀಯರಾದ ನಾವು ಪ್ರಾಚೀನ ಕಾಲದಿಂದಲೂ ದೇವರು, ಧರ್ಮ, ಅಂಥಃಕರಣಗಳಂತಹ ಮಾನವೀಯ ಮೌಲ್ಯಗಳನ್ನು ಅನುಸರಿಸಿಕೊಂಡು ಬದುಕನ್ನು ಸವೆಯುತ್ತಿರುವರು. ಇಂಥ ಮಾನವೀಯ ಮೌಲ್ಯಗಳನ್ನು ಸಂಪಾದಿಸಲು ಅವರವರ ನಂಬಿಕೆಗೆ ತಕ್ಕಂತಹ ದೇವರಗಳನ್ನು ಆರಾಧನೆ ಮಾಡಲು ಪ್ರಯತ್ನಿಸಿರುವುದು ಹಿಂದಿನಿಂದಲೂ ನೋಡುತ್ತಲಿದ್ದೇವೆ. ಇದಕ್ಕಾಗಿಯೇ ದೇಗುಲಗಳನ್ನು ನಿರ್ಮಿಸಿ ತಮಗೆ ಇಷ್ಟದ ದೇವತೆಗಳನ್ನು ಪ್ರತಿಷ್ಠಾಪಿಸಿ ಆರಾಧನೆ ಮಾಡುವುದನ್ನು ಕಾಣುತ್ತೇವೆ. ಇಂಥ ದೇಗುಲಗಳಲ್ಲಿ ಆ ದೇವರಿಗೆ ಸಂಬಂಧಿಸಿದ ಅಥವಾ ಆ ಧರ್ಮಕ್ಕೆ ಸಂಬಂಧಿಸಿದ ಚಿತ್ರಗಳನ್ನು, ಶಿಲ್ಪಗಳನ್ನು ನಿರ್ಮಿಸುವ ಕಾರ್ಯ ನಡೆಯಿತು. ಇದಕ್ಕೆ ಗಾಜಿನ ಚಿತ್ರಗಳೂ ಸಹ ಹೊರತಾಗಿಲ್ಲವೆನ್ನಬಹುದು. ಕರ್ನಾಟಕದಲ್ಲಿ ವಿವಿಧ ಮತಪಂಗಡಗಳಿಗೆ ಸಂಬಂಧಿಸಿದ ದೇವಸ್ಥಾನಗಳು ಕಂಡುಬರುತ್ತಿದ್ದು, ಕೆಲವೊಂದು ದೇಗುಲಗಳಲ್ಲಿ ದೇವತೆಗಳ ಹಾಗೂ ದೇವರಿಗೆ ಸಂಬಂಧಿಸಿದ ಗಾಜಿನ ಚಿತ್ರಗಳನ್ನು ಭಕ್ತರು ದೇವಸ್ಥಾನಗಳಲ್ಲಿ ಅಲಂಕರಿಸಿದ್ದಾರೆ. ಅವುಗಳ ಪೋಷಣೆ ಹಾಗೂ ಸ್ಥಿತಿಗತಿಗಳನ್ನು ಇಲ್ಲಿ ವಿವೇಚಿಸಲು ಪ್ರಯತ್ನಿಸಿದೆ.

ಬಾಗಲಕೋಟೆ ಜಿಲ್ಲೆಯ ಅಮೀನಗಡ ಗ್ರಾಮದ ಶ್ರೀ ಬಸವೇಶ್ವರ ದೇವಸ್ಥಾನದಲ್ಲಿ ನಾಲ್ಕು ತೂಗುಹಾಕುವ ಗಾಜಿನ ಚಿತ್ರಗಳಿವೆ. ಇವು ಶ್ರೀಕೃಷ್ಣ–ಸತ್ಯಭಾಮೆ–ರುಕ್ಮೀಣಿ, ವಿಷ್ಣು–ಶ್ರೀದೇವಿ–ಭೂದೇವಿ, ರಾಧೆಯೊಂದಿಗೆ ಕೃಷ್ಣ ಎಂಬ ವಿಷಯಗಳನ್ನೊಳಗೊಂಡಿವೆ. ಈ ನಾಲ್ಕು ಚಿತ್ರಗಳು ಒಂದೇ ಅಳತೆಯಲ್ಲಿ ರಚನೆಗೊಂಡಿದ್ದು ಈ ಚಿತ್ರಗಳನ್ನು ಸ್ಥಳೀಯ ವ್ಯಾಪಾರಸ್ಥರು ದೇವಸ್ಥಾನಕ್ಕೆ ಕಾಣಿಕೆಯಾಗಿ ನೀಡಿದ್ದಾರೆಂದು ದೇವಸ್ಥಾನದ ಅರ್ಚಕರು ಹೇಳುತ್ತಾರೆ. ನಮ್ಮ ಜನರು ಧಾರ್ಮಿಕ ಶ್ರದ್ಧೆಯುಳ್ಳವರಾಗಿರುವುದರಿಂದ ದೇವಸ್ಥಾನಗಳಿಗೆ ಏನಾದರೂ ಕಾಣಿಕೆ ನೀಡಿ ತಮ್ಮ ಭಕ್ತಿಯನ್ನು ಅಭಿವ್ಯಕ್ತಿಸುವುದನ್ನು ಹಿಂದಿನಿಂದಲೂ ನೋಡುತ್ತೇವೆ. ಹಾಗಾಗಿಯೇ ನಮ್ಮ ಧರ್ಮಶ್ರದ್ಧೆಗಳು ಉಳಿದುಕೊಂಡಿವೆ ಎನ್ನಬಹುದು. ಈ ಚಿತ್ರಗಳ ಕುರಿತು ಸ್ಥಳೀಕರು ಅಪಾರ ಅಭಿಮಾನವನ್ನು ವ್ಯಕ್ತಪಡಿಸುತ್ತಾರೆ. ಈ ಚಿತ್ರಗಳನ್ನು ದೂರದ ಮುಂಬೈದಿಂದ ತಂದಿದ್ದು, ಇವು ಅತ್ಯಂತ ಬೆಲೆಬಾಳುವಂತವು, ಇಂಥ ಚಿತ್ರಗಳು ಎಲ್ಲಿಯೂ ಸಿಗುವುದಿಲ್ಲ ಎಂಬ ನಂಬಿಕೆಯನ್ನು ವ್ಯಕ್ತಪಡಿಸುತ್ತಾರೆ. ನಾಲ್ಕೂ ಚಿತ್ರಗಳ ಚೌಕಟ್ಟುಗಳು ಜಖಂಗೊಂಡಿದ್ದು, ಮೇಲಿನ ಬಣ್ಣಗಳು ಕಿತ್ತು ಹೋಗಿವೆ. ಚಿತ್ರಗಳಲ್ಲಿನ ಬಣ್ಣಗಳು ಅಲ್ಲಲ್ಲಿ ಉದುರಿಹೋಗಿವೆ. ಇವುಗಳನ್ನು ಸರಿಯಾದ ರೀತಿಯಲ್ಲಿ ಚೌಕಟ್ಟು ಹಾಕಿ, ಉತ್ತಮ ರೀತಿಯಲ್ಲಿ ಸಂರಕ್ಷಿಸಲು ಸ್ಥಳೀಕರು ಪ್ರಯತ್ನಿಸಬೇಕು.

ಬಾದಾಮಿ ತಾಲೂಕಿನ ಕೋಟೆಕಲ್ಲ ಶ್ರೀ ಹುಚ್ಚೇಶ್ವರ ಮಠದಲ್ಲಿ ೧೦ನೇ ಶ್ರೀ ಹೊಳೆಹುಚ್ಚೇಂದ್ರ ಸ್ವಾಮಿಗಳ ಗಾಜಿನ ಮೇಲಿನ ಚುಕ್ಕೆಗಳಿಂದ ಕೊರೆದ ಭಾವಚಿತ್ರ ವಿದೆ. ಇದನ್ನು ಬಿಜಾಪೂರದ ಕಲಾವಿದರೊಬ್ಬರು ರಚನೆ ಮಾಡಿದ್ದು, ಬಾಗಲಕೋಟೆಯ ಶ್ರೀ ಸಿದ್ರಾಮಪ್ಪ ಬಸಪ್ಪ ವೈಜಾಪೂರ ಇವರು ಕಾಣಿಕೆಯಾಗಿ ನೀಡಿರುವರೆಂದು ಮಠದ ಭಕ್ತರಲ್ಲೊಬ್ಬರಾದ ಶ್ರೀ ಚಂದ್ರಯ್ಯ ಕಂಬಾಳಿಮಠರು ಹೇಳುತ್ತಾರೆ. ಈ ಭಾವಚಿತ್ರದಲ್ಲಿರುವ ಮಹಾಸ್ವಾಮಿಗಳು ತಮ್ಮ ೧೮ನೇ ವಯಸ್ಸಿನ

ತನಕ ಅನಕ್ಷರಸ್ತರಿದ್ದು, ೧೮ನೇ ವಯೋಮಾನದಲ್ಲಿ ಕಾಶಿಗೆ ಹೋಗಿ ಶಿಕ್ಷಣ ಪಡೆದುಬಂದು ಪುರಾಣ, ಪುಣ್ಯಕಥೆಗಳನ್ನು ಹೇಳಲು ಪ್ರಾರಂಭಿಸಿದರು. ಇವರು ಕಾಶಿಯಲ್ಲಿ ಕಂತಿಭಿಕ್ಷೆಯನ್ನು ಬೇಡಿ ಅತ್ಯಂತ ಕಷ್ಟದಿಂದ ಶಿಕ್ಷಣವನ್ನು ಸಂಪಾದಿಸಿದವರು ಎಂದು ಈ ಭಕ್ತನು ಅಭಿಪ್ರಾಯ ಪಡುತ್ತಾನೆ. ಹೀಗಾಗಿ ಈ ಮಹಾಪೂಜ್ಯರಿಗೆ ಅಪಾರ ಭಕ್ತರ ಬಳಗವಿದೆ. ಈ ಮಠಕ್ಕೆ ವರ್ಷದಲ್ಲಿ ಸಾವೀರಾರು ಭಕ್ತರು ಭೆಟ್ಟಿಕೊಡುತ್ತಾರೆ. ಜೊತೆಗೆ ಏನಾದರೊಂದು ಕಾಣಿಕೆಯನ್ನು ಸಲ್ಲಿಸುತ್ತಾರೆ ಎಂದು ಹೇಳುತ್ತಾರೆ. ಈ ಚಿತ್ರವು ವಿಶಿಷ್ಠ ರಚನಾವಿಧಾನವನ್ನು ಹೊಂದಿದ್ದು ಚಿತ್ರವು ೨೫ x ೪೦ ಸೆಂ.ಮೀ ಅಳತೆಯನ್ನು ಹೊಂದಿದೆ. ಚಿತ್ರದ ಚೌಕಟ್ಟು ಶಿಥಿಲಗೊಂಡಿದ್ದು ಹಿಂಬದಿಯು ಕಿತ್ತು ಹೋಗಿದೆ. ಇದನ್ನು ಸರಿಯಾಗಿ ಸಂರಕ್ಷಿಸುವುದು ಅವಶ್ಯಕವಾಗಿದೆ.

ಬೀದರ ಜಿಲ್ಲೆ ಹುಮನಾಬಾದದ ಶ್ರೀ ಬಾಲಾಜಿ ಮಂದಿರದಲ್ಲಿ ೮ ಚಿತ್ರಗಳು ಲಭ್ಯ ಇವೆ. ಈ ಮಂದಿರವು ನಗರದ ಪ್ರಮುಖ ಬೀದಿಯಲ್ಲಿ ಕಂಡು ಬರುತ್ತಿದ್ದು, ಬಹುಮನಿ ಸುಲ್ತಾನರ ಪ್ರಭಾವದ ವಾಸ್ತು ಶೈಲಿಯನ್ನು ಹೊಂದಿದೆ. ವಿಶಿಷ್ಠ ಕಮಾನುಗಳಿಂದ ರಚನೆಗೊಂಡ ಈ ಮಂದಿರವನ್ನು ಹೊರ ನೋಟದಿಂದ ಬಾಲಾಜಿ ಮಂದಿರವೆಂದು ಕರೆಯುತ್ತಿದ್ದು ಮಂದಿರ ಗರ್ಭಗೃಹವನ್ನು ನೋಡಿದಾಗ ಶ್ರೀರಾಮಚಂದ್ರ, ಲಕ್ಷ್ಮಣ, ಸೀತೆಯರ ಮೂರ್ತಿ ಶಿಲ್ಪಗಳಿವೆ. ಈ ಮಂದಿರದ ಭೋದಿಗೆಗಳಲ್ಲಿ ಪೌರಾಣಿಕ ಕಥೆಗಳನ್ನೊಳಗೊಂಡ ಎಂಟು ಗಾಜಿನ ಚಿತ್ರಗಳನ್ನು ಅಲಂಕರಿಸಲಾಗಿದ್ದು, ಎಲ್ಲವೂ ಒಂದೇ ಅಳತೆಯಲ್ಲಿ ರಚನೆಗೊಂಡಿವೆ. ಚಿತ್ರಗಳ ಚೌಕಟ್ಟುಗಳು ಹಾಗೂ ಹಿಂಬದಿಯ ಹಲಗೆಗಳು ಶಿಥಿಲಾವಸ್ಥೆಯಲ್ಲಿದ್ದು, ಅವುಗಳನ್ನು ಉತ್ತಮ ರೀತಿಯಲ್ಲಿ ಪೋಷಿಸುವುದು ಅಗತ್ಯವಾಗಿದೆ. ಕೆಲವೊಂದು ಚಿತ್ರಗಳ ಬಣ್ಣಗಳು ಉದುರಹತ್ತಿವೆ. ಜಾಡು ಹಿಡಿದು ಜಾಡು ಹುಳುಗಳು ಬಣ್ಣವನ್ನು ತಿಂದು ಹಾಕಿವೆ. ಗರುಢಾರೂಢ ವಿಷ್ಣು, ಮಧುರೈ ವೀರ, ಸರಸ್ವತಿ, ಶ್ರೀಮರಾನ ಪಟ್ಟಾಭಿಷೇಕ ಹಾಗೂ ಸ್ತ್ರೀಭಾವ ಚಿತ್ರಗಳು ಇಲ್ಲಿ ಬಿಂಬಿತವಾಗಿವೆ. ಮಂದಿರದ ಅಲಂಕಾರಕ್ಕಾಗಿ ಸ್ಥಳೀಯ ಭಕ್ತರು ಕಾಣಿಕೆಯಾಗಿ ನೀಡಿದ್ದಾರೆಂದು ಮಂದಿರದ ಅರ್ಚಕರು ಹೇಳುತ್ತಾರೆ.

ಬೀದರ ಜಿಲ್ಲೆ ಹುಮನಾಬಾದದ ಪ್ರಸಿದ್ಧ ಯಾತ್ರ ಸ್ಥಳವಾದ ಶ್ರೀ ಮಾಣಿಕಪ್ರಭುಗಳ ಮಂದಿರವು ಒಂದು. ವಿಶಿಷ್ಟ ವಾಸ್ತು ಶೈಲಿಯನ್ನು ಹೊಂದಿರುವ ಈ ಮಂದಿರವು ಊರಿನ ಹೊರ ವಲಯದಲ್ಲಿದೆ. ಶ್ರೀ ಮಾಣಿಕಪ್ರಭುಗಳ ಪವಾಡ ಲೀಲೆಗಳಿಂದ, ಧರ್ಮದರ್ಶನದಿಂದ ಇಲ್ಲಿನ ಜನರು ನಡೆದಾಡುವ ದೇವರೆಂದೇ ನಂಬಿರುವರು. ಇವರ ಹೆಸರು ನಾಡಿನ ತುಂಬೆಲ್ಲ ಪ್ರತಿಯೊಬ್ಬ ಭಕ್ತರಿಗೂ ತಿಳಿದಿರುವಂತಿದೆ. ಇಂಥ ಮಂದಿರದಲ್ಲಿ ಹಲವಾರು ಕನ್ನಡಿ ಚಿತ್ರಗಳು ಕಂಡು ಬರುತ್ತವೆ. ಈ ಚಿತ್ರಗಳ ವಿಶೇಷವೆನೆಂದರೆ ಮಾಣಿಕಪ್ರಭುಗಳ ಭಾವಚಿತ್ರಗಳನ್ನು ಮೊಟ್ಟೆಯಾಕರದ (Ovel) ಸ್ಥಳಾವಕಾಶದಲ್ಲಿ ರಚಿಸಿದ್ದು ಹಿನ್ನೆಲೆಯನ್ನು ಚಿತ್ರವಿನ್ಯಾಸಗಳಿಂದ ಕೂಡಿದ ನಕ್ಷೆಗಳನ್ನು ರಚಿಸಲಾಗಿದೆ. ಈ ಚಿತ್ರಗಳು ಆಧುನಿಕ ರಚನಾವೈವಿಧ್ಯತೆಯನ್ನು ಹೊಂದಿದ್ದು ಕನ್ನಡಿಯ ಮೆರಗಿನಿಂದ ಕೂಡಿದ ಕೊರೆದ ಚಿತ್ರಗಳಾಗಿವೆ. ಈ ಚಿತ್ರಗಳನ್ನು ನೂರಕ್ಕೂ ಹೆಚ್ಚು ವರ್ಷಗಳ ಹಿಂದೆ ಭಕ್ತರು ಕಾಣಿಕೆಯಾಗಿ ನೀಡಿದ್ದಾರೆ. ಕೆಲವು ನಕ್ಷಾ ಚಿತ್ರಗಳು ಸಹ ಇಲ್ಲಿ ಕಂಡುಬರುತ್ತಿದ್ದು, ಈ ಚಿತ್ರಗಳ ಚೌಕಟ್ಟುಗಳು ಹಾಗೂ ಹಿಂಬದಿಯ ಹಲಗೆಗಳು ಸುಸ್ಥಿತಿಯಲ್ಲಿವೆ. ಈ ಗಾಜಿನ ಚಿತ್ರಗಳನ್ನು

ಮುಂಬೈ ಹಾಗೂ ಗುಲ್ಬರ್ಗದ ಕೆಲವು ವ್ಯಾಪಾರಸ್ಥ ಭಕ್ತರು ಕಾಣಿಕೆಯಾಗಿ ನೀಡಿದ್ದಾರೆಂದು ಆ ಚಿತ್ರಗಳಲ್ಲಿ ಉಲ್ಲೇಖಗೊಂಡ ಭಕ್ತರ ಹೆಸರನ್ನು ಸೂಚಿಸುತ್ತವೆ. ಇಂಥ ಚಿತ್ರಗಳು ನಗರದ ಶ್ರೀ ವೀರಭದ್ರೇಶ್ವರ ದೇವಸ್ಥಾನದಲ್ಲಿಯೂ ಸಹ ಕಂಡು ಬರುತ್ತವೆ. ಇಲ್ಲಿಯ ಚಿತ್ರಗಳೂ ಸಹ ಉತ್ತಮ ರೀತಿಯಲ್ಲಿ ಪೋಷಿಸಲ್ಪಟ್ಟಿವೆ. ಗುಲ್ಬರ್ಗದ ಶ್ರೀ ಶರಣಬಸವೇಶ್ವರ ದೇವಸ್ಥಾನದಲ್ಲಿನ ಮೇಲ್ಛಾವಣಿನಲ್ಲಿ ಗಾಜಿನ ಸಂಕಲನ ಚಿತ್ರಗಳನ್ನು ಕಾಣಬಹುದು. ಅವುಗಳನ್ನು ಇತ್ತೀಚೆಗೆ ರಚಿಸಲಾಗಿದ್ದು, ಅಪಾರ ಭಕ್ತರ ಗಮನವನ್ನು ಸೆಳೆಯುತ್ತಿವೆ.

ಗದಗ ಜಿಲ್ಲೆ ಲಕ್ಷ್ಮೇಶ್ವರದ ಶ್ರೀ ಶಾಂತಿನಾಥ ಶ್ವೇತಾಂಬರ ೧೬ನೇ ತೀರ್ಥಂಕರ ಪೀಠ ಹೊಂದಿದ ಈ ಜೈನ ಮಂದಿರವು ಸಂಪೂರ್ಣ ಸಂಗಮವರಿಕಲ್ಲಿನಿಂದ ನಿರ್ಮಾಣಗೊಂಡಿದೆ. ಇದರ ಕಾರ್ಯವನ್ನು ೧೯೮೫ ರಲ್ಲಿ ಪ್ರಾರಂಭಿಸಿ ೧೯೯೬ ರ ಸುಮಾರಿಗೆ ಮುಕ್ತಾಯ ಗೊಳಿಸಲಾಯಿತು. ಮಂದಿರದ ಒಳಮೈಯು ಸಂಕಲನ ಚಿತ್ರಗಳಿಂದ ಆವರಿಸಿಕೊಂಡಿದೆ. ಈ ಸಂಕಲನ ಚಿತ್ರಗಳ ರಚನಾ ಕಾರ್ಯವನ್ನು ಸುಮಾರು ಐದು ವರ್ಷಗಳ ಕಾಲ ರಾಜಸ್ಥಾನದ ಕಲಾವಿದರು ಮಾಡಿರುವರು. ಮಂದಿರದ ಗೋಡೆ ಮತ್ತು ಮೇಲ್ಛತ್ತು ಗಾಜಿನಚಿತ್ರಗಳಿಂದ ಆವೃತ್ತಗೊಂಡಿದ್ದು, ಪೂರ್ವದ ಗೋಡೆಯಲ್ಲಿ ಜ್ಯಾಮಿತಿಕ ನಕ್ಷೆಗಳನ್ನೊಳಗೊಂಡ ಚಿತ್ರವಿನ್ಯಾಸಗಳು ಕಂಡು ಬರುತ್ತವೆ.

ಪಶ್ಚಿಮ ಗೋಡೆಯಲ್ಲಿ ಜನ್ಮಕಲ್ಯಾಣಕ ಹಾಗೂ ದೀಕ್ಷಾಕಲ್ಯಾಣಕ ಎಂಬ ವಿಷಯಗಳ ನ್ನೊಳಗೊಂಡ ಎರಡು ದೊಡ್ಡ ಚಿತ್ರಗಳು ಕಂಡು ಬರುತ್ತವೆ. ಅದೇ ರೀತಿ ದಕ್ಷಿಣದ ಗೋಡೆಯಲ್ಲಿ ೨೪ ತೀರ್ಥಂಕರರ ಸಮಾಧಿಗಳ ಸನ್ನಿವೇಶ ಹಾಗೂ ಉತ್ತರದ ಗೋಡೆಯಲ್ಲಿ 'ಮೇಘರಾಜ' ಹಾಗೂ ಅಷ್ಟಪದ ಮಹಾತೀರ್ಥದ ಸನ್ನಿವೇಶದ ದೃಶ್ಯಚಿತ್ರಗಳು ರಚನೆಗೊಂಡಿವೆ. ಈ ಆರು ಚಿತ್ರಗಳು ೧೨೦ x ೧೫೬ ಸೆಂ.ಮೀ ಅಳತೆಯನ್ನು ಹೊಂದಿವೆ. ಆಧುನಿಕ ತಂತ್ರ ರಚನೆಯನ್ನು ಹೊಂದಿರುವ ಈಚಿತ್ರಗಳು ಅತ್ಯಂತ ಆಕರ್ಷಕವಾಗಿ ಕಂಡುಬರುತ್ತವೆ. ಮಂದಿರದ ಪಡಸಾಲೆಯ ಮೇಲ್ಛತ್ತು ಆಕರ್ಷಕ ಹೂವಿನ ನಕ್ಷೆಯನ್ನು ಹೊಂದಿದ್ದು ಸೂಕ್ಷ್ಮವಿವರಗಳು ಎದ್ದು ತೋರುತ್ತವೆ. ಅದರಂತೆ ಮುಖಮಂಟಪದ ಮೇಲ್ಛತ್ತು ಸಹ ಅಲಂಕಾರಿಕ ಚಿತ್ರವಿನ್ಯಾಸಗಳಿಂದ ಕಂಗೊಳಿಸುತ್ತಿದೆ. ಪ್ರಸ್ತುತ ಈ ಚಿತ್ರ ಸಮೂಹ ಸುರಕ್ಷಿತವಾಗಿದ್ದು ನೋಡುಗರ ಕಣ್ಮನ ಸೆಳೆಯುವಲ್ಲಿ ಸಫಲವಾಗಿವೆ.

ಹೀಗೆ ಕರ್ನಾಟಕದ ಹಲವಾರು ದೇವಸ್ಥಾನಗಳಲ್ಲಿ ಅದರಲ್ಲೂ ವಿಶೇಷವಾಗಿ ರಾಮಮಂದಿರಗಳು, ಬಾಲಾಜಿ ಮಂದಿರಗಳು, ವೆಂಕಟೇಶ ದೇವಸ್ಥಾನಗಳಲ್ಲಿ ಗಾಜಿನ ಮೇಲಿನ ತೂಗುಹಾಕುವ ಚಿತ್ರಗಳು ಅಲಂಕರಿಸಿರುವುದನ್ನು ಕಾಣುತ್ತೇವೆ ಸಧ್ಯಕ್ಕೆ ಕೆಲವೇ ಕೆಲವು ಚಿತ್ರಗಳು ಕಂಡು ಬರುತ್ತಿವೆ. ಎಷ್ಟೋ ಕಲಾಕೃತಿಗಳನ್ನು ಕಡಿಮೆ ಬೆಲೆಗೆ ಮಾರಾಟ ಮಾಡಿದ್ದರೆ, ಕೆಲವು ಕೃತಿಗಳನ್ನು ಒಡೆದು ಹಾಳು ಮಾಡಿದ್ದಾರೆ. ಇನ್ನೂ ಕೆಲವು ಕೃತಿಗಳನ್ನು ತೆಗೆದು ಹಾಕಿದ್ದಾರೆ. ಸಧ್ಯಕ್ಕೆ ಲಭ್ಯವಿರುವ ಎಲ್ಲ ಚಿತ್ರಗಳು ಅವಸಾನದ ಸ್ಥಿತಿಯಲ್ಲಿವೆ. ಅವುಗಳಿಗೆ ಸುಂದರವಾದ ಹಾಗೂ ಗಟ್ಟಿಮುಟ್ಟಾದ ಚೌಕಟ್ಟುಗಳನ್ನು ಹಾಕಿ ಮುಂದಿನ ದಿನಮಾನದವರೆಗೆ ಸಿಗುವಂತಾಗಬೇಕು. ಅವುಗಳ ಮೌಲ್ಯಗಳನ್ನು ಅರಿಯುವಂತಾಗಬೇಕು.

**ಈ. ಚರ್ಚುಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳು**

ಕರ್ನಾಟಕದಲ್ಲಿ ಕಂಡು ಬರುವ ಹಲವಾರು ಚರ್ಚುಗಳ ಕಿಟಕಿಗಳು ಬಹುತೇಕ ಬಣ್ಣದ ಗಾಜುಗಳಿಂದ ಅಲಂಕೃತಗೊಂಡಿವೆ. ಜ್ಯಾಮಿತಿಕ ನಕ್ಷೆಗಳು, ಅಲಂಕಾರಿಕ ನಕ್ಷೆಗಳು, ನೈಸರ್ಗಿಕ ಚಿತ್ರವಿನ್ಯಾಸಗಳು ಹಾಗೂ ಕ್ರೈಸ್ತಕಥಾನಕ ದೃಶ್ಯಸನ್ನಿವೇಶಗಳು ಈ ಬಣ್ಣದ ಗಾಜುಗಳ ಮೇಲೆ ಬಿಂಬಿತವಾಗಿವೆ. ಬೆಂಗಳೂರು ನಗರದಲ್ಲಿಯೇ ವಿವಿಧ ವರ್ಗಗಳಿಗೆ ಸೇರಿದ ೧೦೦ಕ್ಕೂ ಹೆಚ್ಚು ಚರ್ಚುಗಳು ಕಂಡುಬರುತ್ತವೆ. ಶಿವಾಜಿ ನಗರದ 'ಸಂತಮೇರಿ ಬೆಸಲಿಕಾ' ಚರ್ಚು ಅತ್ಯಂತ ಪ್ರಾಚೀನವಾದುದು ಹಾಗೂ ಅತ್ಯಂತ ಸುಂದರವಾದುದು. ೧೯ನೇ ಶತಮಾನದ ಮೊದಲಲ್ಲಿ ನಿರ್ಮಿತವಾಗಿದ್ದ ಇದನ್ನು ೧೮೭೫ ರಲ್ಲಿ ಈಗಿರುವಂತೆ ಗಾತಿಕ್ ಶೈಲಿಯಲ್ಲಿ ಪುನರ್ ನಿರ್ಮಿಸಲಾಯಿತು.[೧] ಇದರ ಪ್ರವೇಶಧ್ವಾರದಲ್ಲಿ ಒಂದು ಗಾಥಿಕ್ ಗೋಪುರವಿದೆ. ಬಾಗಿಲ ಮೇಲೆ ಚೂಪಾದ ಕಮಾನು ಇದೆ. ಬಾಗಿಲು ಕಿಟಕಿಗಳು ಅದೇ ವಿನ್ಯಾಸವನ್ನು ಹೊಂದಿವೆ. ಈ ಕಿಟಕಿಗಳ ಮೇಲೆ ಅಲಂಕರಿಸಿದ ಗಾಜಿನ ಚಿತ್ರಗಳು ಎಲ್ಲರ ಕಣ್ಮನ ಸೆಳೆಯುತ್ತಿವೆ. ಈ ಅಪರೂಪದ ಗಾಜಿನ ವರ್ಣಚಿತ್ರಗಳನ್ನು ಫ್ರಾನ್ಸ್‌ದಿಂದ ತಂದು ಅಳವಡಿಸಲಾಗಿದೆ

ಚರ್ಚದ ಪೀಠದ ಎಡಗೋಡೆ ಹಾಗೂ ಬಲಗೋಡೆಯ ಮೇಲೆ ವೃತ್ತಾಕಾರದ ಕಿಟಕಿಗಳಲ್ಲಿ ಸುಂದರವಾದ ಗಾಜಿನ ಮೇಲಿನ ಕ್ರೈಸ್ತಕಥಾನಕ ದೃಶ್ಯಗಳು ಕಂಡು ಬರುತ್ತಿವೆ. ಮಧ್ಯದ ಕಂಬಗಳ ಸಾಲುಗಳ ಚೂಪಾದ ಗೂಡುಗಳಲ್ಲಿ ಗಾಜಿನ ಚಿತ್ರಗಳು ಕಂಡುಬರುತ್ತವೆ. ಅಲ್ಲದೇ ಪೀಠದ ಮೇಲ್ಭಾಗದ ಗೋಡೆಯಲ್ಲಿ ತ್ರಿಕೋನಾಕಾರದ ಕಿಟಕಿಗಳಲ್ಲಿ ಸುಂದರವಾದ ಗಾಜಿನ ಮೇಲಿನ ಕಥಾಚಿತ್ರಗಳು ಗೋಚರಿಸುತ್ತವೆ. ತ್ರಿಭುಜ, ವೃತ್ತಾಕಾರದ ಕಿಟಕಿಗಳಲ್ಲಿ ಜ್ಯಾಮಿತಿಕ ಆಕಾರದ ಗಾಜಿನ ನಕ್ಷೆಗಳು ಕಂಡುಬರುತ್ತವೆ. ಬಣ್ಣದ ಗಾಜುಗಳ ಮೂಲಕ ಬರುವ ವರ್ಣರಂಜಿತ ಬೆಳಕಿನಿಂದ ಚರ್ಚದ ಒಳಾಂಗಣವು ಸುಂದರವಾಗಿ ಕಾಣುತ್ತದೆ. ಚರ್ಚದ ಅಲಂಕರಣೆಯಲ್ಲಿ ಈ ಚಿತ್ರಗಳು ಮಹತ್ವದ ಪಾತ್ರವಹಿಸಿವೆ. ಈ ಚಿತ್ರಗಳು ಇಂದು ಸುಸ್ಥಿತಿಯಲ್ಲಿದ್ದು, ನೋಡುಗರಿಗೆ ಆನಂದವನ್ನು ನೀಡುತ್ತವೆ.

ಸಂತ ಫ್ರಾನ್ಸಿಸ್ ಕ್ಸೇವಿಯರ್ ಕೆಥೆಡ್ರಲ್ ಅತ್ಯಂತ ಹಳೆಯ ದೊಡ್ಡದಾದ ಕೆಥೋಲಿಕ್ ಚರ್ಚು ಇದನ್ನು ಯುರೋಪಿಯನ್ ರಿನೈಸಾನ್ಸ್ ಶೈಲಿಯಲ್ಲಿ ನಿರ್ಮಿಸಲಾಗಿದೆ. ಈ ಗ್ರಾನೈಟ್ ಕಟ್ಟಡವನ್ನು ೧೮೫೧ ರಲ್ಲಿ ಕಟ್ಟಿಮುಗಿಸಲಾಯಿತು.[೨] ಈ ಚರ್ಚದಲ್ಲಿ 'ಮದರ್ ಆಫ್ ಪರ್ಪೆಚುಯಲ್ ಹೆಲ್ಪ್' ಎಂಬ ಚಿತ್ರವು ಗಾಜಿನ ಮೇಲೆ ವಿವಿಧ ವರ್ಣಗಳ ಸಂಯೋಜನೆಗಳಿಂದ ರಚನೆಗೊಂಡಿದೆ. ಈ ಚಿತ್ರವು ಬಹು ಅಪರೂಪದ ಚಿತ್ರವೆಂದು ಹೇಳಬಹುದು. ಚಿತ್ರವು ಸುಸ್ಥಿತಿಯಲ್ಲಿದ್ದು ನೋಡುಗರನ್ನು ಆಕರ್ಷಿಸುತ್ತಿದೆ. ಇನ್ನೊಂದು ಸುಂದರವಾದ ಕೆಥೋಲಿಕ್ ಚರ್ಚು ಬ್ರಿಗೇಡ್ ಸಂತ ಪ್ಯಾಟ್ರಿಕ್ ಚರ್ಚು, ಗ್ರೀಕ್–ರೋಮನ್ ರಿನೈಸಾನ್ಸ್ ಶೈಲಿಯಲ್ಲಿ ಇದನ್ನು ನಿರ್ಮಿಸಲಾಗಿದೆ. ಉತ್ತರ–ದಕ್ಷಿಣ ಹೊಂದಾಣಿಕೆ ಇರುವ ಚರ್ಚು ಇದೊಂದೇ. ಬಾಗಿಲಲ್ಲಿ ಎರಡು ರೋಮನ್ ಗೋಪುರಗಳ ನಡುವೆ ಒಂದು ಕಮಾನು ಇದೆ. ಬಾಗಿಲ ಮೇಲೆ ರೋಸ್ ಮರದ ಕಿಟಕಿ ಇದ್ದು ಅದಕ್ಕೆ ಬಣ್ಣದ

೧ ಪ್ರೊ. ಎಂ. ವಿ. ಶ್ರೀನಿವಾಸ್ ; ಕರ್ನಾಟಕ ಚರಿತ್ರೆ ಸಂಪುಟ ಆರು, ಪುಟ ೨೬೨

೨ ಪ್ರೊ. ಎಂ. ವಿ. ಶ್ರೀನಿವಾಸ್ ; (ಸಂ) ಕರ್ನಾಟಕ ಚರಿತ್ರೆ (ಸಂಪುಟ ಆರು), ಪುಟ ೨೬೨

ಗಾಜುಗಳನ್ನು ಅಳವಡಿಸಲಾಗಿದೆ.[೩] ಈ ಚಿತ್ರಗಳು ಸಹ ಸುಸ್ಥಿತಿಯಲ್ಲಿವೆ. ವರ್ಣಮಯ ಬೆಳಕಿನಿಂದ ಚರ್ಚದ ಒಳಾವಣರವು ನೋಡುಗರನ್ನು ವಿಸ್ಮಯಗೊಳಿಸುತ್ತವೆ.

ಮಂಗಳೂರು ಮತ್ತು ದಕ್ಷಿಣಕನ್ನಡದ ಅನೇಕ ನಗರಗಳಲ್ಲಿ ೧೮ ಮತ್ತು ೧೯ನೇ ಶತಮಾನಗಳಲ್ಲಿ ಕಟ್ಟಿದ ಹಲವಾರು ಭವ್ಯವಾದ ಚರ್ಚುಗಳು ಕಂಡು ಬರುತ್ತಿವೆಯಾದರೂ ಕೆಲವೊಂದು ಚರ್ಚುಗಳಲ್ಲಿ ಮಾತ್ರ ಗಾಜಿನ ಚಿತ್ರಗಳು ನೋಡಲು ಲಭ್ಯ ಇವೆ. ಮಂಗಳೂರಿನ ಸಂತ ಎಲೋಸಿಯಸ್ ಕಾಲೇಜು ಚರ್ಚು ೧೮೮೫ ರಲ್ಲಿ ನಿರ್ಮಿಸಲಾಗಿದೆ. ಈ ಸುಂದರವಾದ ಕಟ್ಟಡದ ನಿರ್ಮಾತೃ ಫಾದರ ಜೊಸೆಪ್ ವಿಲ್ಲಿ. ಈ ಚರ್ಚದ ವಾಸ್ತುಶೈಲಿಯು ರೂಮ್‌ನಲ್ಲಿರುವ ಚಿಕ್ಕ ಚರ್ಚನ್ನು ಹೋಲುತ್ತದೆ. (ಸಂತ ಫಿಲೀಪ್ ಚರ್ಚು) ಈ ಚರ್ಚನಲ್ಲಿ ಇಟಲಿಯ ಚಿತ್ರಕಲಾವಿದ ಅಂಥೋಣಿ ಮೊಸ್ಚೆನಿಯು ಬಿಡಿಸಿದ ಸುಂದರವಾದ ಭಿತ್ತಿಚಿತ್ರಗಳಿವೆ. ಚರ್ಚದ ಪೂರ್ವಗೋಡೆಯ ಕ್ರಿಸ್ತನ ಪೀಠಕ್ಕೆ ಹೊಂದಿರುವ ಗೂಡಿನ ಎಡ ಮತ್ತು ಬಲಭಾಗದ ಕಿಟಕಿಗಳಲ್ಲಿ ಎರಡು ಗಾಜಿನ ಚಿತ್ರಗಳು ಅಲಂಕೃತಗೊಂಡಿವೆ. ಎರಡೂ ಚಿತ್ರಗಳು ಸಂತರ ಭಾವಚಿತ್ರಗಳಾಗಿವೆ. ಚಿತ್ರಗಳು ತೀರಾ ಹಳೆಯದಾಗಿರುವುದರಿಂದ ಉಜ್ವಲತೆಯನ್ನು ಕಳೆದುಕೊಂಡು ಮಾಸಿವೆ. ಆದರೂ ಸಹ ಇಂದು ನೋಡುಗರನ್ನು ಆಕರ್ಷಿಸುತ್ತಿವೆ.

ಗರ್ಭಗೃಹದ ಪೀಠದ ಗೋಡೆಯ ಮೇಲ್ಭಾಗದಲ್ಲಿರುವ ಎರಡು ದೊಡ್ಡ ಕಿಟಕಿಗಳಲ್ಲಿ ಎಲೆ, ಹೂವುಗಳ ಅಲಂಕಾರಿಕ ನಕ್ಷೆಗಳಿಂದ ಕೂಡಿದ ಗಾಜಿನ ಚಿತ್ರಗಳು ರಾರಾಜಿಸುತ್ತವೆ. ಈ ಚಿತ್ರಗಳು ಎತ್ತರದಲ್ಲಿರುವದರಿಂದ ಸುರಕ್ಷಿತವಾಗಿವೆ ಹಾಗೂ ಹೊಳಪನ್ನು ಉಳಿಸಿಕೊಂಡಿವೆ.

'ಕಂಕನಾಡಿಯ ಕ್ಲೋಯಿಸ್ಟೇಡ್ ಕಾರ್ಮೆಲ್ ಹೌಸ್' ಸುಂದರವಾದ ವಾಸ್ತು ಶೈಲಿಯನ್ನು ಹೊಂದಿದೆ. ೧೮೭೯ ರ ಆಸುಪಾಸಿನಲ್ಲಿ ನಿರ್ಮಾಣಗೊಂಡ ಈ ಕಟ್ಟಡವು ಗಾತಿಕ್ ವಾಸ್ತು ಶಿಲ್ಪದ ಮಾದರಿಯಲ್ಲಿದೆ. ಎರಡು ಕಿಟಕಿಗಳು ೧೦ ಅಡಿಗಿಂತಲೂ ದೊಡ್ಡವಾಗಿವೆ. ಚರ್ಚದ ಮುಖ್ಯದ್ವಾರದ ಮೇಲೆ ಸುಮಾರು ೪ ಅಡಿಗಳಷ್ಟು ಅಳತೆಯನ್ನು ಹೊಂದಿರುವ ಕಿಟಕಿಗಳು ಕಂಡುಬರುತ್ತವೆ. ಮೂರು ಕಿಟಕಿಗಳಲ್ಲಿ ಅಳವಡಿಸಿದ ಕ್ರೈಸ್ತಕಥಾನಕ ದೃಶ್ಯಚಿತ್ರಗಳು ಅಲಂಕೃತಗೊಂಡಿವೆ. ಚರ್ಚದ ಬಾಲ್ಕನಿಯ ಗೋಡೆಯಲ್ಲಿ ಹೂವಿನ ಚಿತ್ತಾರವುಳ್ಳ ಗಾಜಿನ ಕಿಟಕಿಗಳು ಕಂಡು ಬರುತ್ತಿದ್ದು, ಇಂದೂ ಸಹ ತಮ್ಮ ಸುಂದರತೆಯನ್ನು ಕಾಪಾಡಿಕೊಂಡಿವೆ.

ಮಂಗಳೂರಿನ ಕುಲಶೇಖರದಲ್ಲಿರುವ 'ಹಾಲಿಕ್ರಾಸ್ ಕಾರ್ಡೆಲ್ ಚರ್ಚು' ಒಂದು ಅಪೂರ್ವ ಸ್ಟೇನ್ಡ್ ಗ್ಲಾಸ್ ಚಿತ್ರಗಳ ಸಂಕೀರ್ಣ. ಈ ಚರ್ಚಿನ ಮಧ್ಯಸಾಲು ಕಂಬಗಳ ನಡುವೆ ದೊಡ್ಡ ಗಾತ್ರಗಳ ಕಿಟಕಿಗಳ ಮೇಲೆ ಅಪೂರ್ವ ಚಿತ್ರಗಳು ಅಲಂಕೃತಗೊಂಡಿವೆ. ಚರ್ಚದ ಬಲಭಾಗದ ಗೋಡೆಯ ಕಿಟಕಿಗಳಲ್ಲಿ ಸಂತ ಫ್ರಾನ್ಸಿಸ್ ಕ್ಷೇವಿಯರ್, ಸಂತ ಎಲೆರಾ ರ ಚಿತ್ರಗಳಿವೆ. ಎಡಗೋಡೆಯ ಕಿಟಕಿಗಳಲ್ಲಿ ಸಂತ ಅನ್ನಾ, ಕಿಂಗ್ ಡಾವಿಡ್ ರ ಚಿತ್ರಗಳಿವೆ. ಚರ್ಚದ ಮುಂಭಾಗದ ಗೋಡೆಯ ಕಿಟಕಿಗಳಲ್ಲಿ ಸಂತ ಇಗ್ನೇಟಿಯಸ್, ಸಂತ ಫ್ರಾನ್ಸಿಸ್ ಆಫ್ ಅಸ್ಸಿಸಿಯರ ಚಿತ್ರಗಳು ಗೋಚರಿಸುತ್ತವೆ. ಚರ್ಚದ ನಾಲ್ಕು ಕಿಟಕಿಗಳಲ್ಲಿ ಅಲಂಕಾರಿಕ ನಕ್ಷಾವಿನ್ಯಾಸಗಳನ್ನೊಳಗೊಂಡ ಚಿತ್ರಗಳು

---

೩. ಪ್ರೊ. ಎಂ. ವಿ. ಶ್ರೀನಿವಾಸ್ ; (ಸಂ) ಕರ್ನಾಟಕ ಚರಿತ್ರೆ (ಸಂಪುಟ ಆರು), ಪುಟ ೨೬೩

ಅಲಂಕೃತಗೊಂಡಿವೆ. ಎಲ್ಲ ಚಿತ್ರಗಳು ಆಕರ್ಷಕ ವರ್ಣಸಂಯೋಜನೆಯಿಂದ ಕೂಡಿದ್ದು, ಯಾವುದೇ ರೀತಿಯ ಧಕ್ಕೆಯಾಗಿಲ್ಲ. ಇಂದೂ ಸಹ ತಮ್ಮ ಆಕರ್ಷಕ ಹೊಳಪನ್ನು ಉಳಿಸಿಕೊಂಡಿವೆ.

ಮಂಗಳೂರಿನ ಬೆಂದೂರಿನಲ್ಲಿರುವ ಸಂತ ಸೆಬಾಸ್ಟಿಯನ್ ಚರ್ಚು ಅತ್ಯಂತ ಸುಂದರವಾದ ವಾಸ್ತುಕಟ್ಟಡಗಳಲ್ಲಿ ಒಂದು. ಈ ಕಟ್ಟಡದ ಕಂಬಗಳ ಸಾಲುಗಳಲ್ಲಿ ವೃತ್ತಾಕರದ ಕಿಟಕಿಗಳಿದ್ದು ಈ ಕಿಟಕಿಗಳು ಜ್ಯಾಮಿತಿಕ ಹೂವಿನ ನಕ್ಷೆಗಳನ್ನು ಹೊಂದಿರುವ ಗಾಜಿನ ಚಿತ್ರಗಳನ್ನು ಅಲಂಕರಿಸಿವೆ. ಚರ್ಚಿನ ಪೀಠದ ಎದುರಿನ ಗೋಡೆಯಲ್ಲಿನ ಆರು ಕಿಟಕಿಗಳಲ್ಲಿ ಇತ್ತೀಚೆಗೆ ಅಳವಡಿಸಿದ ಸಂಕೇತ ಪ್ರಧಾನವಾದ ಕ್ರಿಸ್ತಕಥಾನಕ ಸನ್ನಿವೇಶಗಳನ್ನು ಸೂಚಿಸುವ ಗಾಜಿನ ಚಿತ್ರಗಳನ್ನು ಅಲಂಕರಿಸಲಾಗಿದೆ. ಈ ಆರು ಚಿತ್ರಗಳು ಆಧುನಿಕ ರಚನಾ ಶೈಲಿಯನ್ನು ಹೊಂದಿದ್ದು ನೋಡಲು ಆಕರ್ಷಕವಾಗಿ ಕಾಣುತ್ತವೆ. ಚಿತ್ರಗಳಿಗೆ ಯಾವುದೇ ರೀತಿಯ ಧಕ್ಕೆಯಾಗಿಲ್ಲ. ಕೆಲವು ಕಿಟಕಿಗಳಿಗೆ ಬಣ್ಣ ಬಣ್ಣದ ಗಾಜುಗಳನ್ನು ಅಲಂಕರಿಸಿ ಚರ್ಚದ ಒಳಾವರಣವು ಸುಂದರವಾಗಿ ಕಾಣುವಂತೆ ಚರ್ಚದ ಪಾದ್ರಿಗಳು ಪ್ರಯತ್ನಿಸಿದ್ದಾರೆ.

ಮಂಗಳೂರಿನ ಫಾದರ ಮುಲ್ಲರ್ ಮೆಡಿಕಲ್ ಕಾಲೇಜು ಹಾಗೂ ಅಸ್ಪತ್ರೆ ಆವರಣದಲ್ಲಿ ನಿರ್ಮಾಣಗೊಂಡ ಸಂತ ಜೋಶೆಫರ ಛಾಪೆಲ್ ಚರ್ಚು, ೨೧ನೇ ಶತಮಾನದ ಪ್ರಥಮಾರ್ಧದಲ್ಲಿನ ಆಧುನಿಕ ವಿನ್ಯಾಸದ, ಆಡಂಬರವಿಲ್ಲದ ವಾಸ್ತುಕಟ್ಟಡವಾಗಿದೆ. ಅಷ್ಟಭುಜಾಕೃತಿಯ ಒಳಾವರಣ ಹೊಂದಿದ ಈ ಸುಂದರ ಚರ್ಚಿನ ೧೭ ಕಿಟಕಿಗಳಲ್ಲಿ ಆಯಾತಾಕಾರದ ಗಾಜಿನ ಚಿತ್ರಗಳನ್ನು ಅಲಂಕರಿಸಲಾಗಿದೆ. ಈ ಚಿತ್ರ ಸನ್ನಿವೇಶಗಳು ಯೇಸುವಿನ ಶಿಲುಬೆಯ ಹಾದಿಯ ಸರಣಿ ಚಿತ್ರಗಳಾಗಿವೆ. ಈ ಕಟ್ಟಡದ ವಾಸ್ತುಶಿಲ್ಪಿ ಶ್ರೀ ದೀಪಕ್. ಎಲ್. ಎ. ಡಿಸೋಜಾ ರಚನಾತ್ಮಕ ಅಭಿಯಂತರರು ಶ್ರೀ ದೇವದಾಸ್ ಕಾಂತ್ ಹಾಗೂ ಈ ಕಟ್ಟಡದ ಗುತ್ತಿಗೆದಾರರು ಶ್ರೀ ರೋಲ್ಯಾಂಡ್ ಕ್ಯಾಸ್ಟೆಲಿನೊ. ಈ ಚರ್ಚಿನಲ್ಲಿರುವ ಗಾಜಿನ ಚಿತ್ರಗಳನ್ನು ಸ್ಥಳೀಯ ಕಲಾವಿದರು ನಿರ್ಮಿಸಿದ್ದಾರೆ. ಚಿತ್ರಗಳು ಆಧುನಿಕ ತಂತ್ರಶೈಲಿಯಲ್ಲಿ ರಚನೆಗೊಂಡಿದ್ದು ಆಕರ್ಷಕ ವರ್ಣವಿನ್ಯಾಸಗೊಂದಿಗೆ ರಾರಾಜಿಸುತ್ತವೆ.

ಧಾರವಾಡದ ಚರ್ಚನ್ನು ಸುಟ್ಟ ಇಟ್ಟಿಗೆಗಳಿಂದ ಕಟ್ಟಲಾಗಿದೆ. ಹೊರಗೆ ಗಾರೆಯನ್ನು ಹಾಕಿಲ್ಲ. ನೆಲಕ್ಕೆ ಸಿಮೆಂಟ್ ಹಾಕಲಾಗಿದೆ. ಪೂಜಾ ವೇದಿಕೆಯು ಚೈನಾ ಚಪ್ಪಡಗಳಿಂದ ನಿರ್ಮಿತವಾಗಿದೆ. ಚಾವಣಿಯು ಮರದ ಹಲಗೆ ಸೇರುವಂತೆ ಮೇಲೆ ನಿರಿಗೆಗಳಿಂದ ಕೂಡಿದ ಕಬ್ಬಿಣದ ಹಾಳೆಯನ್ನು ಹೊದಿಸಲಾಗಿದೆ. ಈ ಚರ್ಚದ ಕಿಟಕಿಗಳು ವರ್ಣರಂಜಿತ ಸ್ಟೇನ್ಡ್ ಗ್ಲಾಸ್ ಚಿತ್ರಗಳಿಂದ ಅಲಂಕೃತಗೊಂಡಿವೆ. ಬೆಳಗಾಂವಿಯ ಸಂತ ಮೇರಿ ಚರ್ಚು ೧೮೬೯ ರಲ್ಲಿ ನಿರ್ಮಾಣವಾಗಿದ್ದು, ಈ ಭವ್ಯ ಕಟ್ಟಡವನ್ನು ರೆ. ಫ್ರಾನ್ಸಿಸ್ ಗೆಲ್‌ನು ವಿನ್ಯಾಸಗೊಳಿಸಿದ್ದಾನೆ.[೪] ಪ್ರಾರ್ಥನಾ ಸಭಾಂಗಣದಲ್ಲಿ ಸುಂದರವಾದ ಚಾಚುಕಟ್ಟೆಗಳಿವೆ. ಬಾಗಿಲು ಮತ್ತು ಕಿಟಕಿಗಳು ಸ್ಟೇನ್ಡ್ ಗ್ಲಾಸ್ ಚಿತ್ರಗಳಿಂದ ಅಲಂಕರಿಸಿವೆ. ಇವು ಕ್ರಿಸ್ತಕಥಾನಕ ದೃಶ್ಯಗಳನ್ನು ಅಭಿವ್ಯಕ್ತಿಸುತ್ತವೆ. ಚಿತ್ರಗಳು ಪ್ರಕೃತಿ ವಿಕೋಪದಿಂದ ಮಾಸಿವೆಯಾದರೂ, ನೋಡಲು ಇಂದು ಆಕರ್ಷಕವಾಗಿ ಕಂಡು ಬರುತ್ತವೆ.

ಮೈಸೂರಿನಲ್ಲಿಯೂ ವಿವಿಧ ಕಾಲಘಟ್ಟಗಳಲ್ಲಿ ನಿರ್ಮಾಗೊಂಡ ಅನೇಕ ಚರ್ಚುಗಳಿವೆ.

೪ ಪ್ರೊ. ಎಂ. ವಿ. ಶ್ರೀನಿವಾಸ್ ; (ಸಂ) ಕರ್ನಾಟಕ ಚರಿತ್ರೆ (ಸಂಪುಟ ಆರು), ಪುಟ ೨೬೪

ಇವು ೧೮ ಮತ್ತು ೧೯ನೆಯ ಶತಮಾನಗಳಲ್ಲಿ ನಿರ್ಮಾಣಗೊಂಡಿರಬಹುದಾದರೂ ಕಾಲಕಾಲಕ್ಕೆ ಪುನರುಜ್ಜೀವನಗೊಳ್ಳುತ್ತಾ ಅನೇಕ ಸ್ವರೂಪಗಳನ್ನು ಪಡೆದುಕೊಂಡಿವೆ. ೧೮೪೦ ರಲ್ಲಿ ನಿರ್ಮಾಣಗೊಂಡ 'ಸಂತ ಫಿಲೋಮಿನಾ' ಚರ್ಚು ಸುಂದರ ಹಾಗೂ ಅದ್ಭುತ ಕಟ್ಟಡಗಳಲ್ಲಿ ಒಂದಾಗಿದೆ. ಈ ಕಟ್ಟಡವನ್ನು ಈ ಶತಮಾನದಲ್ಲಿ ಜೀರ್ಣೋದ್ಧಾರ ಮಾಡಿ ಮರಳಿ ನಿರ್ಮಿಸಲಾಯಿತು. ನ್ಯೂಯಾರ್ಕಿನ ಸಂತ ಪ್ಯಾಟ್ರಿಕ್ ಕೆಥೆಡ್ರಲ್ ಹಾಗೂ ಜರ್ಮನಿಯ ಕೋಲೋನನಲ್ಲಿರುವ ಗಾತಿಕ್ ಚರ್ಚುಗಳ ಮಾದರಿಯ ಮೇಲೆ ಇದನ್ನು ನಿರ್ಮಿಸಲಾಗಿದೆ ಎಂದು ಅಭಿಪ್ರಾಯ ಪಡುತ್ತಾರೆ. ಮುಂಭಾಗದಲ್ಲಿರುವ ಭವ್ಯವಾದ ಎರಡು ಗೋಪಿರಗಳು ಮೇಲೇರಿದಂತೆ ಕಿರಿದಾಗುತ್ತಾ, ಮೊನಚಾಗುತ್ತಾ ಹೋಗುತ್ತವೆ. ಇವುಗಳ ಎತ್ತರ ೧೬೫ ಅಡಿ ಇದೆ. ಚರ್ಚದ ಮಧ್ಯ, ಒಂದು ಗುಹೆಯನ್ನು ಕೊರೆಯಲಾಗಿದೆ.[೫] ಅದರಲ್ಲಿ ಯೇಸುವಿನ ತಾಯಿಯ ಸುಂದರವಾದ ಮೂರ್ತಿಯನ್ನು ಕಾಣಬಹುದು. ಚರ್ಚಿನ ದೊಡ್ಡ ದೊಡ್ಡ ಕಿಟಕಿಗಳಲ್ಲಿ ಅಳವಡಿಸಿದ ಸ್ಟೇನ್ಡ್ ಗ್ಲಾಸ್ ಚಿತ್ರಗಳು ಎಲ್ಲರ ಗಮನ ಸೆಳೆಯುತ್ತವೆ. ಈ ಚಿತ್ರಗಳ ಮೂಲಕ ಬರುವ ವರ್ಣಮಯ ಬೆಳಕು ಚರ್ಚದ ಒಳಾವರಣವನ್ನು ಸುಂದರಮಯಗೊಳಿಸಿದೆ. ನೋಡುಗರಿಗೆ ಒಂದು ರೀತಿ ಆಹ್ಲಾದವನ್ನು ಕೊಡುತ್ತದೆ.

ಈ ಚರ್ಚು ದಕ್ಷಿಣಾಭಿಮುಖವಾಗಿದ್ದು ಚರ್ಚದ ಒಳಗಡೆಯ ಪೀಠದ ಮೇಲ್ಭಾಗದ ಐದು ಕಿಟಕಿಗಳಲ್ಲಿ ಸುಂದರವಾದ ಕ್ರೈಸ್ತಕಥಾನಕ ದೃಶ್ಯಗಳನ್ನು ನಿರೂಪಿಸುವ ಚಿತ್ರಗಳು ಅಲಂಕರಿಸಿವೆ. ಈ ಚಿತ್ರಗಳನ್ನು ಕ್ರಿ. ಶ. ೧೯೦೦ ರ ಸುಮಾರಿಗೆ ಅಳವಡಿಸಲಾಗಿದೆ ಎಂದು ತೋರುತ್ತದೆ. ಚರ್ಚದಲ್ಲಿ ಎರಡು ರೀತಿಯ ಗಾಜಿನ ಚಿತ್ರಗಳು ಕಾಣಸಿಗುತ್ತವೆ. ಒಂದು ತುಂಡು ತುಂಡಾಗಿ ಕತ್ತರಿಸಿ ಜೋಡಿಸಿದ ಗಾಜಿನ ಚಿತ್ರಗಳು, ಇನ್ನೊಂದು ಸಮತಲವಾದ ಗಾಜಿನ ಹಾಳೆಗಳ ಮೇಲೆ ರಚಿಸಿದ ಚಿತ್ರಗಳು ರಚನೆಗೊಂಡಿವೆ. ಚರ್ಚಿನ ಪೀಠದ ಒಳ ಅಂಕಣದ ಹಿಂಬದಿಯ ಗೋಡೆಯ ಎಡ ಮತ್ತು ಬಲ ಭಾಗದ ಕಿಟಕಿಗಳಲ್ಲಿರುವ ಚಿತ್ರಗಳನ್ನು ಹನ್ನೆರಡು ಗಾಜಿನ ಹಾಳೆಯ ಮೇಲೆ ಚಿತ್ರಿಸಲಾಗಿದ್ದು, ಪ್ರತಿಯೊಂದು ಗಾಜುಗಳು ೨ Feet ಅಗಲ ೪ Feet ಉದ್ದದ ಪಾರದರ್ಶಕ ಗಾಜುಗಳಾಗಿವೆ. ಎರಡು ಕಿಟಕಿಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಂಡಿದ್ದು, ಮೇಲಿನ ಭಾಗದಲ್ಲಿನ ಗಾಜುಗಳ ತಳಭಾಗವು ಸಮಾಂತರವಾಗಿದೆ. ಮೇಲೆ ಹೋದಂತೆ ಒಂದೇ ಕೇಂದ್ರ ಬಿಂದುವಿನಲ್ಲಿ ಸಂಧಿಸಿವೆ. ಎರಡೂ ಕಿಟಕಿಗಳಲ್ಲಿನ ವರ್ಣಚಿತ್ರಗಳು ವಿರೂಪಗೊಂಡಿದ್ದು ವರ್ಣಗಳು ಅಲ್ಲಲ್ಲಿ ಕಿತ್ತುಹೋಗಿವೆ ಹಾಗೂ ಕೆಲವು ಕಿಡಿಗೇಡಿಗಳಿಂದ ಗೀಚುಗಳನ್ನು ಹಾಕಲ್ಪಟ್ಟಿವೆ. ಈಚಿತ್ರಗಳು ಗೋಡೆಯ ತಳಭಾಗದ ಕಿಟಕಿಗಳಲ್ಲಿರುವುದರಿಂದ ಸುಲಭವಾಗಿ ಕೈಗೆ ಎಟುಕುತ್ತವೆ. ಹೀಗಾಗಿ ಸುಲಭವಾಗಿ ಕಿಡಗೇಡಿಗಳಿಗೆ ತುತ್ತಾಗಿವೆ. ಇಂಥ ಅಪರೂಪದ ಚಿತ್ರಗಳ ಸಂರಕ್ಷಣೆಯು ಅವಶ್ಯವಿದೆ. ಪೀಠದ ಮೇಲ್ಭಾಗದ ಕಿಟಕಿಗಳಲ್ಲಿರುವ ಚಿತ್ರಗಳು ಸುರಕ್ಷಿತವಾಗಿದ್ದು ಆಕರ್ಷಕ ವರ್ಣಛಾಯೆಗಳಿಂದ ಕಣ್ಮನ ಸೆಳೆಯುತ್ತವೆ. ಈ ಚಿತ್ರಗಳು ನೂರಾರು ವರ್ಷ ಕಳೆದರೂ ಸಹಿತ ಆಕರ್ಷಣೆಯನ್ನು ಕಳೆದುಕೊಂಡಿಲ್ಲ.

ಮೈಸೂರಿನ ಸಬರ್ಬ ಬಸ್ ನಿಲ್ದಾಣದ ಹತ್ತಿರವಿರುವ ಇನ್ನೊಂದು ಚರ್ಚು

---

೫ ಪ್ರೊ. ಎಂ. ವಿ. ಶ್ರೀನಿವಾಸ್ ; (ಸಂ) ಕರ್ನಾಟಕ ಚರಿತ್ರೆ (ಸಂಪುಟ ಆರು), ಪುಟ ೨೬೪

ಸಂತ ಬಾರ್ಥೋಲೋಮ್ಯುವ್ ಚರ್ಚು, ಇದನ್ನು ೧೮೩೦ ರಲ್ಲಿ ರೆಸಿಡೆನ್ಸಿಗೆ ಸೇರಿಸಿದ ಸಿವಿಲ್ ಅಧಿಕಾರಿಗಳಿಂದ ಸಂಗ್ರಹಿಸಿದ ಹಣದಿಂದ ಕಟ್ಟಲಾಯಿತು. ಈ ಚರ್ಚನ್ನು ೧೮೩೫ ರಲ್ಲಿ ಪವಿತ್ರಗೊಳಿಸಿ ಆರಂಭಿಸಲಾಯಿತು. ಮೈಸೂರಿನ ಮಹಾರಾಜರು ಇದರ ಕಿಟಕಿಗಳಿಗೆ ಬಣ್ಣದ ಗಾಜುಗಳನ್ನು ಉಡುಗೊರೆಯಾಗಿ ನೀಡಿದ್ದಾರೆಂದು ತಜ್ಞರು ಅಭಿಪ್ರಾಯ ಪಡುತ್ತಾರೆ. ಚರ್ಚದ ಒಳವಿನ್ಯಾಸವು ಸಂಪೂರ್ಣವಾಗಿ ಆಧುನಿಕರಣಗೊಂಡಿದ್ದು ಕಿಟಕಿಗಳಿಗೆ ಇತ್ತೀಚೆಗೆ ಅಂದರೆ ೧೯೯೫ ರಲ್ಲಿ ಅಳವಡಿಸಿದ ಎರಡು ಚಿತ್ರಗಳು ಅಲಂಕೃತಗೊಂಡಿವೆ. ಒಂದು ಚಿತ್ರಮಾತ್ರ ೧೯೧೦ ರ ಸುಮಾರಿಗೆ ಅಳವಡಿಸಿದ ಸಂತ ಬಾರ್ಥೋಲೋಮ್ಯುವ್ ರ ಪೂರ್ಣಭಾವಚಿತ್ರವು ಕಂಗೊಳಿಸುತ್ತದೆ. ಚರ್ಚದ ಎರಡೂ ಕಿಟಕಿಗಳಲ್ಲಿನ ಗಾಜಿನ ಚಿತ್ರಗಳನ್ನು ಸ್ಥಳೀಯ ಕಲಾವಿದರೇ ರಚಿಸಿದ್ದಾರೆಂದು ಚರ್ಚದ ಮುಖ್ಯಪಾದ್ರಿಗಳು ಹೇಳುತ್ತಾರೆ. ಎರಡೂ ಚಿತ್ರಗಳು ಆಧುನಿಕ ತಂತ್ರಶೈಲಿಯನ್ನು ಹೊಂದಿದ್ದು, ನೋಡಲು ಆಕರ್ಷಕವಾಗಿ ಕಂಡು ಬರುತ್ತವೆ. ಈ ಮೂರು ಚಿತ್ರಗಳು ಸುರಕ್ಷಿತವಾಗಿದ್ದು ಹೊಳಪಿನಿಂದ ಕೂಡಿವೆ.

೨೧ನೇ ಶತಮಾನದ ಅಪರೂಪದ ಆಧುನಿಕ ರಚನಾ ಶೈಲಿಯಲ್ಲಿ ನಿರ್ಮಾಣಗೊಂಡ ಮೈಸೂರಿನ ಬಾಲಯೇಸುವಿನ (ಕಾರ್ಮೆಲ್ ಸಭೆ) ಚರ್ಚು ಅತ್ಯಂತ ಸುಂದರ ಕಟ್ಟಡಗಳಲ್ಲಿ ಒಂದಾಗಿದೆ. ಇದು ೨೦೦೪ ರಲ್ಲಿ ಲೋಕಾರ್ಪಣೆಗೊಂಡಿತು. ಮೈಸೂರಿನ ಅರಮನೆಯನ್ನು ಹೋಲುವ ಇಂಡೊ-ಮೊಗಲ್ ಶೈಲಿಯ ವಾಸ್ತುಶಿಲ್ಪವನ್ನು ಹೊಂದಿರುವ ಈ ದೇವಾಲಯವು ವಿಭಿನ್ನತೆಗಳಿಂದ ಕೂಡಿದ ಸುಂದರವಾದ ಭಕ್ತಿಕೇಂದ್ರವಾಗಿದೆ.

ಚರ್ಚದ ಮುಖ್ಯದ್ವಾರಗಳ ಮೇಲೆ ಬಣ್ಣದ ಗಾಜಿನಿಂದ ಅಲಂಕೃತಗೊಂಡ ಚಿತ್ರಗಳಿವೆ. ಪಂಚಭುಜಗಳುಳ್ಳ ಕಮಾನುಗಳ ಕಿಟಕಿಗಳನ್ನು ಹೊಂದಿರುವ ಇವು ಪರಮ ತತ್ವದ ಮೂರು ವ್ಯಕ್ತಿಗಳನ್ನು ಪ್ರತಿಬಿಂಬಿಸುತ್ತವೆ. ಚರ್ಚದ ಒಳಗೆ ಹದಿನಾಲ್ಕು ಕಿಟಕಿಗಳ ಮೇಲೆ 'ಶಿಲುಬೆಯ ಹಾದಿ' ಭಕ್ತಿಯನ್ನು ಸಂಕೇತಿಸುವ ಗಾಜಿನ ಚಿತ್ರಗಳು ಅಲಂಕೃತಗೊಂಡಿವೆ. ಈ ಚಿತ್ರಗಳು ಮರದ ಚೌಕಟ್ಟುಗಳಲ್ಲಿ ಬಂಧಿಸಲ್ಪಟ್ಟಿದ್ದು ಉತ್ತಮ ರಕ್ಷಣೆಯನ್ನು ಹೊಂದಿವೆ. ಚರ್ಚಿನಲ್ಲಿ ಮೂರು ಹಂತದಲ್ಲಿ ರಚಿಸಲಾದ ಗಾಜಿನ ಚಿತ್ರಗಳು ರಚನೆಗೊಂಡಿವೆ. ಮೊದಲ ಹಂತದಲ್ಲಿನ ಚಿತ್ರಗಳು ಯೇಸುವಿನ ಜನನದಿಂದ ಮರಣದ ತನಕ, ನಂತರ ಪುನರುತ್ಥಾನದ ವಿಷಯಗಳನ್ನು ಒಳಗೊಂಡರೆ ಎರಡನೆ ಹಂತದಲ್ಲಿ ಚಿತ್ರಗಳು, ದೇವಾಲಯದ ಮಧ್ಯದ ಗೋಡೆಗಳ ಕಿಟಕಿಗಳಲ್ಲಿ ಕಂಡು ಬರುತ್ತವೆ. ಇಲ್ಲಿ ರಚನೆಗೊಂಡಿರುವ ೧೩ ಕಿಟಕಿಗಳಲ್ಲಿ ಬಣ್ಣದ ಗಾಜಿನ ಕೈಗಳ ಚಿಹ್ನೆಗಳು ಬೈಬಲ್ ಆಧಾರಿತವಾಗಿದ್ದು ಅದರಲ್ಲಿನ ಪ್ರಮುಖ ಘಟನೆಗಳನ್ನು ನೆನೆಪಿಸುತ್ತವೆ.

ಚರ್ಚದ ಮೂರನೆಯ ಹಂತದ ವೃತ್ತಾಕಾರದ ಕಿಟಕಿಗಳಲ್ಲಿ ಅಳವಡಿಸಿದ ಗಾಜುಗಳ ಮೇಲೆ ಪ್ರಪಂಚದ ಕೆಲವು ಶ್ರೇಷ್ಠ ಧರ್ಮಗಳ ಚಿಹ್ನೆಗಳನ್ನು ಚಿತ್ರಿಸಲಾಗಿದೆ. ಈ ಚಿತ್ರಗಳು 'ಸರ್ವಧರ್ಮ ಸಮನ್ವಯ' ಎಂಬುದನ್ನು ಸಾರುತ್ತವೆ. ಈ ಎಲ್ಲ ಚಿತ್ರಗಳು ಉತ್ತಮ ಸ್ಥಿತಿಯಲ್ಲಿದ್ದು ನೋಡಲು ಅತ್ಯಾಕರ್ಷಕವಾಗಿವೆ. ಕರ್ನಾಟಕದ ಹಲವಾರು ಚರ್ಚುಗಳಲ್ಲಿ ಕಂಡು ಬರುವ 'ಸ್ಟೇನ್ಡ್ ಗ್ಲಾಸ್' ಚಿತ್ರಗಳು ಬಹುತೇಕ ಅವಸಾನದ ಅಂಚಿನಲ್ಲಿದ್ದು ಪ್ರಕೃತಿಯ ವಿಕೋಪ ಹಾಗೂ ಮಾನವ ಕಿಡಿಗೇಡಿ ಕೆಲಸದಿಂದ ವಿರೂಪಗೊಂಡಿವೆ. ಕೆಲವೊಂದು ಚಿತ್ರಗಳು ಹಾಳಾಗಿ ಹೋಗಿವೆ. ಇಂದು ಚರ್ಚಗಳನ್ನು





ಸಂತ ಸೆಬಾಸ್ಟಿಯನ್ ಚರ್ಚ್
ಮಂಗಳೂರು



ಕ್ಲೋಯಿಸ್ಟೆಡ್ ಕಾರ್ಮೆಲ್ ಚರ್ಚ್
ಮಂಗಳೂರು



ಸಂತ ಫಿಲೋಮಿನಾ ಚರ್ಚ್
ಮೈಸೂರು



ಬಾರ್ತೊಲೋಮಿವ್ ಚರ್ಚ್
ಮೈಸೂರು

ಚರ್ಚುಗಳಲ್ಲಿ ಜೋಡಿತಗೊಂಡ ಗಾಜಿನ ಮೇಲಿನ ಚಿತ್ರಗಳು

ಪುನರುಜ್ಜೀವನ ಗೊಳಿಸುವುದರಿಂದ ಅವುಗಳ ವಾಸ್ತುವಿನ್ಯಾಸವು ಬದಲಾವಣೆಗೊಂಡಿವೆ. ಇದಕ್ಕೆ ತಕ್ಕ ಆಧುನಿಕ ರೀತಿಯ ವಸ್ತುಗಳನ್ನು ಬಳಸುತ್ತಿದ್ದಾರೆ. ಕಿಟಕಿ ಹಾಗೂ ಬಾಗಿಲುಗಳು ಹೊಸ ವಿನ್ಯಾಸಗಳನ್ನು ಪಡೆದುಕೊಂಡು ವಿಶಿಷ್ಟ ಶೈಲಿಯಲ್ಲಿ ರೂಪಗೊಳ್ಳುತ್ತಲಿವೆ. ಇವುಗಳಿಗೆ ಅಳವಡಿಸಿದ ಹಳೆಯ ಗಾಜಿನ ಚಿತ್ರಗಳನ್ನು ತೆಗೆದು ಇಂದಿನ ಹೊಸ ವಿನ್ಯಾಸದ ಗಾಜಿನ ಚಿತ್ರಗಳನ್ನು ಅಲಂಕರಿಸಲಾಗುತ್ತಿದೆ. ಆದಷ್ಟು ಹಳೆಯ ಚಿತ್ರಗಳನ್ನು ಹಾಗೂ ಅವುಗಳ ರಚನೆಯ ವೈವಿಧ್ಯತೆಯನ್ನು ಅರಿತು ಮುಂದಿನ ಪೀಳಿಗೆಯವರೆಗೆ ಸಿಗುವಂತೆ ಪ್ರಯತ್ನಿಸಬೇಕು.

**ಫ. ಮಹ್ಮದೀಯ ಕಟ್ಟಡಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳು**

ಮಹ್ಮದೀಯ ಕಟ್ಟಡಗಳಲ್ಲಿ ಮುಖ್ಯವಾಗಿ ಪ್ರಾರ್ಥನಾ ಮಂದಿರಗಳು, ದರಗಾಗಳು, ಸಮಾಧಿಗಳು, ಮಹಲ್‌ಗಳು ಇತ್ಯಾದಿ ಕಟ್ಟಡಗಳಾಗಿವೆ. ಈ ಕಟ್ಟಡಗಳಲ್ಲಿ ವರ್ಣಚಿತ್ರಗಳಲ್ಲದೇ ಗಾಜಿನ ಸಂಕಲನ ಚಿತ್ರಗಳು, ಝುಮ್ಮರಗಳು, ಕ್ಯಾಂಡಲ್ ಬಲ್ಬಗಳು ಹಾಗೂ ಇವುಗಳ ಮೇಲೆ ಆಕರ್ಷಕ ವರ್ಣಚಿತ್ರಗಳು ರಚನೆಗೊಂಡಿದ್ದನ್ನು ಕಾಣಬಹುದು. ಇವರ ಕಟ್ಟಡಗಳಲ್ಲಿ ಗಾಜಿನ ಕೆಲಸ ಅಷ್ಟೊಂದು ಪ್ರಬುದ್ಧರೂಪದಲ್ಲಿರುವುದನ್ನು ಕಾಣುವುದಿಲ್ಲ, ಸಂಕಲನ ಚಿತ್ರಗಳು ಹೆಚ್ಚಾಗಿ ಕಂಡುಬರುತ್ತವೆ.

ಕರ್ನಾಟಕದಲ್ಲಿ ಗುಲ್ಬರ್ಗಾದ ಖಾಜಾ ಬಂದೇನವಾಜ ದರ್ಗಾದ ಮುಖ್ಯದರಗಾದ ಗುಮ್ಮಟದ ಛತ್ತಿಗೆ ಗಾಜಿನ ಸಂಕಲನ ಚಿತ್ರಗಳು ರಚನೆಗೊಂಡಿದ್ದನ್ನು ವಿವೇಚಿಸಬಹುದು. ಇಲ್ಲಿ ರಚನೆಗೊಂಡಿರುವ ಸಂಕಲನ ಚಿತ್ರಗಳು ಅಲಂಕಾರಿಕ ಚಿತ್ರವಿನ್ಯಾಸಗಳಿಂದ ಕೂಡಿವೆ. ಇದೇ ದರಗಾದ ಆವರಣದಲ್ಲಿರುವ 'ಶಾಹೀದ ಉಲ್ಲಾ ಹುಸೇನಿ' ಗುಂಬಜ್‌ದಲ್ಲಿ ಚೌಕಾಕಾರದ ಗಾಜಿನ ಲ್ಯಾಂಪ್ ಒಂದು ಸಂಗ್ರಹಗೊಂಡಿದ್ದು, ಇದು ಸುಮಾರು ನೂರು ವರ್ಷಗಳಿಗಿಂತಲೂ ಹಳೆಯದಾಗಿದೆ. ಗಾಜಿನ ಲ್ಯಾಂಪನ ನಾಲ್ಕೂ ಮೈಗಳಲ್ಲಿ ಪ್ರಾಣಿಗಳ ಹಾಗೂ ಉರ್ದು ಲಿಪಿಯ ಚಿತ್ರವಿನ್ಯಾಗಳು ರೂಪಗೊಂಡಿವೆ. ಇದು ಇಂದು ಸಂಪೂರ್ಣ ಜಖಂಗೊಂಡಿದ್ದು, ಇದನ್ನು ಬಳಸದೇ ಗುಂಬಜ್ ನಲ್ಲಿ ಕಟ್ಟಿಹಾಕಲಾಗಿದೆ. ಇಲ್ಲಿ ಕಂಡುಬರುವ ಚಿತ್ರಗಳು ವಿಕೋಪದಿಂದ ಮಾಸಿಹೋಗಿದ್ದು ಚಿತ್ರಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಈ ಚಿತ್ರಮಯ ಅಪರೂಪದ ಲ್ಯಾಂಪನ್ನು ಸಂರಕ್ಷಿಸಬೇಕು. ಆ ಚಿತ್ರಗಳ ಸಂದೇಶವನ್ನು ಅರಿಯಬೇಕಾಗಿದೆ. ಇದೇ ರೀತಿ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ಇಂಥ ಚಿತ್ರಗಳು ಕಂಡು ಬರಬಹುದಾದರೂ ಸಹ ನನಗೆ ಲಭ್ಯವಾದವುಗಳನ್ನು ಇಲ್ಲಿ ವಿವೇಚಿಸಲಾಗಿದೆ.

**ಗ. ಸಾರ್ವಜನಿಕ ಹಾಗೂ ವಾಣಿಜ್ಯ ಕಟ್ಟಡಗಳಲ್ಲಿ ಪೋಷಿತಗೊಂಡ ಗಾಜಿನ ಮೇಲಿನ ಚಿತ್ರಗಳು**

ಗಾಜಿನ ಮೇಲಿನ ಕಲೆ ಇಂದು ವ್ಯಾಪಕವಾಗಿ ಎಲ್ಲ ಕ್ಷೇತ್ರಗಳಲ್ಲಿ ಬೆಳವಣಿಗೆಯಾಗುವುದನ್ನು ನೋಡುತ್ತಿದ್ದೇವೆ. ಸಾರ್ವಜನಿಕ ಕಟ್ಟಡಗಳಾದ ಶಾಲಾ ಕಾಲೇಜು ಕಟ್ಟಡಗಳಲ್ಲಿ, ವಸತಿ ಮಂದಿರಗಳ ಕಟ್ಟಡಗಳಲ್ಲಿ, ಉದ್ಯಾನ ವನಗಳಲ್ಲಿ, ಹೊಟೆಲಗಳ ಕಟ್ಟಡಗಳಲ್ಲಿ, ಆಡಳಿತ ಕಛೇರಿಗಳ ಕಟ್ಟಡಗಳಲ್ಲಿ ವಿಹಾರ ಮಂದಿರಗಳಲ್ಲಿ ಗಣನೀಯವಾಗಿ ಬಳಸಿರುವುದನ್ನು

ಕಾಣುತ್ತೇವೆ. ಇದು ಹಿಂದಿನಿಂದಲೂ ಬೆಳೆದು ಬಂದಿರುವುದಕ್ಕೆ ಹಳೆಯ ಕಾಲದ ಕಟ್ಟಡಗಳ ಕಿಟಕಿ, ಬಾಗಿಲು ಹಾಗೂ ಮೇಲ್ಛಾವಣಿಗಳಲ್ಲಿ ಕಂಡು ಬರುವ ಗಾಜಿನ ಚಿತ್ರಗಳೇ ಸಾಕ್ಷಿಯಾಗಿವೆ, ಜೊತೆಗೆ ವಿವಿಧ ರೀತಿಯ ವಾಹನಗಳಲ್ಲಿ ವೈವಿಧ್ಯಮಯ ಗಾಜಿನ ಚಿತ್ರಕಲೆಯನ್ನು ಕಾಣುತ್ತೇವೆ. ಇದಕ್ಕೆ ಮುಖ್ಯ ಕಾರಣ ಗಾಜಿನ ಆಕರ್ಷಕರೂಪ, ಪಾರದರ್ಶಕತೆ, ವೈವಿಧ್ಯಮಯ ವರ್ಣಗಳ ಸಂಯೋಜನೆ ಬೇಕಾದ ಆಕಾರದಲ್ಲಿ ಪರಿವರ್ತಿಸುವಿಕೆ, ಬೇಕಾದ ಮೈವಳಿಕೆಯನ್ನು ತರಬಹುದಾದುದರಿಂದ ಇದನ್ನು ಎಲ್ಲ ಕ್ಷೇತ್ರದ ಜನರು ಬಳಸುತ್ತಾರೆ. ಇಂದು ದೊಡ್ಡ ಉದ್ಯಮವಾಗಿ ಬೆಳೆದಿದೆ ಎಂದರೆ ತಪ್ಪಾಗಲಾರದು. ಇಂದು ಯಾವುದೇ ರೀತಿಯ ವಾಸ್ತು ಕಟ್ಟಡಗಳಲ್ಲಿ ಗಾಜಿನಿಂದ ಕೆಲಸ ಮಾಡಿರುವುದನ್ನು ನೋಡುತ್ತೇವೆ.

ಬಹುತೇಕ ವಾಣಿಜ್ಯ ಕಟ್ಟಡಗಳಲ್ಲಿ ಬಳಸುವ ಗಾಜಿನ ಚಿತ್ರಕಲೆಯಲ್ಲಿ ಸಮಕಾಲೀನ ಚಿತ್ರಶೈಲಿಯನ್ನು ಕಾಣುತ್ತೇವೆ. ಅಮೂರ್ತ ಹಾಗೂ ಅಮೂರ್ತ ರೂಪಗಳನ್ನು ವೈವಿಧ್ಯಮಯ ರೇಖೆ ಹಾಗೂ ವರ್ಣ ಸಂಯೋಜನೆಯನ್ನು ಮಾಡಿದ್ದು ಹೆಚ್ಚಾಗಿ ಕಂಡು ಬರುತ್ತದೆ. ಆಕೃತಿಗಳ ರೂಪಲಕ್ಷಣಗಳು. ಪ್ರಕೃತಿಯ ರೂಪಲಕ್ಷಣಗಳು, ಪ್ರಾಣಿ, ಪಕ್ಷಿಗಳನ್ನು ಬಳಸಿಕೊಂಡು ಕಲಾಪೋಷಕರ ಆಶಯದ ಮೇರೆಗೆ ಕಲಾವಿದನು ರಚನೆ ಮಾಡಿಕೊಡುವುದನ್ನು ವಿವೇಚಿಸಬಹುದಾಗಿದೆ. ಇಲ್ಲಿ ರೂಪಗೊಳ್ಳುತ್ತಿರುವ ಗಾಜಿನ ಚಿತ್ರಕಲೆಯು ಶಾಶ್ವತವಾಗಿ ಉಳಿದುಕೊಳ್ಳುತ್ತವೆ ಎಂಬ ನಂಬಿಕೆ ಇಲ್ಲ. ಮತ್ತೇ ಮತ್ತೇ ಬದಲಾವಣೆಯನ್ನು ತಳೆಯುತ್ತವೆ. ಹೊಸ ಹೊಸ ವಿನ್ಯಾಸವನ್ನು ಪಡೆಯುತ್ತವೆ.

೧೯೦೦ ರ ಸುಮಾರಿಗೆ ರೂಪಿತಗೊಂಡ ಮೈಸೂರಿನ 'ನಿಷಾದ್ ಬಾಗ್' ಪಾರ್ಕನಲ್ಲಿ ಒಂದು ಗಾಜಿನ ಮಂಟಪವಿದೆ. ಅಷ್ಟಭುಜಾಕೃತಿಯ ಈ ಗಾಜಿನ ಗುಮ್ಮಟವು ಸಂಪೂರ್ಣ ಗಾಜಿನಿಂದ ಕೂಡಿದ್ದು, ಇದರ ಮೇಲೆ ಅಮೂಲ್ಯವಾದ ಮೈಸೂರು ಶೈಲಿಯ ಸಾಂಪ್ರದಾಯಿಕ ಪೌರಾಣಿಕ ವ್ಯಕ್ತಿಚಿತ್ರಗಳಿವೆ. ಇವು ಅಲಂಕಾರಿಕ ರೇಖೆ ಹಾಗೂ ಆಕರ್ಷಕ ವರ್ಣ ಛಾಯೇಯ ವೈವಿಧ್ಯತೆಯಿಂದ ನೋಡುಗರನ್ನು ಮಂತ್ರಮುಗ್ಧರನ್ನಾಗಿಸುತ್ತವೆ. ಒಟ್ಟು ಹನ್ನೆರಡು ಚಿತ್ರಗಳಲ್ಲಿ ಏಳು ಚಿತ್ರಗಳು ಮಾತ್ರ ಉಳಿದಿವೆ. ಉಳಿದ ಐದು ಚಿತ್ರಗಳು ಒಡೆದು ಹೋಗಿವೆ. ಗುಮ್ಮಟದಲ್ಲಿ ನೈಸರ್ಗಿಕ ಚಿತ್ರವಿನ್ಯಾಸಗಳು ಸೂಕ್ಷ್ಮ ರೇಖಾ ಸಂಯೋಜನೆಯಿಂದ ರಚನೆಗೊಂಡಿವೆ. ಗಾಜಿನ ಚಿತ್ರಗಳು ಲೋಹದ ಸರಳುಗಳಲ್ಲಿ ಬಂಧಿತವಾಗಿದ್ದರೂ, ಸರಿಯಾದ ಸಂರಕ್ಷಣೆ ಇಲ್ಲದೇ ಹಾಳಾಗಿ ಹೋಗಿವೆ. ಇಂದು ಪಾಲಿಕೆಯವರು ಇದಕ್ಕೆ ಪುನಶ್ಚೇತನ ನೀಡುವ ಕಾಯಕಲ್ಪ ಮಾಡುತ್ತಿದ್ದಾರೆ.

ಈ ರೀತಿಯಾಗಿ ರಾಜ್ಯದ ವಿವಿಧ ಭಾಗಗಳಲ್ಲಿ ಬೇರೆ ಬೇರೆ ರೂಪಗಳಲ್ಲಿ ಬೇರೆ ರಚನಾತಂತ್ರ ಶೈಲಿಯಲ್ಲಿ ಗಾಜಿನ ಮೇಲಿನ ಚಿತ್ರಗಳು ಕಂಡು ಬರುತ್ತವೆ. ಇವು ಬಹುತೇಕ ಆಧುನಿಕ ರಚನೆಯಲ್ಲಿ ರೂಪಗೊಂಡಿವೆ, ಹಾಗೂ ಸಮಕಾಲೀನ ವಸ್ತು ವಿಷಯವನ್ನು ಒಳಗೊಂಡಿವೆ. ಕರ್ನಾಟಕದಲ್ಲಿ ಇಂಥ ವಾಸ್ತುಶಿಲ್ಪಗಳಲ್ಲಿ ರೂಪಗೊಂಡ ಗಾಜಿನ ಚಿತ್ರಗಳನ್ನು ಸಂರಕ್ಷಿಸುವುದು ಸಾಂಸ್ಕೃತಿಕ ದೃಷ್ಟಿಯಿಂದ ಅಗತ್ಯವಾಗಿದೆ.

■■■

ಕರ್ನಾಟಕದಲ್ಲಿ ಗಾಜಿನ ಚಿತ್ರಕಲೆ ಪ್ರಾಚೀನ ಪರಪಂರೆ ಹೊಂದಿದ್ದು ಇತರ ಚಿತ್ರಕಲಾ ಪ್ರಕಾರಗಳಿಗಿಂತ ಭಿನ್ನವಾಗಿದೆ. ಸೌಂದರ್ಯಾನುಭವ ಹಾಗೂ ವಾಣಿಜ್ಯಕರಣ ಎರಡೂ ಉದ್ದೇಶಗಳ ಹಿನ್ನೆಲೆಯಲ್ಲಿ ಇದು ಕರ್ನಾಟಕದಲ್ಲಿ ಬೆಳೆದುಬಂದಿದೆ. ಇತರ ಕಲಾ ಪ್ರಕಾರಗಳಂತೆ ಗಾಜಿನ ಚಿತ್ರಕಲೆಯು ಸಹಿತ ಧಾರ್ಮಿಕವಾಗಿ, ಸಾಮಾಜಿಕವಾಗಿ, ಪರಿಣಾಮಕಾರಿಯಾದ ಪಾತ್ರವಹಿಸುತ್ತ ಧಾರ್ಮಿಕ ಸಮನ್ವಯತೆ, ಸಾಮಾಜಿಕ ಸಾಮರಸ್ಯವನ್ನುಂಟು ಮಾಡುವ ನಿಟ್ಟಿನಲ್ಲಿ ಈ ಕಲಾಪ್ರಕಾರ ಪ್ರಮುಖ ಪಾತ್ರವಹಿಸಿದೆ. ಕಲಾಕ್ಷೇತ್ರದಲ್ಲಿ ಅಲಂಕಾರಿಕ ಕುಶಲಕಲೆ ಎಂದೇ ಗುರಿತಿಸಲ್ಪಟ್ಟಿರುವ ಗಾಜಿನ ಚಿತ್ರಕಲೆಯನ್ನು ಗಂಭೀರ ಕಲಾ ಪ್ರಕಾರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿದ ಪ್ರಸ್ತುತ ಪ್ರಬಂಧದಲ್ಲಿ ಒಟ್ಟು ಏಳು ಅಧ್ಯಾಯಗಳಲ್ಲಿ ವಿಷಯ ನಿರೂಪಣೆಗೊಂಡು ವಿಶ್ಲೇಷಣೆಗೊಳಪಡಿಸಲಾಗಿದೆ. ಪ್ರತಿಯೊಂದು ಅಧ್ಯಾಯದಲ್ಲಿ ಕಂಡುಕೊಂಟ ಫಲಿತಗಳನ್ನು ಕೆಳಗಿನಂತೆ ಸ್ಥೂಲವಾಗಿ ನೋಡಬಹುದು.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವಿಧಾನ ಹಾಗೂ ವ್ಯಾಪ್ತಿಯನ್ನು ಕುರಿತು ಹೇಳಲಾಗಿದೆ. ಇಲ್ಲಿ ಪ್ರಸ್ತುತ ಅಧ್ಯಯನದ ಪ್ರಮುಖ ಉದ್ದೇಶಗಳು, ಅಧ್ಯಯನದ ಮಹತ್ವ, ವಿಶಾಲವಾದ ಗಾಜಿನ ಚಿತ್ರಕಲಾ ಕ್ಷೇತ್ರದಲ್ಲಿ ಸೀಮಿತಗೊಳಿಸಿಕೊಂಡಿರುವ ವ್ಯಾಪ್ತಿ, ಪ್ರಬಂಧ ರಚನೆಯ ವಿಧಾನ, ಬಳಸಿಕೊಂಡಿರುವ ಆಕರ ಸಾಮಗ್ರಿಗಳ ಬಗ್ಗೆ ಹೇಳಲಾಗಿದೆ. ಅಲ್ಲದೆ ಗಾಜಿನ ಮೇಲಿನ ಚಿತ್ರಕಲೆ ಎಂಬ ಈ ಅಧ್ಯಯನದಿಂದ ಧಾರ್ಮಿಕ, ಸಾಮಾಜಿಕ ಔದ್ಯೋಗಿಕ ಹಾಗೂ ಕಲಾಕ್ಷೇತ್ರಗಳಿಗೆ ಉಂಟಾಗುವ ಪ್ರಯೋಜನಗಳ ಜೊತೆಗೆ ಅಧ್ಯಯನದ

ಇಂದಿನ ಪ್ರಸ್ತುತತೆಗಳನ್ನು ಕುರಿತು ಚರ್ಚಿಸಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಗಾಜಿನ ಮೇಲಿನ ಚಿತ್ರಕಲೆಯ ನೆಲೆ ಹಿನ್ನೆಲೆಯನ್ನು ಕುರಿತು ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಚಿತ್ರಕಲೆಯ ಬೆಳವಣಿಗೆಯ ಹಿನ್ನೆಲೆಯ ಮೊದಲು ಗಾಜಿನ ಉಗಮ, ತಯಾರಿಕೆ ಹಾಗೂ ಅದರ ಹುಟ್ಟು ಬೆಳವಣಿಗೆಯನ್ನು ಮೊದಲು ಸಂಕ್ಷಿಪ್ತವಾಗಿ ಪರಿಚಯಿಸಿ, ನಂತರ ಗಾಜಿನ ಮೇಲೆ ರೂಪಗೊಂಡ ಚಿತ್ರಕಲೆಯ ಬೆಳವಣಿಗೆಯನ್ನು ವಿವೇಚನೆ ಮಾಡಲಾಗಿದೆ.

ಗಾಜಿನ ತಯಾರಿಕೆಯನ್ನು ಆಕಸ್ಮಿಕವಾಗಿ ಮಾನವ ಕಂಡುಕೊಂಡ ರೀತಿ, ಅದರ ಪ್ರಾಚೀನ ರೂಪ, ಸೋಡಿಯಂ, ಸುಣ್ಣ, ಉಸುಕುಗಳಿಂದ ಪ್ರಾಚೀನರು ಗಾಜು ತಯಾರಿಸುತ್ತಿದ್ದ ಪದ್ಧತಿ, ನಂತರ ಬಣ್ಣದ ಗಾಜುಗಳನ್ನು ತಯಾರಿಸುವ ವಿಧಾನಗಳ ಬಗ್ಗೆ ಹೇಳಲಾಗಿದೆ. ಗಾಜಿನ ಐತಿಹಾಸಿಕ ಹಿನ್ನೆಲೆಯನ್ನು ಕುರಿತು ಹೇಳುವಾಗ ಜಾಗತಿಕವಾಗಿ, ಗಾಜಿನ ಪ್ರಾಚೀನತೆ, ಅದರ ಮೇಲೆ ಚಿತ್ರಕಲೆ ರೂಪಗೊಳ್ಳಲು ತೊಡಗಿದ ಸಂದರ್ಭ ಇವುಗಳನ್ನು ಹೇಳಿ, ನಂತರ ಭಾರತ ಹಾಗೂ ಕರ್ನಾಟಕದಲ್ಲಿ ಗಾಜು ಮತ್ತು ಗಾಜಿನ ಚಿತ್ರಕಲೆಗಳ ಪ್ರಾಚೀನತೆಯ ಬಗ್ಗೆ ವಿವರಿಸಲಾಗಿದೆ.

ಭಾರತದಲ್ಲಿ ರಾಮಾಯಣ ಮಹಾಭಾರತಗಳ ಕಾಲದಲ್ಲಿ ಬಳಕೆಯಲ್ಲಿದ್ದ ಗಾಜಿನ ಚಿತ್ರಕಲೆಯ ವಿನ್ಯಾಸ, ಮೌರ್ಯರು, ಶಾತವಾಹನರು, ಗುಪ್ತರು, ಪಲ್ಲವರು, ಚೋಳರು ಹೀಗೆ ವಿವಿಧ ಅರಸು ಮನೆತನಗಳ ಕಾಲದ ಗಾಜಿನ ಕಲಾತ್ಮಕ ವಿನ್ಯಾಸಗಳ ಬಗ್ಗೆ ಸಾಂಕೇತಿಕವಾಗಿ ಹೇಳಲಾಗಿದೆ. ಕರ್ನಾಟಕದ ಗಾಜಿನ ಚಿತ್ರಕಲೆಯ ಇತಿಹಾಸವನ್ನು ಕಟ್ಟಿಕೊಡುವಾಗ ಕ್ರಿಪೂ. ಕಾಲದಲ್ಲಿ ಈ ಪ್ರದೇಶದಲ್ಲಿದ್ದ ಗಾಜಿನ ತಯಾರಿಕಾ ಕೇಂದ್ರಗಳು, ಗಾಜು ತಯಾರಿಸುವ ಕುಲುಮೆಗಳ ಬಗ್ಗೆ ಪ್ರಸ್ತಾಪಿಸಲಾಗಿದೆ. ನಂತರ ಕರ್ನಾಟಕವನ್ನಾಳಿದ ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರ ಸಾಮ್ರಾಟರು, ನಾಯಕ ಅರಸು ಮನೆತನದ ಕಾಲಗಳಲ್ಲಿ ಗಾಜಿನ ಅಲಂಕರಣ ಹಾಗೂ ಗಾಜಿನ ಚಿತ್ರಕಲೆ ಹೇಗಿತ್ತೆಂಬುದನ್ನು ಪರಿಶೀಲಿಸಲಾಗಿದೆ.

ಕರ್ನಾಟಕದ ಗಾಜಿನ ಚಿತ್ರಕಲೆಯ ಇತಿಹಾಸದಲ್ಲಿ ವಿಜಯನಗರ ಅರಸರ ನಂತರ ನಾಯಕ ಅರಸರು ಪ್ರಮುಖ ಪಾತ್ರವಹಿಸಿರುವುದನ್ನು ಕಂಡುಕೊಳ್ಳಲಾಗಿದೆ. ವಿಜಯನಗರ ಕಾಲದಲ್ಲಿ ಭೇಟಿ ನೀಡಿದ ಹಲವಾರು ವಿದೇಶಿ ಪ್ರವಾಸಿಗರು ತಮ್ಮೊಡನೆ ಮಾತೃದೇಶದ ಗಾಜಿನ ಕಲಾಕೃತಿಗಳನ್ನು ತಂದು ಇಲ್ಲಿನ ರಾಜರಿಗೆ, ಅಧಿಕಾರಿ ವರ್ಗದವರಿಗೆ ಮತ್ತು ಶ್ರೀಮಂತರಿಗೆ ಕೊಟ್ಟಿರುವುದು ಮತ್ತು ಸ್ಥಳೀಯವಾಗಿರುವ ಗಾಜಿನ ಚಿತ್ರಕಲೆ ಮತ್ತು ಗಾಜಿನ ಕಲಾತ್ಮಕ ವಿನ್ಯಾಸಗಳನ್ನು ಕುರಿತು ತಮ್ಮ ಬರವಣಿಗೆಯಲ್ಲಿ ಪ್ರಸ್ತಾಪಿಸಿರುವುದನ್ನು ಉದಾಹರಿಸಲಾಗಿದೆ.

ವಿಜಯನಗರ ಸಾಮ್ರಾಜ್ಯ ಪತನಗೊಂಡ ನಂತರ ಸ್ವತಂತ್ರಗೊಂಡ ನಾಯಕ ಅರಸರು ಗಾಜಿನ ಚಿತ್ರಕಲೆಯ ಬೆಳವಣಿಗೆಯಲ್ಲಿ ವಿಶೇಷ ಪಾತ್ರವಹಿಸಿರುವುದನ್ನು ಹೇಳಲಾಗಿದೆ. ತಂಜಾವೂರಿನ ನಾಯಕರು, ಸುರಪುರದ ನಾಯಕರು, ಮೈಸೂರಿನ ಒಡೆಯರು, ಚಿತ್ರದುರ್ಗದ ನಾಯಕರು, ಇಕ್ಕೇರಿ, ಕೆಳದಿ, ಬೀಳಗಿ ಸಂಸ್ಥಾನಿಕರು ಗಾಜಿನ ಚಿತ್ರಕಲೆಯ ಬೆಳವಣಿಗೆಗೆ ನೀಡಿರುವ ಮೌಲಿಕ ಕೊಡುಗೆಗಳನ್ನು ಉದಾಹರಣೆಗಳ ಸಹಿತ ಬಿಂಬಿಸಲಾಗಿದೆ. ನಂತರ ಟಿಪ್ಪುಸುಲ್ತಾನ ಮತ್ತು ಹೈದರಾಲಿಯವರ ಕಾಲದಲ್ಲಿ ಈ ಕಲಾಪ್ರಕಾರಕ್ಕೆ ದೊರಕಿದ ಮಹತ್ವ, ಇಸ್ಲಾಂ ಮತ್ತು

ಹಿಂದೂ ಪ್ರಭಾವಗಳೊಂದಿಗೆ ಬೆಳೆದ ಕರ್ನಾಟಕದ ಗಾಜಿನ ಕಲೆಯ ಲಕ್ಷಣಗಳನ್ನು ಸ್ಥೂಲವಾಗಿ ಗಮನಿಸಲಾಗಿದೆ.

ಕರ್ನಾಟಕ ಪ್ರದೇಶಕ್ಕೆ ಪಾಶ್ಚಾತ್ಯರು ಬಂದು ನೆಲೆನಿಂತ ಮೇಲೆ ಗಾಜಿನ ಚಿತ್ರಕಲೆಗೆ ದೊರಕಿದ ಮಹತ್ವ, ವೈವಿಧ್ಯತೆ ಇವುಗಳೊಂದಿಗೆ ಗಾಜಿನ ಚಿತ್ರಕಲೆಯ ಅಗಾಧ ಬೆಳವಣಿಗೆಯನ್ನು ಉದಾಹರಣೆಗಳೊಂದಿಗೆ ವಿವೇಚಿಸಲಾಗಿದೆ. ನಂತರದ ದಿನಗಳಲ್ಲಿ ಶ್ರೀಮಂತರು, ಅಧಿಕಾರಿಗಳು, ಪ್ರಮುಖ ವ್ಯಕ್ತಿಗಳು, ಮಠಮಾನ್ಯಗಳು, ಚರ್ಚು-ಮಸೀದಿಗಳು, ಸಂಘ ಸಂಸ್ಥೆಗಳು, ಕಲಾವಿದರು ದೇವಾಲಯಗಳ ಮೂಲಕ ಗಾಜಿನ ಚಿತ್ರಕಲೆ ಕರ್ನಾಟಕದಲ್ಲಿ ಹೇಗೆ ಬೆಳೆದು ಬಂದಿತು ಎಂಬುದನ್ನು ಕಂಡುಕೊಳ್ಳಲಾಗಿದೆ. ಕರ್ನಾಟಕದ ಗಾಜಿನ ಚಿತ್ರಕಲೆಯ ಇತಿಹಾಸವನ್ನು ಅನುಕ್ರಮವಾಗಿ ಕಟ್ಟಿಕೊಡುವ ನಿಟ್ಟಿನಲ್ಲಿ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ವ್ಯವಹಾರಿಕವಾಗಿ, ಐತಿಹಾಸಿಕವಾಗಿ ಅದು ಯಾವ ಪರಿಣಾಮವನ್ನುಂಟು ಮಾಡುತ್ತಾ ಬೆಳೆಯಿತು ಎಂಬಂತಹ ಗಮನಾರ್ಹ ಅಂಶಗಳನ್ನು ವಿಶ್ಲೇಷಿಸಿರುವುದು ಈ ಅಧ್ಯಾಯದ ಮೌಲಿಕತೆಯಾಗಿದೆ.

ಅಧ್ಯಾಯ ಮೂರರಲ್ಲಿ ಗಾಜಿನ ಚಿತ್ರಕಲೆಯ ಪರಿಕರಗಳು ಮತ್ತು ರಚನಾ ವಿಧಾನಗಳನ್ನು ಪ್ರತ್ಯೇಕವಾಗಿ ವಿಂಗಡಿಸಿಕೊಂಡು ವಿವೇಚಿಸಲಾಗಿದೆ. ಮೊದಲಿಗೆ ಗಾಜಿನ ತಯಾರಿಕೆ ಅದರಲ್ಲಿ ಬಳಕೆಗೊಳ್ಳುವ ಪರಿಕರಗಳು ಹಾಗೂ ತಯಾರಿಕೆಯ ವಿವಿಧ ಹಂತಗಳನ್ನು ಹೇಳಲಾಗಿದೆ. ಗಾಜಿನ ತಯಾರಿಕೆಯಲ್ಲಿ ಬಳಸುವ ಸೋಡಿಯಂ, ಸುಣ್ಣ, ಉಸುಕುಗಳಂತಹ ಪರಿಕರಗಳನ್ನು ಬೆರೆಸಿಕೊಳ್ಳುವ ಪ್ರಮಾಣ, ಕಾಯಿಸುವ ಉಷ್ಣತಾಮಾನ, ಬೇಕಾದ ಆಕಾರಕ್ಕೆ ಅಚ್ಚಿನ ಮೂಲಕ ಪರಿವರ್ತಿಸಿಕೊಳ್ಳುವ ರೀತಿಗಳನ್ನು ತಿಳಿಸಲಾಗಿದೆ. ಜೊತೆಗೆ ತೆಳುಗಾಜು, ದಪ್ಪಗಾಜು, ಬಣ್ಣದ ಗಾಜುಗಳನ್ನು ತಯಾರಿಸುವ ಪರಿಕರಗಳು ಹಾಗೂ ವಿಧಾನಗಳನ್ನು ವಿವೇಚಿಸಲಾಗಿದೆ.

ಗಾಜಿನ ಮೇಲೆ ಚಿತ್ರ ರಚಿಸುವ ಪರಿಕರ ಹಾಗೂ ವಿಧಾನಗಳನ್ನು ಪ್ರತ್ಯೇಕವಾಗಿ ವಿವೇಚಿಸಲಾಗಿದೆ. ಇಲ್ಲಿ ಬಣ್ಣಗಳು, ಕುಂಚಗಳು, ರೇಖಾಚಿತ್ರ ಬರೆಯುವ ಪೆನ್ಸಿಲ್‌ಗಳು, ಚಾರ್ಕೋಲ್ ಗಳು, ಮೆರಗು ಕಾಗದಗಳು, ಗಾಜನ್ನು ಕೆತ್ತುವ ಪರಿಕರಗಳ ಕುರಿತು ಹೇಳಲಾಗಿದೆ. ಬಣ್ಣಗಳಲ್ಲಿ ಪ್ರಾಕೃತಿಕ ಬಣ್ಣಗಳು, ಅದರಲ್ಲಿ ಲೋಹಮೂಲ, ಖನಿಜಮೂಲ, ಸಸ್ಯಮೂಲ ಬಣ್ಣಗಳು, ಅದೇ ಪ್ರಕಾರದ ಅಂಟುದ್ರಾವಕಗಳು, ಟೆಂಪರಾ ಪದಾರ್ಥಗಳು, ರಾಸಾಯನಿಕ ಬಣ್ಣಗಳು, ತೈಲವರ್ಣಗಳು, ಟೆಂಪರಾ ವರ್ಣಗಳು ಹೀಗೆ ವಿವಿಧ ಪರಿಕರಗಳನ್ನು ಕುರಿತು ಚರ್ಚಿಸಲಾಗಿದೆ.

ಗಾಜಿನ ಮೇಲೆ ಚಿತ್ರ ರಚಿಸುವ ವಿಧಾನಗಳಲ್ಲಿ ಫಲಕದ ಮುಮ್ಮುಖದಲ್ಲಿ ಚಿತ್ರಿಸುವುದು ಹಾಗೂ ಫಲಕದ ಹಿಮ್ಮುಖದಲ್ಲಿ ಚಿತ್ರಿಸುವ ಎರಡೂ ವಿಧಾನಗಳ ಬಗ್ಗೆ ವಿವೇಚಿಸಲಾಗಿದೆ. ಹಿಮ್ಮುಖದಲ್ಲಿ ಚಿತ್ರ ಬರೆದು ವೀಕ್ಷಿಸುವ ವಿಧಾನದಲ್ಲಿ ಚಿತ್ರದ ಎಡ ಮತ್ತು ಬಲ ಪಾರ್ಶ್ವಗಳ ದಿಕ್ಕುಗಳನ್ನು ವಿರುದ್ಧವಾಗಿ ಕಲ್ಪಿಸುವುದು ವಿಶೇಷವಾಗಿದೆ. ಇಲ್ಲಿ ಕಲಾವಿದನ ಯೋಚನಾ ಲಹರಿ ಬಹುಮುಖ್ಯಪಾತ್ರ ವಹಿಸುವುದನ್ನು ತಿಳಿದುಕೊಳ್ಳಲಾಗಿದೆ. ಫಲಕದ ಮುಮ್ಮುಖದಲ್ಲಿ ಚಿತ್ರ ಬರೆಯುವಲ್ಲಿ ಕಾಗದದ ಹಾಗೆ ಸರಳವಾಗಿ ಚಿತ್ರಿಸುವುದಾದರೂ ಗಾಜಿನ ಮೇಲೆ ವರ್ಣದ್ರವ ಜಾರುವುದರಿಂದ ಇಲ್ಲಿಯೂ ವಿಶೇಷ ಪರಿಶ್ರಮದ ಅವಶ್ಯಕತೆ ಇದೆ ಎಂಬುದನ್ನು ತಿಳಿದುಕೊಳ್ಳಲಾಗಿದೆ. ಇವುಗಳ ಜೊತೆಗೆ

ಬಣ್ಣದ ಗಾಜುಗಳನ್ನು ಅಂಟಿಸಿ ಚಿತ್ರಿಸುವ ವಿಧಾನ, ಬಣ್ಣದ ಗಾಜುಗಳ ಮೇಲೆ ಚಿತ್ರ ರಚಿಸುವ ವಿಧಾನ, ಗಾಜುಗಳ ಮೇಲೆ ಬಂಗಾರ, ಬೆಳ್ಳಿ, ಲೋಹ ಹಾಗೂ ಮರಗು ಕಾಗದಗಳನ್ನು ಲೇಪಿಸುವ ವಿಧಾನ ಜೊತೆಗೆ ಗಾಜುಗಳನ್ನು ಕಲಾತ್ಮಕ ವಸ್ತುವಾಗಿ ರೂಪಿಸುವಂತಹ ಹಲವಾರು ವಿಧಾನಗಳನ್ನು ಅವುಗಳ ಪರಿಕರಗಳ ಬಳಕೆಯ ಹಿನ್ನೆಲೆಯಲ್ಲಿ ವಿವೇಚಿಸಿರುವುದು ಮೂರನೆಯ ಅಧ್ಯಾಯದಲ್ಲಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕರ್ನಾಟಕದ ಗಾಜಿನ ಮೇಲಿನ ಚಿತ್ರಗಳನ್ನು ವಿಷಯಾನುಸಾರ ವಿಂಗಡಿಸಿಕೊಂಡು ವಿಶ್ಲೇಷಣೆ ಮಾಡಲಾಗಿದೆ. ಧಾರ್ಮಿಕ ಚಿತ್ರಗಳು, ಧಾರ್ಮಿಕೇತರ ಚಿತ್ರಗಳು ಎಂದು ಎರಡು ವಿಭಾಗ ಮಾಡಿಕೊಂಡು ಮತ್ತೆ ಪ್ರತಿಯೊಂದು ವಿಭಾಗಗಳಲ್ಲಿ ಹಲವಾರು ಬಗೆಯ ಉಪ ವಿಭಾಗಗಳನ್ನು ಮಾಡಿಕೊಂಡು ವಿವೇಚಿಸಲಾಗಿದೆ. ಧಾರ್ಮಿಕ ಚಿತ್ರಗಳಲ್ಲಿ ಪ್ರಮುಖವಾಗಿ ಹಿಂದೂ, ಜೈನ, ಇಸ್ಲಾಂ, ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದ ಚಿತ್ರಗಳೆಂದು ವಿಂಗಡಿಸಲಾಗಿದ್ದು ಮತ್ತೆ ಪ್ರತಿ ವಿಭಾಗದಲ್ಲಿ ಉಪವಿಭಾಗಗಳನ್ನಾಗಿ ರೂಪಿಸಲಾಗಿದೆ. ಹಿಂದೂ ಧಾರ್ಮಿಕ ಚಿತ್ರಗಳಲ್ಲಿ ಶೈವ, ವೈಷ್ಣವ, ಶಾಕ್ತ ಹಾಗೂ ಇತರೆ ದೇವತೆಗಳ ಚಿತ್ರಗಳೆಂದು ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ಧಾರ್ಮಿಕೇತರ ಚಿತ್ರಗಳಲ್ಲಿ ಸಾಮಾಜಿಕ, ಐತಿಹಾಸಿಕ, ಅಲಂಕಾರಿಕ, ಪ್ರಾಕೃತಿಕ ಚಿತ್ರಗಳೆಂದು ವಿಂಗಡಿಸಲಾಗಿದೆ. ಪ್ರಾಕೃತಿಕ ಚಿತ್ರಗಳಲ್ಲಿ ಗಿಡ, ಮರ, ಗುಡ್ಡ, ಬೆಟ್ಟ, ನದಿ, ತೊರೆ, ಹಳ್ಳಕೊಳ್ಳ, ಪ್ರಾಣಿಗಳು, ಪಕ್ಷಿಗಳು, ಹೂಬಳ್ಳಿಗಳ ಚಿತ್ರಗಳನ್ನು ವಿವೇಚಿಸಲಾಗಿದ್ದರೆ, ಅಲಂಕಾರಿಕ ಚಿತ್ರಗಳಲ್ಲಿ ವಿವಿಧ ಬಗೆಯ ನಕ್ಷಾವಿನ್ಯಾಸದ ಚಿತ್ರಗಳನ್ನು ಕುರಿತು ಹೇಳಲಾಗಿದೆ. ನೈಜವಾದ ಹೂಬಳ್ಳಿಯ ನಕ್ಷೆಗಳು, ಹೂಬಳ್ಳಿಯ ಅಲಂಕಾರಿಕ ರೂಪದ ನಕ್ಷೆಗಳು, ಜ್ಯಾಮಿತಿಕ ವಿನ್ಯಾಸದ ನಕ್ಷೆಗಳು, ಕುರಾನಿನ ಬರಹಗಳ ನಕ್ಷೆಗಳೆಂಬುದಾಗಿ ಪ್ರತ್ಯೇಕ ಭಾಗಗಳಲ್ಲಿ ಚರ್ಚಿಸಲಾಗಿದೆ.

ವೈಷ್ಣವ ಧರ್ಮದ ಚಿತ್ರಗಳಲ್ಲಿ ವಿಷ್ಣುವಿಗೆ ಸಂಬಂಧಿಸಿದ ಚಿತ್ರಗಳಿಂದ ದಶಾವತಾರ ಚಿತ್ರಗಳು, ಕೃಷ್ಣಕಥೆಗಳು, ವಿಷ್ಣುವಿನ ವಿವಿಧ ರೂಪ ಹಾಗೂ ಲೀಲೆಗಳ ಬಗ್ಗೆ ವಿವೇಚಿಸಲಾಗಿದ್ದರೆ, ಶೈವ ಚಿತ್ರಗಳಲ್ಲಿ ಶಿವನ ವಿವಿಧ ರೂಪಗಳು, ಶಿವಗಣಗಳು, ಶಿವತಾಂಡವ, ನಟರಾಜ, ಅರ್ಧನಾರೀಶ್ವರ ಮುಂತಾದ ವಿಷಯಗಳ ಬಗ್ಗೆ ಚರ್ಚಿಸಲಾಗಿದೆ. ಅದೇ ರೀತಿ ಶಾಕ್ತ ರಾಕ್ಷಸರನ್ನು ಸಂಹರಿಸುತ್ತಿರುವ ಚಿತ್ರಗಳ ಬಗ್ಗೆ ವಿವೇಚಿಸಲಾಗಿದೆ. ಸಾಮಾಜಿಕ ಚಿತ್ರಗಳಲ್ಲಿ ಪುರುಷರ ಚಿತ್ರಗಳು, ಸ್ತ್ರೀಯರ ಚಿತ್ರಗಳು, ಮಿಥುನ ಚಿತ್ರಗಳು, ನಿತ್ಯ ಬದುಕಿನ ಘಟನಾವಳಿಗಳ ಬಗ್ಗೆ ಚರ್ಚಿಸಲಾಗಿದ್ದರೆ, ಐತಿಹಾಸಿಕ ಚಿತ್ರಗಳಲ್ಲಿ ಟಿಪ್ಪುಸುಲ್ತಾನ್, ಮೈಸೂರು ಅರಸರು, ಬ್ರಿಟೀಷ ಅಧಿಕಾರಿಗಳು, ಫ್ರೆಂಚರು ಮುಂತಾದ ಚಿತ್ರಗಳ ಕುರಿತು ವಿಶ್ಲೇಷಣೆ ಮಾಡಲಾಗಿದೆ. ವಿಷಯಾನುಸಾರ ವಿಂಗಡಿಸಿಕೊಂಡು ವಿವೇಚಿಸಿರುವುದರಿಂದ ಆಯಾ ಕಾಲದ ಜನರ ಅಭಿರುಚಿ, ಧಾರ್ಮಿಕತೆ, ಸಾಮಾಜಿಕ ವ್ಯವಸ್ಥೆ, ಪರಿಸರ, ಕೌಟುಂಬಿಕ ನಿಲುವುಗಳು, ಸೌಂದರ್ಯಪ್ರಜ್ಞೆ, ನಾಗರಿಕ ಬದುಕಿನ ಹಂತಗಳನ್ನು ತಿಳಿದುಕೊಳ್ಳಲು ಸಹಾಯವಾಗಿರುವುದು ನಾಲ್ಕನೆಯ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

ಪ್ರಸ್ತುತ ಪ್ರಬಂಧದ ಐದನೆಯ ಅಧ್ಯಾಯದಲ್ಲಿ ಕರ್ನಾಟಕದ ಗಾಜಿನ ಚಿತ್ರಕಲೆಯ ಶೈಲಿ, ಪ್ರಭಾವ, ಪ್ರೇರಣೆ ಮತ್ತು ತಂತ್ರಕಾರಿಕೆಗಳ ಬಗ್ಗೆ ಚರ್ಚಿಸಲಾಗಿದೆ. ಯಾವುದೇ ಕಲಾಪ್ರಕಾರವನ್ನು ಗುರುತಿಸುವುದು ಅದರ ಶೈಲಿಯಿಂದ. ಶೈಲಿಯು ಆ ಕಲಾಪ್ರಕಾರದ ಪ್ರಮುಖ ಲಕ್ಷಣಗಳನ್ನು

ತಿಳಿಸಿಕೊಡುತ್ತದೆ. ಇಲ್ಲಿ ಕರ್ನಾಟಕದ ಗಾಜಿನ ಚಿತ್ರಕಲಾ ಶೈಲಿ ಕಾಲದಿಂದ ಕಾಲಕ್ಕೆ ಹೇಗೆ ಭಿನ್ನವಾಗುತ್ತಾ ಬಂದಿತೆಂಬುದನ್ನು ಚಿತ್ರಗಳ ವಿಶ್ಲೇಷಣೆಯಿಂದ ಕಂಡುಕೊಳ್ಳಲಾಗಿದೆ. ಪಾಶ್ಚಾತ್ಯರ ಶೈಲಿ, ವಿಜಯನಗರ ಶೈಲಿ, ಮೈಸೂರು ಶೈಲಿ, ಸುರಪುರ ಶೈಲಿ, ತಂಜಾವೂರು ಶೈಲಿ, ಸ್ಥಳೀಯ ಜನಪದ ಶೈಲಿಗಳಂತಹ ವಿವಿಧ ಶೈಲಿಗಳು ಕರ್ನಾಟಕದ ಗಾಜಿನ ಚಿತ್ರಕಲಾ ಪ್ರಕಾರದಲ್ಲಿ ಬೆಳೆದುಬಂದ ಹಂತಗಳನ್ನು ಗುರುತಿಸಲಾಗಿದೆ.

ಗಾಜಿನ ಚಿತ್ರಗಳ ಪ್ರಭಾವಗಳ ಬಗ್ಗೆ ಚರ್ಚಿಸುವಾಗಲೂ ವಿವಿಧ ಕಾಲಗಳಲ್ಲಿ ಕರ್ನಾಟಕದ ಗಾಜಿನ ಚಿತ್ರಕಲೆಯ ಮೇಲೆ ಉಂಟಾದ ಪ್ರಭಾವಗಳು ಅದರಿಂದುಂಟಾದ ಪರಿವರ್ತನೆಗಳ ಕುರಿತು ಚರ್ಚಿಸಲಾಗಿದೆ. ಪಾಶ್ಚಾತ್ಯ ಪ್ರಭಾವ ಮತ್ತು ಹಿಂದೂ ಪ್ರಭಾವಗಳ ಸಮ್ಮಿಲನದಿಂದ ಉದಯಿಸಿದ ಹೊಸರೂಪ ವಿನ್ಯಾಸಗಳು, ವಿಜಯನಗರ ಕಾಲದಲ್ಲಿ ಉಂಟಾದ ವೈವಿಧ್ಯ ಪ್ರಭಾವಗಳು, ಸುರಪುರ ಕಾಲದ ಪ್ರತ್ಯೇಕ ಶೈಲಿಯ ಪ್ರಭಾವ, ಮೈಸೂರು ಮತ್ತು ತಂಜಾವೂರು ಶೈಲಿಗಳ ಸಮ್ಮಿಶ್ರ ಪ್ರಭಾವಗಳು ನಂತರದಲ್ಲಿ ಮರಾಠ ಪ್ರಭಾವ ಕರ್ನಾಟಕದ ಗಾಜಿನ ಚಿತ್ರಕಲಾ ಸಂಪ್ರದಾಯವನ್ನು ನಿರ್ದೇಶಿಸಿದ ಬಗ್ಗೆ ತಿಳಿದುಕೊಳ್ಳಲಾಗಿದೆ. ಇಷ್ಟೆಲ್ಲದರ ಮಧ್ಯ ಸ್ಥಳಿಯ ಜನಪದ ಕಲಾವಿದರು ಗಾಜಿನ ಚಿತ್ರ ರಚನೆಯಲ್ಲಿ ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡು ಯಾವುದೇ ರೀತಿಯ ಅನ್ಯ ಪ್ರಭಾವಕ್ಕೆ ತಮ್ಮನ್ನು ತೆರೆದುಕೊಳ್ಳದೇ ಪ್ರಾದೇಶಿಕ ಶೈಲಿಗಳನ್ನು ಹುಟ್ಟುಹಾಕಿರುವುದನ್ನು ಕಂಡುಕೊಳ್ಳಲಾಗಿದೆ.

ಕರ್ನಾಟಕದ ಗಾಜಿನ ಚಿತ್ರಕಲೆಯಲ್ಲಿ ಟಿಪ್ಪುಸುಲ್ತಾನ, ಹೈದರಲಿ ಕಾಲಕ್ಕೆ ಮುಸ್ಲಿಂ ಪ್ರಭಾವ ಹೆಚ್ಚಿನ ಮಟ್ಟಿಗೆ ಉಂಟಾಯಿತು. ಚಿತ್ರಗಳ ಆಕಾರ, ವೇಷಭೂಷಣ, ವರ್ಣಲೇಪನ, ವಸ್ತುವಿಷಯಗಳ ಆಯ್ಕೆಯಲ್ಲಿ ಈ ಅಂಶಕಂಡುಬರುತ್ತದೆ. ಕರ್ನಾಟಕದ ಗಾಜಿನ ಚಿತ್ರಕಲಾವಿದರು ತಮ್ಮ ಚಿತ್ರ ರಚನೆಗಾಗಿ ಹಲವಾರು ಮೂಲಗಳಿಂದ ಪ್ರೇರಣೆ ಪಡೆದಿದ್ದಾರೆ. ಮುಖ್ಯವಾಗಿ ರಾಮಾಯಣ, ಮಹಾಭಾರತದಂತಹ ಮಹಾಕಾವ್ಯಗಳು, ಶೈವ, ವೈಷ್ಣವ, ಶಾಕ್ತ ಪುರಾಣಗಳು, ಕ್ರೈಸ್ತ, ಜೈನ, ಇಸ್ಲಾಂ ಧರ್ಮಗ್ರಂಥಗಳು, ಅವುಗಳ ಬೋಧನೆಗಳು, ನೀತಿಕಥೆಗಳು, ನಿತ್ಯ ಜೀವನದ ಘಟನಾವಳಿಗಳಿಂದ ಕಲಾವಿದರು ಪ್ರೇರಣೆ ಪಡೆದಿರುವುದು ಗೋಚರಿಸುತ್ತದೆ. ಸ್ತ್ರೀ-ಪುರುಷರ ಲೈಂಗಿಕ ಆಸಕ್ತಿ, ಕೌಟುಂಬಿಕ ವ್ಯವಹಾರಗಳು, ಪ್ರಕೃತಿಯ ವೈಚಿತ್ರ್ಯಗಳು ಇವರ ಪ್ರೇರಣೆಗೆ ಪುಷ್ಟಿನೀಡಿವೆ.

ಇವುಗಳ ಜೊತೆಗೆ ಆ ಕಾಲಮಾನದ ಐತಿಹಾಸಿಕ ಘಟನೆಗಳು, ರಾಜ ಮಹಾರಾಜರಂತಹ ಪ್ರಮುಖ ವ್ಯಕ್ತಿಗಳು, ಸಾಧು ಸಂತರು, ಆಧ್ಯಾತ್ಮ ವಿಚಾರಗಳು, ಕಲಾವಿದರ ಪ್ರೇರಣಾ ಶಕ್ತಿಯಾಗಿ ಕೆಲಸ ಮಾಡಿವೆ. ಗಾಜಿನ ಚಿತ್ರಕಲಾವಿದರಿಗೆ ಕೃಷ್ಣಕಥಾನಕಗಳ ಮೇಲೆ ವಿಶೇಷ ಆಸಕ್ತಿ ಇದ್ದು ಹೆಚ್ಚಿನ ಚಿತ್ರಗಳು ಅದನ್ನು ಸಾಬೀತು ಪಡಿಸುತ್ತವೆ. ಇಂತಹ ಮೂಲ ಪ್ರೇರಣಾ ಶಕ್ತಿಗಳಲ್ಲದೆ ಒಂದು ಚಿತ್ರಶೈಲಿಯ ಪ್ರಭಾವ ಇನ್ನೊಂದು ಚಿತ್ರಶೈಲಿಯ ಮೇಲೆ ಉಂಟಾಗಿ ಕಲಾವಿದರಿಗೆ ಹೊಸ ರೀತಿಯ ಪ್ರೇರಣೆ ಉಂಟಾಗಿರುವುದನ್ನು ಸಹಿತ ಐದನೆಯ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

ಅಧ್ಯಾಯ ಆರರಲ್ಲಿ ಗಾಜಿನ ಮೇಲಿನ ಚಿತ್ರಕಲೆಯ ಪೋಷಕರು ಹಾಗೂ ಪ್ರಸ್ತುತ

ಸಂದರ್ಭದಲ್ಲಿ ಚಿತ್ರಗಳ ಸ್ಥಿತಿಗತಿಗಳನ್ನು ಚರ್ಚಿಸಲಾಗಿದೆ. ನಮ್ಮ ಪೂರ್ವಜರ ಕಲಾಪ್ರೇಮ, ಕಲಾ ಪೋಷಣೆ, ಹಲವಾರು ಕೃತಿಗಳನ್ನು ಖರೀದಿಸಿ ತಮ್ಮ ಮನೆಗಳಲ್ಲಿ ಸಂಗ್ರಹಿಸಿರುವುದು ತಿಳಿದುಕೊಳ್ಳಲಾಗಿದೆ. ಈ ಚಿತ್ರಗಳು ಇಂದಿಗೂ ಜೋಪಾನವಾಗಿರಿಸಿಕೊಂಡಿದ್ದಕ್ಕೆ ಆ ಚಿತ್ರಗಳ ಮೇಲಿದ್ದ ಪ್ರೇಮ ಹಾಗೂ ಕಾಳಜಿಯೇ ಕಾರಣವೆನ್ನಬಹುದು. ಇಂಥ ಅಪರೂಪದ ಚಿತ್ರಗಳು ಅನೇಕ ಪೋಷಕರಿಂದ ಪೋಷಣೆಗೊಳಪಟ್ಟ ಅಂಶಗಳನ್ನು ಇಲ್ಲಿ ತಿಳಿಸಲಾಗಿದೆ.

ಇಲ್ಲಿ ಮನೆಗಳಲ್ಲಿ ಪೋಷಿತಗೊಂಡ ಚಿತ್ರಗಳು, ಅರಮನೆಗಳಲ್ಲಿ ಪೋಷಿತಗೊಂಡ ಚಿತ್ರಗಳು, ವಸ್ತು ಸಂಗ್ರಹಾಲಯಗಳಲ್ಲಿ ಪೋಷಿತಗೊಂಡ ಚಿತ್ರಗಳು, ದೇವಸ್ಥಾನಗಳಲ್ಲಿ ಪೋಷಿತಗೊಂಡ ಚಿತ್ರಗಳು, ಚರ್ಚುಗಳಲ್ಲಿ ಪೋಷಿತಗೊಂಡ ಚಿತ್ರಗಳು, ಮಹ್ಮದಿಯ ಕಟ್ಟಡಗಳಲ್ಲಿ ಪೋಷಿತಗೊಂಡ ಚಿತ್ರಗಳು, ಸಾರ್ವಜನಿಕ ಹಾಗೂ ಖಾಸಗಿ ಕಟ್ಟಡಗಳಲ್ಲಿ ಪೋಷಿತಗೊಂಡ ಚಿತ್ರಗಳೆಂದು ವಿಂಗಡಿಸಿಕೊಂಡು ಆ ಚಿತ್ರಗಳ ಪೊಷಕರ ಹಾಗೂ ಚಿತ್ರಗಳ ವಸ್ತು ಸ್ಥಿತಿಯನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ. ಇಂದು ಕೆಲವು ಚಿತ್ರಗಳು ಅವಸಾನದ ಅಂಚಿನಲ್ಲಿದ್ದು ಅವುಗಳ ಸಂರಕ್ಷಣೆ ಯ ಕ್ರಮಗಳು ಹಾಗೂ ಸಂರಕ್ಷಣೆಯ ಅಗತ್ಯತೆ ಕುರಿತು ಹೇಳಲಾಗಿದೆ. ಅಲ್ಲದೆ ಗಜಿನ ಚಿತ್ರಗಳನ್ನು ಸಂಗ್ರಹಿಸಿರುವ ವ್ಯಕ್ತಿಗಳು, ಸಂಘ ಸಂಸ್ಥೆಗಳು, ಶಾಲಾ ಕಾಲೇಜುಗಳು, ವಿಶ್ವವಿದ್ಯಾಲಯಗಳು, ಮಠಮಾನ್ಯಗಳು, ದೇವಾಲಯಗಳು, ಚರ್ಚುಗಳು, ಮಸೀದಿಗಳು, ಸಾರ್ವಜನಿಕ ಕಟ್ಟಡಗಳು, ವಸ್ತು ಸಂಗ್ರಹಾಲಯಗಳ ಮಾಲೀಕರಿಗೆ ಅವುಗಳ ಮಹತ್ವ ತಿಳಿಸಿಕೊಟ್ಟು ಅವುಗಳನ್ನು ಮುಂದಿನ ಪೀಳಿಗೆಗೆ ಉಳಿಸಿಕೊಡುವ ಅಂಶಗಳನ್ನು ಕುರಿತು ವಿವೇಚಿಸಲಾಗಿದೆ. ಏಳನೆಯ ಅಧ್ಯಾಯದಲ್ಲಿ ಒಟ್ಟು ಅಧ್ಯಯನದ ಫಲಿತಗಳನ್ನು ಸಮೀಕ್ಷಿಸಲಾಗಿದೆ.

ಫಲಿತಗಳನ್ನು ಹಾಗೂ ಮುಂದಿನ ಅಧ್ಯಯನಕ್ಕೆ ಬೇಕಾದ ಕೆಲವು ವಿಚಾರಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಿಕೊಡಲಾಗಿದೆ.

■ ವೈವಿಧ್ಯಮಯ ಫಲಕಗಳಲ್ಲಿ ಒಂದಾದ ಗಾಜಿನ ಕುರಿತಾದ ಕೆಲವು ಅಂಶಗಳು ಕಂಡು ಬರುತ್ತವಲ್ಲದೇ ಈ ಮಾಧ್ಯಮದ ಮೇಲೆ ಅಭಿವ್ಯಕ್ತಪಡಿಸಿದ ಕಲಾವಿದನ ಕುತೂಹಲಗಳ ಸಂಗತಿಗಳನ್ನು ಕಾಣಬಹುದಾಗಿದೆ.

■ ಗಾಜಿನ ಮೇಲ್ಮೈಯು ಅತ್ಯಂತ ನುಣುಪಾದ ಹಾಗೂ ಪಾರದರ್ಶಕವಾಗಿದ್ದು ಇದರ. ಮೇಲೆ ಚಿತ್ರ ಬರೆದ ಕಲಾವಿದನ ತಾಳ್ಮೆ ಹಾಗೂ ಸೌಂದರ್ಯ ಪ್ರಜ್ಞೆಯನ್ನು ತಿಳಿದು ಕೊಳ್ಳಬಹುದಾಗಿದೆ.

■ ಪಾಶ್ಚಿಮಾತ್ಯ ಮೂಲದಿಂದ ಭಾರತಕ್ಕೂ ಪ್ರವೇಶ ಮಾಡಿದ ಈ ಗಾಜಿನ ಚಿತ್ರಕಲಾ ಮಾಧ್ಯಮವನ್ನು ನಮ್ಮವರು ಅತ್ಯಂತ ಮನೋಜ್ಞವಾಗಿ ಬಳಸಿಕೊಂಡು ಸ್ವತಂತ್ರ ಕಲಾಪ್ರಕಾರವಾಗಿ ಬೆಳೆಸಿದ ಬಗೆಯನ್ನು ಕುರಿತು ವಿಶೇಷವಾಗಿ ಅಧ್ಯಯನ ಗಮನಹರಿಸಿದೆ.

■ ನಮ್ಮ ಆಳರಸರು ಈ ಕಲೆಯನ್ನು ಪ್ರೋತ್ಸಾಹಿಸಿ, ಬೆಳೆಸಿ ಒಂದು ಕಲಾಪ್ರಕಾರವಾಗಿ ಬೆಳೆಯಲು ಪ್ರೇರಣೆ ನೀಡಿದ್ದಾರೆ. ಅಲ್ಲದೇ ಕಲಾವಿದರಿಗೆ ಆಶ್ರಯ ನೀಡಿ ತಮ್ಮ ಕಲಾ ಪ್ರೇಮವನ್ನು ಈ ಚಿತ್ರಗಳ ಮೂಲಕ ತೋರ್ಪಡಿಸಲು ಪ್ರಯತ್ನಿಸಿದ್ದು ಈ ಚಿತ್ರಗಳ ಅಧ್ಯಯನದಿಂದ ಕಾಣಬಹುದು.

■ ನಮ್ಮ ಧಾರ್ಮಿಕ ಪರ ವಿಚಾರಗಳನ್ನು ಕಲಾವಿದರು ಗಾಜಿನ ಮೇಲೆ ಪೂಜಾ ಪ್ರಜ್ಞೆಯಿಂದ ಹಾಗೂ ಅಲಂಕಾರಿಕ ನೆಲೆಯಲ್ಲಿ ಪ್ರಯೋಗಿಸಿ ಧಾರ್ಮಿಕ ಪರ ವಿಚಾರವಾದಿಗಳಿಗೆ ಭಯ ಭಕ್ತಿಯನ್ನು ಚಿತ್ರಗಳ ಮೂಲಕ ಒಡಮೂಡಿಸಿದ್ದಾರೆ.

■ ಸಾಮಾಜಿಕ ಪರ ವಿಚಾರಗಳ ಚಿತ್ರಗಳಲ್ಲಿ ೧೭ – ೧೮ ನೆಯ ಶತಮಾನಗಳಲ್ಲಿನ ಆಳರಸರ, ಅಧಿಕಾರಿಗಳ ಶೃಂಗಾರ ಪರ ಚಟುವಟಿಕೆಗಳನ್ನು ಕಲಾವಿದರು ಸಮಾಜಕ್ಕೆ ತೋರಿಸಲು ಪ್ರಯತ್ನಿಸಿರುವುದನ್ನು ಗುರುತಿಸಲಾಗಿದೆ.

■ ಸಾಮಾಜಿಕ ಪರ ಚಿತ್ರಗಳಲ್ಲಿ ಪ್ರಭಾವಿ ವ್ಯಕ್ತಿಗಳ ದಿನಮಾನದ ಚಟುವಟಿಕೆಗಳಿಗೆ ಹೆಚ್ಚು ಪ್ರಾಧಾನ್ಯತೆ ನೀಡಲಾಗಿದೆ.

■ ಗಾಜಿನ ಚಿತ್ರಗಳಲ್ಲಿ ಧಾರ್ಮಿಕ ಚಿತ್ರಗಳಲ್ಲಿನ ಶೈವ, ರಾಮಾಯಣ, ಮಹಾಭರದ ಹಾಗೂ ದಶಾವತಾರಗಳ ವಿಷಯಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಲಾಗಿದೆ.

■ ಗಾಜಿನ ಚಿತ್ರಗಳಲ್ಲಿ ರಾಜ ರಾಣಿಯರ ವೈಭವವನ್ನು ತಮ್ಮ ಕಲಾಕೃತಿಗಳಲ್ಲಿ ವಸ್ತುವನ್ನಾಗಿರಿಸಿಕೊಂಡು ಕಲಾಸಕ್ತರನ್ನು ಆಕರ್ಷಿಸುವಲ್ಲಿ ಸಫಲರಾಗಿದ್ದಾರೆ.

■ ನಮ್ಮ ಕಲಾವಿದರು ಪಾಶ್ಚಿಮಾತ್ಯ ಕಲಾವಿದರ ಜೊತೆ ಜೊತೆಗೆ ಕೆಲಸ ಮಾಡಿದುದರಿಂದ ಅನೇಕ ಕಲಾಕೃತಿಗಳು ಪಾಶ್ಚಾತ್ಯ ಪ್ರಭಾವವನ್ನು ಅನುಕಸಿವೆ. ಇದರಿಂದ ಇವರ ಸ್ನೇಹ ಸಂಬಂದವನ್ನು ಎತ್ತಿ ತೋರಿಸುತ್ತವೆ.

■ ಗಾಜಿನ ಚಿತ್ರಗಳಲ್ಲಿ ಜಲವರ್ಣ ಹಾಗೂ ತೈಲವರ್ಣಗಳನ್ನು ವಿವಿಧ ಮೂಲಗಳಿಂದ ಅಭಿವೃದ್ಧಿ ಪಡಿಸಿಕೊಂಡು ಪಾರದರ್ಶಕ ಹಾಗೂ ಅಪಾರದರ್ಶಕವಾಗಿ ದುಡಿಸಿಕೊಂಡಿದ್ದನ್ನು ಕಾಣಬಹುದಾಗಿದೆ.

■ ಅಲಂಕಾರದ ಆಶಯದ ಸಲುವಾಗಿ ಅಥವಾ ಕಲಾಸಕ್ತರನ್ನು ರಂಜಿಸುವ ಸಲುವಾಗಿ ಆಕರ್ಷಕ ಪರಿಕರಗಳನ್ನು ಬಳಸಿಕೊಂಡಿದ್ದಾರೆ. ಇವುಗಳನ್ನು ಪ್ರತಿಮೆಗಳಿಗೆ ತಕ್ಕಂತೆ ದಟ್ಟತೆ ಹಾಗೂ ಸೂಕ್ಷ್ಮತರನಾಗಿ ಸಂಯೋಜಿಸಿದ್ದಾರೆ.

■ ಗಾಜಿನ ಚಿತ್ರಗಳಲ್ಲಿ ರೇಖೆಯದೇ ಪ್ರಧಾನ ಪಾತ್ರ ಕಂಡು ಬರುತ್ತದೆ. ರೇಖೆಗಳಲ್ಲಿ ಚಲನೆ, ಸೂಕ್ಷ್ಮತೆ, ದಟ್ಟತೆ, ಬಾಗುವಿಕೆ, ಬಳುಕುವಿಕೆ, ಲಯಗಾರಿಕೆಯು ವಿಶೇಷವಾಗಿ ಒಡಮೂಡಿವೆ.

■ ಈ ಅಧ್ಯಯನವು ಕರ್ನಾಟಕದಲ್ಲಿ ಸಂಗ್ರಹಗೊಂಡಿರುವ ಹಾಗೂ ಸಂಗ್ರಹೇತರ ಗಾಜಿನ ಚಿತ್ರಗಳ ಕುರಿತಾಗಿದ್ದು, ಇವುಗಳಲ್ಲಿ ತೂಗುಹಾಕುವ, ಕಟ್ಟಡಗಳಲ್ಲಿ ಅಳವಡಿಸಿದ ಹಾಗೂ ಕೆಲವೊಂದು ಗಾಜಿನ ವಸ್ತುಗಳ ಮೇಲಿನ ಚಿತ್ರಗಳನ್ನು ಮುಖ್ಯವಾಗಿ ಇಲ್ಲಿ ಅಧ್ಯಯನ ಮಾಡಲಾಗಿದೆ.

■■■

## ಅನುಬಂಧ – ೧೧. ಸಂಕ್ಷೇಪಗಳು

| | | |
|---|---|---|
| ಕ.ವಿ.ವಿ.ಧಾರವಾಡ | – | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ಗು.ವಿ.ವಿ.ಗುಲ್ಬರ್ಗಾ | – | ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ |
| ಕ.ವಿ.ವಿ.ಹಂಪಿ | – | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಮ.ಪ್ರ | – | ಮಹಾಪ್ರಬಂಧ |
| ಸಂ.ಪ್ರ | – | ಸಂಪ್ರಬಂಧ |
| ಸಂ | – | ಸಂಪಾದಕ |
| ಅ.ಪ್ರ.ಯೋ.ವ | – | ಅಪ್ರಕಟಿತ ಯೋಜನಾ ವರದಿ |
| ಯೋ.ವ | – | ಯೋಜನಾ ವರದಿ |
| ಕ.ಲ.ಕ.ಅ.ಬೆಂಗಳೂರು | – | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು |

## ಅನುಬಂಧ - ೦೨. ಗಾಜಿನ ಚಿತ್ರಗಳ ನೆಲೆಗಳು

**ಮನೆಗಳು**

೦೧. ಶ್ರೀ ಎಸ್. ಎಸ್. ನಾರಾ
ಹಳೆ ಬಾಗಲಕೋಟೆ
ಬಾಗಲಕೋಟ ಜಿಲ್ಲೆ

೦೨. ಶ್ರೀ ಬಿ. ಎಂ. ಹಲಕಾಟ
ಎ.ಪಿ.ಎಂ.ಸಿ, ಯಾರ್ಡ
ನವನಗರ, ಬಾಗಲಕೋಟೆ
ಬಾಗಲಕೋಟ ಜಿಲ್ಲೆ

೦೩. ಶ್ರೀ ಮಹೇಂದ್ರ ಸರಾಫ್
(ಹೊಸಪೇಟೆ) ಬಾಗಲಕೋಟೆ
ಬಾಗಲಕೋಟ ಜಿಲ್ಲೆ

೦೪. ಶ್ರೀ ಅಶೋಕ. ಗೋಣಿ
ವಲ್ಲಭಬಾಯಿ ಚೌಕ, ಅಡತಿಬಜಾರ
ಬಾಗಲಕೋಟೆ
ಬಾಗಲಕೋಟ ಜಿಲ್ಲೆ

೦೫. ಶ್ರೀ ಎಸ್. ಬಿ. ಹೊಕ್ರಾಣಿ
ಸೆಕ್ಟರ್ ನಂ. ೫೨, ಪ್ಲಾಟ ನಂ. ೩೪
ನವನಗರ, ಬಾಗಲಕೋಟೆ
ಬಾಗಲಕೋಟ ಜಿಲ್ಲೆ

೦೬. ಶ್ರೀ ಮಾಣಿಕ್‌ಚಂದ್. ಹನ್ಸ್‌ರಾಜ್. ಬೇತಾಳ
ಅಡತಿ ಬಜಾರ, ಬಾಗಲಕೋಟೆ
ಬಾಗಲಕೋಟ ಜಿಲ್ಲೆ

೦೭. ಆರ್. ಜಿ. ಬೂತಡಾ,
ಕಾಯಿಪಲ್ಲೆ ಮಾರುಕಟ್ಟೆ ಇಳಕಲ್ಲ
ಬಾಗಲಕೋಟ ಜಿಲ್ಲೆ

೦೮. ಶ್ರೀ ಶೀಲವಂತಪ್ಪ. ಸಣ್ಣಬಸಪ್ಪ. ಗರಡಿ
ಸಾ: ಅಮೀನಗಡ, ಬಾಗಲಕೋಟ ಜಿಲ್ಲೆ

೦೯. ಶ್ರೀ ಗುರಪ್ಪ. ಕಣ್ಣೂರು
ಸಾ: ಅಮೀನಗಡ, ಬಾಗಲಕೋಟ ಜಿಲ್ಲೆ

೧೦. ಶ್ರೀ ಬಸವಪ್ರಭು. ಮಹಾದೇವಪ್ಪ. ಗಂಗಾವತಿ
ಸಾ: ಗುಳೇದಗುಡ್ಡ, ಬಾಗಲಕೋಟ ಜಿಲ್ಲೆ

೧೧. ಶ್ರೀ ರಾಜಶೇಖರ. ಶೀಲವಂತ
ಸಾ: ಗುಳೇದಗುಡ್ಡ, ಬಾಗಲಕೋಟ ಜಿಲ್ಲೆ

೧೨. ಶ್ರೀ ಅಶೋಕ. ವೀರುಪಾಕ್ಷಪ್ಪ. ತಿಪ್ಪಾ
ಸಾ: ಗುಳೇದಗುಡ್ಡ, ಬಾಗಲಕೋಟ ಜಿಲ್ಲೆ

೧೩. ಶ್ರೀ ವೀರಬಸಪ್ಪ. ರಾಚಪ್ಪ. ತಿಪ್ಪಾ
ಸಾ: ಗುಳೇದಗುಡ್ಡ, ಬಾಗಲಕೋಟ ಜಿಲ್ಲೆ

೧೪. ಶ್ರೀ ಬನ್ಸಿಲಾಲಜಿ. ಬಾಲಕಿಶನ್. ಕಾಬ್ರಾ
ಸಾ: ಗುಳೇದಗುಡ್ಡ, ಬಾಗಲಕೋಟ ಜಿಲ್ಲೆ

೧೫. ಶ್ರೀ ವೀರಗಂಟೆಪ್ಪ. ಸಂಗಪ್ಪ. ಕರಡಿ
ಸಾ: ಗುಳೇದಗುಡ್ಡ, ಬಾಗಲಕೋಟ ಜಿಲ್ಲೆ

೧೬. ಶ್ರೀ ಶಂಕರಸಾ. ಫಕೀರಸಾ. ಪವಾರ
ಪವಾರ ಕ್ರಾಸ್, ಭವಾನಿಪೇಟೆ,
ಸಾ: ಗುಳೇದಗುಡ್ಡ, ಬಾಗಲಕೋಟ ಜಿಲ್ಲೆ

೧೭. ಶ್ರೀ ಯೋಗಪ್ಪ. ಸಂಗಪ್ಪ. ರಾಜನಾಳ
ತಿಪ್ಪಾ ಪೇಟೆ,
ಸಾ: ಗುಳೇದಗುಡ್ಡ, ಬಾಗಲಕೋಟ ಜಿಲ್ಲೆ

೧೮. ಶ್ರೀ ವೀರಸಂಗಪ್ಪ. ಈಶ್ವರಪ್ಪ. ಭಾವಿ
ಹೊಸಪೇಟೆಗಲ್ಲಿ,
ಸಾ: ಗುಳೇದಗುಡ್ಡ, ಬಾಗಲಕೋಟ ಜಿಲ್ಲೆ

೧೯. ಶ್ರೀ ಶೇಖರಪ್ಪ. ಉಮಚಗಿ
ಸಾ: ಗುಳೇದಗುಡ್ಡ, ಬಾಗಲಕೋಟ ಜಿಲ್ಲೆ

೨೦. ಹರಕ್‌ಚಂದ್. ಚಂದನಲಾಲ್. ಜೈನ್
ಹಿರೇಪೇಟೆ, ಹುಬ್ಬಳ್ಳಿ, ಧಾರವಾಡ ಜಿಲ್ಲೆ

೨೧. ಶ್ರೀ ಗುರುಸಿದ್ದ ಪ್ರಭು. ವೀರಪ್ಪ. ಕರವೀರಶೆಟ್ಟರ್
ಜವಳಿಸಾಲ್ ಹುಬ್ಬಳ್ಳಿ

೨೨. ಶ್ರೀ ಬಸವರಾಜ. ಚನ್ನಬಸಪ್ಪ. ಹುತಗೊಣ್ಣವರ
ಗುಡಗೇರಿ (ಕುಂದಗೋಳ ತಾಲ್ಲೂಕು)
ಧಾರವಾಡ ಜಿಲ್ಲೆ

೨೩. ಶ್ರೀ ದತ್ತಾತ್ರೇಯ. ರುಕ್ಮಪ್ಪ. ಆನೆಗೊಂದಿ
ಗಣೇಶಪೇಟೆ, ನವಲಗುಂದ
ಧಾರವಾಡ ಜಿಲ್ಲೆ

೨೪. ಶ್ರೀ ಮನೋಹರ. ಹನುಮಂತಪ್ಪ. ಹರಿಹರ
ವಿನಾಯಕ ಪೇಟೆ, ನವಲಗುಂದ
ಧಾರವಾಡ ಜಿಲ್ಲೆ

೨೫. ಶ್ರೀ ವಿಷ್ಣು ಮೊಡಿಕರ್
ನವಲಗುಂದ ಧಾರವಾಡ ಜಿಲ್ಲೆ

೨೬. ಸಂಜಯ. ಚಂದ್ರಕಾಂತ. ರಾಯ್ಕರ
ಸರಾಫ ಬಜಾರ, ಗದಗ
ಗದಗ ಜಿಲ್ಲೆ

೨೭. ಶ್ರೀ ಬಸವರಾಜ. ಕತ್ನಿ
ಮುಳಗುಂದ, ಗದಗ ಜಿಲ್ಲೆ

೨೮. ಶ್ರೀ ಜಿ. ಎಂ. ಸುಬ್ಬಣ್ಣ
ಜವಳಿಪೇಟೆ, ಗುಬ್ಬಿ
ತುಮಕೂರು ಜಿಲ್ಲೆ

೨೯. ಪಿಟಿಲು ಕೃಷ್ಣಪ್ಪ. ಪತ್ನಿರಾಜಮ್ಮ
ಜವಳಿ ಪೇಟೆ, ಗುಬ್ಬಿ
ತುಮಕೂರು ಜಿಲ್ಲೆ

೩೦. ಶ್ರೀ ಮಂಜುನಾಥ. ರಾಮಕೃಷ್ಣಯ್ಯ
ಚಿಕ್ಕಪೇಟೆ, ತುಮಕೂರು
ತುಮಕೂರು ಜಿಲ್ಲೆ

೩೧. ಶ್ರೀ ಕೊಲ್ಲಾ ಶ್ರೀನಿವಾಸ. ಭೀಮಸೇನಶೆಟ್ಟಿ
ಮಲಪನಗುಡಿ, ಬಳ್ಳಾರಿ ಜಿಲ್ಲೆ

೩೨. ಮೂರ್ತ್ಯಾಚಾರ. ಬಡಿಗೇರ
ಮಲಪನಗುಡಿ, ಬಳ್ಳಾರಿ ಜಿಲ್ಲೆ

೩೩. ತಾಯಪ್ಪ. ಪಂಪಣ್ಣ. ಬಳಾಪೂರ
ಮಲಪನಗುಡಿ, ಬಳ್ಳಾರಿ ಜಿಲ್ಲೆ

೩೪. ಡಾ. ವೀರಯ್ಯ ಚಂದ್ರಯ್ಯ ಮೈಲಾಪೂರ
ಆನಂದ ನಗರ, ಗುಲ್ಬರ್ಗಾ,
ಗುಲ್ಬರ್ಗಾ ಜಿಲ್ಲೆ

೩೫. ಶ್ರೀ ಶಾಂತಿಲಾಲ್. ಗೋಮರಾಜ. ಜೈನ್
ಸುರಪುರ, ಗುಲ್ಬರ್ಗಾ ಜಿಲ್ಲೆ

೩೬. ಶ್ರೀ ತಾರಾಚಂದ್. ದೇವಿಚಂದ್.
ಸರಾಫ್ ಬಜಾರ, ಸುರಪುರ
ಗುಲ್ಬರ್ಗಾ ಜಿಲ್ಲೆ

೩೭. ಶ್ರೀ ಹನ್ಸ್‌ರಾಜ್. ಮೋತಿಲಾಲ್. ಮುಂದಡಾ
ಸರಾಫ್ ಬಜಾರ, ಗುಲ್ಬರ್ಗಾ
ಗುಲ್ಬರ್ಗಾ ಜಿಲ್ಲೆ

೩೮. ಶ್ರೀ ಶಿವಶಂಕರ. ಅಣ್ಣೆಪ್ಪ. ಬಪ್ಪಣ್ಣ
ಬಪ್ಪಣ್ಣಗಲ್ಲಿ, ಹುಮನಾಬಾದ, ಬೀದರ ಜಿಲ್ಲೆ

೩೯. ಶ್ರೀ ವ್ಹಿ. ರಾಮಕೃಷ್ಣ
ಮೇಗಳಕೇರೆ, ಮೇಲುಕೋಟೆ
ಮಂಡ್ಯ ಜಿಲ್ಲೆ

೪೦. ಶ್ರೀ ಗೋಪಾಲ. ಸೂರಪ್ಪಶೆಟ್ಟಿ
ಮೇಗಳಕೇರೆ, ಮೇಲುಕೋಟೆ
ಮಂಡ್ಯ ಜಿಲ್ಲೆ

೪೧. ನಾರಾಯಣ. ಸಂಪತ್
ದೇವಸ್ಥಾನ ಬೀದಿ, ಮೇಲುಕೋಟೆ,
ಮಂಡ್ಯ ಜಿಲ್ಲೆ

ದೇವಸ್ಥಾನಗಳು

೦೧. ಹೊಳೆಹುಚ್ಚೇಶ್ವರ ಮಠ, ಕೋಟೆಕಲ್ಲ
ಬಾಗಲಕೋಟೆ ಜಿಲ್ಲೆ

೦೨. ಶ್ರೀ ಬಸವೇಶ್ವರ ದೇವಸ್ಥಾನ, ಅಮೀನಗಡ
ಬಾಗಲಕೋಟೆ ಜಿಲ್ಲೆ

೦೩. ಶ್ರೀ ರಾಮಮಂದಿರ ದೇವಸ್ಥಾನ
ಕೆ.ಆರ್.ಬಡಾವಣೆ, ತುಮಕೂರು
ತುಮಕೂರು ಜಿಲ್ಲೆ

೦೪. ಬಾಲಾಜಿ ಮಂದಿರ
ಹುಮನಾಬಾದ, ಬೀದರ ಜಿಲ್ಲೆ

೦೫. ಶ್ರೀ ಮಾಣಿಕ ಪ್ರಭು ದೇವಸ್ಥಾನ
ಹುಮನಾಬಾದ, ಬೀದರ ಜಿಲ್ಲೆ

೦೬. ವೀರಭದ್ರೇಶ್ವರ ದೇವಸ್ಥಾನ
ಹುಮನಾಬಾದ, ಬೀದರ ಜಿಲ್ಲೆ

೦೭. ಶ್ರೀ ವೆಂಕಟೇಶ್ವರ ದೇವಸ್ಥಾನ
ರಾಮದುರ್ಗ, ಬೆಳಗಾಂವಿ ಜಿಲ್ಲೆ

೦೮. ಶ್ರೀಮೌನ ತಪಶ್ವಿನಿ. ಶರಣಮ್ಮನವರು ಶಕ್ತಿಮಂದಿರ
ನಾಯಕನೂರು, ನವಲಗುಂದ ತಾಲೂಕು
ಧಾರವಾಡ ಜಿಲ್ಲೆ

೦೯. ಶ್ರೀ ಗುಜ್ಞೇಶ್ವರ ಮಠ
ಅಣ್ಣಿಗೇರಿ, ನವಲಗುಂದ ತಾಲೂಕು
ಧಾರವಾಡ ಜಿಲ್ಲೆ

೧೦. ಶ್ರೀ ಶಾಂತಿನಾಥ. ಶ್ವೇತಾಂಬರ. ಜೈನಮಂದಿರ
ಲಕ್ಷೇಶ್ವರ, ಗದಗ ಜಿಲ್ಲೆ

೦೧. ಶ್ರೀ ಮಂಜುಷಾ ವಸ್ತು ಸಂಗ್ರಹಾಲಯ
ಧರ್ಮಸ್ಥಳ, ದಕ್ಷಿಣ ಕನ್ನಡ ಜಿಲ್ಲೆ

೦೨. ಸರಕಾರಿ ವಸ್ತು ಸಂಗ್ರಹಾಲಯ
ಮಡಿಕೇರಿ, ಕೊಡಗು ಜಿಲ್ಲೆ

೦೩. ಜಗನ್ಮೋಹನ ಅರಮನೆ
ವಸ್ತು ಸಂಗ್ರಹಾಲಯ, ಮೈಸೂರು
ಮೈಸೂರು ಜಿಲ್ಲೆ

೦೪. ಶ್ರೀ ವಿಜಯನಾಥ. ಶೆಣೈ
'ಹಸ್ತಶಿಲ್ಪ' ಟ್ರಸ್ಟ
ಮಣಿಪಾಲ, ಉಡುಪಿ ಜಿಲ್ಲೆ

೦೫. ಜನಪದ ವಸ್ತು ಸಂಗ್ರಹಾಲಯ
ಬಾಗಲಕೋಟೆ, ಬಾಗಲಕೋಟೆ ಜಿಲ್ಲೆ

೦೬. ಜನಪದ ವಸ್ತು ಸಂಗ್ರಹಾಲಯ
ಮೈಸೂರು ವಿಶ್ವವಿದ್ಯಾಲಯ, ಮೈಸೂರು ಜಿಲ್ಲೆ

೦೭. ಜನಪದ ವಸ್ತು ಸಂಗ್ರಹಾಲಯ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಧಾರವಾಡ ಜಿಲ್ಲೆ

೦೮. ಶ್ರೀ ಮುರಗರಾಜೇಂದ್ರ ವಸ್ತು ಸಂಗ್ರಹಾಲಯ
ಬೃಹಣ್ಮಠ ಚಿತ್ರದುರ್ಗ, ಚಿತ್ರದುರ್ಗ ಜಿಲ್ಲೆ

೦೯. ನ್ಯಾಶನಲ್ ಮ್ಯೂಜಿಯಂ ಆಫ್ ಮಾಡರ್ನ ಆರ್ಟ
ವಸಂತ ನಗರ, ಬೆಂಗಳೂರು
ಬೆಂಗಳೂರು ಜಿಲ್ಲೆ

೧೦. ಸರಕಾರಿ ವಸ್ತು ಸಂಗ್ರಹಾಲಯ
ಕೆಳದಿ, ಶಿವಮೊಗ್ಗ ಜಿಲ್ಲೆ

ಚರ್ಚುಗಳು

೦೧. ಹಾಲಿಕ್ರಾಸ್ ಚರ್ಚು
ಕಾರ್ಡೆಲ್ ಕುಲಶೇಖರ, ಮಂಗಳೂರು
ದಕ್ಷಿಣ ಕನ್ನಡ ಜಿಲ್ಲೆ

೦೨. ಸಂತ ಎಲೋಸಿಯಸ್ ಚರ್ಚು
ಲೈಟ್ ಹೌಸ್ ಹಿಲ್ (ಕೆ.ಎಂ.ಸಿ)
ಮಂಗಳೂರು, ದಕ್ಷಿಣ ಕನ್ನಡ ಜಿಲ್ಲೆ

೦೩. ಕಾರ್ಮೆಲ್ ಚರ್ಚು
ಕಂಕನಾಡಿ, ಮಂಗಳೂರು
ದಕ್ಷಿಣ ಕನ್ನಡ ಜಿಲ್ಲೆ

೦೪. ಫಾದರ ಮುಲ್ಲರ್ ಮೆಡಿಕಲ್ ಕಾಲೇಜು ಆವರಣ
ಛಾಪೆಲ್ ಚರ್ಚು, ಮಂಗಳೂರು
ದಕ್ಷಿಣ ಕನ್ನಡ ಜಿಲ್ಲೆ

೦೫. ಸಂತ ಫಿಲೋಮಿನಾ ಚರ್ಚು
ಮೈಸೂರು, ಮೈಸೂರು ಜಿಲ್ಲೆ

೦೬. ಬಾರ್ತೋಲೊಮಿವ್ ಚರ್ಚು
ಮೈಸೂರು, ಮೈಸೂರು ಜಿಲ್ಲೆ

೦೭. ಬಾಲ ಯೇಸುವಿನ ಕಾರ್ಮೆಲ್ ಚರ್ಚು
ಮೈಸೂರು, ಮೈಸೂರು ಜಿಲ್ಲೆ

೦೮. ಸಂತ ಮೇರಿ ಬೆಸಲಿಕಾ ಚರ್ಚು
ಶಿವಾಜಿ ನಗರ, ಬೆಂಗಳೂರು

೦೯. ಸಂತ ಪ್ಯಾಟ್ರಿಕ್ ಚರ್ಚು
ಬ್ರಿಗೇಡ್ ರಸ್ತೆ, ಬೆಂಗಳೂರು
ಬೆಂಗಳೂರು ಜಿಲ್ಲೆ

೧೦. ಸಂತ ಮಾರ್ಕ್ಸ್ ಕೆಥೀಡ್ರಲ್
ಎಂ.ಜಿ.ರೋಡ್, ಬೆಂಗಳೂರು
ಬೆಂಗಳೂರು ಜಿಲ್ಲೆ

೧೧. ಸಂತ ಆಂಡ್ರ್ಯೂಸ್ ಚರ್ಚು
ಎಂ.ಜಿ.ರೋಡ್, ಬೆಂಗಳೂರು
ಬೆಂಗಳೂರು ಜಿಲ್ಲೆ

೧೨. ಸಂತ ಜಾನ್ ಇವಾಂಜಲಿಕಲ್ ಚರ್ಚು
ಬೆಂಗಳೂರು

೧೩. ಅಲ್ ಸೇಂಟ್ಸ್ ಚರ್ಚು
ಧಾರವಾಡ

೧೪. ಸಂತ ಮೇರಿನ್ ಚರ್ಚು
ಬೆಳಗಾಂವಿ

ಅರಮನೆಗಳು

೦೧. ಮೈಸೂರು ಅರಮನೆ, ಮೈಸೂರು

೦೨. ಬೇಸಿಗೆ ಅರಮನೆ, ಮೈಸೂರು

೦೩. ಬೆಂಗಳೂರು ಅರಮನೆ, ಬೆಂಗಳೂರು

೦೪. ಜಮಖಂಡಿ ಅರಮನೆ, ಜಮಖಂಡಿ
ಬಾಗಲಕೋಟೆ ಜಿಲ್ಲೆ

ಇತರೆ ಕಟ್ಟಡಗಳು

೦೧. ನಿಷಾದ್ ಬಾಗ್ ಪಾರ್ಕ್
ಹಾರ್ಡಿಂಜ್ ವೃತ್ತ ಹತ್ತಿರ,
ಮೈಸೂರು

೦೨. ಬಂದೆ ನವಾಜ್ ಖಾಜಾ
ದರ್ಗಾ, ಗುಲ್ಬರ್ಗಾ

# ಅನುಬಂಧ - ೦೩. ಗ್ರಂಥಋಣ

## ಕನ್ನಡ ಪುಸ್ತಕಗಳು


೦೧. 'ವಜ್ರ ವಿಜಯ' (೧೯೪೭-೨೦೦೭) (ಸಂ) ಅಶೋಕ. ಟಿ. ಅಕ್ಕಿ
(ನೆನಪಿನ ಸಂಚಿಕೆ)

೦೨. ಬಾರಾಮಾಸ (ಸಂ) ಸಂಶೋಧಕ. ಶಾಂತರಸ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ
ಹಂಪಿ - ೧೯೯೩

೦೩. ಶ್ರೀ ಕೃಷ್ಣ ಪಾರಿಜಾತ (ಸಂ) ಡಾ. ಕೃಷ್ಣಾ. ಕಟ್ಟಿ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ
ಹಂಪಿ - ೧೯೯೭

೦೪. ಕಿರಿಯರ ಕರ್ನಾಟಕ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ
ಹಂಪಿ - ೧೯೯೭

೦೫. ಕನ್ನಡ ಜಾನಪದ ವಿಶ್ವಕೋಶ (ಸಂ) ಡಾ. ಚಂದ್ರಶೇಖರ ಕಂಬಾರ
ಸಂಪುಟ - ೦೧ ಮತ್ತು ೦೨
ಕನ್ನಡ ಸಾಹಿತ್ಯ ಪರಿಷತ್ತು,
ಚಾಮರಾಜಪೇಟೆ, ಬೆಂಗಳೂರು

೦೬. ಕನ್ನಡ ವಿಶ್ವಕೋಶ
ಸಂಪುಟ - ೦೬
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾಲಯ, ೧೯೭೩

೦೭. ಹರಪನಹಳ್ಳಿ, ಪಾಳೆಯಗಾರರು (ಸಂ) ಕುಂ. ಬಾ. ಸದಾಶಿವಪ್ಪ
ಕನ್ನಡ ಸಾಹಿತ್ಯ ಪರಿಷತ್ತು,
ಚಾಮರಾಜಪೇಟೆ, ಬೆಂಗಳೂರು - ೧೯೯೬

೦೮. 'ಮೈಸೂರು' (ಸಂ) ಪ್ರೊ. ಪಿ. ವಿ. ನಂಜರಾಜ ಅರಸು
ನೂರಿನ್ನೂರು ವರ್ಷಗಳ ಹಿಂದೆ
ಸರಸ್ವತಿ ಪುರಂ - ಮೈಸೂರು - ೦೯

೦೯. 'ಮೈಸೂರು ಅರಮನೆ' ಮಾರ್ಗದರ್ಶಿ
ಮೈಸೂರು ಅರಮನೆ ಮಂಡಳಿ
ಅರಮನೆ ಆವರಣ ಮೈಸೂರು
ಪ್ರಕಾಶಕರು : ಕಾರ್ಯನಿರ್ವಾಹಕ ಅಧಿಕಾರಿಗಳು
ಅರಮನೆ ಮಂಡಳಿ, ಮೈಸೂರು-೨೦೦೭

೧೦. ಮುಮ್ಮಡಿ ಕೃಷ್ಣರಾಜ. ಒಡೆಯರು ಡಾ. ಆರ್. ಗೋಪಾಲ
ಒಂದು ಚಾರಿತ್ರಿಕ ಅಧ್ಯಯನ ಡಾ. ಎಸ್. ನರೇಂದ್ರ ಪ್ರಸಾದ
(ಕ್ರಿ.ಶ.೧೭೯೯-೧೮೬೮)
ಪ್ರಾಚ್ಯ ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ
ಹೊಸಪೇಟೆ-೨೦೦೪

೧೧. ಕರ್ನಾಟಕ ಭಿತ್ತಿಚಿತ್ರ ಪರಂಪರೆ ಲೇ. ಡಾ. ಅ. ಲ. ನರಸಿಂಹನ್
ಕರ್ನಾಟಕ ಲಲಿತಕಲಾ ಅಕಾಡೆಮಿ ೧೯೯೮

೧೨. ಮಧುಗಿರಿ ರಾಮು ಲೇ. ಯು. ಎಸ್. ವೆಂಕಟರಾಮನ್
ಕರ್ನಾಟಕ ಲಲಿತಕಲಾ ಅಕಾಡೆಮಿ

೧೩. 'ಚಿತ್ರಕಲಾ ಪ್ರಪಂಚ' (ಸಂ) ಡಾ. ಅ. ಲ. ನರಸಿಂಹನ್
ಕರ್ನಾಟಕ ಲಲಿತಕಲಾ ಅಕಾಡೆಮಿ ಪಿ. ಆರ್. ತಿಪ್ಪೇಸ್ವಾಮಿ

೧೪. 'ಬೇಡ ಬುಡಕಟ್ಟಿನ ಚಿತ್ರಿಕೆ ಮತ್ತು ಸಂಸ್ಕೃತಿ ಡಾ. ವಿರೂಪಾಕ್ಷ. ಪೂಜಾರಹಳ್ಳಿ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೫. ಎಂ. ರಾಮ ನರಸಯ್ಯ ಶ್ರೀ ರಾಮದಾಸ ಅಡ್ಯಂತಾಯ
ಕರ್ನಾಟಕ ಲಲಿತಕಲಾ ಅಕಾಡೆಮಿ

೧೬. ಕಲಾ ಮನೋವಿಜ್ಞಾನ — ಲೇ. ಎನ್. ವಿಶ್ವರೂಪಾಚಾರ
ವಿಶ್ವರೂಪ ಪ್ರಕಾಶನ
ಬೆಂಗಳೂರು-೨೦೦೪

೧೭. 'ವಿಷ್ಣು ಪುರಾಣ' — ರಾಘವೇಂದ್ರ ಆಚಾರ್ಯ
ಕರ್ನಾಟಕ ಲಲಿತಕಲಾ ಅಕಾಡೆಮಿ
ವಿಶ್ವರೂಪ ಪ್ರಕಾಶನ
ಬೆಂಗಳೂರು-೨೦೦೪

೧೮. ಭಾರತೀಯ ಸಂಸ್ಕೃತಿಗೆ ಕರ್ನಾಟಕದ ಕೊಡುಗೆ — ಡಾ. ಟಿ. ಎಸ್. ರಾಜಗೋಪಾಲ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು – ೧೯೮೩

೧೯. ಮಹಿಳೆಯರ ಅಲಂಕಾರ — ಶಾಂತಾದೇವಿ. ಮಾಳವಾಡ
ಕನ್ನಡ ಪುಸ್ತಕ ಪ್ರಾಧಿಕಾರ-೧೯೯೬

೨೦. ಬೆಂಗಳೂರು ನಗರ ನಿರ್ಮಾಪಕರು — ಶ್ರೀ ಸುರೇಶ. ಮಾನ್
ಕೆ.ಆರ್.ವೃತ್ತ, ಮೆ॥ ಸುಧಾ ಪ್ರಕಾಶನ
ಬೆಂಗಳೂರು-೨೦೦

೨೧. 'ರಾಧಾಕೃಷ್ಣ' — ಗೊರುರು ಶ್ರೀನಿವಾಸಮೂರ್ತಿ
ಐ.ಬಿ.ಎಚ್.ಪ್ರಕಾಶನ,
ಬೆಂಗಳೂರು-೧೯೮೭

೨೨. 'ಮಹಾರಾಷ್ಟ್ರ ಜಾನಪದ' — (ಸಂ) ಡಾ. ಹೆಚ್. ಎಂ. ಮಹೇಶ್ವರಯ್ಯ
ಕರ್ನಾಟಕ ಜಾನಪದ ಮತ್ತು
ಯಕ್ಷಗಾನ ಅಕಾಡೆಮಿ – ೧೯೯೭

೨೩. ರಾಜಸ್ಥಾನದ ಜಾನಪದ — ಮೂಲ : ಡಿ. ಆರ್. ಅಹುಜಾ
ನ್ಯಾಶನಲ್ ಬುಕ್ ಟ್ರಸ್ಟ್ ಇಂಡಿಯಾ — ಅನುವಾದ : ಡಾ. ಸಿ. ಪಿ. ಕೃಷ್ಣಕುಮಾರ
೧೯೯೩

೨೪. ತೌಲನಿಕ ಕಾವ್ಯ ಮೀಮಾಂಸೆ — ಡಾ. ಎಚ್. ತಿಪ್ಪೇರುದ್ರಸ್ವಾಮಿ
ಪ್ರಕಾಶಕರು : ಡಿ.ವಿ.ಕೆ ಮೂರ್ತಿ
ಕೃಷ್ಣಮೂರ್ತಿಪುರಂ, ಮೈಸೂರು-೨೦೦೭

೨೫. ದ್ವಾರಕಾದೀಶ ಕೃಷ್ಣ — ಶಮ್ಯಂತರ
ಅಂತರಾಷ್ಟ್ರೀಯ ಕೃಷ್ಣ ಪ್ರಜ್ಞಾ ಸಂಘ
ಬೆಂಗಳೂರು-೨೦೦೬

೨೬. ವಿಮರ್ಶೆಯ ಪೂರ್ವಪಶ್ಚಿಮ — ಜಿ. ಎಸ್. ಶಿವರುದ್ರಪ್ಪ
ಸಾಹಿತ್ಯ ಭಂಡಾರ, ಬೆಂಗಳೂರು-೨೦೦೮

೨೭. ಸಂಸ್ಕೃತ ಕವಿ, ಕಾವ್ಯ ಪರಿಚಯ — ಶ್ರೀ ಜಿ. ವ್ಹಿ. ಶಾಸ್ತ್ರೀ
ಪಾರು ಪ್ರಕಾಶನ ಗದಗ-೨೦೦೫

೨೮. ಮೈಸೂರು ಚಾಮುಂಡೇಶ್ವರಿ ದೇವಸ್ಥಾನ — ಬಿ. ಬಿ. ಗೋಸ್ವಾಮಿ, ಎಸ್. ಜಿ. ಮೊರಬ್
ಒಂದು ಸಾಮಾಜಿಕ ಅಧ್ಯಯನ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು-೨೦೦೧

೨೯. 'ಕರ್ನಾಟಕ ಚರಿತ್ರೆ' — (ಸಂ) ಪ್ರೊ. ಬಿ. ಷೇಕ್ ಅಲಿ
ಸಂಪುಟ ಆರು
ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೭

೩೦. ಕಿರಿಯರ ವಿಶ್ವಕೋಶ
ಕಲೆ ಮತ್ತು ಸಾಹಿತ್ಯ-೧೯೭೩

೩೧. ಬಾಲಯೇಸುವಿನ ಪುಣ್ಯಕ್ಷೇತ್ರ ಕಾರ್ಮೆಲ್ ಸಭೆ
ಮೈಸೂರು ಪರಿಚಯ ಪುಸ್ತಕ ೨೦೦೪

೩೨. ಹರತಿ ಸಿರಿ — (ಸಂ) ಪ್ರೊ. ಲಕ್ಷ್ಮಣ. ತೆಲಗಾಂವಿ
ವಾಲ್ಮೀಕಿ ಸಾಹಿತ್ಯ ಸಂಪದ ಹರ್ತಿಕೋಟೆ
ಹಿರಿಯೂರು ತಾಲೂಕು, ಚಿತ್ರದುರ್ಗ ಜಿಲ್ಲೆ

೩೩. ವಸಾಹತು ಪೂರ್ವ ಕರ್ನಾಟಕ ನಗರ ಚರಿತ್ರೆ ಕನ್ನಡ ವಿಶ್ವವಿದ್ಯಾಲಯ, ಹಂಪಿ — ಡಾ. ಕೆ. ಮೋಹನಕೃಷ್ಣರೈ

೩೪. ನಿಜದ ನೆಲೆ ಡಾ. ಬಿ. ಕೆ. ಹಿರೇಮಠ ಅಭಿನಂದನ ಗ್ರಂಥ ಪ್ರ. ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ ಬಸವೇಶ್ವರ ವಿದ್ಯಾವರ್ಧಕ ಸಂಘ ಬಾಗಲಕೋಟ — ಪ್ರಸಂ. ಡಾ. ಬಿ. ಆರ್. ಹಿರೇಮಠ (ಸಂ) ಡಾ. ಎಸ್. ಸಿ. ಪಾಟೀಲ

೩೫. ಕರ್ನಾಟಕದ ಜನಪದ ಚಿತ್ರಕಲೆ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಡಂಬಳ-ಗದಗ-೧೯೯೩ — ಡಾ. ಎಸ್. ಸಿ. ಪಾಟೀಲ

೩೬. ಜೈನ ಕಥಾಕೋಶ ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ-೧೯೯೭ — (ಸಂ) ಹಂಪನಾಗರಾಜಯ್ಯ

೩೭. ವಚನಗಳಲ್ಲಿ ಸಾಮಾಜಿಕ ಚಿಂತನೆ ಜಗದ್ಗುರು ಶ್ರೀ ಶಿವಾರಾತ್ರೀಶ್ವರ ಗ್ರಂಥಮಾಲೆ ಮೈಸೂರು-೨೦೦೪ — ಡಾ. ಸಿ. ಸೋಮಶೇಖರ

೩೮. ಪುರಾಣ ಭಾರತಕೋಶ ಕನ್ನಡ ಪುಸ್ತಕ ಪ್ರಾಧಿಕಾರ - ೨೦೦೮ — ಯಜ್ಞನಾರಾಯಣ ಉಡುಪ

೩೯. ಶಿಲ್ಪಕಲಾ ಪ್ರಪಂಚ ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು — ಪ್ರಸಂ. ಪಿ.ಆರ್.ತಿಪ್ಪೇಸ್ವಾಮಿ (ಸಂ) ಅ.ಲ.ನರಸಿಂಹನ್

೪೦. ಕನ್ನಡ ನಾಡಿನ ಧಾರ್ಮಿಕ ಪರಂಪರೆ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು-೧೯೮೩ — ಪ್ರೊ. ಎಸ್.ಕೆ. ರಾಮಚಂದ್ರರಾವ್

೪೧. ಸಾಹಿತ್ಯ ಮತ್ತು ಚಿತ್ರಕಲೆ — ಚಂದ್ರಕಾಂತ. ಕುಸನೂರು
ಕರ್ನಾಟಕ ಸಾಹಿತ್ಯ ಅಕಾಡೆಮಿ,
೧೯೯೩

೪೨. ವಾದಿರಾಜರ ಶ್ರೀಕೃಷ್ಣ ಬಾಲಲೀಲೆ — (ಸಂ) ಪ್ರೊ. ಎ. ವ್ಹಿ. ನಾವಾಡ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೫

೪೩. ಹರಿದಾಸರ ಪಾಂಡುರಂಗ ವಿಠ್ಠಲ — (ಸಂ) ಪ್ರೊ. ಎ. ವ್ಹಿ. ನಾವಾಡ
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೫

೪೪. ಮಹಿಳೆಯರ ಅಲಂಕಾರ — ಶಾಂತಾದೇವಿ. ಮಾಳವಾಡ
ಕನ್ನಡ ಪುಸ್ತಕ ಪ್ರಾಧಿಕಾರ
೧೯೯೬

೪೫. ಸಂಸ್ಕೃತಿ (ಸುವರ್ಣ ಪರಂಪರೆ ಮಾಲೆ)
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಬೆಂಗಳೂರು-೨೦೦೭

೪೬. ರಾಮಾಯಣ ಮರುದರ್ಶನ — (ಸಂ) ಪ್ರೊ. ಮಂಜುನಾಥ. ಬೇವಿನಕಟ್ಟಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೭. ಕೇರಳ ಕಥನ — ಲೇ. ಡಾ. ಮೋಹನ ಕುಂಟಾರ್
ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೦೦೬

೪೮. ಮಹಾಭಾರತ ಕಥಾ ಸಂಗ್ರಹ — ಲೇ. ಡಾ. ಹೆಚ್. ರಾಮಚಂದ್ರಸ್ವಾಮಿ
ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು
೨೦೦೩

೪೯. ಸಾಹಿತಿ, ಕಲಾವಿದರ ಕಣ್ಣಲ್ಲಿ ಟಿಪ್ಪು — (ಸಂ) ಪ್ರೊ. ಶಿವರಾಮಯ್ಯ
ಸಿರಿಗನ್ನಡ ಪ್ರಕಾಶನ ಶಿವಮೊಗ್ಗ-೨೦೦೫

೫೦. ವಿಜಾಪೂರ ಜಿಲ್ಲೆ ಗೇಜೆಟಿಯರ್-೧೯೯೯ (ಸಂ) ಡಾ. ಆರ್. ಮುನಿಸ್ವಾಮಿ

೫೧. ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ ಡಾ. ಶಶಿಕಲಾ ಹೂಗಾರ
ಪಿಹೆಚ್.ಡಿ ಪ್ರಬಂಧ, ಅಪ್ರಕಟಿತ
ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೫

೫೨. ಗುಳೇದಗುಡ್ಡದ ಗಾಜಿನ ಮೇಲಿನ ಚಿತ್ರಗಳು ಲೇ. ಶಕೀಲಅಹ್ಮದ ಪಿಂಜಾದ
ಬಿ.ಎಫ್.ಎಡ ಪದವಿ ತರಗತಿಗೆ ಸಲ್ಲಿಸಿದ
ಕಿರು ಯೋಜನಾ ವರದಿ (ಅಪ್ರಕಟಿತ)
ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೫

೫೩. ಭಾರತೀಯ ಸಮಕಾಲೀನ ಚಿತ್ರಕಲೆಯಲ್ಲಿ ನಿಂಗಪ್ಪ. ಎಂ. ಅಂಗಡಿ
ರವಿವರ್ಮ ಮತ್ತು ಹೆಬ್ಬಾರರ ತೈಲವರ್ಣ ಚಿತ್ರಗಳು
ಎಂ.ಎಫ್.ಎ ಪದವಿ ತರಗತಿಗೆ ಸಲ್ಲಿಸಿದ
ಕಿರು ಯೋಜನಾ ವರದಿ (ಅಪ್ರಕಟಿತ)
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೨೦೦೪

೫೪. ಶ್ರೀ ಮಾಣಿಕ ಪ್ರಭು ಲೇ. ಡಾ. ಎಂ.ಎಸ್. ಲಕ್ಷ್ಮೆ
ಜ್ಞಾನರಾಜಪ್ರಭು ಶ್ರೀ ಮಾಣಿಕಪ್ರಭು
ಸಂಸ್ಥಾನ ಮಾಣಿಕ ನಗರ, ೨೦೦೨

೫೫. ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ ಡಾ. ಯಾದಪ್ಪ. ಪರದೇಶಿ
ಅಪ್ರಕಟಿತ ಪಿಹೆಚ್.ಡಿ ಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦

೫೬. ಬಾಗಲಕೋಟೆ ಜಿಲ್ಲೆಯ ಚಿತ್ರಕಲೆ ಬಸವರಾಜ. ಗವಿಮಠ
ಅಪ್ರಕಟಿತ ಎಂ.ಫಿಲ್ ಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೮

೫೭. ಬೆಳಗಾಂವಿ ಜಿಲ್ಲೆಯ ಚಿತ್ರಕಲೆ ಎಂ. ಎಸ್. ಪಾಟೀಲ
ಅಪ್ರಕಟಿತ ಎಂ.ಫಿಲ್ ಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೮

01. A Hand book of western Arts in the Salarjung Museum-1999 — By. B. Kotaia

02. Arts and Crafts of Tamilunadu — By. Nanditha. Krishna
Photographed by : V.K. Rajamani
Ashok Leyland Ltd
In Association with Maphin
Publishing Private limited.

03. A Great Missionory Bishop — Author : L Inde Desreligions
Bishop etrenne louis charbonnav
1803-1873
First Bishop of viucariate Apostolic
Editions Karnataka paris - 1988

04. CHINA — By. Sreemati Chakrabarathi
National Book Trust, India-2007

05. Chintamani Vyas and Dsr. Dalijeet — Edited by : S. Ganesh Rao
Painting of Tanjavur and Mysore
Published by : Vishwanatha Sharma
Geeta publishers, Thansi

06. Indian paintings on glass — By. Jaya Appaswamy
Published by : Secretary India Council for
Cultural Relations Azad Bhavan Indraprastha
Estate New Delhi 1981

07. Japan — By. Yamaguchi. Hikoichi
National Book Trust, India. 2007

08. Karnataka Impressions
Madonna a stained glass painting in
the st, aloysius college chappel, Mangalore

09. Museum of India — By. Jothin Jain
National Handicraft and Handlooms — Arati Agarawal
Museum, New Delhi.

10. Mughal Art — By. Shanti Swarup
A Study in handicrafts

11. Maharaja Ranajith Singha — By. Jean-Marie Lofont
Lord of the Five Kivers

12. Manjusha Art Centre — Dr. Chudamani Nandagopal
Published By: S. Prabhakar — Editor "B. Satyanarayan
SDM publication Trust, (R)
Ujire-2000

13. Mysore Chitramala — Prof : S.K. Ramachandra Rao
Traditional paintings

14. Residency to Rajabhavan, — M.S. Surazvi
Bangalore Editional committee — C. M. Gamapathi
Published by : Govt of Karnataka
Stationery and publication 1999

15. The traditional paintings of — Prof : S.K. Ramachandra Rao
Karnataka — B.V.K. Shastri
Published by : Karnataka Chitrakala
Parisad.

16. The lanmd called South Kenera Image flex publishers — Vilim paiu, Venet Mendonce

17. Traditional paintings old and new published and printed by the secreatory Lalita Kala Akademy, New Delhi-1889

18. The encylopedia of Visual Art- Valum 4

ಕನ್ನಡ ಲೇಖನಗಳು

೦೧. ಪ್ರಜಾವಾಣಿ ದಿನಪತ್ರಿಕೆ ಕರ್ನಾಟಕ ದರ್ಶನ ವಿಶೇಷ ಪುರವಣಿ ಲೇಖನ : ಗಾಜಿನ ಮೇಲಿನ ನಾಜೂಕು ಕಲೆ — ಪ್ರವೀಣರಾಜು. ಸೊನ್ನದ

೦೨. ಜನಪದ ಪತ್ರಿಕೆ ಫೆಬ್ರುವರಿ ೨೦೦೮ ಶತಮಾನಕಂಡ ಗಾಜಿನ ಮೇಲಿನ ಚಿತ್ರಕಲೆ ಪ್ರಕಾಶಕರು : ವಾರ್ತಾ ಇಲಾಖೆ — ಪ್ರವೀಣರಾಜು. ಸೊನ್ನದ

೦೩. ಪ್ರಜಾವಾಣಿ ಕರ್ನಾಟಕದ ದರ್ಶನ ಲೇಖನ : ನಿಷಾದ್ ಬಾಗ್‌ಗೆ ಕಾಯಕಲ್ಪ ೦೨-ಜನೇವರಿ-೨೦೧೦ — ಕೆ. ಫ್ಹಿ. ಸುಬ್ರಹ್ಮಣ್ಯ

೦೪. ಅಪರೂಪದ ಅಪೂರ್ವ ಚಿತ್ರ ಕಲಾಕೃತಿಗಳು — ಪ್ರವೀಣರಾಜು. ಸೊನ್ನದ

೦೫. ಅಚ್ಚರಿ ಮೂಡಿಸುವ ಗಾಜಿನ ಚಿತ್ತಾರ ಸಂಯುಕ್ತ ಕರ್ನಾಟಕ, ೨೮-೧೧-೨೦೦೪ — ಮಹದೇವ. ಮ. ಜಗತಾಪ

ಇಂಗ್ಲೀಷ್ ಲೇಖನಗಳು

01. Deccon Hearald — By. Sujit. Choudhry
Sunday Herald Art & Culture
Masaic of Mumbai, October-7-2007

02. Glass paintings continue to attract visitors to Guledgudd — By. Praveenraju Sonnad
Deccon Hearald, June-2-2004

## ಕರ್ನಾಟಕ ನಕಾಶೆ
(ಕರ್ನಾಟಕದ ಗಾಜಿನ ಚಿತ್ರಗಳ ನೆಲೆಗಳು)

- ಗುಲ್ಬರ್ಗಾ ವಿಭಾಗ
- ಬೆಳಗಾಂವಿ ವಿಭಾಗ
- ಮೈಸೂರು ವಿಭಾಗ
- ಬೆಂಗಳೂರು ವಿಭಾಗ



